# ವಿಷ್ಣುಸಹಸ್ರನಾಮ

(ಕನ್ನಡ ಅನುವಾದ ಹಾಗೂ ಪ್ರತಿಪದ ಅರ್ಥ ಸಹಿತ)



ಶ್ರೀ ಬನ್ನಂಜೆ ಗೋವಿಂದಾಚಾರ್ಯರ
ಪ್ರವಚನಗಳ ಆಧಾರಿತ

# ಪರಿವಿಡಿ

# ಓದುವ ಮೊದಲು

ನಮ್ಮಲ್ಲಿ ಹೆಚ್ಚಿನವರು ವಿಷ್ಣು ಸಹಸ್ರನಾಮವನ್ನು ಭಕ್ತಿಯಿಂದ ಪ್ರತಿದಿನ ಪಾರಾಯಣ ಮಾಡುತ್ತಾರೆ. ಆದರೆ ಹೀಗೆ ಪಾರಾಯಣ ಮಾಡುವವರಲ್ಲಿ ಹೆಚ್ಚಿನವರಿಗೆ ಭಗವಂತನ ಈ ಸಹಸ್ರ ನಾಮದ ಹಿಂದಿರುವ ಅತ್ಯದ್ಭುತ ಗುಣಾನುಸಂಧಾನದ ಅರಿವಿಲ್ಲ! ನಾವು ವಿಷ್ಣು ಸಹಸ್ರನಾಮವನ್ನು ಪೂರ್ಣವಾಗಿ ಎಷ್ಟು ಬಾರಿ ಪಾರಾಯಣ ಮಾಡುತ್ತೇವೆ ಎನ್ನುವುದು ಮುಖ್ಯವಲ್ಲ-ಬದಲಿಗೆ ಪ್ರತೀ ನಾಮದ ಹಿಂದಿರುವ ಭಗವಂತನ ಗುಣಾನುಸಂಧಾನವನ್ನು ಎಷ್ಟು ತಿಳಿದಿದ್ದೇವೆ ಎನ್ನುವುದು ಮುಖ್ಯ. ದಿನದಲ್ಲಿ ಅರ್ಥ ತಿಳಿಯದೇ ಸಾವಿರ ನಾಮವನ್ನು ಅನೇಕ ಬಾರಿ ಪಾರಾಯಣ ಮಾಡುವುದಕ್ಕಿಂತ, ಒಂದು ನಾಮದಲ್ಲಿ ಭಗವಂತನ ಗುಣಾನುಸಂಧಾನ ಶ್ರೇಷ್ಠ. ಈ ಹಿನ್ನೆಲೆಯಲ್ಲಿ ಇಲ್ಲಿ ನಾವು ಅಧ್ಯಾತ್ಮ ಬಂಧುಗಳಿಗಾಗಿ ಈ ಪುಸ್ತಕವನ್ನು ಪ್ರಸ್ತುತ ಪಡಿಸುತ್ತಿದ್ದೇವೆ. ಇಲ್ಲಿ ಸಹಸ್ರನಾಮದ ಒಂದೊಂದು ಶ್ಲೋಕವನ್ನು ಪ್ರಸ್ತುತಪಡಿಸಿ ನಂತರ ಆ ಶ್ಲೋಕದಲ್ಲಿರುವ ಭಗವಂತನ ನಾಮದ ಗುಣಾನುಸಂಧಾನವನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ.

ವಿಷ್ಣು ಸಹಸ್ರನಾಮದಲ್ಲಿರುವ ಭಗವಂತನ ಪ್ರತಿಯೊಂದು ನಾಮದ ಹಿಂದೆ ಕನಿಷ್ಠ ನೂರು ಅರ್ಥಗಳಿವೆಯಂತೆ. ಆದರೆ ಒಬ್ಬ ಸಾಮಾನ್ಯ ಮಾನವನಿಗೆ ಇಷ್ಟೊಂದು ವಿಷಯಗಳನ್ನು ಪೂರ್ಣವಾಗಿ ತಿಳಿದು ಪಾರಾಯಣ ಮಾಡುವುದು ಕಷ್ಟ. ಆದ್ದರಿಂದ ಇಲ್ಲಿ ನಾವು ಒಂದು ನಾಮದ ನೂರು ಅರ್ಥವನ್ನು ಹುಡುಕುವ ಪ್ರಯತ್ನ ಮಾಡಬೇಕಾಗಿಲ್ಲ. ನಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಪ್ರತಿಯೊಂದು ನಾಮದ ಕನಿಷ್ಠ ಒಂದು ಅರ್ಥವನ್ನಾದರೂ ತಿಳಿದು ಪಾರಾಯಣ ಮಾಡಿದರೆ ಅದು ಮಹಾ ಪುಣ್ಯಕರ್ಮವಾಗುತ್ತದೆ.

ಪೂಜ್ಯ ಬನ್ನಂಜೆ ಗೋವಿಂದಾಚಾರ್ಯರು ತಮ್ಮ 'ವಿಷ್ಣು ಸಹಸ್ರನಾಮ ಚಿಂತನೆ' ಪ್ರವಚನದಲ್ಲಿ ಭಗವಂತನ ಒಂದೊಂದು ನಾಮದ ಹಿಂದಿರುವ ದಿವ್ಯ ಅರ್ಥವನ್ನು ಸರಳವಾಗಿ ವಿವರಿಸಿದ್ದಾರೆ. ಓದುಗರು ಸಾಧ್ಯವಾದರೆ ಮೊದಲು ಆಚಾರ್ಯರ ಪ್ರವಚನದ ಧ್ವನಿಸುರುಳಿಯನ್ನು ಪಡೆದು ಕೇಳಿಸಿಕೊಳ್ಳಬೇಕಾಗಿ ಇಲ್ಲಿ ವಿನಂತಿಸಿಕೊಳ್ಳುತ್ತೇವೆ. ಈ ಧ್ವನಿಸುರುಳಿಯಲ್ಲಿ ಸಹಸ್ರನಾಮದ ಸ್ಪಷ್ಟಚಿತ್ರಣವಿದೆ. ಧ್ವನಿಸುರುಳಿಯನ್ನು ಕೇಳಲು ಸಾಧ್ಯವಾಗದೇ ಇದ್ದವರಿಗೆ ಅನುಕೂಲವಾಗಲೆಂದು ಈ ಪುಸ್ತಕವನ್ನು ಬರೆಯಲಾಗಿದೆ. ಅಧ್ಯಾತ್ಮ ಬಂಧುಗಳು ಇಲ್ಲಿ ಪ್ರಸ್ತುತಪಡಿಸಲಾದ ಸಹಸ್ರನಾಮದ ಅರ್ಥಚಿಂತನೆಯನ್ನು ತಿಳಿದು, ತಮ್ಮ ಜೀವನವನ್ನು ಪಾವನಗೊಳಿಸಿಕೊಳ್ಳಬೇಕಾಗಿ ಪ್ರಾರ್ಥಿಸುತ್ತೇವೆ. ಈ ರೀತಿ ಬರೆಯುವಾಗ ತಿಳುವಳಿಕೆ ಇಲ್ಲದೆ ನಮ್ಮಿಂದ ಏನಾದರೂ ತಪ್ಪಾಗಿದ್ದರೆ ಅದಕ್ಕಾಗಿ ಪೂರ್ವಭಾವಿಯಾಗಿ ಭಗವಂತನಲ್ಲಿ ಕ್ಷಮೆ ಕೇಳಿ –ಈ ಪುಸ್ತಕವನ್ನು ಭಗವಂತನಿಗೆ ಮತ್ತು ಅಧ್ಯಾತ್ಮ ಬಂಧುಗಳಿಗೆ ಅರ್ಪಿಸುತ್ತಿದ್ದೇವೆ.

ನಿಮ್ಮ ಅನಿಸಿಕೆಯನ್ನು ನಮಗೆ ತಲುಪಿಸಲು ಈ ಕೆಳಗಿನ ವೆಬ್ ಸೈಟ್ ನ್ನು ಬಳಸಿ.

**http://kannadavishnusahasranama.blogspot.com/**

# ವಿಜ್ಞಾಪನೆ

ಈ ಇ-ಪುಸ್ತಕವನ್ನು ಅಧ್ಯಾತ್ಮದಲ್ಲಿ ಆಸಕ್ತಿಯುಳ್ಳವರಿಗಾಗಿ ನೀಡಲಾಗಿದೆ. ಆದ್ದರಿಂದ ಇದನ್ನು ಯಾವುದೇ ವ್ಯಾಪಾರಕ್ಕಾಗಿ(Commercial purpose) ಬಳಸಬಾರದಾಗಿ ಕೋರಿಕೆ. ಈ ಪುಸ್ತಕವನ್ನು ಆಚಾರ್ಯರ ಪ್ರವಚನ ಕೇಳಿಸಿಕೊಂಡು ಬರೆದಿದ್ದರೂ ಸಹ, ಬರೆಯುವಾಗ ಅನೇಕ ತಪ್ಪುಗಳಾಗಿರಬಹುದು. ಬರೆಯುವವರು ತಮಗೆ ಅರ್ಥವಾದ ರೀತಿಯಲ್ಲಿ ಬರೆದುಕೊಂಡಿರಬಹುದು. ಇಲ್ಲಿ ಹಾಗೆ ಏನಾದರೂ ತಪ್ಪು ಅಂಶ ಕಂಡುಬಂದರೆ ಅದಕ್ಕೆ ಆಚಾರ್ಯರು ಹೊಣೆಗಾರರಲ್ಲ. ಇದಕ್ಕಾಗಿ ಓದುಗರು ನೇರವಾಗಿ ಆಚಾರ್ಯರ ಪ್ರವಚನದ ಧ್ವನಿಸುರುಳಿಯನ್ನು ಕೇಳಿಸಿಕೊಳ್ಳಬೇಕಾಗಿ ವಿನಂತಿಸಿಕೊಳ್ಳುತ್ತೇವೆ. ಈ ಪುಸ್ತಕದ ಮುಖ ಪುಟದಲ್ಲಿ ಬಳಸಲಾದ ಚಿತ್ರ ಅಂತರ್ಜಾಲದಿಂದ ತೆಗೆದುಕೊಂಡಿದ್ದು. ಒಂದು ವೇಳೆ ಆ ಬಗ್ಗೆ ಯಾರದ್ದಾದರೂ ಆಕ್ಷೇಪವಿದ್ದರೆ ದಯವಿಟ್ಟು ನಮಗೆ ಬರೆದು ತಿಳಿಸಿ. ಅದನ್ನು ತಕ್ಷಣ ತೆಗೆದು ಹಾಕಲಾಗುವುದು.

# ಪ್ರಸ್ತಾವನೆ

ಶ್ರೀ ಗುರುಭ್ಯೋ ನಮಃ । ಹರಿಃ ಓಂ ।

ಮಹಾಭಾರತ ಯುದ್ಧ ಮುಗಿದಿದೆ. ಭೀಷ್ಮಾಚಾರ್ಯರು ಶರಶಯ್ಯದಲ್ಲಿದ್ದಾರೆ. ಇತ್ತ ಧರ್ಮರಾಯನ ಪಟ್ಟಾಭಿಷೇಕ ಶ್ರೀಕೃಷ್ಣ ಮತ್ತು ವ್ಯಾಸರ ಸಮ್ಮುಖದಲ್ಲಿ ನಡೆದಿದೆ. ಒತ್ತಾಯದಲ್ಲಿ ಪಟ್ಟಾಭಿಷೇಕಕ್ಕೆ ಒಪ್ಪಿದ್ದ ಯುಧಿಷ್ಠಿರನ ಮನಸ್ಸಿಗೆ ಕಿಂಚಿತ್ತೂ ಸಮಾಧಾನವಿಲ್ಲ. ಎಲ್ಲಾ ವೀರರ, ಹಿರಿಯರ, ಲಕ್ಷ-ಲಕ್ಷ ಮಂದಿ ಸೈನಿಕರ ನಾಶದ ನಂತರ ಸಿಂಹಾಸನವೇರಿದ ಆತನಿಗೆ ಪಾಪಪ್ರಜ್ಞೆ ಕಾಡುತ್ತಿರುತ್ತದೆ. ಇಂತಹ ಸ್ಥಿತಿಯಲ್ಲಿದ್ದ ಧರ್ಮರಾಯನನ್ನು ಶ್ರೀಕೃಷ್ಣ ಭೀಷ್ಮಾಚಾರ್ಯರ ಬಳಿಗೆ ಕರೆತಂದು, ಆತನಿಗೆ ಧರ್ಮ ಪಾಠವನ್ನು ಬೋಧಿಸುವಂತೆ ಕೇಳಿಕೊಳ್ಳುತ್ತಾನೆ. ಧರ್ಮದ ಪರ ಹೋರಾಡಿ ಗೆದ್ದ ಧರ್ಮರಾಯನನ್ನು ಕೊಂಡಾಡಿದ ಭೀಷ್ಮಾಚಾರ್ಯರು ಹೇಳುತ್ತಾರೆ: "ಒಂದು ವೇಳೆ ನೀನು ಅನ್ಯಾಯದ ವಿರುದ್ಧದ ಈ ಯುದ್ಧದಲ್ಲಿ ಹೋರಾಡದೇ ಇದ್ದಿದ್ದರೆ ನಿನ್ನನ್ನು ಹೇಡಿ ಎನ್ನುತ್ತಿದ್ದೆ" ಎಂದು. ಈ ಮಾತಿನಿಂದ ಧರ್ಮರಾಯನಲ್ಲಿದ್ದ ಪಾಪಪ್ರಜ್ಞೆ ಹೊರಟುಹೋಗಿ ಆತ ತನಗೆ ಧರ್ಮೋಪದೇಶ ಮಾಡಬೇಕೆಂದು ಭೀಷ್ಮಾಚಾರ್ಯರಲ್ಲಿ ಕೇಳಿಕೊಳ್ಳುತ್ತಾನೆ. ಈ ರೀತಿ ಭೀಷ್ಮಾಚಾರ್ಯರು ಧರ್ಮರಾಯನಿಗೆ ಧರ್ಮೋಪದೇಶ ಮಾಡಿದ ಮಹಾಭಾರತದ ಅನುಶಾಸನ ಪರ್ವದ ಕೊನೆಯ ಅಪೂರ್ವ ಉಪದೇಶವನ್ನು ವ್ಯಾಸ ಮಹರ್ಷಿಗಳು ಸಾವಿರ ನಾಮದ ಸ್ತೋತ್ರ ರೂಪದಲ್ಲಿ ನಮಗೆ ಕಾಣಿಕೆಯಾಗಿ ನೀಡಿದ್ದಾರೆ.

ವಿಷ್ಣುಸಹಸ್ರನಾಮದಲ್ಲಿ ಬರುವ ಸಾವಿರ ನಾಮಗಳು ಭಗವಂತನ ಗುಣವಾಚಕ ನಾಮಗಳಾಗಿವೆ. ನಮ್ಮ ಹೆಸರು ಗುಣವಾಚಕವಲ್ಲ. ಅದು ಕರೆದಾಗ ಓಗೊಡಲು ಇಟ್ಟ ಹೆಸರು. ಆದರೆ ಭಗವಂತನ ಪ್ರತೀ ನಾಮ ಆತನ ಗುಣವನ್ನು ವರ್ಣಿಸುತ್ತದೆ.

ನಮ್ಮಲ್ಲಿ ಅನೇಕ ಸಹಸ್ರನಾಮಗಳಿವೆ. ಬಹಳ ಪ್ರಸಿದ್ಧವಾದ ಲಲಿತ ಸಹಸ್ರನಾಮ, ಶಿವ ಸಹಸ್ರನಾಮ, ಗಣೇಶ ಸಹಸ್ರನಾಮ, ನರಸಿಂಹ ಸಹಸ್ರನಾಮ ಇತ್ಯಾದಿ. ಈ ಎಲ್ಲಾ ಸಹಸ್ರನಾಮಗಳಿಗಿಂತ ಹೆಚ್ಚು ವ್ಯಾಖ್ಯಾನವಿರುವ, ಹೆಚ್ಚು ಮಂದಿ ವಿದ್ವಾಂಸರು ಭಾಷ್ಯ ಬರೆದಿರುವ, ಮಹಾಭಾರತದ ಭಾಗವಾಗಿರುವ, ಸುಪ್ರಸಿದ್ಧ ಸಹಸ್ರನಾಮ ವಿಷ್ಣು ಸಹಸ್ರನಾಮ. ಪದ್ಮ ಪುರಾಣದಲ್ಲಿ ಒಂದು ವಿಷ್ಣು ಸಹಸ್ರನಾಮವನ್ನು ಕಾಣುತ್ತೇವೆ. ಆದರೆ ಅದು ಅಷ್ಟೊಂದು ಪ್ರಚಲಿತದಲ್ಲಿಲ್ಲ.

ವಿಷ್ಣುಸಹಸ್ರನಾಮದಲ್ಲಿ ಕೆಲವೊಂದು ನಾಮಗಳು ಒಂದಕ್ಕಿಂತ ಹೆಚ್ಚು ಬಾರಿ ಪುನರಾವರ್ತನೆ ಆಗಿರುವುದನ್ನು ನಾವು ಕಾಣುತ್ತೇವೆ. ಇಲ್ಲಿ ಬರುವ ಭಗವಂತನ ಒಂದೊಂದು ನಾಮಕ್ಕೂ ನೂರು ಅರ್ಥವಿದೆಯಂತೆ. ಒಂದು ವೇಳೆ ಒಂದು ನಾಮ ಎರಡು ಬಾರಿ ಪುನರಾವರ್ತನೆಯಾದರೆ ಆ ನಾಮಕ್ಕೆ ಇನ್ನೂರು ಅರ್ಥಗಳಿವೆ ಎಂದು ತಿಳಿಯಬೇಕಾಗುತ್ತದೆ. ಆದರೆ ಇಷ್ಟೊಂದು ಅರ್ಥವನ್ನು ಕಂಡುಕೊಳ್ಳುವುದು ಸಾಮಾನ್ಯರಿಗೆ ಅಸಾಧ್ಯ.

ಸಹಸ್ರನಾಮದ ರಾಜ ಮಹಾಭಾರತದ ಅನುಶಾಸನ ಪರ್ವದ ವಿಷ್ಣುಸಹಸ್ರನಾಮ. ಪ್ರಾಚೀನರು ಹೇಳುವಂತೆ ಅಧ್ಯಾತ್ಮ ಗ್ರಂಥಗಳಲ್ಲೇ ಶ್ರೇಷ್ಠವಾದದ್ದು ವೇದವ್ಯಾಸರು ರಚಿಸಿದ "ಭಾರತ". ಇದು ಭಗವಂತನ ರಚನೆ.

ನಿರ್ಣಯಃ ಸರ್ವಶಾಸ್ತ್ರಾಣಾಂ ಭಾರತಂ ಪರಿಚಕ್ಷತೇ ।
ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ ॥
ದೇವೈರ್ಬ್ರಹ್ಮಾದಿಭಿಃ ಸರ್ವೈಃ ಋಷಿಭಿಶ್ಚ ಸಮನ್ವಿತೈಃ ।
ವ್ಯಾಸಸ್ಯೈವಾಜ್ಞಯಾ ತತ್ರ ತ್ವತ್ಯರಿಚ್ಯತ ಭಾರತಮ್ ॥

ಅಂದರೆ ಸರ್ವ ಶಾಸ್ತ್ರಾರ್ಥಗಳಿಗೂ ಮಹಾಭಾರತವೇ ನಿರ್ಣಾಯಕ. ಹಿಂದೆ ಮಹಾಭಾರತ ಮತ್ತು ಸಕಲ ವೇದಗಳು ವೇದವ್ಯಾಸರ ಆದೇಶದಂತೆಯೇ ಬ್ರಹ್ಮಾದಿ ದೇವತೆಗಳಿಂದಲೂ, ಸಕಲ ಋಷಿಗಳಿಂದಲೂ, ಒಂದು ತಕ್ಕಡಿಯಲ್ಲಿ ಇರಿಸಿ ತೂಗಲ್ಪಟ್ಟವು; ಆಗ ಮಹಾಭಾರತವು ವೇದಾದಿ ಇತರ ಸಕಲ ಶಾಸ್ತ್ರಗಳನ್ನು ಮೀರಿಸಿತ್ತು!! ಇಂತಹ ಮಹಾಭಾರತದ ಸಾರ- ೭೦೦ ಶ್ಲೋಕಗಳನ್ನೊಳಗೊಂಡ ಭಗವದ್ಗೀತೆ ಮತ್ತು ಸಾವಿರ ನಾಮಗಳನ್ನೊಳಗೊಂಡ ವಿಷ್ಣುಸಹಸ್ರನಾಮ.

ಮಹಾಭಾರತ ಮಹತ್ತಾದ ಅರ್ಥದ ಭಾರವಿರುವ ಗ್ರಂಥ. ಅದು ಮನೋವೈಜ್ಞಾನಿಕವಾಗಿ ನಮ್ಮ ಮನಸ್ಸಿಗೆ ತರಬೇತಿ ಕೊಡುವ ಗ್ರಂಥ. ಪ್ರತಿಯೊಬ್ಬ ಮನುಷ್ಯನ ಒಳಗೆ ನಡೆಯುವ ಜೀವನ್ಮೌಲ್ಯಗಳನ್ನು ಹೇಳುವ ಗ್ರಂಥ. ಇದು ನ್ಯಾಯ-ಅನ್ಯಾಯ, ಧರ್ಮ-ಅಧರ್ಮ, ಒಳ್ಳೆಯತನ-ಕೆಟ್ಟತನಗಳ ನಡುವೆ ನಡೆಯುವ ಹೋರಾಟವನ್ನು ತಿಳಿಸುವ ಗ್ರಂಥ. ಮಹಾಭಾರತದಲ್ಲಿ ಬರುವ ಪಾಂಡವರ ಕಡೆಗಿನ ಏಳು ಪಾತ್ರಗಳು ಒಬ್ಬ ಮನುಷ್ಯನಲ್ಲಿರಬೇಕಾದ ಹದಿನೆಂಟು ಗುಣಗಳನ್ನು ಪ್ರತಿನಿಧಿಸುತ್ತವೆ.

೧. ಧರ್ಮರಾಜ – ಧರ್ಮ

೨. ಭೀಮಸೇನ - ಭಕ್ತಿ, ಜ್ಞಾನ, ವೈರಾಗ್ಯ, ಪ್ರಜ್ಞಾ, ಮೇಧಾ, ಧೃತಿ, ಸ್ಥಿತಿ, ಯೋಗ, ಪ್ರಾಣ ಮತ್ತು ಬಲ.

೩. ಅರ್ಜುನ - ಶ್ರವಣ, ಮನನ ಮತ್ತು ನಿಧಿಧ್ಯಾಸನ

೪.೫. ನಕುಲ-ಸಹದೇವ - ಶೀಲ ಮತ್ತು ವಿನಯ

೬. ದ್ರೌಪದಿ – ವೇದವಿದ್ಯೆ

೭. ಶ್ರೀಕೃಷ್ಣ – ವೇದವೇದ್ಯ

ಮಹಾಭಾರತದ ಪ್ರತಿಯೊಂದು ಶ್ಲೋಕ, ಪ್ರತಿಯೊಂದು ಪದ, ಪ್ರತಿಯೊಂದು ಅಕ್ಷರ ಎಲ್ಲಕ್ಕಿಂತ ಎತ್ತರದಲ್ಲಿರುವ ಹದಿನೆಂಟನೆಯವನಾದ ಭಗವಂತನನ್ನು ಹೇಳುತ್ತದೆ. ಭಾರತದಲ್ಲಿ ಒಂದು ಲಕ್ಷ ಶ್ಲೋಕಗಳಿವೆ. ಅಂದರೆ ಒಟ್ಟಿಗೆ ೩೨ ಲಕ್ಷ ಅಕ್ಷರಗಳಿವೆ. ಪ್ರತಿಯೊಂದು ಅಕ್ಷರ ಭಗವಂತನ ನಾಮವಾಗಿದೆ. ಈ ರೀತಿ ಭಗವಂತನ ಗುಣಗಾನ ಮಾಡುವ ಪದಪುಂಜ ಮಹಾಭಾರತ. ಸಾಮಾನ್ಯ ಜನರಿಗೆ ಈ ಒಂದು ಲಕ್ಷ ಶ್ಲೋಕಗಳನ್ನು ತಿಳಿಯಲು ಕಷ್ಟವಾಗಬಹುದು ಎಂದು, ಮಹಾಭಾರತದಿಂದ ಅಮೂಲ್ಯವಾದ ಎರಡು ರಸವನ್ನು ವೇದವ್ಯಾಸರು ನಮ್ಮ ಮುಂದಿರಿಸಿದ್ದಾರೆ. ಅದೇ ಭಗವದ್ಗೀತೆ ಮತ್ತು ವಿಷ್ಣುಸಹಸ್ರನಾಮ.

ವೇದಗಳಿಗೆ ಕನಿಷ್ಠ ೩ ಅರ್ಥಗಳಿವೆ. ಮಹಾಭಾರತ ಶ್ಲೋಕಗಳಿಗೆ ಕನಿಷ್ಠ ೧೦ ಅರ್ಥಗಳಿವೆ. ಅದೇ ರೀತಿ ವಿಷ್ಣು ಸಹಸ್ರನಾಮದ ಪ್ರತೀ ನಾಮಕ್ಕೆ ಕನಿಷ್ಠ ನೂರು ಅರ್ಥಗಳಿವೆ. ಈ ಕಾರಣಕ್ಕಾಗಿಯೇ ಪ್ರಾಚೀನರು ಭಗವದ್ಗೀತೆ ಮತ್ತು ವಿಷ್ಣುಸಹಸ್ರನಾಮವನ್ನು ಅತ್ಯಮೂಲ್ಯ ಗ್ರಂಥವಾಗಿ ಪರಿಗಣಿಸಿದ್ದಾರೆ. ವೇದಗಳ ಸಾರವಾದ ಬ್ರಹತೀಸಹಸ್ರದಲ್ಲಿ ಒಂದು ಸಾವಿರ ಮಂತ್ರಗಳಿವೆ ಹಾಗೂ ಆ ಒಂದು ಸಾವಿರ ಮಂತ್ರಗಳಲ್ಲಿ ೭೨,೦೦೦ ಅಕ್ಷರಗಳಿವೆ. ಈ ಒಂದು ಸಾವಿರ ಮಂತ್ರಗಳ ಸಾರವನ್ನು ಒಂದು ಸಾವಿರ ನಾಮಗಳ ರೂಪದಲ್ಲಿ ವೇದವ್ಯಾಸರು ನಮಗೆ ಕರುಣಿಸಿದ್ದಾರೆ.

ಮನುಷ್ಯನ ಆಯಸ್ಸು ನೂರು ವರ್ಷ. ಈ ನೂರು ವರ್ಷಗಳಲ್ಲಿ ೩೬ ಸಾವಿರ ಹಗಲು ಮತ್ತು ೩೬ ಸಾವಿರ ರಾತ್ರಿಗಳಿವೆ. ಮನುಷ್ಯನ ದೇಹ ೭೨ ಸಾವಿರ ನಾಡಿಗಳಿಂದಾಗಿದೆ. ಈ ನಾಡಿಗಳಲ್ಲಿ ೩೬ ಸಾವಿರ ನಾಡಿಗಳು ದೇಹದ ಎಡ ಭಾಗದಲ್ಲೂ ಮತ್ತು ೩೬ ಸಾವಿರ ನಾಡಿಗಳು ದೇಹದ ಬಲಭಾಗಲ್ಲೂ ಇರುತ್ತವೆ. ಈ ನಾಡಿಗಳಲ್ಲಿ ರಕ್ತ ಸಂಚಾರ ಸರಿಯಾಗಿ ಆದರೆ ಮನುಷ್ಯನಿಗೆ ಯಾವುದೇ ರೋಗ ಬರಲಾರದು. ಇದೇ ಕಾರಣಕ್ಕಾಗಿ ಗಾಯತ್ರಿ ಜಪವನ್ನು ಸಾಮಾನ್ಯವಾಗಿ ಒಂದು ಸಾವಿರದಂತೆ ದಿನಕ್ಕೆ ಮೂರು ಬಾರಿ ಮಾಡುತ್ತೇವೆ. ಏಕೆಂದರೆ ಗಾಯತ್ರಿಯಲ್ಲಿ ೨೪

ಅಕ್ಷರಗಳಿವೆ. ಒಮ್ಮೆಗೆ ಒಂದು ಸಾವಿರ ಜಪ ಅಂದರೆ ೨೪ ಸಾವಿರ ಅಕ್ಷರ, ದಿನಕ್ಕೆ ಮೂರು ಬಾರಿ ಅಂದರೆ ೭೨ ಸಾವಿರ ಅಕ್ಷರ. ಇದಕ್ಕಿಂತ ಹೆಚ್ಚು ಬಾರಿ ಪಾರಾಯಣ ಮಾಡಿದರೆ ಹುಚ್ಚು ಹಿಡಿಯುವ ಸಾಧ್ಯತೆ ಇದೆ !

ವಿಷ್ಣುಸಹಸ್ರನಾಮವನ್ನು ಪಠಿಸುವುದರಿಂದ ನಾವು ಬ್ರಹತೀಸಹಸ್ರದ ಎಪ್ಪತ್ತೆರಡು ಸಾವಿರ ಅಕ್ಷರಗಳನ್ನು ಜಪಿಸಿದಂತಾಗುತ್ತದೆ. ಇದರಿಂದ ನಮ್ಮ ೭೨ ಸಾವಿರ ನಾಡಿಗಳಲ್ಲಿ ಪೂರ್ಣಪ್ರಮಾಣದ ರಕ್ತ ಸಂಚಾರವಾಗುತ್ತದೆ. ಆದ್ದರಿಂದ ವಿಷ್ಣುಸಹಸ್ರನಾಮ ಭವರೋಗ ಪರಿಹಾರಕ. ಆದರೆ ಅರ್ಥ ತಿಳಿದು ಹೃದಯತುಂಬಿ ಭಕ್ತಿಯಿಂದ ಪಾರಾಯಣ ಮಾಡುವುದು ಮುಖ್ಯ.

ಇಂತಹ ಅಮೂಲ್ಯವಾದ ಭಗವಂತನ ನಾಮವನ್ನು ಯಾರು ಯಾವಾಗ ಹೇಗೆ ಪಠಿಸಬಹುದು ?

ವಿಷ್ಣು ಸಹಸ್ರನಾಮ ವೇದವ್ಯಾಸರು ಮನುಷ್ಯನಿಗೆ ಕೊಟ್ಟ ಅಮೂಲ್ಯ ಕಾಣಿಕೆ. ಇದನ್ನು ಗಂಡು-ಹೆಣ್ಣು, ಜಾತಿ-ಮತದ ಭೇದವಿಲ್ಲದೆ ಎಲ್ಲರೂ ಎಲ್ಲಾ ಕಾಲದಲ್ಲೂ ಪಠಿಸಬಹುದು. ಬೆಳಿಗ್ಗೆ ಸ್ನಾನದ ಮೊದಲು, ಸ್ನಾನದ ನಂತರ, ಸಂಜೆ, ರಾತ್ರಿ ಯಾವಾಗ ಬೇಕಾದರೂ ಪಠಿಸಬಹುದು. ಅಲ್ಪಪ್ರಾಣ-ಮಹಾಪ್ರಾಣವನ್ನು ಸ್ಪಷ್ಟವಾಗಿ, ಗೌರವಪೂರ್ವಕವಾಗಿ, ನಂಬಿಕೆಯಿಂದ, ಪರಿಶುದ್ಧ ಮನಸ್ಸಿನಿಂದ ಪಠಿಸುವುದು ಅತ್ಯಗತ್ಯ. ವಿಷ್ಣು ಸಹಸ್ರನಾಮದಲ್ಲಿ ನಮಗೆ ತಿಳಿಯದೇ ಆಗುವ ಉಚ್ಚಾರ ದೋಷಕ್ಕೆ ಕ್ಷಮೆ ಇದೆ. ಸರ್ವಶಬ್ದ ವಾಚ್ಯನಾದ ಭಗವಂತ ನಾವು ತಿಳಿಯದೇ ಮಾಡಿದ ತಪ್ಪನ್ನು ಕ್ಷಮಿಸುತ್ತಾನೆ.

ಬನ್ನಿ…ಇಂತಹ ಅಮೂಲ್ಯ ಕೃತಿಯ ಅರ್ಥ ವಿಶ್ಲೇಷಣೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ತೆರೆದು ನೋಡೋಣ.



# ಪೂರ್ವ ಪೀಠಿಕಾ

ಶ್ರೀ ಗುರುಭ್ಯೋ ನಮಃ । ಹರಿಃ ಓಂ ।

ವೈಶಂಪಾಯನ ಉವಾಚ

ಶ್ರುತ್ವಾ ಧರ್ಮಾನಶೇಷೇಣ ಪಾವನಾನಿ ಚ ಸರ್ವಶಃ |
ಯುಧಿಷ್ಠಿರಃ ಶಾನ್ತನವಂ ಪುನರೇವಾಭ್ಯಭ್ಯಾಷತ || ೧ ||

ಯುಧಿಷ್ಠಿರ ಉವಾಚ

ಕಿಮೇಕಂ ದೈವತಂ ಲೋಕೇ ಕಿಂ ವಾಽಪ್ಯೇಕಂ ಪರಾಯಣಮ್ |
ಸ್ತುವನ್ತಃ ಕಂ ಕಮರ್ಚಂನ್ತಃ ಪ್ರಾಪ್ನುಯುರ್ಮಾನವಾಃ ಶುಭಮ್ || ೨ ||

ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ |
ಕಿಂ ಜಪನ್ಮುಚ್ಯತೇ ಜನ್ತುರ್ಜನ್ಮಸಂಸಾರಬನ್ಧನಾತ್ || ೩ ||

ಭೀಷ್ಮ ಉವಾಚ

ಜಗತ್ಪ್ರಭುಂ ದೇವದೇವಮ್ ಅನನ್ತಂ ಪುರುಷೋತ್ತಮಮ್ |
ಸ್ತುವನ್ನಾಮಸಹಸ್ರೇಣ ಪುರುಷಃ ಸತತೋತ್ಥಿತಃ || ೪ ||

ತಮೇವ ಚಾರ್ಚಯನ್ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ |
ಧ್ಯಾಯನ್ ಸ್ತುವನ್ನಮಸ್ಯಂಶ್ಚ ಯಜಮಾನಸ್ತಮೇವ ಚ || ೫ ||

ಅನಾದಿ ನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಮ್ |
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋ ಭವೇತ್ || ೬ ||

ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಲೋಕಾನಾಂ ಕೀರ್ತಿವರ್ಧನಮ್ |
ಲೋಕನಾಥಂ ಮಹದ್ಭೂತಂ ಸರ್ವಭೂತಭವೋದ್ಭವಮ್ || ೭ ||

ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ
ಯದ್ಭಕ್ತ್ಯಾ ಪುಣ್ಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ || ೮ ||

ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ ।
ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ ಪರಾಯಣಮ್ ॥ ೯ ॥

ಪವಿತ್ರಾಣಾಂ ಪವಿತ್ರಂ ಯೋ ಮಙ್ಗಲಾನಾಂ ಚ ಮಙ್ಗಲಮ್ ।
ದೈವತಂ ದೇವತಾನಾಂ ಚ ಭೂತಾನಾಂ ಯೋಽವ್ಯಯಃ ಪಿತಾ ॥ ೧೦ ॥

ಯತಃ ಸರ್ವಾಣಿ ಭೂತಾನಿ ಭವನ್ತ್ಯಾದಿಯುಗಾಗಮೇ ।
ಯಸ್ಮಿಂಶ್ಚ ಪ್ರಳಯಂ ಯಾನ್ತಿ ಪುನರೇವ ಯುಗಕ್ಷಯೇ ॥ ೧೧ ॥

ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ಭೂಪತೇ ।
ವಿಷ್ಣೋರ್ನಾಮಸಹಸ್ರಂ ಮೇ ಶೃಣು ಪಾಪಭಯಾಪಹಮ್ ॥ ೧೨ ॥

ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ ।
ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೇ ॥ ೧೩ ॥

# ವಿಷ್ಣು ಸಹಸ್ರನಾಮಸ್ತೋತ್ರಮ್

ಓಂ ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭುಃ ।
ಭೂತಕೃದ್ಭೂತಭೃದ್ಭಾವೋ  ಭೂತಾತ್ಮಾ ಭೂತಭಾವನಃ ॥ ೧೪ ॥

ಪೂತಾತ್ಮಾ ಪರಮಾತ್ಮಾ ಚ ಮುಕ್ತಾನಾಂ ಪರಮಾ ಗತಿಃ ।
ಅವ್ಯಯಃ ಪುರುಷಃ ಸಾಕ್ಷೀ  ಕ್ಷೇತ್ರಜ್ಞೋಽಕ್ಷರ ಏವ ಚ ॥ ೧೫ ॥

ಯೋಗೋ ಯೋಗವಿದಾಂ ನೇತಾ ಪ್ರಧಾನಪುರುಷೇಶ್ವರಃ ।
ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ ॥ ೧೬ ॥

ಸರ್ವಃ ಶರ್ವಃ ಶಿವಃ ಸ್ಥಾಣುಃ ಭೂತಾದಿರ್ನಿಧಿರವ್ಯಯಃ ।
ಸಮ್ಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ ॥೧೭ ॥

ಸ್ವಯಮ್ಭೂಃ ಶಮ್ಭುರಾದಿತ್ಯಃ ಪುಷ್ಕರಾಕ್ಷೋ ಮಹಾಸ್ವನಃ ।
ಅನಾದಿನಿಧನೋ ಧಾತಾ ವಿಧಾತಾ ಧಾತುರುತ್ತಮಃ ॥ ೧೮ ॥

ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋಽಮರಪ್ರಭುಃ ।
ವಿಶ್ವಕರ್ಮಾ ಮನುಸ್ತ್ವಷ್ಟಾ  ಸ್ಥವಿಷ್ಠ ಸ್ಥವಿರೋ ಧ್ರುವಃ ॥ ೧೯ ॥

ಅಗ್ರಾಹ್ಯಃ ಶಾಶ್ವತಃ ಕೃಷ್ಣೋ ಲೋಹಿತಾಕ್ಷಃ ಪ್ರತರ್ದನಃ ।
ಪ್ರಭೂತಸ್ತ್ರಿಕಕುಬ್ಧಾಮ ಪವಿತ್ರಂ ಮಙ್ಗಲಂ  ಪರಮ್ ॥ ೨೦ ॥

ಈಶಾನಃ ಪ್ರಾಣದಃ ಪ್ರಾಣೋ ಜ್ಯೇಷ್ಠಃ ಶ್ರೇಷ್ಠಃ ಪ್ರಜಾಪತಿಃ ।
ಹಿರಣ್ಯಗರ್ಭೋ ಭೂಗರ್ಭೋ ಮಾಧವೋ ಮಧುಸೂದನಃ ॥ ೨೧ ॥

ಈಶ್ವರೋ ವಿಕ್ರಮೀ ಧನ್ವೀ ಮೇಧಾವೀ ವಿಕ್ರಮಃ ಕ್ರಮಃ ।
ಅನುತ್ತಮೋ ದುರಾಧರ್ಷಃ ಕೃತಜ್ಞಃ ಕೃತಿರಾತ್ಮವಾನ್ ॥ ೨೨ ॥

ಸುರೇಶಃ ಶರಣಂ ಶರ್ಮ ವಿಶ್ವರೇತಾಃ ಪ್ರಜಾಭವಃ ।
ಅಹಃ ಸಂವತ್ಸರೋ ವ್ಯಾಲಃ ಪ್ರತ್ಯಯಸ್ಸರ್ವದರ್ಶನಃ ॥೨೩ ॥

ಅಜಃ ಸರ್ವೇಶ್ವರಃ ಸಿದ್ಧಃ ಸಿದ್ಧಿಃ ಸರ್ವಾದಿರಚ್ಯುತಃ |
ವೃಷಾಕಪಿರಮೇಯಾತ್ಮಾ ಸರ್ವಯೋಗವಿನಿಸ್ಸೃತಃ ||೧೪ ||

ವಸುರ್ವಸುಮನಾಃ ಸತ್ಯಃ ಸಮಾತ್ಮಾ ಸಮ್ಮಿತಃ ಸಮಃ |
ಅಮೋಘಃ ಪುಣ್ಡರೀಕಾಕ್ಷೋ ವೃಷಕರ್ಮಾ ವೃಷಾಕೃತಿಃ || ೧೫ ||

ರುದ್ರೋ ಬಹುಶಿರಾ ಬಭ್ರುಃ ವಿಶ್ವಯೋನಿಃ ಶುಚಿಶ್ರವಾಃ |
ಅಮೃತಃ ಶಾಶ್ವತಃ ಸ್ಥಾಣುರ್ವರಾರೋಹೋ ಮಹಾತಪಾಃ || ೧೬ ||

ಸರ್ವಗಃ ಸರ್ವವಿದ್ಭಾನುಃ ವಿಷ್ವಕ್ಸೇನೋ ಜನಾರ್ದನಃ |
ವೇದೋ ವೇದವಿದವ್ಯಙ್ಗೋ ವೇದಾಙ್ಗೋ ವೇದವಿತ್ ಕವಿಃ || ೧೭ ||

ಲೋಕಾಧ್ಯಕ್ಷಃ ಸುರಾಧ್ಯಕ್ಷೋ ಧರ್ಮಾಧ್ಯಕ್ಷಃ ಕೃತಾಕೃತಃ |
ಚತುರಾತ್ಮಾ ಚತುರ್ವ್ಯೂಹಃ ಚತುರ್ದಂಷ್ಟ್ರಶ್ಚತುರ್ಭುಜಃ || ೧೮ ||

ಭ್ರಾಜಿಷ್ಣುರ್ಭೋಜನಂ ಭೋಕ್ತಾ ಸಹಿಷ್ಣುರ್ಜಗದಾದಿಜಃ |
ಅನಘೋ ವಿಜಯೋ ಜೇತಾ ವಿಶ್ವಯೋನಿಃ ಪುನರ್ವಸುಃ || ೧೯ ||

ಉಪೇನ್ದ್ರೋ ವಾಮನಃ ಪ್ರಾಂಶುರಮೋಘಃ ಶುಚಿರೂರ್ಜಿತಃ |
ಅತೀನ್ದ್ರಃ ಸಙ್ಗ್ರಹಃ ಸರ್ಗೋ ಧೃತಾತ್ಮಾ ನಿಯಮೋ ಯಮಃ || ೨೦ ||

ವೇದ್ಯೋ ವೈದ್ಯಃ ಸದಾಯೋಗೀ ವೀರಹಾ ಮಾಧವೋ ಮಧುಃ |
ಅತೀನ್ದ್ರಿಯೋ ಮಹಾಮಾಯೋ ಮಹೋತ್ಸಾಹೋ ಮಹಾಬಲಃ ||೨೧ ||

ಮಹಾಬುದ್ಧಿರ್ಮಹಾವೀರ್ಯೋ ಮಹಾಶಕ್ತಿರ್ಮಹಾದ್ಯುತಿಃ |
ಅನಿರ್ದೇಶ್ಯವಪುಃ ಶ್ರೀಮಾನ್ ಅಮೇಯಾತ್ಮಾ ಮಹಾದ್ರಿಧೃಕ್ || ೨೨ ||

ಮಹೇಷ್ವಾಸೋ ಮಹೀಭರ್ತಾ ಶ್ರೀನಿವಾಸಃ ಸತಾಂ ಗತಿಃ |
ಅನಿರುದ್ಧಃ ಸುರಾನನ್ದೋ ಗೋವಿನ್ದೋ ಗೋವಿದಾಮ್ಪತಿಃ|| ೨೩ ||

ಮರೀಚಿರ್ದಮನೋ ಹಂಸಃ ಸುಪರ್ಣೋ ಭುಜಗೋತ್ತಮಃ |
ಹಿರಣ್ಯನಾಭಃ ಸುತಪಾಃ ಪದ್ಮನಾಭಃ ಪ್ರಜಾಪತಿಃ || ೨೪ ||

ಅಮೃತ್ಯುಃ ಸರ್ವದೃಕ್ ಸಿಂಹಃ ಸನ್ಧಾತಾ ಸನ್ಧಿಮಾನ್ ಸ್ಥಿರಃ |
ಅಜೋ ದುರ್ಮರ್ಷಣಃ ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ || ೩೫ ||

ಗುರುರ್ಗುರುತಮೋ ಧಾಮಃ ಸತ್ಯಃ ಸತ್ಯಪರಾಕ್ರಮಃ |
ನಿಮಿಷೋಽ ನಿಮಿಷಃ ಸ್ರಗ್ವೀ ವಾಚಸ್ಪತಿರುದಾರಧೀಃ || ೩೬ ||

ಅಗ್ರಣೀರ್ಗ್ರಾಮಣೀಃ ಶ್ರೀಮಾನ್ ನ್ಯಾಯೋ ನೇತಾ ಸಮೀರಣಃ |
ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್ || ೩೭ ||

ಆವರ್ತನೋ ನಿವೃತ್ತಾತ್ಮಾ ಸಂವೃತಃ ಸಮ್ಪ್ರಮರ್ದನಃ |
ಅಹಃ ಸಂವರ್ತಕೋ ವಹ್ನಿಃ ಅನಿಲೋ ಧರಣೀಧರಃ ||೩೮ ||

ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಧೃಗ್ವಿಶ್ವಭುಗ್ವಿಭುಃ |
ಸತ್ಕರ್ತಾ ಸತ್ಕೃತಃ ಸಾಧುಃ ಜಹ್ನುರ್ನಾರಾಯಣೋ ನರಃ || ೩೯ ||

ಅಸಙ್ಖ್ಯೇಯೋಽಪ್ರಮೇಯಾತ್ಮಾ ವಿಶಿಷ್ಟಃ ಶಿಷ್ಟ ಕೃಚ್ಛುಚಿಃ |
ಸಿದ್ಧಾರ್ಥಃ ಸಿದ್ಧ ಸಙ್ಕಲ್ಪಃ ಸಿದ್ಧಿದಃ ಸಿದ್ಧಿ ಸಾಧನಃ || ೪೦ ||

ವೃಷಾಹೀ ವೃಷಭೋ ವಿಷ್ಣುಃ ವೃಷಪರ್ವಾ ವೃಷೋದರಃ |
ವರ್ಧನೋ ವರ್ಧಮಾನಶ್ಚ ವಿವಿಕ್ತಃ ಶ್ರುತಿಸಾಗರಃ ||೪೧ ||

ಸುಭುಜೋ ದುರ್ಧರೋ ವಾಗ್ಮೀ ಮಹೇನ್ದ್ರೋ ವಸುದೋ ವಸುಃ |
ನೈಕರೂಪೋ ಬೃಹದ್ರೂಪಃ ಶಿಪಿವಿಷ್ಟಃ ಪ್ರಕಾಶನಃ ||೪೨ ||

ಓಜಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ |
ಋದ್ಧಃ ಸ್ಪಷ್ಟಾಕ್ಷರೋ ಮನ್ತ್ರಃ ಶ್ಚನ್ದ್ರಾಂಶುರ್ಭಾಸ್ಕರದ್ಯುತಿಃ || ೪೩ ||

ಅಮೃತಾಂಶೂದ್ಭವೋ ಭಾನುಃ ಶಶಬಿನ್ದುಃ ಸುರೇಶ್ವರಃ |
ಔಷಧಂ ಜಗತಃ ಸೇತುಃ ಸತ್ಯಧರ್ಮಪರಾಕ್ರಮಃ || ೪೪ ||

ಭೂತಭವ್ಯಭವನ್ನಾಥಃ ಪವನಃ ಪಾವನೋಽನಲಃ ।
ಕಾಮಹಾ ಕಾಮಕೃತ್ ಕಾನ್ತಃ ಕಾಮಃ ಕಾಮಪ್ರದಃ ಪ್ರಭುಃ ॥ ೪೫ ॥

ಯುಗಾದಿಕೃದ್ಯುಗಾವರ್ತೋ ನೈಕಮಾಯೋ ಮಹಾಶನಃ ।
ಅದೃಶ್ಯೋ ವ್ಯಕ್ತರೂಪಶ್ಚ ಸಹಸ್ರಜಿದನನ್ತಜಿತ್ ॥ ೪೬ ॥

ಇಷ್ಟೋ ಽವಿಶಿಷ್ಟಃ ಶಿಷ್ಟೇಷ್ಟಃ ಶಿಖಣ್ಡೀ  ನಹುಷೋ ವೃಷಃ ।
ಕ್ರೋಧಹಾ ಕ್ರೋಧಕೃತ್ಕರ್ತಾ ವಿಶ್ವಬಾಹುರ್ಮಹೀಧರಃ ॥ ೪೭ ॥

ಅಚ್ಯುತಃ ಪ್ರಥಿತಃ ಪ್ರಾಣಃ ಪ್ರಾಣದೋ ವಾಸವಾನುಜಃ ।
ಅಪಾಂ ನಿಧಿರಧಿಷ್ಠಾನಮ್ ಅಪ್ರಮತ್ತಃ ಪ್ರತಿಷ್ಠಿತಃ ॥ ೪೮ ॥

ಸ್ಕನ್ದಃ ಸ್ಕನ್ದಧರೋ ಧುರ್ಯೋ ವರದೋ ವಾಯುವಾಹನಃ ।
ವಾಸುದೇವೋ ಬೃಹದ್ಭಾನುಃ ಆದಿದೇವಃ ಪುರನ್ಧರಃ  ॥ ೪೯ ॥

ಅಶೋಕಸ್ತಾರಣಸ್ತಾರಃ ಶೂರಃ ಶೌರಿರ್ಜನೇಶ್ವರಃ ।
ಅನುಕೂಲಃ ಶತಾವರ್ತಃ ಪದ್ಮೀ ಪದ್ಮನಿಭೇಕ್ಷಣಃ ॥ ೫೦ ॥

ಪದ್ಮನಾಭೋಽ ರವಿನ್ದಾಕ್ಷಃ  ಪದ್ಮಗರ್ಭಃ ಶರೀರಭೃತ್ ।
ಮಹರ್ದ್ಧಿರೃದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ ॥ ೫೧ ॥

ಅತುಲಃ ಶರಭೋ ಭೀಮಃ ಸಮಯಜ್ಞೋ ಹವಿರ್ಹರಿಃ ।
ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಞ್ಜಯಃ  ॥ ೫೨ ॥

ವಿಕ್ಷರೋ ರೋಹಿತೋ ಮಾರ್ಗೋ ಹೇತುರ್ದಾಮೋದರಸ್ಸಹಃ ।
ಮಹೀಧರೋ ಮಹಾಭಾಗೋ ವೇಗವಾನಮಿತಾಶನಃ ॥ ೫೩ ॥

ಉದ್ಭವಃ, ಕ್ಷೋಭಣೋ ದೇವಃ ಶ್ರೀಗರ್ಭಃ ಪರಮೇಶ್ವರಃ ।
ಕರಣಂ ಕಾರಣಂ ಕರ್ತಾ ವಿಕರ್ತಾ ಗಹನೋ ಗುಹಃ ॥ ೫೪ ॥

ವ್ಯವಸಾಯೋ ವ್ಯವಸ್ಥಾನಃ ಸಂಸ್ಥಾನಃ ಸ್ಥಾನದೋ ಧ್ರುವಃ ।
ಪರರ್ದ್ಧಿಃ ಪರಮಸ್ಪಷ್ಟಸ್ತುಷ್ಟಃ ಪುಷ್ಟಃ ಶುಭೇಕ್ಷಣಃ ॥ ೫೫ ॥

ರಾಮೋ ವಿರಾಮೋ ವಿರಜೋ ಮಾರ್ಗೋ ನೇಯೋ ನಯೋಽನಯಃ |
ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ || ೫೬ ||

ವೈಕುಣ್ಠಃ  ಪುರುಷಃ ಪ್ರಾಣಃ ಪ್ರಾಣದಃ ಪ್ರಣವಃ ಪೃಥುಃ |
ಹಿರಣ್ಯಗರ್ಭಃ ಶತ್ರುಘ್ನೋ ವ್ಯಾಪ್ತೋ ವಾಯುರಧೋಕ್ಷಜಃ || ೫೭ ||

ಋತುಃ ಸುದರ್ಶನಃ ಕಾಲಃ ಪರಮೇಷ್ಠೀ ಪರಿಗ್ರಹಃ |
ಉಗ್ರಃ ಸಂವತ್ಸರೋ ದಕ್ಷೋ ವಿಶ್ರಾಮೋ ವಿಶ್ವದಕ್ಷಿಣಃ || ೫೮ ||

ವಿಸ್ತಾರಃ ಸ್ಥಾವರಃ ಸ್ಥಾಣುಃ ಪ್ರಮಾಣಂ ಬೀಜಮವ್ಯಯಮ್ |
ಅರ್ಥೋಽನರ್ಥೋ ಮಹಾಕೋಶೋ ಮಹಾಭೋಗೋ ಮಹಾಧನಃ|| ೫೯ ||

ಅನಿರ್ವಿಣ್ಣಃ ಸ್ಥವಿಷ್ಠೋಽಭೂಃ ಧರ್ಮಯೂಪೋ ಮಹಾಮಖಃ |
ನಕ್ಷತ್ರನೇಮಿರ್ನಕ್ಷತ್ರೀ ಕ್ಷಮಃ, ಕ್ಷಾಮಃ ಸಮೀಹನಃ || ೬೦ ||

ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತುಃ ಸತ್ರಂ ಸತಾಂ ಗತಿಃ |
ಸರ್ವದರ್ಶೀ ವಿಮುಕ್ತಾತ್ಮಾ ಸರ್ವಜ್ಞೋ ಜ್ಞಾನಮುತ್ತಮಮ್ || ೬೧ ||

ಸುವ್ರತಃ ಸುಮುಖಃ ಸೂಕ್ಷ್ಮಃ ಸುಘೋಷಃ ಸುಖದಃ ಸುಹೃತ್ |
ಮನೋಹರೋ ಜಿತಕ್ರೋಧೋ ವೀರಬಾಹುರ್ವಿದಾರಣಃ || ೬೨ ||

ಸ್ವಾಪನಸ್ಸ್ವವಶೋ ವ್ಯಾಪೀ ನೈಕಾತ್ಮಾ ನೈಕಕರ್ಮಕೃತ್ |
ವತ್ಸರೋ ವತ್ಸಲೋ ವತ್ಸೀ ರತ್ನಗರ್ಭೋ ಧನೇಶ್ವರಃ || ೬೩ ||

ಧರ್ಮಗುಬ್ಧರ್ಮಕೃದ್ಧರ್ಮೀ ಸದಸತ್ಕ್ಷರಮಕ್ಷರಮ್ |
ಅವಿಜ್ಞಾತಾ ಸಹಸ್ರಾಂಶುಃ ವಿಧಾತಾ ಕೃತಲಕ್ಷಣಃ || ೬೪ ||

ಗಭಸ್ತಿನೇಮಿಃ ಸತ್ತ್ವಸ್ಥಃ ಸಿಂಹೋ ಭೂತಮಹೇಶ್ವರಃ |
ಆದಿದೇವೋ ಮಹಾದೇವೋ ದೇವೇಶೋ ದೇವಭೃದ್ಗುರುಃ || ೬೫ ||

ಉತ್ತರೋ ಗೋಪತಿರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ |
ಶರೀರಭೂತಭೃದ್ಭೋಕ್ತಾ ಕಪೀನ್ದ್ರೋ ಭೂರಿದಕ್ಷಿಣಃ || ೬೬ ||

ಸೋಮಪೋಽಮೃತಪಃ ಸೋಮಃ ಪುರುಜಿತ್ ಪುರುಸತ್ತಮಃ |
ವಿನಯೋ ಜಯಃ ಸತ್ಯ ಸನ್ಧೋ ದಾಶಾರ್ಹಸ್ಸಾತ್ವತಾಂ ಪತಿಃ ||೭೭ ||

ಜೀವೋ ವಿನಯಿತಾಸಾಕ್ಷೀ ಮುಕುನ್ದೋ ಽಮಿತವಿಕ್ರಮಃ |
ಅಮ್ಭೋನಿಧಿರನನ್ತಾತ್ಮಾ ಮಹೋದಧಿ ಶಯೋಽನ್ತಕಃ || ೭೮ ||

ಅಜೋ ಮಹಾರ್ಹಃ ಸ್ವಾಭಾವ್ಯೋ ಜಿತಾಮಿತ್ರಃ ಪ್ರಮೋದನಃ |
ಆನನ್ದೋ ನನ್ದನೋ ನನ್ದಃ ಸತ್ಯಧರ್ಮಾ ತ್ರಿವಿಕ್ರಮಃ || ೭೯ ||

ಮಹರ್ಷಿಃ ಕಪಿಲಾಚಾರ್ಯಃ ಕೃತಜ್ಞೋ ಮೇದಿನೀಪತಿಃ |
ತ್ರಿಪದಸ್ತ್ರಿದಶಾಧ್ಯಕ್ಷೋ ಮಹಾಶೃಙ್ಗಃ ಕೃತಾನ್ತಕೃತ್ || ೮೦ ||

ಮಹಾವರಾಹೋ ಗೋವಿನ್ದಃ ಸುಷೇಣಃ ಕನಕಾಙ್ಗದೀ |
ಗುಹ್ಯೋ ಗಭೀರೋ ಗಹನೋ ಗುಪ್ತಶ್ಚಕ್ರಗದಾಧರಃ ||೮೧ ||

ವೇಧಾಃ ಸ್ವಾಙ್ಗೋಽಜಿತಃ ಕೃಷ್ಣೋ ದೃಢಃ ಸಙ್ಕರ್ಷಣೋಽಚ್ಯುತಃ |
ವರುಣೋ ವಾರುಣೋ ವೃಕ್ಷಃ ಪುಷ್ಕರಾಕ್ಷೋ ಮಹಾಮನಾಃ || ೮೨ ||

ಭಗವಾನ್ ಭಗಹಾಽ ನನ್ದೀ ವನಮಾಲೀ ಹಲಾಯುಧಃ |
ಆದಿತ್ಯೋ ಜ್ಯೋತಿರಾದಿತ್ಯಃ ಸಹಿಷ್ಣುರ್ಗತಿಸತ್ತಮಃ || ೮೩ ||

ಸುಧನ್ವಾ ಖಣ್ಡ ಪರಶುಃ ದಾರುಣೋ ದ್ರವಿಣಪ್ರದಃ |
ದಿವಸ್ಪೃಕ್ ಸರ್ವದೃಗ್ವ್ಯಾಸೋ ವಾಚಸ್ಪತಿರಯೋನಿಜಃ || ೮೪ ||

ತ್ರಿಸಾಮಾ ಸಾಮಗಃ ಸಾಮ ನಿರ್ವಾಣಂ ಭೇಷಜಂ ಭಿಷಕ್ |
ಸಂನ್ಯಾಸಕೃಚ್ಛಮ ಶಾನ್ತೋ ನಿಷ್ಠಾ ಶಾನ್ತಿಃ ಪರಾಯಣಮ್ || ೮೫ ||

ಶುಭಾಙ್ಗಃ ಶಾನ್ತಿದಃ ಸ್ರಷ್ಟಾ ಕುಮುದಃ ಕುವಲೇಶಯಃ |
ಗೋಹಿತೋ ಗೋಪತಿರ್ಗೋಪ್ತಾ ವೃಷಭಾಕ್ಷೋ ವೃಷಪ್ರಿಯಃ || ೮೬ ||

ಅನಿವರ್ತೀ ನಿವೃತ್ತಾತ್ಮಾ ಸಙ್ಕ್ಷೇಪ್ತಾ ಕ್ಷೇಮಕೃಚ್ಛಿವಃ |
ಶ್ರೀವತ್ಸವಕ್ಷಾಃ ಶ್ರೀವಾಸಃ ಶ್ರೀಪತಿಃ ಶ್ರೀಮತಾಂ ವರಃ || ೮೮ ||

ಶ್ರೀದಃ ಶ್ರೀಶಃ ಶ್ರೀನಿವಾಸಃ ಶ್ರೀನಿಧಿಃ ಶ್ರೀವಿಭಾವನಃ |
ಶ್ರೀಧರಃ ಶ್ರೀಕರಃ ಶ್ರೇಯಃ ಶ್ರೀಮಾನ್ ಲೋಕತ್ರಯಾಶ್ರಯಃ || ೭೮ ||

ಸ್ವಕ್ಷಃ ಸ್ವಙ್ಗಃ ಶತಾನನ್ದೋ ನನ್ದಿರ್ಜ್ಯೋತಿರ್ಗಣೇಶ್ವರಃ |
ವಿಜಿತಾತ್ಮಾ ವಿಧೇಯಾತ್ಮಾ ಸತ್ಕೀರ್ತಿಶ್ಛಿನ್ನಸಂಶಯಃ || ೭೯ ||

ಉದೀರ್ಣಃ ಸರ್ವತಶ್ಚಕ್ಷುಃ ಅನೀಶಃ ಶಾಶ್ವತಸ್ಥಿರಃ |
ಭೂಶಯೋ ಭೂಷಣೋ ಭೂತಿರ್ವಿಶೋಕಃ ಶೋಕನಾಶನಃ || ೮೦ ||

ಅರ್ಚಿಷ್ಮಾನರ್ಚಿತಃ ಕುಮ್ಭೋ ವಿಶುದ್ಧಾತ್ಮಾ ವಿಶೋಧನಃ |
ಅನಿರುದ್ಧೋಪ್ರತಿರಥಃ ಪ್ರದ್ಯುಮ್ನೋಮಿತವಿಕ್ರಮಃ || ೮೧ ||

ಕಾಲನೇಮಿನಿಹಾ ವೀರಃ ಶೌರಿಃ ಶೂರಜನೇಶ್ವರಃ |
ತ್ರಿಲೋಕಾತ್ಮಾ ತ್ರಿಲೋಕೇಶಃ ಕೇಶವಃ ಕೇಶಿಹಾ ಹರಿಃ || ೮೨ ||

ಕಾಮದೇವಃ ಕಾಮಪಾಲಃ ಕಾಮೀ ಕಾನ್ತಃ ಕೃತಾಗಮಃ |
ಅನಿರ್ದೇಶ್ಯವಪುರ್ವಿಷ್ಣುಃ  ವೀರೋऽನನ್ತೋ  ಧನಞ್ಜಯಃ  || ೮೩ ||

ಬ್ರಹ್ಮಣ್ಯೋ ಬ್ರಹ್ಮಕೃದ್ಬ್ರಹ್ಮಾ ಬ್ರಹ್ಮ ಬ್ರಹ್ಮವಿವರ್ಧನಃ |
ಬ್ರಹ್ಮವಿದ್ಬ್ರಾಹ್ಮಣೋ ಬ್ರಹ್ಮೀ ಬ್ರಹ್ಮಜ್ಞೋ ಬ್ರಾಹ್ಮಣಪ್ರಿಯಃ || ೮೪ ||

ಮಹಾಕ್ರಮೋ ಮಹಾಕರ್ಮಾ ಮಹಾತೇಜಾ ಮಹೋರಗಃ |
ಮಹಾಕ್ರತುರ್ಮಹಾಯಜ್ವಾ ಮಹಾಯಜ್ಞೋ ಮಹಾಹವಿಃ || ೮೫ ||

ಸ್ತವ್ಯಃ ಸ್ತವಪ್ರಿಯಃ ಸ್ತೋತ್ರಂ ಸ್ತುತಿಃ ಸ್ತೋತಾ ರಣಪ್ರಿಯಃ |
ಪೂರ್ಣಃ ಪೂರಯಿತಾ ಪುಣ್ಯಃ ಪುಣ್ಯಕೀರ್ತಿರನಾಮಯಃ || ೮೬ ||

ಮನೋಜವಸ್ತೀರ್ಥಕರೋ ವಸುರೇತಾ ವಸುಪ್ರದಃ |
ವಸುಪ್ರದೋ ವಾಸುದೇವೋ ವಸುರ್ವಸುಮನಾ ಹವಿಃ || ೮೭ ||

ಸದ್ಗತಿಃ ಸತ್ಕೃತಿಃ ಸತ್ತಾ ಸದ್ಭೂತಿಃ ಸತ್ಪರಾಯಣಃ |
ಶೂರಸೇನೋ ಯದುಶ್ರೇಷ್ಠಃ ಸನ್ನಿವಾಸಃ ಸುಯಾಮುನಃ || ೮೮ ||

ಭೂತಾವಾಸೋ ವಾಸುದೇವಃ ಸರ್ವಾಸುನಿಲಯೋಽನಲಃ |
ದರ್ಪಹಾ ದರ್ಪದೋ ದೃಪ್ತೋ ದುರ್ಧರೋಽಥಾಽಪರಾಜಿತಃ || ೮೯ ||

ವಿಶ್ವಮೂರ್ತಿರ್ಮಹಾಮೂರ್ತಿಃ ದೀಪ್ತಮೂರ್ತಿರಮೂರ್ತಿಮಾನ್ |
ಅನೇಕಮೂರ್ತಿರವ್ಯಕ್ತಃ ಶತಮೂರ್ತಿಃ ಶತಾನನಃ || ೯೦ ||

ಏಕೋ ನೈಕಃ ಸವಃ ಕಃ ಕಿಂ ಯತ್ತತ್ಪದಮನುತ್ತಮಮ್ |
ಲೋಕಬನ್ಧುರ್ಲೋಕನಾಥೋ ಮಾಧವೋ ಭಕ್ತವತ್ಸಲಃ || ೯೧ ||

ಸುವರ್ಣವರ್ಣೋ ಹೇಮಾಙ್ಗೋ ವರಾಙ್ಗಶ್ಚನ್ದನಾಙ್ಗದೀ|
ವೀರಹಾ ವಿಷಮಃ ಶೂನ್ಯೋ ಘೃತಾಶೀರಚಲಶ್ಚಲಃ || ೯೨ ||

ಅಮಾನೀ ಮಾನದೋ ಮಾನ್ಯೋ ಲೋಕಸ್ವಾಮೀ ತ್ರಿಲೋಕಧೃತ್ |
ಸುಮೇಧಾ ಮೇಧಜೋ ಧನ್ಯಃ ಸತ್ಯಮೇಧಾ ಧರಾಧರಃ || ೯೩ ||

ತೇಜೋವೃಷೋ ದ್ಯುತಿಧರಃ ಸರ್ವಶಸ್ತ್ರಭೃತಾಂ ವರಃ |
ಪ್ರಗ್ರಹೋ ನಿಗ್ರಹೋ ವ್ಯಗ್ರೋ ನೈಕಶೃಙ್ಗೋ ಗದಾಗ್ರಜಃ || ೯೪ ||

ಚತುರ್ಮೂರ್ತಿಶ್ಚತುರ್ಬಾಹುಃ ಚತುರ್ವ್ಯೂಹಶ್ಚತುರ್ಗತಿಃ |
ಚತುರಾತ್ಮಾ ಚತುರ್ಭಾವಃ ಚತುರ್ವೇದವಿದೇಕಪಾತ್ || ೯೫ ||

ಸಮಾವರ್ತೋಽನಿವೃತ್ತಾತ್ಮಾ ದುರ್ಜಯೋ ದುರತಿಕ್ರಮಃ |
ದುರ್ಲಭೋ ದುರ್ಗಮೋ ದುರ್ಗೋ ದುರಾವಾಸೋ ದುರಾರಿಹಾ ||೯೬ ||

ಶುಭಾಙ್ಗೋ ಲೋಕಸಾರಙ್ಗಃ ಸುತನ್ತುಃ ತನ್ತುವರ್ಧನಃ |
ಇನ್ದ್ರಕರ್ಮಾ ಮಹಾಕರ್ಮಾ ಕೃತಕರ್ಮಾ ಕೃತಾಗಮಃ || ೯೭ ||

ಉದ್ಭವಃ ಸುನ್ದರಃ ಸುನ್ದೋ ರತ್ನನಾಭಃ ಸುಲೋಚನಃ |
ಅರ್ಕೋ ವಾಜಸನಃ ಶೃಙ್ಗೀ ಜಯನ್ತಃ ಸರ್ವವಿಜ್ಜಯೀ || ೯೮ ||

ಸುವರ್ಣಬಿನ್ದುರಕ್ಷೋಭ್ಯಃ ಸರ್ವವಾಗೀಶ್ವರೇಶ್ವರಃ |
ಮಹಾಹ್ರದೋ ಮಹಾಗರ್ತೋ ಮಹಾಭೂತೋ ಮಹಾನಿಧಿಃ || ೯೯ ||

ಕುಮುದಃ ಕುನ್ದರಃ ಕುನ್ದಃ ಪರ್ಜನ್ಯಃ ಪಾವನೋಽನಿಲಃ
ಅಮೃತಾಶೋಽಮೃತವಪುಃ ಸರ್ವಜ್ಞಃ ಸರ್ವತೋಮುಖಃ || ೧೦೦ ||

ಸುಲಭಃ ಸುವ್ರತಃ ಸಿದ್ಧಃ ಶತ್ರುಜಿಚ್ಛತ್ರುತಾಪನಃ |
ನ್ಯಗ್ರೋಧೋ ದುಮ್ಬರೋಽಶ್ವತ್ಥಃಶ್ಚಾಣೂರಾನ್ಧ್ರನಿಸೂದನಃ || ೧೦೧ ||

ಸಹಸ್ರಾರ್ಚಿಃ ಸಪ್ತಜಿಹ್ವಃ ಸಪ್ತೈಧಾಃ ಸಪ್ತವಾಹನಃ |
ಅಮೂರ್ತಿರನಘೋಽಚಿನ್ತ್ಯೋ ಭಯಕೃದ್ಭಯನಾಶನಃ || ೧೦೨ ||

ಅಣುರ್ಬೃಹತ್ಕೃಶಃ ಸ್ಥೂಲೋ ಗುಣಭೃನ್ನಿರ್ಗುಣೋ ಮಹಾನ್ |
ಅಧೃತಸ್ಸ್ವಧೃತಸ್ಸ್ವಾಸ್ಯಃ ಪ್ರಾಗ್ವಂಶೋ ವಂಶವರ್ಧನಃ || ೧೦೩ ||

ಭಾರಭೃತ್ ಕಥಿತೋ ಯೋಗೀ ಯೋಗೀಶಃ ಸರ್ವಕಾಮದಃ |
ಆಶ್ರಮಃ ಶ್ರಮಣಃ, ಕ್ಷಾಮಃ ಸುಪರ್ಣೋ ವಾಯುವಾಹನಃ || ೧೦೪ ||

ಧನುರ್ಧರೋ ಧನುರ್ವೇದೋ ದಣ್ಡೋ ದಮಯಿತಾ ದಮಃ |
ಅಪರಾಜಿತಸ್ಸರ್ವಸಹೋ ನಿಯನ್ತಾ ನಿಯಮೋ ಯಮಃ || ೧೦೫ ||

ಸತ್ತ್ವವಾನ್ ಸಾತ್ತ್ವಿಕಃ ಸತ್ಯಃ ಸತ್ಯಧರ್ಮಪರಾಯಣಃ |
ಅಭಿಪ್ರಾಯಃ ಪ್ರಿಯಾಹೋರ್ಽರ್ಹಃ ಪ್ರಿಯಕೃತ್ ಪ್ರೀತಿವರ್ಧನಃ ||೧೦೬ ||

ವಿಹಾಯಸಗತಿರ್ಜ್ಯೋತಿಃ ಸುರುಚಿರ್ಹುತಭುಗ್ವಿಭುಃ |
ರವಿರ್ವಿರೋಚನಃ ಸೂರ್ಯಃ ಸವಿತಾ ರವಿಲೋಚನಃ || ೧೦೭ ||

ಅನಂತೋ ಹುತಭುಗ್ಭೋಕ್ತಾ ಸುಖದೋ ನೈಕಜೋಽಗ್ರಜಃ |
ಅನಿರ್ವಿಣ್ಣಃ ಸದಾಮರ್ಷೀ ಲೋಕಾಧಿಷ್ಠಾನಮದ್ಭುತಃ || ೧೦೮ ||

ಸನಾತ್ಸನಾತನತಮಃ ಕಪಿಲಃ ಕಪಿರಪ್ಯಯಃ |
ಸ್ವಸ್ತಿದಃ ಸ್ವಸ್ತಿಕೃತ್ ಸ್ವಸ್ತಿ ಸ್ವಸ್ತಿಭುಕ್ ಸ್ವಸ್ತಿದಕ್ಷಿಣಃ || ೧೦೯ ||

ಅರೌದ್ರಃ ಕುಣ್ಡಲೀ ಚಕ್ರೀ ವಿಕ್ರಮ್ಯೂರ್ಜಿತಶಾಸನಃ |
ಶಬ್ದಾತಿಗಃ ಶಬ್ದಸಹಃ ಶಿಶಿರಃ ಶರ್ವರೀಕರಃ || ೧೧೦ ||

ಅಕ್ರೂರಃ ಪೇಶಲೋ ದಕ್ಷೋ ದಕ್ಷಿಣಃ, ಕ್ಷಮಿಣಾಂ ವರಃ |
ವಿದ್ವತ್ತಮೋ ವೀತಭಯಃ ಪುಣ್ಯಶ್ರವಣಕೀರ್ತನಃ || ೧೧೧ ||

ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಃಸ್ವಪ್ನನಾಶನಃ |
ವೀರಹಾ ರಕ್ಷಣಸನ್ತೋ ಜೀವನಃ ಪರ್ಯವಸ್ಥಿತಃ || ೧೧೨ ||

ಅನನ್ತರೂಪೋಽನನ್ತಶ್ರೀಃ ಜಿತಮನ್ಯುರ್ಭಯಾಪಹಃ |
ಚತುರಶ್ರೋ ಗಭೀರಾತ್ಮಾ ವಿದಿಶೋ ವ್ಯಾದಿಶೋ ದಿಶಃ || ೧೧೩ ||

ಅನಾದಿರ್ಭೂರ್ಭುವೋ ಲಕ್ಷ್ಮೀಸ್ಸುವೀರೋ ರುಚಿರಾಙ್ಗದಃ |
ಜನನೋ ಜನಜನ್ಮಾದಿಃ ಭೀಮೋ ಭೀಮಪರಾಕ್ರಮಃ || ೧೧೪ ||

ಆಧಾರನಿಲಯೋಧಾತಾ ಪುಷ್ಪಹಾಸಃ ಪ್ರಜಾಗರಃ |
ಊರ್ಧ್ವಗಸ್ಸತ್ಪಥಾಚಾರಃ ಪ್ರಾಣದಃ ಪ್ರಣವಃ ಪಣಃ || ೧೧೫ ||

ಪ್ರಮಾಣಂ ಪ್ರಾಣನಿಲಯಃ ಪ್ರಾಣಭೃತ್ ಪ್ರಾಣಜೀವನಃ |
ತತ್ತ್ವಂ ತತ್ತ್ವವಿದೇಕಾತ್ಮಾ ಜನ್ಮಮೃತ್ಯುಜರಾತಿಗಃ || ೧೧೬ ||

ಭೂರ್ಭುವಃಸ್ವಸ್ತರುಸ್ತಾರಃ ಸವಿತಾ ಪ್ರಪಿತಾಮಹಃ |
ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಙ್ಗೋ ಯಜ್ಞವಾಹನಃ || ೧೧೭ ||

ಯಜ್ಞಭೃದ್ಯಜ್ಞಕೃದ್ಯಜ್ಞೀ ಯಜ್ಞಭುಗ್ಯಜ್ಞಸಾಧನಃ |
ಯಜ್ಞಾಂತಕೃದ್ಯಜ್ಞಗುಹ್ಯಮನ್ನಮನ್ನಾದ ಏವ ಚ || ೧೧೮ ||

ಆತ್ಮಯೋನಿಃ ಸ್ವಯಞ್ಜಾತೋ ವೈಖಾನಃ ಸಾಮಗಾಯನಃ |
ದೇವಕೀನಂದನಃ ಸ್ರಷ್ಟಾ ಕ್ಷಿತೀಶಃ ಪಾಪನಾಶನಃ || ೧೧೯ ||

ಶಙ್ಖಭೃನ್ನನ್ದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ |
ರಥಾಙ್ಗಪಾಣಿರಕ್ಷೋಭ್ಯಃ ಸರ್ವಪ್ರಹರಣಾಯುಧಃ || ೧೨೦ ||

|| ಸರ್ವಪ್ರಹರಣಾಯುಧೋಂ ನಮಃ ಇತಿ ||

# ಫಲಶ್ರುತಿ

ಇತೀದಂ ಕೀರ್ತನೀಯಸ್ಯ ಕೇಶವಸ್ಯ ಮಹಾತ್ಮನಃ ।
ನಾಮ್ನಾಂ ಸಹಸ್ರಂ ದಿವ್ಯಾನಾಮ್ ಅಶೇಷೇಣ ಪ್ರಕೀರ್ತಿತಮ್ ॥ ೧೨೧ ॥

ಯ ಇದಂ ಶೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ ।
ನಾಶುಭಂ ಪ್ರಾಪ್ನುಯಾತ್ ಕಿಞ್ಚಿತ್ ಸೋಽಮುತ್ರೇಹ ಚ ಮಾನವಃ ॥ ೧೨೨ ॥

ವೇದಾನ್ತಗೋ ಬ್ರಾಹ್ಮಣಃ ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ ।
ವೈಶ್ಯೋ ಧನಸಮೃದ್ಧಃ ಸ್ಯಾತ್ ಶೂದ್ರಸ್ಸುಖಮವಾಪ್ನುಯಾತ್ ॥ ೧೨೩ ॥

ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮಮ್ ಅರ್ಥಾರ್ಥೀ ಚಾರ್ಥಮಾಪ್ನುಯಾತ್ ।
ಕಾಮಾನವಾಪ್ನುಯಾತ್ ಕಾಮೀ ಪ್ರಜಾರ್ಥೀ ಚಾಪ್ನುಯಾತ್ ಪ್ರಜಾಮ್ ॥ ೧೨೪ ॥

ಭಕ್ತಿಮಾನ್ ಯಃ ಸದೋತ್ಥಾಯ ಶುಚಿಸ್ತದ್ಗತಮಾನಸಃ ।
ಸಹಸ್ರಂ ವಾಸುದೇವಸ್ಯ ನಾಮ್ನಾಮೇತತ್ ಪ್ರಕೀರ್ತಯೇತ್ ॥ ೧೨೫ ॥

ಯಶಃ ಪ್ರಾಪ್ನೋತಿ ವಿಪುಲಂ ಯಾತಿ ಪ್ರಾಧಾನ್ಯಮೇವ ಚ ।
ಅಚಲಾಂ ಶ್ರಿಯಮಾಪ್ನೋತಿ ಶ್ರೇಯಃ ಪ್ರಾಪ್ನೋತ್ಯನುತ್ತಮಮ್ ॥ ೧೨೬ ॥

ನ ಭಯಂ ಕ್ವಚಿದಾಪ್ನೋತಿ ವೀರ್ಯಂ ತೇಜಶ್ಚ ವಿಂದತಿ ।
ಭವತ್ಯರೋಗೋ ದ್ಯುತಿಮಾನ್ ಬಲರೂಪಗುಣಾನ್ವಿತಃ ॥ ೧೨೭ ॥

ರೋಗಾರ್ತೋ ಮುಚ್ಯತೇ ರೋಗಾತ್ ಬದ್ಧೋ ಮುಚ್ಯೇತ ಬಂಧನಾತ್ ।
ಭಯಾನ್ಮುಚ್ಯೇತ ಭೀತಸ್ತು ಮುಚ್ಯೇತಾಪನ್ನ ಆಪದಃ ॥ ೧೨೮ ॥

ದುರ್ಗಾಣ್ಯತಿತರತ್ಯಾಶು ಪುರುಷಃ ಪುರುಷೋತ್ತಮಮ್ ।
ಸ್ತುವನ್ನಾಮಸಹಸ್ರೇಣ ನಿತ್ಯಂ ಭಕ್ತಿಸಮನ್ವಿತಃ ॥ ೧೨೯ ॥

ವಾಸುದೇವಾಶ್ರಯೋ ಮರ್ತ್ಯೋ ವಾಸುದೇವಪರಾಯಣಃ ।
ಸರ್ವಪಾಪವಿಶುದ್ಧಾತ್ಮಾ ಯಾತಿ ಬ್ರಹ್ಮ ಸನಾತನಮ್ ॥ ೧೩೦ ॥

ನ ವಾಸುದೇವಭಕ್ತಾನಾಮ್ ಅಶುಭಂ ವಿದ್ಯತೇ ಕ್ವಚಿತ್ ।
ಜನ್ಮಮೃತ್ಯುಜರಾವ್ಯಾಧಿಭಯಂ ನೈವೋಪಜಾಯತೇ ॥ ೧೩೧ ॥

ಇಮಂ ಸ್ತವಮಧೀಯಾನಃ ಶ್ರದ್ಧಾಭಕ್ತಿಸಮನ್ವಿತಃ ।
ಯುಜ್ಯೇತಾತ್ಮಾಸುಖಕ್ಷಾನ್ತಿಶ್ರೀಧೃತಿಸ್ಮೃತಿಕೀರ್ತಿಭಿಃ ॥ ೧೩೨ ॥

ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ ।
ಭವಂತಿ ಕೃತಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ ॥ ೧೩೩ ॥

ದ್ಯೌಸ್ಸಚನ್ದ್ರಾರ್ಕನಕ್ಷತ್ರಾ ಖಂ ದಿಶೋ ಭೂರ್ಮಹೋದಧಿಃ ।
ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ ॥ ೧೩೪ ॥

ಸಸುರಾಸುರಗನ್ಧರ್ವಂ ಸಯಕ್ಷೋರಗರಾಕ್ಷಸಮ್ ।
ಜಗದ್ವಶೇ ವರ್ತತೇದಂ ಕೃಷ್ಣಸ್ಯ ಸಚರಾಚರಮ್ ॥ ೧೩೫ ॥

ಇನ್ದ್ರಿಯಾಣಿ ಮನೋ ಬುದ್ಧಿಃ ಸತ್ತ್ವಂ ತೇಜೋ ಬಲಂ ಧೃತಿಃ ।
ವಾಸುದೇವಾತ್ಮಕಾನ್ಯಾಹುಃ, ಕ್ಷೇತ್ರಂ ಕ್ಷೇತ್ರಜ್ಞ ಏವ ಚ ॥ ೧೩೬ ॥

ಸರ್ವಾಗಮಾನಾಮಾಚಾರಃ ಪ್ರಥಮಂ ಪರಿಕಲ್ಪ್ಯತೇ ।
ಆಚಾರಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ॥ ೧೩೭ ॥

ಋಷಯಃ ಪಿತರೋ ದೇವಾ ಮಹಾಭೂತಾನಿ ಧಾತವಃ ।
ಜಙ್ಗಮಾ ಜಙ್ಗಮಂ ಚೇದಂ ಜಗನ್ನಾರಾಯಣೋದ್ಭವಮ್ ॥ ೧೩೮ ॥

ಯೋಗೋ ಜ್ಞಾನಂ ತಥಾ ಸಾಙ್ಖ್ಯಂ ವಿದ್ಯಾಃ ಶಿಲ್ಪಾದಿಕರ್ಮ ಚ ।
ವೇದಾಶ್ಶಾಸ್ತ್ರಾಣಿ ವಿಜ್ಞಾನಮ್ ಏತತ್ಸರ್ವಂ ಜನಾರ್ದನಾತ್ ॥ ೧೩೯ ॥

ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।
ತ್ರೀನ್ಲೋಕಾ ನ್ವ್ಯಾಪ್ಯ ಭೂತಾತ್ಮಾ ಭುಙ್ಕ್ತೇ ವಿಶ್ವಭುಗವ್ಯಯಃ ॥ ೧೪೦ ॥

ಇಮಂ ಸ್ತವಂ ಭಗವತೋ ವಿಷ್ಣೋರ್ವ್ಯಾಸೇನ ಕೀರ್ತಿತಮ್ ।

ಪಠೇದ್ಯ ಇಚ್ಛೇತ್ಪುರುಷಃ ಶ್ರೇಯಃ ಪ್ರಾಪ್ತುಂ ಸುಖಾನಿ ಚ ॥ ೧೪೧ ॥

ವಿಶ್ವೇಶ್ವರಮಜಂ ದೇವಂ ಜಗತಃ ಪ್ರಭವಾಪ್ಯಯಮ್ ।
ಭಜನ್ತಿ ಯೇ ಪುಷ್ಕರಾಕ್ಷಂ ನ ತೇ ಯಾನ್ತಿ ಪರಾಭವಮ್॥ ೨೨ ॥

॥ ನ ತೇ ಯಾನ್ತಿ  ಪರಾಭವೋಂ ನಮ ಇತಿ ॥

ಇತೀ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ಶ್ರೀವಿಷ್ಣುಸಹಸ್ರನಾಮ ಸ್ತೋತ್ರಂ ಸಂಪೂರ್ಣಮ್.



# ಪೂರ್ವ ಪೀಠಿಕಾ ವಿವರಣೆ

ವೈಶಂಪಾಯನ ಉವಾಚ

ಶ್ರುತ್ವಾ ಧರ್ಮಾನಶೇಷೇಣ ಪಾವನಾನಿ ಚ ಸರ್ವಶಃ
ಯುಧಿಷ್ಠಿರಃ ಶಾಂತನವಂ ಪುನರೇವಾಭ್ಯಭ್ಯಾಷತ ॥೦॥

ವೈಶಂಪಾಯನನು ನುಡಿದನು:

ಪಾಪಗಳನ್ನು ಕಳೆದು ಪರಿಶುದ್ಧವಾಗುವ ಎಲ್ಲಾ ಧರ್ಮಗಳ ಬಗ್ಗೆ ಸಮಗ್ರವಾಗಿ ಭೀಷ್ಮಾಚಾರ್ಯರಿಂದ ಕೇಳಿ ತಿಳಿದ ನಂತರ, ಯುಧಿಷ್ಠಿರ ಭೀಷ್ಮಾಚಾರ್ಯರಲ್ಲಿ ಈ ರೀತಿ ಪ್ರಶ್ನೆ ಹಾಕುತ್ತಾನೆ.

ಯುಧಿಷ್ಠಿರ ಉವಾಚ

ಕಿಮೇಕಂ ದೈವತಂ ಲೋಕೇ ಕಿಂ ವಾಪ್ಯೇಕಂ ಪರಾಯಣಂ ।
ಸ್ತುವಂತಃ ಕಂ ಕಮರ್ಚಂತಃ ಪ್ರಾಪ್ನುಯುರ್ಮಾನವಾಃ ಶುಭಮ್ ॥೧॥

ಕೋ ಧರ್ಮಃ ಸರ್ವಧರ್ಮಾಣಾಂ ಭವತಃ ಪರಮೋ ಮತಃ ।
ಕಿಂ ಜಪನ್ಮುಚ್ಯತೇ ಜಂತುರ್ಜನ್ಮಸಂಸಾರಬಂಧನಾತ್ ॥೩॥

ಎಲ್ಲಾ ಶಾಸ್ತ್ರಗಳು ಸಾರುವ ಹಿರಿಯ ದೇವತೆ ಯಾರು? ಒಬ್ಬನೇ ಒಬ್ಬ ಕೊನೇಯ ಆಸರೆ ಯಾರು? ಯಾರನ್ನು ಹಾಡಿ ಹೊಗಳುತ್ತಾ, ಆರಾಧಿಸುವುದರಿಂದ ಮಾನವನಿಗೆ ಒಳಿತು ?

ಯಾವುದು ಎಲ್ಲಾ ಧರ್ಮಗಳಿಗೂ ಮಿಗಿಲಾದ ಧರ್ಮ ಎಂದು ನಿಮ್ಮ ಅಭಿಮತ ? ಯಾವುದನ್ನು ಜಪಿಸುವುದರಿಂದ ಮಾನವ ಹುಟ್ಟಿನಿಂದ ಹಾಗೂ ಸಂಸಾರ ಬಂಧದಿಂದ ಮುಕ್ತಿ ಪಡೆಯುತ್ತಾನೆ ?

ಭೀಷ್ಮ ಉವಾಚ

ಜಗತ್ಪ್ರಭುಂ ದೇವದೇವಮನಂತಂ ಪುರುಷೋತ್ತಮಮ್ ।
ಸ್ತುವನ್ನಾಮಸಹಸ್ರೇಣ ಪುರುಷಃ ಸತತೋತ್ಥಿತಃ ॥೪॥

ತಮೇವ ಚಾರ್ಚಯನ್ನಿತ್ಯಂ ಭಕ್ತ್ಯಾ ಪುರುಷಮವ್ಯಯಮ್ ।
ಧ್ಯಾಯನ್ ಸ್ತುವನ್ನಮಸ್ಯಂಶ್ಚ ಯಜಮಾನಸ್ತಮೇವ ಚ ॥೫॥

ಅನಾದಿ ನಿಧನಂ ವಿಷ್ಣುಂ ಸರ್ವಲೋಕಮಹೇಶ್ವರಮ್ ।
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ ಸರ್ವದುಃಖಾತಿಗೋ ಭವೇತ್ ॥೬॥

ಬ್ರಹ್ಮಣ್ಯಂ ಸರ್ವಧರ್ಮಜ್ಞಂ ಲೋಕಾನಾಂ ಕೀರ್ತಿವರ್ಧನಮ್ ।
ಲೋಕನಾಥಂ ಮಹದ್ಭೂತಂ ಸರ್ವಭೂತಭವೋದ್ಭವಮ್ ॥೭॥

ಎಂದೂ ಎಡವದೇ ಎಚ್ಚರದಿಂದಿರುವ ಸಾಧಕ, ಜಗದ ಒಡೆಯನನ್ನು, ದೇವತೆಗಳಿಗೂ ಹಿರಿಯನಾದ ಹಿರಿದೈವವನ್ನು, ಆತನ ಸಾವಿರನಾಮಗಳಿಂದ ಸ್ತುತಿಸುತ್ತಾ. ಅಳಿವಿರದ ಆ ಪರಮಪುರುಷನನ್ನೇ ಅನುಗಾಲ ಭಕ್ತಿಯಿಂದ ಪೂಜಿಸುತ್ತಾ, ಅವನನ್ನೇ ಮನದಲ್ಲಿ ನೆನೆಯುತ್ತಾ, ಸದಾ ಸ್ತುತಿಸುತ್ತಾ, ತಲೆಬಾಗಿ ಆರಾಧಿಸುತ್ತಾ; ತುದಿ-ಮೊದಲು ಇರದವನನ್ನು, ಎಲ್ಲೆಡೆ ತುಂಬಿರುವವನನ್ನು, ಎಲ್ಲಾ ಲೋಕಗಳ ಹಿರಿಯ ಒಡೆಯರಿಗೂ ಒಡೆಯನಾದವನನ್ನು, ಮೇಲೆ ನಿಂತು ಎಲ್ಲವನ್ನೂ ಕಾಣುತ್ತಿರುವವನನ್ನು, ತಿಳಿದವರು ಮೆಚ್ಚುವವನನ್ನು, ಎಲ್ಲಾ ಧರ್ಮಗಳ ಬಲ್ಲವನನ್ನು, ಜೀವಗಳಿಗೆ ಜಸದ ಏರು ತೋರುವವನನ್ನು, ಜೀವ ಜಾತದ ಒಡೆಯನನ್ನು, ಎಲ್ಲಾ ಜೀವಗಳಿಗೂ ಬಾಳನಿತ್ತವನನ್ನು, ಹಿರಿಯ ತತ್ವವಾದ ನಾರಾಯಣನನ್ನು ಆರಾಧಿಸಬೇಕು.

ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ
ಯದ್ಭಕ್ತ್ಯಾ ಪುಂಡರೀಕಾಕ್ಷಂ ಸ್ತವೈರರ್ಚೇನ್ನರಃ ಸದಾ ॥೮॥

ಭಗವಂತನನ್ನು ಅವನ ಗುಣದ ಅನುಸಂಧಾನದ ಮೂಲಕ ಸ್ತುತಿಸುವುದೇ ಧರ್ಮದಲ್ಲಿ ಶ್ರೇಷ್ಠವಾದ ಧರ್ಮ. ಸ್ತೋತ್ರಗಳಲ್ಲಿ ಶ್ರೇಷ್ಠವಾದ ಸ್ತೋತ್ರ ವಿಷ್ಣು ಸಹಸ್ರನಾಮ. ಭಗವಂತನ ಸ್ತೋತ್ರವನ್ನು ಶ್ರದ್ಧೆ-ಭಕ್ತಿಯಿಂದ, ವಿಶ್ವಾಸ-ನಂಬಿಕೆಯಿಂದ ಸ್ತುತಿಸುವುದು ಎಲ್ಲಾ ಧರ್ಮಗಳಿಗಿಂತ ಮಹತ್ತಾದ ಧರ್ಮ. ನಮ್ಮ ನಂಬಿಕೆ ಎಂತದ್ದೋ, ನಮ್ಮ ವ್ಯಕ್ತಿತ್ವ ಎಂತದ್ದೋ, ನಾವು ಪಡೆಯುವ ಫಲ ಅಂತದ್ದು. ನಂಬಿಕೆಯನ್ನು ಬೆಳೆಸಿಕೊಳ್ಳದಿದ್ದರೆ ಉಪಯೋಗವಿಲ್ಲ. ತಿಳಿಯದೇ, ನಂಬದೇ ಪೂಜಿಸಿ ಉಪಯೋಗವಿಲ್ಲ. ಗೌರವಪೂರ್ವಕವಾಗಿ, ನಂಬಿಕೆಯಿಂದ, ಸ್ತೋತ್ರಗಳಿಂದ ಹಾಡಿ ಕೊಂಡಾಡಿ ಪೂಜಿಸುವುದು ಶ್ರೇಷ್ಠವಾದ ಧರ್ಮ.

ಪರಮಂ ಯೋ ಮಹತ್ತೇಜಃ ಪರಮಂ ಯೋ ಮಹತ್ತಪಃ ।
ಪರಮಂ ಯೋ ಮಹದ್ಬ್ರಹ್ಮ ಪರಮಂ ಯಃ ಪರಾಯಣಮ್ ॥೯॥

ಭಗವಂತ ಬೆಳಕುಗಳಿಗೆ ಬೆಳಕು ನೀಡುವ ಸ್ವರೂಪ. ಎಲ್ಲರ ಚಿಂತನೆಯ ಕೊನೆಯ ಗುರಿ; ಎಲ್ಲಾ ಜ್ಞಾನದ ಗಮ್ಯ ಆ ಭಗವಂತ. ಇಲ್ಲಿ ಭಗವಂತನನ್ನು 'ಪರಮ ಮಹಾ ಬ್ರಹ್ಮ' ಎನ್ನುತ್ತಾರೆ. ಇಲ್ಲಿ ಬ್ರಹ್ಮ ಎಂದರೆ ಜೀವರು; ಪರಬ್ರಹ್ಮ ಎಂದರೆ ಮುಕ್ತರಾದ ಜೀವರು; ಪರಮಬ್ರಹ್ಮ ಎಂದರೆ ಶ್ರೀತತ್ವ, ನಿತ್ಯ ಮುಕ್ತಳಾದ ಶ್ರೀಲಕ್ಷ್ಮಿ. ಪರಮ ಮಹಾ ಬ್ರಹ್ಮ ಎಂದರೆ ನಾರಾಯಣ. ಭಗವಂತ ಪರಾಯಣರಿಗೂ ಕೂಡಾ ಪರಮ. ಇಲ್ಲಿ ಪರಾಯಣರು ಎಂದರೆ ನಮಗೆ ಆಸರೆಯಾಗಿರುವ ತತ್ವಾಭಿಮಾನಿ ದೇವತೆಗಳು. ಭಗವಂತ ಸರ್ವ ದೇವತೆಗಳ ಒಡೆಯ.

ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್ ।
ದೈವತಂ ದೇವತಾನಾಂ ಚ ಭೂತಾನಾಂ ಯೋಽವ್ಯಯಃ ಪಿತಾ ॥೧೦॥

ಪವಿತ್ರ ಎಂದರೆ ಪಾವನಗೊಳಿಸುವಂತದ್ದು. ನಾವು ನಿರ್ಮಲವಾಗಬೇಕಾದರೆ, ಆ ಪರಮ ಪವಿತ್ರನಾದ ಭಗವಂತನಲ್ಲಿ ಶರಣಾಗಬೇಕು. ಆತ ಪಾವನಗಳಿಗೆ ಪಾವನನಾದವನು; ಒಳಿತುಗಳಿಗೆ ಒಳಿತಾದವನು; ದೇವತೆಗಳಿಗೂ ಹಿರಿ ದೈವ, ಜೀವರಿಗೆ ಅಳಿವಿರದ ಅಪ್ಪ.

ಯತಃ ಸರ್ವಾಣಿ ಭೂತಾನಿ ಭವಂತ್ಯಾದಿಯುಗಾಗಮೇ ।
ಯಸ್ಮಿಂಶ್ಚ ಪ್ರಲಯಂ ಯಾಂತಿ ಪುನರೇವ ಯುಗಕ್ಷಯೇ ॥೧೧॥

ಸೃಷ್ಟಿ ಕಾಲದಲ್ಲಿ ಭಗವಂತನಿಂದ ಈ ಕಾಣುವ ಸೃಷ್ಟಿ ನಿರ್ಮಾಣವಾಗುತ್ತದೆ. ಎಲ್ಲಾ ಜೀವಗಳು ಹುಟ್ಟಿ ಬರುತ್ತವೆ, ಪ್ರಳಯಕಾಲದಲ್ಲಿ ಕಾಣುವ ರೂಪ ಕಳೆದುಕೊಂಡು ಸೂಕ್ಷ್ಮ ರೂಪದಲ್ಲಿ ಆ ಭಗವಂತನನ್ನು ಹೋಗಿ ಸೇರುತ್ತವೆ. ಪ್ರತಿಯೊಂದು ಕ್ರಿಯೆ ವ್ಯವಸ್ಥಿತವಾಗಿ, ಗಣಿತಬದ್ಧವಾಗಿ ನಡೆಯುತ್ತದೆ. ಇಲ್ಲಿ ಯಾವುದೂ ಆಕಸ್ಮಿಕವಲ್ಲ.

ತಸ್ಯ ಲೋಕಪ್ರಧಾನಸ್ಯ ಜಗನ್ನಾಥಸ್ಯ ಭೂಪತೇ ।
ವಿಷ್ಣೋರ್ನಾಮಸಹಸ್ರಂ ಮೇ ಶ್ರುಣು ಪಾಪಭಯಾಪಹಮ್ ॥೧೨॥

ಭಗವಂತ ನಮ್ಮ ಪಾಪ ಭಯವನ್ನು ತೊಡೆದು ಹಾಕುತ್ತಾನೆ. ತಪ್ಪು ಮಾಡಿದಾಗ ತಿದ್ದಿ ಉದ್ಧಾರ ಮಾಡುತ್ತಾನೆ. "ಓ ಭೂಪತಿ, ಎಲ್ಲಾ ಶಾಸ್ತ್ರಗಳ ಮುಖ್ಯ ವಾಚ್ಯನಾದ ಜಗದೊಡೆಯನಾದ ಇಂತಹ ವಿಷ್ಣುವಿನ ಸಾವಿರ ನಾಮಗಳನ್ನು ಆಲಿಸು".

ಯಾನಿ ನಾಮಾನಿ ಗೌಣಾನಿ ವಿಖ್ಯಾತಾನಿ ಮಹಾತ್ಮನಃ ।
ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ಭೂತಯೇ ॥೧೩॥

"ಪ್ರಾಚೀನ ಋಷಿ-ಮುನಿಗಳು, ಮಹಾತ್ಮರು, ನಿರಂತರ ಉಪಾಸನೆ ಮಾಡಿಕೊಂಡು ಬಂದಿರುವ ಆ ಪರಮಾತ್ಮನ ಗುಣವನ್ನು ಸಾರುವ, ಹೆಸರಾಂತ ಸಾವಿರ ನಾಮಗಳನ್ನು ಹೇಳುತ್ತೇನೆ" ಎಂದು ಭೀಷ್ಮಾಚಾರ್ಯರು ವಿಷ್ಣು ಸಹಸ್ರನಾಮವನ್ನು, ಶ್ರೀಕೃಷ್ಣನ ಸಮ್ಮುಖದಲ್ಲಿ ಧರ್ಮರಾಯನಿಗೆ ಉಪದೇಶ ಮಾಡುತ್ತಾರೆ.

ಭಗವಂತನ ನಾಮವನ್ನು ಸ್ತ್ರೀ-ಪುರುಷ-ನಪುಂಸಕ ಲಿಂಗಗಳಲ್ಲಿ ಕಾಣಬಹುದು. ಸ್ತ್ರೀ-ಪುರುಷರಲ್ಲಿರುವ ಸರ್ವ ಗುಣಗಳಿಂದ ಪೂರ್ಣನಾದ ಭಗವಂತನಲ್ಲಿ ಯಾವುದೇ ರೀತಿಯ ಸ್ತ್ರೀ-ಪುರುಷ ಗುಣದೋಷಗಳಿಲ್ಲ. ಈ ರೀತಿ ಲಿಂಗ ಸಮನ್ವಯ ಭಗವಂತನಲ್ಲಿ ಮಾತ್ರ ಸಾಧ್ಯ.

ಸಾಮಾನ್ಯವಾಗಿ ಯಾವುದೇ ಪೂಜೆ-ಕರ್ಮವನ್ನು ಮಾಡುವಾಗ ವಿಘ್ನನಿವಾರಕನಾದ ಗಣಪತಿ ಪೂಜೆ ಮಾಡುವುದು ಸಂಪ್ರದಾಯ. ಅದಕ್ಕಾಗಿ ಗಣಪತಿ ಮಂಡಲ ಬರೆದು ಪೂಜಿಸಿ ನಂತರ ಇತರ ಕರ್ಮವನ್ನು ಮಾಡುತ್ತಾರೆ.

ವಕ್ರತುಂಡ ಮಹಾಕಾಯ ಕೋಟಿ ಸೂರ್ಯ ಸಮಪ್ರಭ
ನಿರ್ವಿಘ್ನಂ ಕುರು ಮೇ ದೇವ ಸರ್ವ ಕಾರ್ಯೇಷು ಸರ್ವದ
ಶುಕ್ಲಾಂಬರದರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ
ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪ ಶಾಂತಯೇ

ಹೀಗೆ ವಿಘ್ನ ನಿವಾರಕ ಗಣಪತಿ ಸ್ತುತಿ ಮೊದಲಿಗೆ. ವಿಷ್ಣು ಸಹಸ್ರನಾಮ ಭಗವಂತನ 'ವಿಶ್ವಮ್' ಎನ್ನುವ ವಿಘ್ನನಿವಾರಕ 'ವಿಶ್ವಂಭರ' ರೂಪದ ನಾಮದಿಂದ ಪ್ರಾರಂಭವಾಗುತ್ತದೆ.

ನಮ್ಮ ಜೀವನದಲ್ಲಿರುವ ಮೂರು ಅವಸ್ಥೆಗಳಲ್ಲಿ (ಎಚ್ಚರ-ಕನಸು-ನಿದ್ದೆ), ನಮ್ಮ ಎಚ್ಚರವನ್ನು ನಿಯಂತ್ರಿಸುವ ಭಗವಂತನ ರೂಪ 'ವಿಶ್ವ' ನಾಮಕ ರೂಪ.

ಬನ್ನಿ, ವಿಘ್ನನಾಶಕ ವಿಶ್ವಂಭರನಾಗಿ, ನಮಗೆ ಎಚ್ಚರವನ್ನು ಕೊಟ್ಟು ವಿಷ್ಣುಸಹಸ್ರನಾಮ ಚಿಂತನೆ ಮಾಡುವಂತೆ ಮಾಡು ಎಂದು ಆ ಭಗವಂತನಲ್ಲಿ ಪ್ರಾರ್ಥಿಸಿ, ಆತನ ನಾಮದಲ್ಲಿ ಅವನ ಗುಣಾನುಸಂಧಾನ ಮಾಡೋಣ.



# ಸಹಸ್ರನಾಮ ವಿವರಣೆ

**ಓಂ ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭುಃ ।**
**ಭೂತಕೃದ್ಭೂತಭೃದ್ಭಾವೋ ಭೂತಾತ್ಮಾ ಭೂತಭಾವನಃ ॥೧॥**

೧) ವಿಶ್ವಮ್ :

ವಿಷ್ಣು ಸಹಸ್ರನಾಮದ ಮೊದಲ ನಾಮ ವಿಶ್ವಂ. ಈ ಹಿಂದೆ ಹೇಳಿದಂತೆ ವಿಷ್ಣು ಸಹಸ್ರನಾಮ ಸರ್ವ ವೇದಗಳ ಸಾರ. ಇಲ್ಲಿ 'ವಿ' ಎಂದರೆ ಪಕ್ಷಿ ಅನ್ನುವ ಅರ್ಥವನ್ನೂ, ಶ್ವ ಎಂದರೆ ಚಲಿಸುವವನು ಎನ್ನುವ ಅರ್ಥವನ್ನೂ ಕೊಡುತ್ತದೆ. ಆದ್ದರಿಂದ ವೇದಗಳ ಅಭಿಮಾನಿ ದೇವತೆಯಾದ ಗರುಡನನ್ನು ತನ್ನ ವಾಹನವಾಗಿರಿಸಿಕೊಂಡಿರುವ ಭಗವಂತ ವಿಶ್ವ . ಮೇಲೆ ಹೇಳಿದ ಅರ್ಥವಲ್ಲದೇ ಇನ್ನೂ ಹತ್ತು ಹಲವು ಅರ್ಥಗಳನ್ನು ವಿಶ್ವ ಅನ್ನುವ ನಾಮದಲ್ಲಿ ನಾವು ನೋಡಬಹುದು. ಚತುರ್ಮುಖ ಬ್ರಹ್ಮನನ್ನು ವಿಶ್ವ ಎಂದು ಕರೆಯುತ್ತಾರೆ. ಸೃಷ್ಟಿಕರ್ತನಾದ ಬ್ರಹ್ಮನನ್ನು ತನ್ನ ನಾಭಿಯಲ್ಲಿ ಧರಿಸಿರುವ ಭಗವಂತ, ಆತನ ಮೂಲಕ ಈ ಸೃಷ್ಟಿಗೆ ಕಾರಣಕರ್ತನಾಗಿದ್ದಾನೆ. ಆದ್ದರಿಂದ ಆತ ವಿಶ್ವಂ. ಆಂಜನೇಯ ರೂಪಿ ಮುಖ್ಯಪ್ರಾಣನನ್ನೂ ಕೂಡಾ ವಿಶ್ವ ಎಂದು ಕರೆಯುತ್ತಾರೆ. ನಮ್ಮ ದೇಹಕ್ಕೆ ಚಲನೆಯನ್ನು ಕೊಡುವಂತಹ ಪ್ರಾಣಶಕ್ತಿಯಾದ ಮುಖ್ಯಪ್ರಾಣನಲ್ಲಿ ತುಂಬಿದ್ದು, ನಮ್ಮ ದೇಹದಲ್ಲಿ ಬಿಂಬರೂಪದಲ್ಲಿ ಪ್ರವೇಶಿಸಿ (ವಿಶತಿ), ಅಂತರ್ಯಾಮಿಯಾಗಿ ದೇಹದ ಒಳಗೂ ಹೊರಗೂ ತುಂಬಿರುವ ಪರಿಪೂರ್ಣ ಜ್ಞಾನಾನಂದಮಯನಾದ ಭಗವಂತ ವಿಶ್ವಂ.

೨)ವಿಷ್ಣುಃ

ಸಾಮಾನ್ಯವಾಗಿ ವಿಷ್ಣು ಅನ್ನುವ ನಾಮ ಒಬ್ಬ ವ್ಯಕ್ತಿಗೆ ಸಂಬಂಧಿಸಿದ್ದು ಎಂದು ತಿಳಿಯುವವರೇ ಹೆಚ್ಚು. ಆದರೆ ಹಿಂದೂ-ಮುಸ್ಲಿಂ-ಕ್ರೈಸ್ತ ಧರ್ಮದಲ್ಲಿ ದೇವರು ಎನ್ನುವುದಕ್ಕೆ ಯಾವ ವಿಶ್ಲೇಷಣೆ ಇದೆಯೋ ಅದರ ಸಂಸ್ಕೃತ ಪದ ವಿಷ್ಣು. ವಿಷ್ಣು ಎಂದರೆ ಸರ್ವಶಬ್ದವಾಚ್ಯನಾದ, ಸರ್ವಗತನಾದ ಭಗವಂತ (omnipotent and omnipresent) ಎಂದರ್ಥ. ಇದು ಜಾತಿ ಧರ್ಮವನ್ನು ಮೀರಿ ಎಲ್ಲರೂ ಒಪ್ಪುವಂತಹ ಅರ್ಥ. ಇನ್ನು ಈ ಪದವನ್ನು ಒಡೆದು ನೋಡಿದರೆ ವಿ-ಷ-ಣು ಆಗುತ್ತದೆ. ವಿಷಣು ಎಂದರೆ-ವಿಶಿಷ್ಟವಾದ ಜ್ಞಾನ(ವಿ) ಕೊಡುವವನು. ಒಳಗೆ ಇದ್ದು, ಸಂಸಾರ ವಿಷವನ್ನು ಪರಿಹರಿಸಿ, ನಮ್ಮ ಕ್ರಿಯೆಯನ್ನು ನಿಯಂತ್ರಿಸುವ ಪರಿಪೂರ್ಣವಾದ (ಷ) ಪ್ರಾಣಶಕ್ತಿ . ಎಲ್ಲರನ್ನೂ ರಕ್ಷಿಸುವ ಬಲ ಇರುವ (ಣ)ಸರ್ವಶಕ್ತ ಭಗವಂತ ವಿಷ್ಣು.

೩) ವಷಟ್ಕಾರಃ

ಭಗವಂತನನ್ನು ವಷಟ್ಕಾರ ಎಂದು ಕರೆಯುತ್ತಾರೆ ಎನ್ನುವ ವಿಷಯ ಹೆಚ್ಚಿನವರಿಗೆ ತಿಳಿದಿಲ್ಲ. ಹಿಂದಿನ ಕಾಲದಲ್ಲಿ ವೈದಿಕ ಸಂಪ್ರದಾಯವಿರುವ ಪ್ರತಿಯೊಂದು ಮನೆಗಳಲ್ಲಿ ಅಗ್ನಿಹೋತ್ರ ಮಾಡುವುದು ನಿತ್ಯ ಕರ್ಮವಾಗಿತ್ತು. ಅಗ್ನಿಹೋತ್ರದಲ್ಲಿ ಭಗವಂತನಿಗೆ ಐದು ಮಂತ್ರಗಳಿಂದ (ಯಜ್ಞ ನಾಮಕ , ಯಜ್ಞ ಪುರುಷ , ಯಜ್ಞೇಶ್ವರ , ಯಜ್ಞ ಭಾವನ, ಯಜ್ಞ ಭೋಕ್ತ) ಆಹುತಿಯನ್ನು ಕೊಡುತ್ತಿದ್ದರು. ಈ ಮಂತ್ರದಲ್ಲಿ ಬರುವ ಐದನೇ ಹೆಸರು ಭಗವಂತನ ವಷಟ್ಕಾರ ಎನ್ನುವ ನಾಮ.

ಏಕೆ ಅವನು ವಷಟ್ಕಾರ? ತಾನು ಇಚ್ಚಿಸಿದಂತೆ ಜಗತ್ತನ್ನು ಸೃಷ್ಟಿ ಮಾಡಿ ಈ ಕೆಳಗಿನ ಆರು ಮುಖದಲ್ಲಿ ಜಗತ್ತಿನಾದ್ಯಂತ ತುಂಬಿರುವವನು ವಷಟ್ಕಾರ.

೧. ಜ್ಞಾನ- ಒಂದು ವಸ್ತುವನ್ನು ಸೃಷ್ಟಿ ಮಾಡುವ ಸರ್ವಜ್ಞ ಶಕ್ತಿ ಇರುವವನು.

೨. ಶಕ್ತಿ- ಕರ್ತೃತ್ವ ಶಕ್ತಿ ಉಳ್ಳವನು.

೩. ಬಲ-ರಕ್ಷಣೆ ಮಾಡುವ ತಾಕತ್ತು ( ಧಾರಣ ಶಕ್ತಿ ) ಇರುವವನು.

೪. ಐಶ್ವರ್ಯ- ಎಲ್ಲವುದರ ಒಡೆತನ.

೫. ವೀರ್ಯ- ಪರಾಕ್ರಮ-ದುಷ್ಟ ಶಕ್ತಿಯನ್ನು ಸಂಹಾರ ಮಾಡುವ ಶಕ್ತಿ ಉಳ್ಳವನು.

೬. ತೇಜಸ್ಸು - ಜಗತ್ತನ್ನು ಬೆಳಗಿಸುವ ಬೆಳಕು.

ಈ ಮೇಲಿನ ಆರು ಗುಣಗಳಿಂದ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣನಾದ ಪರಬ್ರಹ್ಮ-ವಷಟ್ಕಾರ.

೪) ಭೂತಭವ್ಯಭವತ್ಪ್ರಭುಃ

ಭಗವಂತ ಎಲ್ಲಾ ಕಾಲದಲ್ಲೂ ಈ ಲೋಕವನ್ನು ರಕ್ಷಿಸುತ್ತಿರುತ್ತಾನೆ. ಹಿಂದೆ ಅನಂತವಾಗಿ ಇದ್ದದ್ದು (ಭೂತಕಾಲದಲ್ಲಿ), ಮುಂದೆ ಬರುವ ಅನಂತ ಭವಿಷ್ಯತ್ ಕಾಲ ಹಾಗೂ ವರ್ತಮಾನ ಕಾಲದಲ್ಲಿ ಈ ಲೋಕವನ್ನುರಕ್ಷಿಸುವವ ಆ ಭಗವಂತ. ಈ ನಾಮವನ್ನು ನಾವು ಒಡೆದು ನೋಡಿದಾಗ, ಭೂತ+ಭವಿ+ಭವಂತಿ+ಪ್ರಭು ಎನ್ನುವ ನಾಲ್ಕು ಪದಗಳನ್ನು ನೋಡಬಹುದು. ಭೂತಿಯನ್ನು ಪಡೆದವರು ಭೂತಗಳು. ಅಂದರೆ ಮುಕ್ತಿಗೆ ಯೋಗ್ಯರಾದ ಸಾತ್ವಿಕರು. ಭವಿಗಳು ಎಂದರೆ ಸಂಸಾರಿಗಳು ಅಥವಾ ರಾಜಸರು. ಭವಂತಿ ಎಂದರೆ ಜೀವನದಲ್ಲಿ ಎತ್ತರಕ್ಕೆ ಏರದ ತಾಮಸರು. ಆದ್ದರಿಂದ ಭೂತಭವ್ಯಭವತ್ಪ್ರಭುಃ ಎಂದರೆ ಸಾತ್ವಿಕರಿಗೂ , ರಾಜಸರಿಗೂ ಹಾಗೂ ತಾಮಸರಿಗೂ ಪ್ರಭು ಎಂದರ್ಥ. ಈ ರೀತಿ ಹಿಂದೆ ಇದ್ದವನು, ಈಗಲೂ ಇರುವವನು, ಮುಂದೆ ಎಂದೆಂದೂ ಎಲ್ಲರ ಪ್ರಭುವಾಗಿ ಸರ್ವ ಜೀವ ರಕ್ಷಕನಾಗಿರುವ ಭಗವಂತ ಭೂತಭವ್ಯಭವತ್ಪ್ರಭುಃ

೫) ಭೂತಕೃತ್

ಸಂಸ್ಕೃತದಲ್ಲಿ ಕೃತ್ ಅನ್ನುವ ಪದಕ್ಕೆ ಎರಡು ಅರ್ಥವಿದೆ. (೧). ಸೃಷ್ಟಿ (೨). ಸಂಹಾರ

ಅದೇ ರೀತಿ ಭೂತಗಳಲ್ಲಿ ಎರಡು ವಿಧ

೧.ಅಚೇತನ ಭೂತ: ಅಂದರೆ ಪಂಚಭೂತಗಳು (ಮಣ್ಣು ,ಬೆಂಕಿ, ನೀರು, ಗಾಳಿ ಮತ್ತು ಆಕಾಶ)

೨. ಚೇತನ ಭೂತ: ಅಂದರೆ ಪಂಚಭೂತಗಳಿಂದ ಆದ ಜೀವಗಳು.

ಭೂತಕೃತ್ (ಸೃಷ್ಟಿ) ಅಂದರೆ ಪಂಚಭೂತಗಳ ಸೃಷ್ಟಿಕರ್ತ; ಪಂಚಭೂತಾತ್ಮಕವಾದ ಬ್ರಹ್ಮಾಂಡದ ಸೃಷ್ಟಿಕರ್ತ. ಬ್ರಹ್ಮಾಂಡದಲ್ಲಿ ಪಂಚಭೂತಗಳಿಂದಾದ ಪಿಂಡಾಂಡ ಸೃಷ್ಟಿ ಮಾಡಿದವ, ಪಿಂಡಾಂಡದಲ್ಲಿ ಜೀವವನ್ನು ಇರಿಸಿ ದೇಹ ಸೃಷ್ಟಿ ಮಾಡಿದವ, ಮತ್ತು ಸಾಧನೆ ಮೂಲಕ ಜೀವರಿಗೆ ಮುಕ್ತಿಯನ್ನು ಕರುಣಿಸುವವ.

ಭೂತಕೃತ್ (ಸಂಹಾರ) ಅಂದರೆ ದೇಹ ನಾಶದ ಮೂಲಕ ಜೀವರನ್ನು ನಾಶ ಮಾಡುವವ, ಅಭಿವೃದ್ಧಿ ಹೊಂದದ ತಾಮಸ ಜೀವರನ್ನು ನಾಶ ಮಾಡುವವ, ಪಂಚಭೂತಾತ್ಮಕವಾದ ಶರೀರ ನಾಶ ಮಾಡುವವ, ಪಂಚಭೂತಾತ್ಮಕವಾದ ಬ್ರಹ್ಮಾಂಡ ನಾಶ ಮಾಡುವವ , ಪ್ರಳಯ ಕಾಲದಲ್ಲಿ ಪಂಚಭೂತಗಳನ್ನೂ ನಾಶ ಮಾಡುವವ.

೬) ಭೂತಭೃತ್

ಸೃಷ್ಟಿ-ಸ್ಥಿತಿ-ಲಯದಲ್ಲಿ ಪಂಚಭೂತಗಳ ಧಾರಣೆ ಮಾಡುವವ, ಪಂಚಭೂತಾತ್ಮಕವಾದ ಬ್ರಹ್ಮಾಂಡ ಧಾರಣೆ ಮಾಡುವವ, ಪಂಚಭೂತಗಳಿಂದಾದ ಪಿಂಡಾಂಡ ಧಾರಣೆ ಮಾಡುವವ, ಪಿಂಡಾಂಡದಲ್ಲಿರುವ ಜೀವವನ್ನು ಧಾರಣೆ ಮಾಡುವವ ಮತ್ತು ಮುಕ್ತಿಯನ್ನು ಪಡೆದ ಜೀವರನ್ನು ಧಾರಣೆ ಮಾಡುವವ.

೭) ಭಾವಃ

ಸೃಷ್ಟಿ-ಸ್ಥಿತಿ-ಲಯ ಇದು ಭಗವಂತನ ಗುಣ. ಆತ ಸಚ್ಚಿದಾನಂದ. ಹುಟ್ಟು-ಸಾವು ನೈಸರ್ಗಿಕ ಕ್ರಿಯೆ. ಸಾವು ಹುಟ್ಟಿನ ಮೂಲ, ಹುಟ್ಟು ಸಾವಿನ ಮೂಲ. ಭಗವಂತ ಎಂದೆಂದಿಗೂ ಶಾಶ್ವತವಾಗಿ ಇರುವವನು. ಭಾವ ಅಂದರೆ ಸಚ್ಚಿದಾನಂದ ಸ್ವರೂಪ.

೮) ಭೂತಾತ್ಮಾ

ಪಂಚಭೂತಗಳಲ್ಲಿ ವ್ಯಾಪಿಸಿದವ, ಬ್ರಹ್ಮಾಂಡದಲ್ಲಿ ವ್ಯಾಪಿಸಿದವ, ಪಿಂಡಾಂಡದಲ್ಲಿ ತುಂಬಿರುವವ, ಎಲ್ಲಾ ಜೀವದಲ್ಲಿ ಅಂತರ್ಯಾಮಿಯಾಗಿ ತುಂಬಿರುವವ. ಭೂತಿಯನ್ನು( ಉನ್ನತಿ) ಹೊಂದಿದ ಜೀವಿಗಳಿಗೆ ಮುಕ್ತಿಯನ್ನು ಕರುಣಿಸುವ ಭಗವಂತ ಭೂತಾತ್ಮ.

೯) ಭೂತಭಾವನಃ

ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣವಾದವ, ಜೀವಿಗಳಿಗೆ ಸುಖ-ದುಃಖ ಕೊಡುವವ-ಭೂತಭಾವನಃ

ಪೂತಾತ್ಮಾ ಪರಮಾತ್ಮಾ ಚ ಮುಕ್ತಾನಾಂ ಪರಮಾ ಗತಿಃ ।
ಅವ್ಯಯಃ ಪುರುಷಃ ಸಾಕ್ಷೀ ಕ್ಷೇತ್ರಜ್ಞೋಽಕ್ಷರ ಏವ ಚ ॥೧೫॥

೧೦) ಪೂತಾತ್ಮಾ

ದ್ವೇಷಗಳ, ತ್ರಿಗುಣಗಳ ಸ್ಪರ್ಶವಿಲ್ಲದ ಪವಿತ್ರ ಸ್ವರೂಪನಾದ ಭಗವಂತ ಪೂತಾತ್ಮಾ.

೧೧) ಪರಮಾತ್ಮಾ

ಆತ್ಮ ಅಂದರೆ -ದೇಹ? ಅಲ್ಲ ! ಭಾವನೆಗಳ ಗೂಡಾದ ಮನಸ್ಸು? ಅದೂ ಅಲ್ಲ !! ಏಕೆಂದರೆ ನಾವು ಮನಸ್ಸಿನಿಂದ ಯೋಚಿಸುವುದು. ಇಂತಹ ಮನಸ್ಸನ್ನು ನಿಯಂತ್ರಿಸುವವ ಯಾರು? ಅದೇ ಜೀವ. ಆದರೆ ಈ ಜೀವವನ್ನು ನಿಯಂತ್ರಿಸುವ ಶಕ್ತಿ ಯಾವುದು? ಆತನೇ-ಪರಮಾತ್ಮ. ಎಲ್ಲಾ ಆತ್ಮಗಳಿಗೂ ಪರಮವಾದ ಆತ್ಮ, ಬ್ರಹ್ಮಾದಿ ಸಕಲ ಚೇತನಗಳಿಗೂ ಹಿರಿಯನಾದ ಸ್ವಾಮಿ.

೧೨) ಮುಕ್ತಾನಾಂ ಪರಮಾ ಗತಿಃ

ಚತುರ್ಮುಖನ ಆಯುಸ್ಸು ನೂರು ಕಲ್ಪ. ಒಂದು ಕಲ್ಪ (kālpa)ಅಂದರೆ ೩೧ ಸಾವಿರದ ೧೦೪ ಸಾವಿರ ಕೋಟಿ ವರ್ಷ. ಮಾನವನ ಸಾಧನೆ ಒಂದು ಕಲ್ಪ. ಮುಕ್ತಿ ಸ್ಥಿತಿಯಲ್ಲಿ ಮಾನವನ ಜೊತೆಗೆ ಚತುರ್ಮುಖ ಬ್ರಹ್ಮರೂ (ಮುಕ್ತಿಯಲ್ಲಿರುವ ಚತುರ್ಮುಖರು) ಮಾರ್ಗದರ್ಶಕರಾಗಿ ಇರುತ್ತಾರೆ. ಮುಕ್ತಾನಾಂ ಪರಮಾ ಗತಿಃ ಅಂದರೆ ಮುಕ್ತಿ ಪಡೆದವರಿಗೆ ಮುಕ್ತಿಯಲ್ಲೂ ಚತುರ್ಮುಖ ಬ್ರಹ್ಮರೊಂದಿಗೆ ಮಾರ್ಗದರ್ಶನ ಮಾಡುವವನು. ಹೀಗೆ ಚತುರ್ಮುಖ ಬ್ರಹ್ಮರಿಗೂ ಮಾರ್ಗದರ್ಶನ ಮಾಡುವವನು ಮತ್ತು ಮುಕ್ತಿ ಪಡೆದ ಎಲ್ಲಾ ಆತ್ಮರಿಗೆ ತಾಯಿಯಾಗಿರುವ ಶ್ರೀ ತತ್ವ ಲಕ್ಷ್ಮಿಗೂ ಆಶ್ರಯದಾತನಾಗಿರುವ ಭಗವಂತ 'ಮುಕ್ತಾನಾಂ ಪರಮಾ ಗತಿಃ'.

೧೩) ಅವ್ಯಯಃ

ಎಲ್ಲಾ ವಸ್ತುವಿನ ಒಳಗಿದ್ದೂ(ಅಯ) ಏಕರೂಪನಾಗಿ ಇರುವವನು. ಆನೆ ಮತ್ತು ಇರುವೆ ಒಳಗೆ ಇರುವ ಭಗವಂತ ಒಬ್ಬನೇ ಹೊರತು ಬೇರೆಬೇರೆ ಅಲ್ಲ. ಇಲ್ಲಿ ವ್ಯಯ ಅಂದರೆ ಕಮ್ಮಿ ಆಗುವುದು, ಖರ್ಚು, ನಾಶ ಇತ್ಯಾದಿ. ಯಾವ

ಕಾಲದಲ್ಲೂ ಕಡಿಮೆ ಆಗದೆ, ನಾಶವಾಗದೆ, ಅನಾದಿ-ಅನಂತ ಕಾಲದಲ್ಲಿ ಏಕರೂಪವಾಗಿರುವ ಶಾಶ್ವತ ತತ್ವ ಭಗವಂತ ಅವ್ಯಯಃ

೧೪) ಪುರುಷಃ

ಇದು ತುಂಬಾ ಪ್ರಮುಖವಾದ ನಾಮ. ವೇದದ ಸಾರಭೂತವಾದ ಪುರುಷಸೂಕ್ತದಲ್ಲಿ ಬರುವಂತಹ ಸೂಕ್ತಗಳ ಪ್ರತಿಫಲದ ರೂಪವೇ ಭಗವಂತನ ಪುರುಷ ನಾಮಕವಾದ ರೂಪ. ಪುರು ಅಂದರೆ ಎಲ್ಲಕ್ಕಿಂತ ದೊಡ್ಡದು ಅಥವಾ ಅನಂತ. ಬ್ರಹ್ಮಾಂಡ ರಚನೆ ಆಗುವ ಮುಂಚೆ, ಬ್ರಹ್ಮಾಂಡ ಸೃಷ್ಟಿ ಆದ ಮೇಲೂ, ಬ್ರಹ್ಮಾಂಡ ಮತ್ತು ಪಿಂಡಾಂಡದಲ್ಲಿ ಅನಂತವಾಗಿ ತುಂಬಿರುವವನು ಪುರುಷಃ .

ಈ ಶಬ್ದವನ್ನು ಪುರು+ಷಃ ಎಂದು ಒಡೆದು ಅರ್ಥೈಸಬಹುದು. ಇಲ್ಲಿ ಪುರು ಅಂದರೆ ಪೂರ್ಣತೆ ಹೊಂದಿದ ದೇಹ (Perfect body), ಷಃ ಅಂದರೆ ನೆಲೆಸಿರುವವನು. ಆದ್ದರಿಂದ ಪುರುಷ ಎಂದರೆ ಪುರದಲ್ಲಿ ಇದ್ದು, ಅದರ ಒಡೆತನವನ್ನು ಹೊಂದಿರುವ ಹಾಗೂ ಇತರ ಎಲ್ಲಾ ಪುರದ ಒಡೆಯ. ಪುರದ ಒಳಗೆ, ಪುರದ ಹೊರಗೆ ತುಂಬಿ ಅನಂತವಾಗಿರುವ ಪರಮ ಪುರುಷ. ಜ್ಞಾನ, ಶಕ್ತಿ, ಬಲ, ಐಶ್ವರ್ಯ,ವೀರ್ಯ ಮತ್ತು ತೇಜಸ್ಸು ಈ ಷಡ್ಗುಣಗಳಿಂದ ಪೂರ್ಣನಾಗಿ ಜಗತ್ತನ್ನು ನಿಯಂತ್ರಿಸುವವ ಪುರುಷಃ. ಇನ್ನು ಪು+ರು+ಷ ಅನ್ನುವ ಏಕಾಕ್ಷರಗಳಿಗೆ ವಿಶಿಷ್ಟವಾದ ಅರ್ಥವಿದೆ. 'ಪು' ಅಂದರೆ ಎಲ್ಲವನ್ನೂ ಪಾವನ ಗೊಳಿಸುವವನು. 'ರು' ಅಂದರೆ ತಾನು ಒಳಗಿದ್ದು, ಶತ್ರು, ಅಜ್ಞಾನ ಮತ್ತು ದುಃಖವನ್ನು ತಡೆದು, ಜೀವನನ್ನು ಉದ್ಧಾರ ಮಾಡುವವನು. 'ಷಃ' ಎಂದರೆ ಎಲ್ಲೆಡೆ ಮಲಗಿದವ! ಮಲಗಿದವ ಅಂದರೆ ಅನಾಯಾಸವಾಗಿ ಎಲ್ಲಾ ಕಾರ್ಯ ಮಾಡುವವ. ಈ ರೀತಿ ಭಗವಂತನ ಪುರುಷಃ ನಾಮ ಅನೇಕ ಅರ್ಥಗಳಲ್ಲಿ ತೆರೆದುಕೊಳ್ಳುತ್ತದೆ.

೧೫) ಸಾಕ್ಷೀ

ಸಾಕ್ಷೀ ಎಂದರೆ ಎಲ್ಲವನ್ನೂ ಕಣ್ಣಾರೆ ಕಾಣಬಲ್ಲವ ಎಂದರ್ಥ. ಭಗವಂತನ ಮುಂದೆ ನಾವು ಮುಚ್ಚಿಕೊಳ್ಳುವುದು ಏನೂ ಇಲ್ಲ. ಭಗವಂತನ ಮುಂದೆ ನಾವೆಲ್ಲರೂ ಬತ್ತಲು. ಆತನ ಮುಂದೆ ಮುಚ್ಚಿಟ್ಟುಕೊಂಡು ಮಾಡುವ ಯಾವ ಕೆಲಸವೂ ಇಲ್ಲ. ಭಗವಂತನ ಮುಂದೆ ನಾವು ಬತ್ತಲಾಗದೆ ಭಗವಂತ ನಮಗೆ ಎಂದೂ ಬಿಚ್ಚಿಕೊಳ್ಳುವುದಿಲ್ಲ. ಆದುದರಿಂದ ಭಗವಂತ ಎಲ್ಲವನ್ನೂ ಕಾಣಬಲ್ಲ ಸಾಕ್ಷಿ. ಇಲ್ಲಿ ಅಕ್ಷಿಗಳು ಎಂದರೆ ಇಂದ್ರಿಯ ಉಳ್ಳವರು- ಅಂದರೆ ನಾವು-ನೀವು; ಅಕ್ಷಿಗಳ ಸಖನಾಗಿ ನಮ್ಮನ್ನು ಉದ್ಧಾರ ಮಾಡುವವನು ಸಾಕ್ಷಿ.

೧೬) ಕ್ಷೇತ್ರಜ್ಞಃ

ಕ್ಷೇತ್ರಜ್ಞಃ ಎಂದರೆ ಕ್ಷೇತ್ರವನ್ನು ತಿಳಿದವನು ಎಂದರ್ಥ. ಕ್ಷೇತ್ರ ಅಂದರೆ ನಾವು ವಾಸ ಮಾಡುವ ನೆಲೆ . ನಾವು ವಾಸ ಮಾಡುವುದು ಚತುರ್ಮುಖನ ಕ್ಷೇತ್ರವಾದ ಈ ಬ್ರಹ್ಮಾಂಡದಲ್ಲಿ ಮತ್ತು ಜೀವದ ನೆಲೆಯಾದ ಶರೀರ ನಮ್ಮ ಕ್ಷೇತ್ರ. ಅದ್ದರಿಂದ ಕ್ಷೇತ್ರಜ್ಞಃ ಎಂದರೆ ಈ ಬ್ರಹ್ಮಾಂಡವನ್ನು, ಈ ಶರೀರವನ್ನು ಮತ್ತು ಈ ಪ್ರಪಂಚದ ರಹಸ್ಯವನ್ನು ಸಂಪೂರ್ಣ ತಿಳಿದವನು.

೧೭) ಅಕ್ಷರಃ

ಅಕ್ಷರ ಅಂದರೆ ನಾಶವಿಲ್ಲದ್ದು. ಲಿಪಿ ಅಕ್ಷರ ಅಲ್ಲ. ಲಿಪಿ ಕೇವಲ ಅಕ್ಷರದ ಪ್ರತೀಕ. ಲಿಪಿ ನಾಶವಾಗಬಹುದು ಆದರೆ ಅಕ್ಷರಗಳಿಗೆ ನಾಶವಿಲ್ಲ. ನಮ್ಮಿಂದ ಹೊರಹೊಮ್ಮುವ ಎಲ್ಲಾ ನುಡಿ ಈ ಆಕಾಶದಲ್ಲಿ ಶಾಶ್ವತವಾಗಿ ಧ್ವನಿಮುದ್ರಿತವಾಗಿರುತ್ತದೆ.

ಈ ಮೇಲಿನ ಅರ್ಥವಲ್ಲದೇ ಇನ್ನೂ ಅನೇಕ ಅರ್ಥಗಳನ್ನು ಅಕ್ಷರ ನಾಮದಲ್ಲಿ ಕಾಣಬಹುದು. ಯಾವುದು ಎಲ್ಲಾ ಕಡೆ ವ್ಯಾಪಿಸಿದೆಯೋ ಅದು ಅಕ್ಷರ (Omnipresence). 'ಕ್ಷರ' ಎಂದರೆ ನಾಶ; ನಾಶವಿಲ್ಲದ್ದು ಅಕ್ಷರ. 'ಕ್ಷರಣ' ಅಂದರೆ ಸುರಿಸುವವನು, ಯುಗ ಯುಗಾಂತರದಲ್ಲಿ ನಮ್ಮ ಮೇಲೆ ಕರುಣೆಯ ಮಳೆ ಸುರಿಸುವವನು ಅಕ್ಷರ.

ಇನ್ನು ಅಕ್ಷ+ರ-ಅಕ್ಷರ. ಇಲ್ಲಿ 'ಅಕ್ಷ' ಎಂದರೆ ಇಂದ್ರಿಯ, 'ರ' ಎಂದರೆ ರಮಣ ಅಥವಾ ರಮಿಸುವವನು. ಆದ್ದರಿಂದ ಅಕ್ಷರ ಎಂದರೆ ಆನಂದಮಯನಾಗಿ ಇಂದ್ರಿಯದಲ್ಲಿ ನೆಲೆಸಿರುವವನು ಎಂದರ್ಥ. ಇಲ್ಲಿ 'ಅ' ಎಂದರೆ ಅಲ್ಲಾ ಅಥವಾ ಇಲ್ಲಾ. ಭಗವಂತ ಅಲ್ಲಾ, ಭಗವಂತ ಇಲ್ಲಾ! ಅಂದರೆ ಭಗವಂತ ನಮಗೆ ಕಾಣುವ ಯಾವುದೇ ವಸ್ತು ಅಲ್ಲಾ ಅವನಲ್ಲಿ ಯಾವುದೇ ದೋಷವಿಲ್ಲ.

ಯೋಗೋ ಯೋಗವಿದಾಂ ನೇತಾ ಪ್ರಧಾನಪುರುಷೇಶ್ವರಃ ।
ನಾರಸಿಂಹವಪುಃ ಶ್ರೀಮಾನ್ ಕೇಶವಃ ಪುರುಷೋತ್ತಮಃ ॥೧೯॥

೧೮) ಯೋಗಃ

ಜೀವದ ಜೊತೆಗೆ ನಿರಂತರವಾಗಿ ಇರುವ ಆಪ್ತ ಬಂಧು. ನೆನೆದಾಗ ಮನದಲ್ಲಿ ಬಂದು ನೆಲೆಸುವವನು. ಭಕ್ತರು ಬಯಸಿದ್ದನ್ನು ಈಡೇರಿಸುವವನು.

೧೯) ಯೋಗವಿದಾಂನೇತಾ

ಸರ್ವ ವೇದ ಮಂತ್ರಗಳನ್ನು ಬಲ್ಲವರ ನಾಯಕ. ಅಧ್ಯಾತ್ಮದ ಬಗೆಯನ್ನು, ಜೀವನ ಯೋಗವನ್ನು ಬಲ್ಲ ಜ್ಞಾನಿಗಳ ನೇತಾರ.

೨೦) ಪ್ರಧಾನಪುರುಷೇಶ್ವರಃ

ಪ್ರಧಾನ ಅಂದರೆ "ಶ್ರೀ"-ಅಂದರೆ ಲಕ್ಷ್ಮಿ. ಲಕ್ಷ್ಮಿಗೂ ಈಶ್ವರ, ಬ್ರಹ್ಮ ವಾಯುವಿಗೂ ಈಶ್ವರ.

೨೧) ನಾರಸಿಂಹವಪುಃ

ನರ ಮತ್ತು ಸಿಂಹ ರೂಪದಲ್ಲಿ ಕಂಬದಿಂದ ಉದ್ಭವಿಸಿ ಹಿರಣ್ಯಕಶಿಪುವಿನ ಸಂಹಾರ ಮಾಡಿದ ಭಗವಂತನ ರೂಪ ಎನ್ನುವುದು ಮೇಲ್ನೋಟಕ್ಕೆ ಕಾಣುವ ಅರ್ಥ. ಆದರೆ ನಾರಸಿಂಹವಪುಃ ಎನ್ನುವುದಕ್ಕೆ ವಿಶಿಷ್ಟವಾದ ಇತರ ಅರ್ಥಗಳಿವೆ. ಈ ನಾಮವನ್ನು ಒಡೆದು ವಿಶ್ಲೇಷಿಸಿದರೆ ವಿಶಿಷ್ಟ ಅರ್ಥಗಳನ್ನು ಕಾಣುತ್ತೇವೆ. ಇಲ್ಲಿ 'ನಾರ' ಎಂದರೆ ನರರಲ್ಲಿ ತುಂಬಿರುವ ಅಜ್ಞಾನ, 'ಸಿಂಹ' ಎಂದರೆ ಸಿಮ್ಮತಿ ಅಥವಾ ನಿವಾರಿಸುವವನು, 'ವ' ಎಂದರೆ ಜ್ಞಾನ, ಪುಃ ಎಂದರೆ ಕರುಣಿಸುವವನು. ಆದ್ದರಿಂದ ನಾರಸಿಂಹವಪುಃ ಎಂದರೆ ನರರಲ್ಲಿ ತುಂಬಿರುವ ಅಜ್ಞಾನವನ್ನು ಅಳಿಸಿ, ಜ್ಞಾನದ ಬೀಜ ಬಿತ್ತುವವನು ಎಂದರ್ಥ.

ಇಷ್ಟೇ ಅಲ್ಲದೆ ಇನ್ನೂ ಮುಂದಕ್ಕೆ ವಿಶ್ಲೇಷಿಸಿದಾಗ, ನಾರ(ನಾ+ಅರ) ಎಂದರೆ ದೋಷವಿಲ್ಲದವನು; ಸಿಂಹ ಎಂದರೆ ಭಯಂಕರವಾಗಿ ಸರ್ವ ದೋಷವನ್ನೂ ನಾಶಮಾಡುವವನು. ಆದ್ದರಿಂದ ನಾರಸಿಂಹವಪುಃ ಎಂದರೆ ಸರ್ವ ದೋಷವನ್ನೂ ಭಯಂಕರವಾಗಿ ನಾಶಮಾಡಿಯೂ ಕೂಡಾ, ಯಾವುದೇ ದೋಷವಿಲ್ಲದಿರುವವನು. ಪ್ರಳಯ ಕಾಲದಲ್ಲಿ ನರವಂಶವನ್ನು ನಾಶಮಾಡಿ, ಸೃಷ್ಟಿಕಾಲದಲ್ಲಿ ಪುನಃ ಬೀಜ ಬಿತ್ತಿ ಸೃಷ್ಟಿಮಾಡುವವನು. ಹೀಗೆ ಮನುಕುಲದ ಸೃಷ್ಟಿ-ಸಂಹಾರಕ್ಕೆ ಕಾರಣನಾದ ಭಗವಂತ ನಾರಸಿಂಹವಪುಃ

೨೨) ಶ್ರೀಮಾನ್

ಇಡೀ ವಿಶ್ವದ ಒಡೆತನ ಇರುವ ಭಗವಂತ ಶ್ರೀಮಂತ-ಅದ್ದರಿಂದ ಆತ ಶ್ರೀಮಾನ್. ಇಲ್ಲಿ ಶ್ರೀಹಿ ಎಂದರೆ ವೇದ ವಾಙ್ಮಯ, ಶ್ರೀಮಾನ್ ಎಂದರೆ ಸಮಸ್ತ ವೇದದಿಂದ ಪ್ರತಿಪಾದ್ಯನಾದವನು ಎಂದರ್ಥ. 'ಶ್ರೀ' ಎಂದರೆ ಚಿತ್-ಪ್ರಕೃತಿ

"ಲಕ್ಷ್ಮಿ". ಲಕ್ಷ್ಮೀ ಪತಿಯಾದ ಭಗವಂತ ಶ್ರೀಮಾನ್. ಐತರೇಯ ಉಪನಿಷತ್ತು ಹೇಳುವಂತೆ "ಕಣ್ಣು ಒಂದು ಶ್ರೀ, ಮನಸ್ಸು ಒಂದು ಶ್ರೀ, ಕಿವಿ ಒಂದು ಶ್ರೀ, ಮಾತು ಒಂದು ಶ್ರೀ ಮತ್ತು ಉಸಿರು ಒಂದು ಶ್ರೀ " ಏಕೆಂದರೆ ಈ ಪಂಚೇಂದ್ರಿಯಗಳು ಶಿರಸ್ಸನ್ನು ಆಶ್ರಯಿಸಿಕೊಂಡಿರುವ ಇಂದ್ರಿಯಗಳು. ಮನುಷ್ಯ ಅರಿವಿನ ಸಂಪತ್ತನ್ನು ಗಳಿಸುವುದೇ ಕಣ್ಣು ಮತ್ತು ಕಿವಿಗಳಿಂದ. ಕಣ್ಣು-ಕಿವಿ ದೇಹದ ಸೂರ್ಯ-ಚಂದ್ರರಿದ್ದಂತೆ. ಅಗ್ನಿ ಸ್ವರೂಪವಾಗಿರುವ ಬಾಯಿ (ಮಾತು) ಮನುಷ್ಯನಿಗೆ ಭಗವಂತ ಕೊಟ್ಟಿರುವ ಅಪೂರ್ವವಾದ ಸಂಪತ್ತು. ಮಾತು ಹೊರಡಬೇಕಿದ್ದರೆ, ನೋಡಿದ್ದನ್ನ ಅನುಭವಿಸಲು, ಕೇಳಿದ್ದನ್ನು ಗ್ರಹಿಸಲು ಅತ್ಯಂತ ಮುಖ್ಯವಾಗಿ ಮನಸ್ಸು ಬೇಕು. ಈ ಎಲ್ಲಾ ಇಂದ್ರಿಯಗಳನ್ನು ಚಾಲನೆಯಲ್ಲಿಡಲು ಪ್ರಾಣಶಕ್ತಿ ಬೇಕು. ಅದ್ದರಿಂದ ಈ ಪಂಚೇಂದ್ರಿಯಗಳು ಮನುಷ್ಯನಲ್ಲಿರುವ ಅತ್ಯಂತ ಶ್ರೀಮಂತ ಅಂಗ. ಈ ಪಂಚೇಂದ್ರಿಯಗಳನ್ನು ನಮಗೆ ದಯಪಾಲಿಸಿದ ಆ ಕರುಣಾಮಯೀ ಭಗವಂತ ಶ್ರೀಮಾನ್.

೧೩) ಕೇಶವಃ

ಕೇಶವ ಎಂದರೆ ಅತ್ಯಂತ ಸುಂದರವಾದ ಕೂದಲು ಉಳ್ಳವನು ಎಂದರ್ಥ. ಇದು ಭಗವಂತನ ಕೃಷ್ಣಾವತಾರದಲ್ಲಿ ಬಂದ ಹೆಸರು. ಕೃಷ್ಣಾವತಾರದಲ್ಲಿ ಕೃಷ್ಣ ತನ್ನ ಸುಂದರವಾದ ಗುಂಗುರು ಕೂದಲಿನ ಸೌಂದರ್ಯದಿಂದ ಎಲ್ಲರನ್ನೂ ಆಕರ್ಷಿಸುತ್ತಿದ್ದ. ಗಂಡಸರು , ಹೆಂಗಸರು , ಗೋವುಗಳು ಎಲ್ಲರೂ ಕೃಷ್ಣನಿಂದ ಆಕರ್ಷಣೆಗೆ ಒಳಗಾಗುತ್ತಿದ್ದರು. ಈ ರೀತಿ ಸುಂದರನಾದ ಭಗವಂತ ಕೇಶವ.

ಇನ್ನು ಕೃಷ್ಣಾವತಾರದಲ್ಲಿ ಕಂಸನ ಧೂತನಾದ ಕೇಶಿ ಎಂಬ ರಾಕ್ಷಸನನ್ನು ಕೊಂದ ಭಗವಂತನನ್ನು ಕೇಶವ ಎನ್ನುತ್ತಾರೆ. ಕೃಷ್ಣನನ್ನು ಕೊಲ್ಲಲು ಕಂಸ ಕೇಶಿಯನ್ನು ಕುದುರೆ ರೂಪದಲ್ಲಿ ಬೃಂದಾವನಕ್ಕೆ ಕಳುಹಿಸಿಕೊಟ್ಟಿದ್ದ. ಆತನನ್ನು ಕೃಷ್ಣ ಸಂಹಾರ ಮಾಡಿದ್ದ.

ಈ ನಾಮವನ್ನು ಕಾ+ಈಶ+ವ ಎಂದು ಒಡೆದು ಅರ್ಥೈಸಬಹುದು. ಇಲ್ಲಿ 'ಕಾ' ಎಂದರೆ ಸೃಷ್ಟಿಗೆ ಕಾರಣವಾಗಿರುವ ಚತುರ್ಮುಖ ಬ್ರಹ್ಮ; 'ಈಶ' ಎಂದರೆ ಸಂಹಾರಕ್ಕೆ ಕಾರಣವಾಗಿರುವ ಶಂಕರ; ಕೇಶವ ಎಂದರೆ ಸೃಷ್ಟಿ-ಸಂಹಾರಕ್ಕೆ ಕಾರಣವಾಗಿರುವ ಪರಶಕ್ತಿ.

ಇನ್ನು ಕೇಶ ಎಂದರೆ ಸೂರ್ಯಮಂಡಲದಿಂದ ಭೂಮಿಗೆ ಹರಿದುಬರುವ ಕಿರಣ. ಸೌರ ಮಂಡಲದಲ್ಲಿ ನಿಂತು, ಸೌರ ಶಕ್ತಿಯಿಂದ ಈ ಜಗತ್ತನ್ನು ಬೆಳಗಿಸುವ ಗಾಯತ್ರೀ ಸ್ವರೂಪ ಭಗವಂತ-ಕೇಶವ.

೧೪) ಪುರುಷೋತ್ತಮಃ

ಪುರುಷೋತ್ತಮ ಎನ್ನುವ ನಾಮದ ಸಂಪೂರ್ಣ ಅರ್ಥವನ್ನು ಭಗವದ್ಗೀತೆಯ ಹದಿನೈದನೇ ಅಧ್ಯಾಯದಲ್ಲಿ ಕಾಣಬಹುದು. ಅಲ್ಲಿ ಕೃಷ್ಣ ಹೇಳುತ್ತಾನೆ:

ದ್ವಾವಿಮೌ ಪುರುಷೌ ಲೋಕೇ ಕ್ಷರಸ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥೧೫-೧೬ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥೧೫-೧೭ ॥
ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೊಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥೧೫-೧೮ ॥

ಅಂದರೆ ಲೋಕದಲ್ಲಿ ಎರಡು ಬಗೆಯ ಪುರುಷರಿರುತ್ತಾರೆ. ಕ್ಷರಪುರುಷ ಮತ್ತು ಅಕ್ಷರಪುರುಷ. ಬ್ರಹ್ಮಾದಿ ಸಮಸ್ತ ಜೀವರೂ ಕ್ಷರಪುರುಷರು. ಈ ಚರಾಚರದ ಕೂಟವನ್ನು ಕೂಡಿಸಿಟ್ಟ ಚಿತ್ ಪ್ರಕೃತಿಯೇ ಅಕ್ಷರ ಪುರುಷಳೆನಿಸಿದ್ದಾಳೆ-(ಅ-೧೫, ಶ್ಲೋ-೧೬); ಈ ಎರಡಕ್ಕೂ ಮಿಗಿಲಾದವನು ಪುರುಷೋತ್ತಮ. ಅವನನ್ನೇ ಪರಮಾತ್ಮ ಎನ್ನುತ್ತಾರೆ. ಅಳಿವಿರದ ಆ ಪರಮೇಶ್ವರನೇ ಮೂರು ಲೋಕದೊಳಗಿದ್ದು ಸಲಹುತ್ತಾನೆ (ಅ-೧೫, ಶ್ಲೋ-೧೭). ನಾನು ಕ್ಷರವನ್ನು ಮೀರಿ ನಿಂತವನು. ಅಕ್ಷರಕ್ಕಿಂತಲೂ ಹಿರಿಯನು, ಅದಕ್ಕೆಂದೇ ಲೋಕದಲ್ಲೂ, ವೇದದಲ್ಲೂ 'ಪುರುಷೋತ್ತಮ' ಎಂದು ಹೆಸರಾಗಿದ್ದೇನೆ (ಅ-೧೫, ಶ್ಲೋ-೧೮).

ಪುರುಷೋತ್ತಮ ಎನ್ನುವ ನಾಮವನ್ನು ಮೂರು-ನಾಲ್ಕು ಬಗೆಯಿಂದ ಪ್ರಯೋಗಿಸುತ್ತಾರೆ. ಉತ್ತಮಪುರುಷ; ಮಹಾಪುರುಷ ; ಪರಮಪುರುಷ ಮತ್ತು ಪುರುಷೋತ್ತಮ. ಎಲ್ಲವೂ ಸುಮಾರಾಗಿ ಒಂದೇ ಅರ್ಥವನ್ನು ಕೊಡುತ್ತವೆ. ಉತ್ತಮಪುರುಷ ಎಂದರೆ ಪುರುಷರಲ್ಲಿ ಉತ್ತಮ. ಕ್ಷರಪುರುಷ ಎಂದರೆ ಕ್ಷರವಾದ ಪುರದಲ್ಲಿ ಇರುವ ಎಲ್ಲಾ ಜೀವರು. ನಾಶವಾಗುವ ಹದಿನೈದು ಬೇಲಿಯಿಂದ ಬದ್ಧನಾದ, ಶರೀರದಲ್ಲಿರುವ ಜೀವ ಕ್ಷರಪುರುಷ.

ಜೀವರನ್ನು ಬಂಧಿಸಿರುವ ಹದಿನೈದು ಬೇಲಿಗಳು ಈ ಕೆಳಗಿನಂತಿವೆ:

೧) ಶ್ರದ್ಧೆಯ ಬೇಲಿ: ಇದರಲ್ಲಿ ಎರಡು ವಿಧ. ಜೀವಸ್ವರೂಪಭೂತವಾದ ಬೇಲಿ (ಕಿತ್ತೆಸೆಯಲು ಆಗದ ಬೇಲಿ) ಹಾಗೂ ಜೀವ ಸ್ವಭಾವದ ಬೇಲಿ(ಕಿತ್ತೆಸೆಯಬೇಕಾದ ಬೇಲಿ). ಮನೆತನ , ಕುಟುಂಬ , ಬೆಳೆದ ವಾತಾವರಣದ ಪ್ರಭಾವದಿಂದ ಬಂದ ಶ್ರದ್ಧೆ, ಪರಿಸರದ ಪ್ರಭಾವ, ಮನೆತನದ ಅನುವಂಶೀಯ(ಜೀನ್ಸ್)ಪ್ರಭಾವದಿಂದ ಬಂದ ಶ್ರದ್ಧೆ, ಇತ್ಯಾದಿಯನ್ನು ಮೀರಿನಿಂತು ನೋಡಿದಾಗ ಮಾತ್ರ ನಿಜವಾದ ಶ್ರದ್ಧೆ ಎಂದರೆ ಏನು ಎಂದು ಅರ್ಥವಾಗುತ್ತದೆ.

೨-೬)ಪಂಚಭೂತಗಳ ಬೇಲಿ: ಮಣ್ಣು-ನೀರು(ಅನ್ನಮಯ ಕೋಶ), ಬೆಂಕಿ-ಗಾಳಿ-ಆಕಾಶ (ಪ್ರಾಣಮಯ ಕೋಶ). ೭)ಇಂದ್ರಿಯಗಳ ಬೇಲಿ: ಕೆಟ್ಟದ್ದನ್ನು ಮಾಡುವ ಐದು ಜ್ಞಾನೇಂದ್ರಿಯಗಳು(ಕಿವಿ, ಮೂಗು, ಕಣ್ಣು, ನಾಲಗೆ ಮತ್ತು ಚರ್ಮ) ಮತ್ತು ಐದು ಕರ್ಮೇಂದ್ರಿಯಗಳು(ಕೈ, ಕಾಲು, ಮುಖ, ಉಪಸ್ಥ ಮತ್ತು ಗುದ).

೮)ಅಂತಃಕರಣದ ಬೇಲಿ: ಕೆಟ್ಟದ್ದನ್ನು ಯೋಚಿಸುವ ಮನಸ್ಸು ೯)ಅನ್ನದ ಬೇಲಿ: ಆಹಾರ. ೧೦)ವೀರ್ಯದ ಬೇಲಿ: ಶಕ್ತಿ. ೧೧-೧೩) ತಪಃ-ಮಂತ್ರಃ-ಕರ್ಮಃ : ಹಾಗಾಗಬೇಕು ಹೀಗಾಗಬೇಕು ಅನ್ನುವ ಆಲೋಚನೆ (ತಿರುಕನ ಕನಸಿನಂತೆ)-ತಪಃ; ತನ್ನ ಕನಸನ್ನು ನನಸು ಮಾಡಲು ಆಡುವ ಮಾತುಗಾರಿಕೆ ಮಂತ್ರಃ; ಅದನ್ನು ಸಾಧಿಸಲು ಮಾಡುವುದು ಕರ್ಮ. ೧೪)ಲೋಕಗಳು: ಸ್ಥಿರ-ಚರ ಸೊತ್ತುಗಳು (ನಾನು ಮಾಡಿದ್ದು, ನನ್ನದು ಅನ್ನುವ ಸೊತ್ತುಗಳು). ೧೫)ನಾಮದ ಬೇಲಿ: Name and fame, ಕೀರ್ತಿ. ಈ ಮೇಲಿನ ನಾಶವಾಗತಕ್ಕಂತಹ ಹದಿನೈದು ಬೇಲಿಗಳ ಒಳಗೆ ಸಿಕ್ಕಿಹಾಕಿಕೊಂಡಿರುವುದೇ ಹದಿನಾರನೇ ಜೀವ. ಜೀವಿಗೆ ಈ ಮೇಲಿನ ಬೇಲಿ ಎನ್ನುವ ಅಂಗಿ ಹಾಕಿ ಈ ಪ್ರಪಂಚಕ್ಕೆ ಶಿಕ್ಷಣಕ್ಕಾಗಿ ಕಳಿಸಿರುವ ಚಿತ್ ಪ್ರಕೃತಿ ಲಕ್ಷ್ಮಿ ಹದಿನೇಳನೇ ಅಕ್ಷರಪುರುಷಳು. ಈ ಮೇಲಿನ ಕ್ಷರ-ಅಕ್ಷರಗಳಿಗಿಂತ ಅತೀತನಾದ ಹದಿನೆಂಟನೆಯ ಭಗವಂತ ಪುರುಷೋತ್ತಮ. ಮೇಲಿನ ಬೇಲಿಯಿಂದ ಜೀವಿಯನ್ನು ಬಿಡಿಸಿ ಮುಕ್ತಿಯನ್ನು ಕರುಣಿಸುವವನು ಪುರುಷೋತ್ತಮ.

**ಸರ್ವಃ ಶರ್ವಃ ಶಿವಃ ಸ್ಥಾಣುರ್ಭೂತಾದಿರ್ನಿಧಿರವ್ಯಯಃ ।**

**ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭುರೀಶ್ವರಃ ॥೧೭॥**

೨೫) ಸರ್ವಃ

ವಿಶ್ವಂ ಮತ್ತು ಸರ್ವ ಎರಡು ಸಮಾನಾರ್ಥಕವಾದ ನಾಮಗಳು. ಭಗವಂತ ಸರ್ವ ಅಂದರೆ ಸರ್ವಸಮರ್ಥ, ಸರ್ವಗತ ಮತ್ತು ಸರ್ವಗುಣಪೂರ್ಣ. ಸರ್ವ ಅಂದರೆ ಎಲ್ಲವನ್ನೂ ತಿಳಿದವನು, ಎಲ್ಲೆಡೆ ತುಂಬಿರುವವನು, ಎಲ್ಲಾ ಕಾಲದಲ್ಲೂ-

ಇರುವವನು, ಎಲ್ಲಕ್ಕೂ ಕಾರಣನಾದವನು ಮತ್ತು ಪರಿಪೂರ್ಣನಾದವನು.

೧೬) ಶರ್ವಃ

ಶರ್ವ ಎಂದರೆ ಶಿವನೊಳಗೆ ನೆಲೆಸಿ ಸಮಸ್ತ ಜಗತ್ತನ್ನು ಸಂಹಾರ ಮಾಡುವವನು. ದುರ್ಜನರಿಗೆ, ಪಾಪಿಗಳಿಗೆ ದುಃಖವನ್ನು ಕೊಡುವವನು ಶರ್ವ.

೧೭) ಶಿವಃ

'ಶ' ಅಂದರೆ ಸುಖ; ಶಿವ ಎಂದರೆ ಜ್ಞಾನಾನಂದ ಹಾಗೂ ಪರಮಮಂಗಳ ಸ್ವರೂಪ.

೧೮) ಸ್ಥಾಣುಃ

ಸ್ಥಾಣು ಎಂದರೆ 'ಚಲಿಸದ' ಎನ್ನುವ ಅರ್ಥವನ್ನು ಕೊಡುತ್ತದೆ. ಭಗವಂತ ಸರ್ವಗತ ಅದ್ದರಿಂದ ಆತ ಸ್ಥಾಣು. ಆತ ಚಲಿಸದೇ ಮಲಗಿದ್ದರೂ, ಎಲ್ಲಾ ಕಡೆ ತಲುಪಬಲ್ಲ. ಏಕೆಂದರೆ ಬಿಂಬ ರೂಪವಾಗಿ ಪ್ರತಿಯೊಂದರಲ್ಲೂ ಭಗವಂತ ಇದ್ದಾನೆ. ಆತ ಆಕಾಶಕ್ಕಿಂತ ದೊಡ್ಡವ , ಪರಮಾಣುಗಿಂತ ಚಿಕ್ಕವ! ಚಲಿಸಿದಂತೆ ಕಾಣುವ, ಚಲಿಸದೇ ಇರುವ(**It moves and it moves not!**) ಭಗವಂತ ಸ್ಥಾಣುಃ.

೧೯) ಭೂತಾದಿಃ

ಭೂತಾದಿ ಎಂದರೆ ಎಲ್ಲಾ ಭೂತಗಳ ಆದಿ. ಎಲ್ಲಾ ಜೀವಗಳ, ಎಲ್ಲಾ ಜಡಗಳ, ಎಲ್ಲಾ ಚರಾಚರಾತ್ಮಕವಾದ ಹಾಗೂ ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ಆದಿ ಕಾರಣನಾದವ ಭೂತಾದಿ. ಅಷ್ಟೇ ಅಲ್ಲ, ಈ ಎಲ್ಲಾ ಭೂತಗಳನ್ನು ತನ್ನಲ್ಲಿರಿಸಿಕೊಂಡು ಪಾಲನೆ ಮಾಡುವವನು, ಕೊನೆಗೆ ಸಂಹಾರ ಮಾಡುವವನೂ ಅವನೇ. ಆದ್ದರಿಂದ ಸಮಸ್ತ ಚರಾಚರಾತ್ಮಕವಾದ, ಚೇತನಾಚೇತನಾತ್ಮಕವಾದ ಪ್ರಪಂಚದ ಸೃಷ್ಟಿ-ಸ್ಥಿತಿ-ಸಂಹಾರಕ್ಕೆ ಕಾರಣನಾದವನು ಭೂತಾದಿ. ಅಲ್ಲದೆ ಭೂತರು ಎಂದರೆ ಮುಕ್ತರು ಕೂಡಾ ಹೌದು. ಮುಕ್ತರಿಗೆ ಮುಕ್ತಿಯನ್ನು ಕರುಣಿಸುವವನು ಭೂತಾದಿ.

೨೦) ನಿಧಿರವ್ಯಯಃ

ನಿಧಿಃ+ಅವ್ಯಯಃ =ನಿಧಿರವ್ಯಯ. ನಿಧಿ ಅಂದರೆ ಕೊಪ್ಪರಿಗೆ (ಹೂತಿಟ್ಟ ಸಂಪತ್ತು). ಭಗವಂತನ ಅರಿವೇ ಅತಿದೊಡ್ಡ, ಕರಗದ, ಅಥವಾ ಅಳಿಯದ (ಅವ್ಯಯ) ಸಂಪತ್ತು. ನಿಗೂಢವಾದ ಹೃದಯ ಗುಹೆಯೊಳಗೆ ಅಡಗಿರುವ ಹೃತ್ಕಮಲ ಮಧ್ಯ ನಿವಾಸಿಯಾದ ಭಗವಂತ ಅಪೂರ್ವ ಹಾಗೂ ಅಮೂಲ್ಯವಾದ ನಿಧಿ. ಅವನು 'ಅವಿ' ಅಂದರೆ ಅವತಿ ಅಥವಾ ರಕ್ಷಕ. ಹೃದಯ ಗುಹೆಯಲ್ಲಿ ಅಡಗಿದ್ದು, ನಮ್ಮ ನಿರಂತರ ರಕ್ಷಣೆ ಮಾಡುವವನು. ಅಯಃ ಎಂದರೆ ಎಲ್ಲಾ ಕಡೆ ಇರುವವನು. ನಮ್ಮ ಕ್ಷೇಮಕ್ಕೋಸ್ಕರ, ನಮ್ಮ ರಕ್ಷಣೆಗೋಸ್ಕರ, ನಮ್ಮಲ್ಲಿ ಅಡಗಿ ಕುಳಿತಿರುವ, ಹಾಗೂ ಎಲ್ಲಾ ಕಡೆ ಇರುವ ಅಪೂರ್ವ ನಿಧಿ- ನಿಧಿರವ್ಯಯಃ.

೨೧) ಸಂಭವಃ

ಸಂಭವಃ ಎಂದರೆ ಭಕ್ತರು ಕರೆದಾಗ ತಾನೇ ತಾನಾಗಿ ಸಂಭವಿಸುವವನು (ಭೂಮಿಗೆ ಇಳಿದು ಬರುವವನು). ಜಗತ್ತಿನ ಸೃಷ್ಟಿಗೆ ಕಾರಣನಾದವನು ಹಾಗೂ ಜಗತ್ತಿನ ಪಾಲನೆಗೋಸ್ಕರ ತಾನೇ ತಾನಾಗಿ ಅವತರಿಸುವವನು. ಸಮೀಚೀನಃ ಭವಃ - ಶ್ರೇಷ್ಠವಾದ ಉನ್ನತಿ ಅಥವಾ ಮುಕ್ತಿ ಯಾರಿಂದ ಸಿಗುತ್ತದೋ ಅವನು ಸಂಭವಃ

೨೨) ಭಾವನಃ

ಒಬ್ಬೊಬ್ಬರೊಳಗಿದ್ದು ಅವರ ಭಾವನೆಗಳನ್ನು ನಿಯಂತ್ರಿಸುವ ಶಕ್ತಿಯಾದ ಭಗವಂತ ಭಾವನಃ. ಭಾವಂ+ನಯತಿ=ಭಾವನಃ. ಅಂದರೆ ನಮಗೆ ಆನಂದವನ್ನು ಕೊಡುವವನು. ಭಾವಂ+ಅಪನಯತಿ=ಭಾವನಃ ಅಂದರೆ

ನಾವು ಕೆಟ್ಟ ದಾರಿಯಲ್ಲಿ ನಡೆದಾಗ ನಮ್ಮನ್ನು ಸರಿ ದಾರಿಗೆ ತರಲು ನಮಗೆ ದುಃಖವನ್ನು ಕೊಡುವವನು. ಹೀಗೆ ನಮ್ಮ ಸುಖ-ದುಃಖಕ್ಕೆ ಕಾರಣನಾದ ಭಗವಂತ ಭಾವನಃ .

೩೩) ಭರ್ತಾ

ಭರ್ತಾ ಎಂದರೆ ಎಲ್ಲವನ್ನೂ ಹೊತ್ತವನು; ಇಡೀ ವಿಶ್ವವನ್ನು ಧರಿಸಿದವನು. ವಿಶ್ವದ ಮೂಲಾಧಾರನಾದ ಭಗವಂತ ಭರ್ತಾ.

೩೪) ಪ್ರಭವಃ

ಎಲ್ಲಕ್ಕಿಂತ ಪ್ರಕೃಷ್ಟನಾಗಿರುವ, ಎಲ್ಲಕ್ಕಿಂತ ವಿಶಿಷ್ಟನಾಗಿರುವ, ಜ್ಞಾನ ಸ್ವರೂಪನಾದ ಭಗವಂತ ಪ್ರಭವಃ. ಯಾರು ಎಲ್ಲರಿಗಿಂತ ದೊಡ್ಡವನೋ, ಯಾರಿಂದ ಎಲ್ಲರೂ ಎತ್ತರಕ್ಕೆ ಏರಲು ಸಾಧ್ಯವೋ, ಅವನು ಪ್ರಭವಃ.

೩೫) ಪ್ರಭುಃ

ಭಗವಂತ ಸರ್ವಸಮರ್ಥ ಆದ್ದರಿಂದ ಆತ ಎಲ್ಲರ ಪ್ರಭು.

೩೬) ಈಶ್ವರಃ

ಈಶರು ಎಂದರೆ ನಮ್ಮ ದೇಹ ಹಾಗೂ ಪ್ರಪಂಚಕ್ಕೆ ಸಂಬಂಧಪಟ್ಟ ಅಭಿಮಾನಿ ದೇವತೆಗಳು. ಉದಾಹರಣೆಗೆ ಶನಿ-ಪೃಥ್ವಿಯ ಅಭಿಮಾನಿ ದೇವತೆ; ಬುಧ-ನೀರಿನ ಅಭಿಮಾನಿ ದೇವತೆ; ಗಣಪತಿ-ಆಕಾಶದ ಅಭಿಮಾನಿ ದೇವತೆ; ಸೂರ್ಯ- ಕಣ್ಣಿನ ಅಭಿಮಾನಿ ದೇವತೆ; ಚಂದ್ರ- ಕಿವಿಯ ಅಭಿಮಾನಿ ದೇವತೆ; ವರುಣ- ನಾಲಿಗೆಯ ಅಭಿಮಾನಿ ದೇವತೆ; ಅಗ್ನಿ-ಮಾತಿನ ಅಭಿಮಾನಿ ದೇವತೆ; ಇಂದ್ರ-ಕೈಯ ಅಭಿಮಾನಿ ದೇವತೆ; ಯಜ್ಞ- ಕಾಲಿನ ಅಭಿಮಾನಿ ದೇವತೆ; ಅನಿರುದ್ಧ , ಬೃಹಸ್ಪತಿ , ವರುಣ , ಮಿತ್ರ, ಇಂದ್ರ , ಕಾಮ , ಗರುಡ , ಶೇಷ , ರುದ್ರ, ವಾಯು- ಇವರೆಲ್ಲರೂ ಮನಸ್ಸಿನ ಅಭಿಮಾನಿ ದೇವತೆಗಳು . ಶ್ರದ್ಧೆಯ ದೇವತೆ- ಸರಸ್ವತಿ. ಹೀಗೆ ಬೇರೆ ಬೇರೆ ದೇವತೆಗಳ ಸಮುದಾಯವಿದೆ. ಈ ದೇವತೆಗಳ ಸಮೂಹ ನಮ್ಮ ದೇಹದಲ್ಲಿರುವ ಹದಿನೈದು ಬೇಲಿಗಳನ್ನು ನಿಯಂತ್ರಿಸುವ ಈಶರು. ಈ ಎಲ್ಲಾ ದೇವತೆಗಳು ಅಖಂಡವಾದ ಭಗವಂತನ ನೀತಿಗೆ ಬದ್ಧರಾಗಿ ಕೆಲಸ ಮಾಡುತ್ತಿರುತ್ತಾರೆ. ಈ ಎಲ್ಲಾ ಈಶರಿಗೂ ವರನಾದವ, ಶ್ರೇಷ್ಠನಾದವ , ಈ ದೇಹದಲ್ಲಿರುವ ಸರ್ವ-ನಿಯಾಮಕನಾದ ಭಗವಂತ ಈಶ್ವರ-ಪ್ರಭುರೀಶ್ವರ.

**ಸ್ವಯಂಭೂಃ ಶಂಭುರಾದಿತ್ಯಃ ಪುಷ್ಕರಾಕ್ಷೋ ಮಹಾಸ್ವನಃ ।**
**ಅನಾದಿನಿಧನೋ ಧಾತಾ ವಿಧಾತಾ ಧಾತುರುತ್ತಮಃ ॥೧೮॥**

೩೭) ಸ್ವಯಂಭೂಃ

ಸ್ವಯಂಭೂಃ ಅಂದರೆ ತಾನೇ ತಾನಾಗಿ ಪೂರ್ಣವಾಗಿರುವವನು, ತನ್ನಿಂದ ತಾನೇ ಆವಿರ್ಭೂತನಾಗುವವನು.

ನಮ್ಮ ಪೂರ್ಣತೆ ಇನ್ನೊಬ್ಬರು ಕೊಟ್ಟರೆ ಮಾತ್ರ. ಆದರೆ ಭಗವಂತ ಸ್ವಯಂಪೂರ್ಣ. ಭಗವಂತ ಅವತರಿಸಲು ಯಾರು ಕಾರಣ? ಅವನು ಹುಟ್ಟಿಬರುವುದಕ್ಕೆ ಯಾರೂ ಕಾರಣರಲ್ಲ. ಆತ ಸ್ವಯಂಭೂಃ. ಅಂದರೆ ತಾನೇ ತಾನಾಗಿ ಹುಟ್ಟಿ ಬರುವವನು. ಭಕ್ತರ ಬಯಕೆ ಈಡೇರಿಸಲು ಸ್ವಯಂ ಇಚ್ಛೆಯಿಂದ ಅವತರಿಸಿ ಬರುವವನು.

ಭಗವಂತ ಜ್ಞಾನದಿಂದ-ಜ್ಞಾನದಂತೆ, ದೀಪದಿಂದ-ದೀಪದಂತೆ. ಒಂದು ದೀಪದಿಂದ ಇನ್ನೊಂದು ದೀಪ ಹಚ್ಚಿದರೆ ಮೂಲ ದೀಪದ ಪ್ರಕಾಶ ಕಡಿಮೆ ಆಗುವುದಿಲ್ಲ. ಭಗವಂತ ಒಂದು ರೂಪದಿಂದ ಇನ್ನೊಂದು ರೂಪಕ್ಕೆ ಅಭಿವ್ಯಕ್ತ ಆಗುತ್ತಾ ಹೋಗುತ್ತಾನೆ. ಆದರೆ ಮೂಲವೂ ಪೂರ್ಣ, ಮೂಲದಿಂದ ಬಂದ ಅವತಾರವೂ ಪೂರ್ಣ. ಈ ರೀತಿ ಅವತಾರಕ್ಕೆ ಮೊದಲೂ ಪೂರ್ಣತೆಯಲ್ಲಿದ್ದು, ಅವತಾರದಲ್ಲೂ ಪೂರ್ಣವಾಗಿ, ಅವತಾರದ ನಂತರ ಮತ್ತೆ ಹೋಗಿ ಪೂರ್ಣತೆಯಲ್ಲೇ ಉಳಿಯುವ ಭಗವಂತ ಸ್ವಯಂಭೂಃ.

೩೮) ಶಂಭುಃ

'ಶಂ-ಭವತಿ' ಎಂದರೆ ಆನಂದ ರೂಪ. 'ಶಂ-ಭವತಿ ಅನೇನ' ಎಂದರೆ ಆನಂದ ಕೊಡುವವನು ಎಂದರ್ಥ. ಇಲ್ಲಿ 'ಶಂ' ಎಂದರೆ ಆನಂದ. ಉದಾಹರಣೆಗೆ "ಹರಿಃ ಓಮ್, ಶಂ ನೋ ಮಿತ್ರಃ, ಶಂ ವರುಣಃ, ಶಂ ನೋ ಭವತ್ವರ್ಯಮಾ, ಶಂ ನೋ ಇಂದ್ರೋ ಬೃಹಸ್ಪತಿಃ, ಶಂ ನೋ ವಿಷ್ಣುರುರುಕ್ರಮಃ". ಇಲ್ಲಿ 'ಶಂ' ಎನ್ನುವ ಪದವನ್ನು ಆನಂದಮಯ ಎನ್ನುವ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಎಲ್ಲಾ ಶಾಸ್ತ್ರಗಳೂ ಭಗವಂತನನ್ನು ಆನಂದಮಯನೆಂದು ಹೇಳುತ್ತವೆ. ಯಾರು ಸ್ವಯಂ ಆನಂದಮಯನೋ , ಯಾರು ಎಲ್ಲರಿಗೂ ಆನಂದವನ್ನು ಕೊಡಬಲ್ಲನೋ ಅವನು ಶಂಭು.

೩೯) ಆದಿತ್ಯಃ

ಆದಿತ್ಯ ಅಂದರೆ ಅದಿತಿಯ ಮಗ ಎಂಬುದು ಒಂದು ಅರ್ಥ. ಅದಿತಿ-ಕಶ್ಯಪ ಮಹರ್ಷಿಯ ಹೆಂಡತಿ ಹಾಗೂ ದೇವತೆಗಳ ತಾಯಿ. ಅದಿತಿಗೆ ಹನ್ನೆರಡು ಮಂದಿ ಮಕ್ಕಳು. ಅವರನ್ನು ದ್ವಾದಶಾದಿತ್ಯರು ಎಂದು ಕರೆಯುತ್ತಾರೆ. ವಿವಸ್ವಾನ್(ಸೂರ್ಯ), ಆರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತ, ವಿಧಾತ(ಪರ್ಜನ್ಯ), ವರುಣ, ಮಿತ್ರ, ಇಂದ್ರ, ಉರುಕ್ರಮ -ಇವರೇ ಆ ಹನ್ನೆರಡು ಮಂದಿ ಆದಿತ್ಯರು. ಈ ಹನ್ನೆರಡು ದೇವತೆಗಳೇ ವರ್ಷದ ಹನ್ನೆರಡು ಮಾಸದ ದೇವತೆಗಳು. ಇವರಲ್ಲಿ ಒಬ್ಬ ಸೂರ್ಯ, ಒಬ್ಬ ವರುಣ, ಮತ್ತೊಬ್ಬ ಮಿತ್ರ, ಇನ್ನೊಬ್ಬ ಇಂದ್ರ. ಹಾಗೆ ಕೊನೇಯ ಮಗನೇ ವಾಮನ ರೂಪಿ ವಿಷ್ಣು . ಅವನು ಎಲ್ಲರಿಗಿಂತ ಕೊನೆಗೆ ಹುಟ್ಟಿದರೂ, ಆದಿಯಲ್ಲಿ ಇದ್ದವನು-ಆದ್ದರಿಂದ ಆತ ಆದಿತ್ಯಃ. ಅವನು ಆದಿ+ತಿ ಅಂದರೆ ಆದಿಯಲ್ಲಿ ಜ್ಞಾನಾನಂದ ಸ್ವರೂಪನಾಗಿದ್ದವ, ಎಲ್ಲಕ್ಕೂ ಕಾರಣಕರ್ತ. ಇದಲ್ಲದೆ ಸೂರ್ಯ ಮಂಡಲದಲ್ಲಿ (ಆದಿತ್ಯನಲ್ಲಿ) ಸನ್ನಿಹಿತನಾಗಿರುವ ಭಗವಂತನನ್ನು ಆದಿತ್ಯಃ ಎನ್ನುತ್ತಾರೆ.

೪೦) ಪುಷ್ಕರಾಕ್ಷಃ

ಪುಷ್ಕರ ಎಂದರೆ ಕಮಲ, ಅಕ್ಷ ಎಂದರೆ ಕಣ್ಣು . ಪುಷ್ಕರಾಕ್ಷ ಎಂದರೆ ನೀರನ್ನು ಹೀರುವ ಬಳ್ಳಿಯಲ್ಲಿ ಈಗಷ್ಟೇ ಅರಳಿದ ಕಮಲದಂತೆ ಅರಳುಗಣ್ಣು ಉಳ್ಳವನು. 'ಅರಳುಗಣ್ಣು' ಎಂದರೆ ಆನಂದಮಯ ವ್ಯಕ್ತಿತ್ವ. ಭಗವಂತ ಆನಂದಮಯಪೂರ್ಣ. ಕಣ್ಣು ಅರಳುವುದು ಆನಂದದ ಜೊತೆಗೆ ಕಾರುಣ್ಯದ ಸಂಕೇತ ಕೂಡಾ ಹೌದು. ಪುಷ್ಟಿಕರ ನೋಟ ಉಳ್ಳವನು ಹಾಗೂ ನಮ್ಮನ್ನು ಸದಾ ರಕ್ಷಿಸುವ ಕಾರುಣ್ಯಮೂರ್ತಿ ಭಗವಂತ ಪುಷ್ಕರಾಕ್ಷಃ. ವೇದಗಳಲ್ಲಿ ಹೇಳುವಂತೆ ಯಾವುದರಲ್ಲಿ ಇಡೀ ಪ್ರಪಂಚ ಹುದುಗಿದೆಯೋ ಅದು ಹುಟ್ಟದವನ ಹೊಕ್ಕುಳಲ್ಲಿ ಹುಟ್ಟಿತು". ಹೊಕ್ಕುಳಲ್ಲಿ ಹುಟ್ಟಿದ್ದು ತಾವರೆರೂಪದ ಬ್ರಹ್ಮಾಂಡ (ಬ್ರಹ್ಮನ ಮೊಟ್ಟೆ). ೧೪ ಎಸಳುಗಳುಳ್ಳ ತಾವರೆ ಅಂದರೆ ಹದಿನಾಲ್ಕು ಲೋಕಗಳುಳ್ಳ ಈ ಬ್ರಹ್ಮಾಂಡ. ಆದ್ದರಿಂದ ಭಗವಂತ ಪುಷ್ಕರದಲ್ಲಿ ತುಂಬಿರುವ ಅಕ್ಷ -ಪುಷ್ಕರಾಕ್ಷ.

೪೧) ಮಹಾಸ್ವನಃ

ಮಹಾ ಎಂದರೆ ಮಹತ್ತಾದ, ಸ್ವನ ಎಂದರೆ ನಾದ. ಎಲ್ಲಕ್ಕಿಂತ ಮಹತ್ತಾದ ನಾದವಾದ ವೇದವನ್ನು ಸೃಷ್ಟಿ ಮಾಡಿದವನು ಮಹಾಸ್ವನ. ಮಹಾ+ಅಸು+ಅನ=ಮಹಾಸ್ವನ. ಇಲ್ಲಿ ಅಸು ಎಂದರೆ 'ಇಂದ್ರಿಯ', ಮಹಾಅಸು ಎಂದರೆ 'ಅತ್ಯಂತ ಮುಖ್ಯ ಇಂದ್ರಿಯ. ಅನ ಎಂದರೆ 'ಚಲನೆ'. ದೇಹದಲ್ಲಿ ಇರುವ ಎಲ್ಲಾ ಇಂದ್ರಿಯಗಳಲ್ಲಿ ಉಸಿರು(ಪ್ರಾಣ) ಅತ್ಯಂತ ಮುಖ್ಯ ಇಂದ್ರಿಯ. ಅದ್ದರಿಂದ ಅಸುಗಳಲ್ಲಿ ಮಹಾ ಅಸು ಉಸಿರು(ಮುಖ್ಯಪ್ರಾಣ). ಈ ಮುಖ್ಯಪ್ರಾಣನಿಗೂ ಕೂಡಾ ಚಲನೆ ಕೊಟ್ಟ ಭಗವಂತ ಮಹಾಸ್ವನಃ.

೪೨)ಅನಾದಿನಿಧನಃ

ಭಗವಂತನಿಗೆ ಆದಿ-ಅಂತ, ಹುಟ್ಟು-ಸಾವು ಎನ್ನುವುದಿಲ್ಲ. ಪ್ರಾಣ(ಅನ)ನಲ್ಲಿದ್ದು, ಸೃಷ್ಟಿ-ಸ್ಥಿತಿ-ಸಂಹಾರಕ್ಕೆ ಕಾರಣನಾದ ಭಗವಂತ ಅನಾದಿನಿಧನಃ

೪೩) ಧಾತಾ

ಧಾತಾ ಅನ್ನುವ ಭಗವಂತನ ನಾಮ ಅನೇಕ ಅರ್ಥವನ್ನು ಕೊಡುತ್ತದೆ. ಇಡೀ ಜಗತ್ತನ್ನು ಧಾರಣೆ ಮಾಡುವ ಮತ್ತು ಪೋಷಣೆ ಮಾಡುವ ಶಕ್ತಿ ಉಳ್ಳವನು; ಎಲ್ಲರಿಗೂ ಏನು ಬೇಕೋ ಅದನ್ನು ಕೊಟ್ಟವನು; ಎಲ್ಲಾ ನಾಮವನ್ನು ಧರಿಸಿದವನು ಇತ್ಯಾದಿ. ಇಂತಹ ಭಗವಂತ ಧಾತಾ.

೪೪) ವಿಧಾತಾ

ಸಂಸಾರ ಅವಸ್ಥೆಯಲ್ಲಿ ಮಾತ್ರ ಅಲ್ಲ, ವಿಶಿಷ್ಟ ಅವಸ್ಥೆಯಲ್ಲಿಯೂ(ಉದಾಹರಣೆಗೆ ಮೋಕ್ಷ ಸ್ಥಿತಿ) ಭಗವಂತ ಧಾತಾ-ಅದ್ದರಿಂದ ಆತ ವಿಧಾತಾ.

೪೫) ಧಾತುರುತ್ತಮಃ

ಧಾತುಹು ಎಂದರೆ ಚತುರ್ಮುಖ ಬ್ರಹ್ಮನಿಗೂ ಉತ್ತಮನಾಗಿರುವವನು ಎಂದರ್ಥ. ಆತ ತ್ರಿಧಾತು. ಅಂದರೆ ಮೂರನ್ನು ಧರಿಸಿರುವವನು. ಮೂರು ವೇದಗಳನ್ನು, ಮೂರು ಕಾಲ ಮತ್ತು ಮೂರು ಲೋಕವನ್ನು ಧರಿಸಿರುವ, ಎಲ್ಲರಿಗಿಂತ ಶ್ರೇಷ್ಠನಾಗಿರುವ ಸರ್ವಾಧಾರನಾದ ಭಗವಂತ ಧಾತುರುತ್ತಮಃ.

**ಅಪ್ರಮೇಯೋ ಹೃಷೀಕೇಶಃ ಪದ್ಮನಾಭೋಮರಪ್ರಭುಃ ।**

**ವಿಶ್ವಕರ್ಮಾ ಮನುಸ್ತ್ವಷ್ಟಾ ಸ್ಥವಿಷ್ಠಸ್ಥವಿರೋ ಧ್ರುವಃ ॥೧೯॥**

೪೬) ಅಪ್ರಮೇಯಃ

ಅಪ್ರಮೇಯ ಎಂದರೆ ಕೈಗೆಟುಕದ, ನಮ್ಮ ಬುದ್ಧಿಯಿಂದ ಅಳೆಯಲು ಅಸಾಧ್ಯವಾದ, ಆದರೂ ತಿಳಿಯಲು ಸಾಧ್ಯವಾದವ ಎಂದರ್ಥ. ಉದಾಹರಣೆಗೆ- ಸಮುದ್ರದ ನೀರು ಸಂಪೂರ್ಣ ನಮ್ಮ ಕೈಗೆಟಕದು. ಆದರೆ ನಮ್ಮಿಂದಾದಷ್ಟು ನಾವು ತಂದು ಮನೆಯಲ್ಲಿ ಶೇಖರಿಸಿಡಬಹುದು ಮತ್ತು ತಿಳಿಯಬಹುದು. ಒಂದು ಚಮಚ ಸಮುದ್ರದ ನೀರಿನ ರುಚಿ ಉಳಿದ ನೀರಿನ ರುಚಿಗಿಂತ ಭಿನ್ನವಲ್ಲ. ಭಗವಂತ ಕೂಡಾ ಸಮುದ್ರದ ನೀರಿನಂತೆ. ಅದ್ದರಿಂದ ಆತ ಅಪ್ರಮೇಯ.

೪೭) ಹೃಷೀಕೇಶಃ

ಭಗವಂತನನ್ನು ಹುಡುಕುತ್ತಾ ಹೋದರೆ, ಆತ ಕ್ಷಿತಿಜದಂತೆ ದೂರ ದೂರ ಹೋಗುತ್ತಾನೆ. ಅದ್ದರಿಂದ ಅವನನ್ನು ಎಲ್ಲೆಲ್ಲೋ ಹುಡುಕುವ ಬದಲು ನಿಂತಲ್ಲೇ ನಿಂತು ನಿನ್ನೊಳಗೆ ಹುಡುಕು. ನಿನ್ನ ಹೃತ್ಕಮಲದಲ್ಲೇ ಅವನಿದ್ದಾನೆ!

ಹೃಷೀಕಗಳಿಗೆ ಈಶ ಹೃಷೀಕೇಶ. ಇಲ್ಲಿ ಹೃಷೀಕ ಎಂದರೆ ಇಂದ್ರಿಯಗಳು. ಆತ ಇಂದ್ರಿಯಗಳ ಸ್ವಾಮಿ. ಆತನನ್ನು ಇಂದ್ರಿಯದಿಂದ ನೋಡದೆ, ಇಂದ್ರಿಯದಲ್ಲಿ ನೋಡಬೇಕು. ಉಪನಿಷತ್ತಿನಲ್ಲಿ ಹೇಳುವಂತೆ- ನಮಗೆ ಪ್ರತಿಯೊಂದು ಇಂದ್ರಿಯಗಳನ್ನು ದಯಪಾಲಿಸಿ , ಅದರಲ್ಲಿ ನಿಂತು ನೆಡೆಸುವವನು ಹೃಷೀಕಗಳ ಈಶನಾದ ಹೃಷೀಕೇಶ.

ಕೇಶ ಅನ್ನುವ ಶಬ್ದಕ್ಕೆ ಸೂರ್ಯಕಿರಣ ಎಂಬ ಅರ್ಥವನ್ನು "ಕೇಶವ" ಎಂಬಲ್ಲಿ ವಿಶ್ಲೇಷಿಸಿದ್ದೇವೆ.ಸೂರ್ಯನ ಕಿರಣಗಳಲ್ಲಿ ಏಳು ಬಣ್ಣವಿದೆ. ನಮ್ಮ ದೇಹದಲ್ಲಿ ಏಳು ಶಕ್ತಿ ಚಕ್ರಗಳಿವೆ(ಸಹಸ್ರಾರ, ಆಜ್ಞ, ವಿಶುದ್ಧಿ, ಅನಾಹತ, ಮಣಿಪೂರ, ಸ್ವಾಧಿಷ್ಠಾನ ಮತ್ತು ಮೂಲಾಧಾರ- **Pituitary Gland, Pineal Gland, Thyroid and parathyroid, Thymus Gland, Adrenal Glands, Pancreas & Gonads**). ಅದೇ ರೀತಿ ಅಗ್ನಿಯಲ್ಲಿ ಕೂಡಾ ಏಳು ಬಣ್ಣವಿದೆ. ನಮ್ಮ ದೇಹದಲ್ಲಿರುವ ಏಳು ಶಕ್ತಿ ಕೇಂದ್ರಗಳಿಂದ ಹೊರಹೊಮ್ಮುವ ಏಳು ಭಾವನೆಗಳನ್ನು ಅಗ್ನಿಯ ಏಳು ಬಣ್ಣಗಳ ಮೂಲಕ

ಸೂರ್ಯಕಿರಣದ ಜೊತೆಗೆ ಸಮ್ಮಿಲನ ಮಾಡುವ ಕ್ರಿಯೆಯನ್ನು "ಹೋಮ" ಎನ್ನುತ್ತಾರೆ (ಅದ್ದರಿಂದ ಭಗವಂತನಿಗೆ ಸಲ್ಲಬೇಕಾದ ಯಾವುದೇ ಹೋಮವನ್ನು ರಾತ್ರಿ ಮಾಡುವುದಿಲ್ಲ). ಈ ಎಲ್ಲಾ ಏಳು ವರ್ಣದಲ್ಲಿ ತುಂಬಿ ಬದುಕಿಗೆ ಹರ್ಷವನ್ನು ಕೊಡತಕ್ಕಂತಹ ಭಗವಂತ ಹೃಷೀಕೇಶಃ.

೪೮) ಪದ್ಮನಾಭಃ

ತಾವರೆರೂಪದ ಹದಿನಾಲ್ಕು ಲೋಕಗಳುಳ್ಳ ಈ ಬ್ರಹ್ಮಾಂಡ ಯಾರ ನಾಭಿಯಿಂದ ಸೃಷ್ಟಿಯಾಗಿದೆಯೋ, ಅವನು ಪದ್ಮನಾಭ. ಈ ಸೃಷ್ಟಿಯ ಕಾರಣಪುರುಷ.

೪೯) ಅಮರಪ್ರಭುಃ

"ಮರರು" ಅಂದರೆ ಮರಣ ಹೊಂದುವವರು. "ಅಮರರು" ಅಂದರೆ ಮರಣವಿಲ್ಲದವರು ಎಂದರ್ಥ. ಮರಣ ಕೇವಲ ಭೌತಿಕ ಶರೀರಕ್ಕೇ ಹೊರತು ಸೂಕ್ಷ್ಮ ಶರೀರಕ್ಕಲ್ಲ. ಮುಕ್ತಿ ಪಡೆದ ಎಲ್ಲಾ ಜೀವರೂ ಅಮರರು.

ಬ್ರಹ್ಮಾದಿ-ದೇವತೆಗಳು ಅಮೃತಪಾನದಿಂದ ಅಮರರೆನಿಸಿದ್ದರೂ ಕೂಡಾ, ಅವರಿಗೂ ಹಲವು ಕಲ್ಪಗಳ ನಂತರ ಮರಣ ಮತ್ತು ಮೋಕ್ಷವಿದೆ. ಆದರೆ ಬ್ರಹ್ಮಾದಿ-ದೇವತೆಗಳ ಆಯಸ್ಸು ಧೀರ್ಘವಾದ್ದರಿಂದ ಅವರನ್ನು ಅಮರರು ಎನ್ನುತ್ತಾರೆ. ಇಲ್ಲಿ ಅಮರಪ್ರಭು ಎಂದರೆ ಮುಕ್ತಿ ಪಡೆದ ಜೀವರಿಗೆ ಹಾಗೂ ಬ್ರಹ್ಮಾದಿ-ದೇವತೆಗಳಿಗೆ ಒಡೆಯ(ಪ್ರಭು) ಎಂದರ್ಥ.

೫೦) ವಿಶ್ವಕರ್ಮಾ

ವಿಶ್ವಕರ್ಮ ಎಂದರೆ ಈ ವಿಶ್ವದ ವಿನ್ಯಾಸಕಾರ(**Architect**). ಪ್ರಾಚೀನ ಗ್ರಂಥಗಳಲ್ಲಿ ಈ ವಿಶ್ವವನ್ನು ಐವತ್ತೈದು ಅವಯವಗಳಿರುವ ಪ್ರವೃತ್ತಿ ಮತ್ತು ನಿವೃತ್ತಿ ಎಂಬ ಎರಡು ಹಣ್ಣುಗಳಿರುವ ಒಂದು ಮರವನ್ನಾಗಿ ವರ್ಣಿಸಿದ್ದಾರೆ. ಇಲ್ಲಿ ಪ್ರವೃತ್ತಿ ಎಂದರೆ ಭೌತಿಕ ಸುಖದ ಬೆನ್ನು ಹತ್ತುವ ಕರ್ಮಜೀವಿ; ನಿವೃತ್ತಿ ಎಂದರೆ ಭೌತಿಕ ಸುಖಕ್ಕೆ ಬೆನ್ನು ಹಾಕಿ ಮೋಕ್ಷದತ್ತ ಪ್ರಯಾಣಿಸುತ್ತಿರುವವ ಎಂದರ್ಥ. ಭಗವಂತನ ಈ ಅಪೂರ್ವ ವಿನ್ಯಾಸದ ಹಿಂದಿರುವ ಐವತ್ತೈದು ಪ್ರಮುಖ ಅಂಗಗಳನ್ನು ಮರದ ಉದಾಹರಣೆಯೊಂದಿಗೆ ವರ್ಣಿಸಿದ್ದಾರೆ. ಬನ್ನಿ, ಈ ಅಪೂರ್ವ ವಿನ್ಯಾಸವನ್ನು ಸಂಕ್ಷಿಪ್ತವಾಗಿ ನೋಡೋಣ.

೧)ಏಕಾಯನಃ -- ಈ ವಿಶ್ವಕ್ಕೆ ಮೂಲ-ಪ್ರಕೃತಿ. ಇದನ್ನೇ ಇಲ್ಲಿ ಮರವೆಂದು ಕರೆದಿರುವುದು.

೨-೩ )ವಿಫಲಃ – ಮೇಲೆ ಹೇಳಿರುವ ಪ್ರವೃತ್ತಿ ಮತ್ತು ನಿವೃತ್ತಿ ಈ ಮರದಲ್ಲಿರುವ ಎರಡು ಹಣ್ಣುಗಳು.

೪ -೬ )ತ್ರಿಮೂಲಃ - ಸತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರು ಬೇರುಗಳು.

೭-೧೦ )ಚತುರಸಃ - ಧರ್ಮ , ಅರ್ಥ , ಕಾಮ , ಮತ್ತು ಮೋಕ್ಷವೆಂಬ ನಾಲ್ಕು ರಸಗಳು.

೧೧-೧೫ )ಪಂಚಶಿಖಃ - ಮಣ್ಣು, ನೀರು, ಬೆಂಕಿ, ಗಾಳಿ ಮತ್ತು ಆಕಾಶವೆಂಬ ಐದು ಬೀಳಲುಗಳು (ಅಥವಾ-ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ)

೧೬-೨೧)ಷಡಾತ್ಮ - ಆರು ಸ್ವಭಾವಗಳಾದ ಮೋಹ, ಶೋಕ, ಕ್ಷುತ್ (ಹಸಿವು), ಪಿಪಾಸು(ಬಾಯಾರಿಕೆ), ಜರ(ಅಜ್ಞಾನ) ಮತ್ತು ವ್ಯಾಧಿ. ಆರು ಬೆಳವಣಿಗೆಯ ಹಂತಗಳಾದ-ಭ್ರೂಣಸ್ಥಿತಿ, ಹುಟ್ಟುವುದು, ಬೆಳೆಯುವುದು, ಬೆಳೆಯುತ್ತಾ ಬದಲಾಗುವುದು, ಬದಲಾಗುತ್ತಾ ಮುದಿಯಾಗುವುದು ಮತ್ತು ಕೊನೆಯದಾಗಿ ಮುದಿಯಾಗಿ ಸಾಯುವುದು.

೨೨-೨೮)ಸಪ್ತತ್ವಕ್ – ಏಳು ತೊಗಟೆಗಳಾದ ತ್ವಕ್ (ಚರ್ಮದ ಹೊರ ಪದರು), ಚರ್ಮ(ಒಳಚರ್ಮ), ಮಾಂಸ, ರಕ್ತ, ಮೇದಸ್ಸು, ಮಜ್ಜ ಮತ್ತು ಅಸ್ತಿ.

೨೯-೩೬)ಅಷ್ಟವಿಟಪಃ - ಎಂಟು ಬಗೆಯ ಜೀವಜಾತಗಳಾದ ದೇವತೆಗಳು, ಗಂಧರ್ವರು, ದಾನವರು, ರಾಕ್ಷಸರು, ಪಿಶಾಚರು, ಪ್ರಾಣಿಗಳು, ಮನುಷ್ಯರು, ಸ್ಥಾವರಗಳು.

೩೭-೪೫ )ನವಾಕ್ಷಃ -ಒಂಬತ್ತು ಪೊಟರೆಗಳಾದ ನವದ್ವಾರಗಳು (ಕಣ್ಣು, ಕಿವಿ , ಮೂಗು, ಬಾಯಿ, ಮಲ-ಮೂತ್ರದ್ವಾರ)

೪೬-೫೫)ದಶಸ್ಕದಃ -ಹತ್ತು ಎಲೆಗಳು- ಐದು ಜ್ಞಾನೇಂದ್ರಿಯ ಮತ್ತು ಐದು ಕರ್ಮೇಂದ್ರಿಯಗಳು.

ಇಂತಹ ವಾಸ್ತುಶಿಲ್ಪದ ಈ ವಿಶಿಷ್ಟವಾದ ವಿಶ್ವವನ್ನು ವಿನ್ಯಾಸಗೊಳಿಸಿರುವ ಭಗವಂತ ವಿಶ್ವಕರ್ಮ.

ಈ ಪ್ರಪಂಚದಲ್ಲಿ ಒಂದು ವಸ್ತುವಿನಂತೆ ಇನ್ನೊಂದು ವಸ್ತುವಿಲ್ಲ. ಭಗವಂತನ ಅದ್ವಿತೀಯ ಅಖಂಡ ವಿನ್ಯಾಸಕ್ಕೆ ಉತ್ತಮ ಉದಾಹರಣೆ ಮನುಷ್ಯನ ಬೆರಳಚ್ಚು (Finger print) ಒಬ್ಬನ ಬೆರಳಚ್ಚು ಇನ್ನೊಬ್ಬನಿಗಿಂತ ಭಿನ್ನ! ಇದು ಸಾಮಾನ್ಯ ವಿನ್ಯಾಸವಲ್ಲ.

ಮೇಲಿನ ಅರ್ಥವಲ್ಲದೇ ಇನ್ನೂ ಅನೇಕ ಅರ್ಥಗಳನ್ನು ಈ ನಾಮದಲ್ಲಿ ನೋಡಬಹುದು. ವಿಶ್ವ ಅನ್ನುವ ಶಬ್ದಕ್ಕೆ 'ಎಲ್ಲಾ' ಎನ್ನುವ ಅರ್ಥವಿದೆ. ಅದ್ದರಿಂದ ವಿಶ್ವಕರ್ಮ ಎಂದರೆ ಸರ್ವ-ಕರ್ಮಗಳ ನಿಯಾಮಕ ಭಗವಂತ. ಪುರಾಣದಲ್ಲಿ ಕಾಣುವ ದೇವಶಿಲ್ಪಿ-ವಿಶ್ವಕರ್ಮ. ದೇವಸ್ಥಾನ ಮತ್ತು ಮನೆಯ ವಾಸ್ತು ವಿನ್ಯಾಸವನ್ನು ದೇವಶಿಲ್ಪಿಯ ಒಳಗೆ ನಿಂತು ನಮಗೆ ಕರುಣಿಸಿದ ಭಗವಂತ ವಿಶ್ವಕರ್ಮ.

೫೧)ಮನುಃ

ಮನ್ವಂತರಗಳನ್ನು ಮನು ಎಂದೂ ಕರೆಯುತ್ತಾರೆ. ಮನ್ವಂತರಗಳು ಹದಿನಾಲ್ಕು. ಅವುಗಳೆಂದರೆ:

೧ ) ಸ್ವಾಯಂಭುವ ಮನು ೨) ಸ್ವಾರೋಚಿಷ ಮನು ೩) ಉತ್ತಮ ಮನು ೪) ತಾಪಸ ಮನು ೫) ರೈವತ ಮನು ೬) ಚಾಕ್ಷುಷ ಮನು(ಇವು ಆರು ಈ ಕಲ್ಪದಲ್ಲಿ ಸಂದುಹೋದವು) ೭) ವೈವಸ್ವತ ಮನು (ಈಗ ನಡೆಯುತ್ತಿರುವುದು) ೮) ಸಾವರ್ಣಿ ಮನು ೯) ದಕ್ಷ ಸಾವರ್ಣಿ ಮನು ೧೦) ಬ್ರಹ್ಮ ಸಾವರ್ಣಿ ಮನು ೧೧) ಧರ್ಮ ಸಾವರ್ಣಿ ಮನು ೧೨) ಮೇರು ಸಾವರ್ಣಿ ಮನು ೧೩) ದೇವ ಸಾವರ್ಣಿ ಮನು ೧೪) ಇಂದ್ರ ಸಾವರ್ಣಿ ಮನು.(ಈ ಏಳು ಮುಂದೆ ಬರುವ ಮನ್ವಂತರಗಳು)

೧ ಮಾನವವರ್ಷ= ದೇವತೆಗಳ ೧ ದಿನ (ಉತ್ತರಾಯಣ ಹಗಲು ಮತ್ತು ದಕ್ಷಿಣಾಯಣ ರಾತ್ರಿ).

೩೬೦ ಮಾನವವರ್ಷ=ದೇವತೆಗಳ ೩೬೦ ದಿನ=೧ ದೇವ ವರ್ಷ.

೧೨೦೦ ದೇವ ವರ್ಷ=೪,೩೨,೦೦೦ ಮಾನವವರ್ಷ= ೧ ಕಲಿಯುಗದ ಅವಧಿ.

೨೪೦೦ ದೇವ ವರ್ಷ= ೮,೬೪,೦೦೦ ಮಾನವವರ್ಷ- ೧ ದ್ವಾಪರ ಯುಗದ ಅವಧಿ.

೩೬೦೦ ದೇವ ವರ್ಷ= ೧೨,೯೬,೦೦೦ ಮಾನವ ವರ್ಷ-೧ ತ್ರೇತಾ ಯುಗದ ಅವಧಿ.

೪೮೦೦ ದೇವ ವರ್ಷ= ೧೭,೨೮,೦೦೦ ಮಾನವ ವರ್ಷ-೧ ಕೃತ ಯುಗದ ಅವಧಿ.

೧೨,೦೦೦ ದೇವ ವರ್ಷ= ೪೩,೨೦,೦೦೦ ಮಾನವ ವರ್ಷ= ೧ ಮಹಾಯುಗ.

ಸುಮಾರು ೭೧ ಮಹಾಯುಗ = ೧ `ಮನ್ವಂತರ' ಒಂದು ಮನುವಿನ ವರ್ಷ.

೧೦೦೦ ಮಹಾಯುಗ=೧ ಕಲ್ಪ = ಒಂದು ಬ್ರಹ್ಮದಿನ (ಹಗಲು)

೭೨೦ ಕಲ್ಪ =೧ ಬ್ರಹ್ಮವರ್ಷ

ಒಂದು ಬ್ರಹ್ಮನ ಅವಧಿ ೧೦೦ ಬ್ರಹ್ಮವರ್ಷ = ೪,೩೨೦,೦೦೦ x ೧೦೦೦ x ೭೨೦ x ೧೦೦ = ೩೧,೧೦೪,೦೦೦೦೦೦೦೦೦೦(ಮೂವತ್ತೊಂದು ಸಾವಿರದ ನೂರಾ ನಾಲ್ಕು ಸಾವಿರ ಕೋಟಿ) ಮಾನವ ವರ್ಷ.

ಯಾವುದರ ಮೂಲಕ ಮನನ ಮಾಡುತ್ತೇವೋ ಅವನು ಮನು (ಮನನ ಮಾಡುವುದು ಮಂತ್ರಗಳ ಮೂಲಕ ) ಅದ್ದರಿಂದ ಮನು ಅಂದರೆ ಮನುವಿನೊಳಗಿದ್ದು (ಮಂತ್ರಗಳಲ್ಲಿ ಮತ್ತು ಮನ್ವಂತರಗಳಲ್ಲಿ ಇದ್ದು), ಮನುವಾಗಿ ಎಲ್ಲವನ್ನೂ ಬಲ್ಲ ಭಗವಂತ.

೫೨)ತ್ವಷ್ಟಾ

ತ್ವಷ್ಟ್ರ ಎನ್ನುವ ಪದ ಉಳಿಯಿಂದ ಮರವನ್ನು ಕೆತ್ತುವ ಶಿಲ್ಪಿ ಎನ್ನುವ ಅರ್ಥವನ್ನು ಕೊಡುತ್ತದೆ. ಈ ಹಿಂದೆ ವಿಶ್ವಕರ್ಮ ನಾಮಕನಾಗಿ ಭಗವಂತನನ್ನು ಶ್ರೇಷ್ಠ ವಿನ್ಯಾಸಕಾರನಾಗಿ ನೋಡಿದ್ದೇವೆ. ಇಲ್ಲಿ ತ್ವಷ್ಟ್ರ ಅಂದರೆ ಮಣ್ಣು , ನೀರು ಮತ್ತು ಬೆಂಕಿಯೆಂಬ ಉಳಿಯಿಂದ, ಅದ್ಭುತ ಸೌಂದರ್ಯದಿಂದ ಕೂಡಿದ ಈ ವಿಶ್ವವನ್ನು ಕೆತ್ತಿದ ಅಪೂರ್ವ ಶಿಲ್ಪಿ ಎಂದರ್ಥ. ಪ್ರಳಯ ಕಾಲದಲ್ಲಿ ಎಲ್ಲವನ್ನೂ ಸಂಹರಿಸುವ ಭಗವಂತ ತ್ವಷ್ಟಾ.

೫೩)ಸ್ಥವಿಷ್ಠಃ

ಸ್ಥವಿಷ್ಠ ಎನ್ನುವ ಪದ ಸ್ಥೂಲಕಾಯ ಎನ್ನುವ ಅರ್ಥವನ್ನು ಕೊಡುತ್ತದೆ. ಭಗವಂತ ವಿವಿಧತೆಯಾತ್-ವಿಷ್ಟಥಿ. ಅಂದರೆ ಆಕಾಶದಂತೆ ಸ್ಥೂಲನಾಗಿರುವವ. ಆದರೆ ಅನಂತ ರೂಪದಲ್ಲಿ ಅನಂತ ವಸ್ತುವಿನಲ್ಲಿ ಅದ್ವಿತೀಯ, ಅನನ್ಯ, ಅನುಪಮ ರೂಪಕನಾಗಿ ತುಂಬಿರುವವನು. ಈ ರೀತಿ ಅಖಂಡವಾಗಿ ಉಹಿಸಲೂ ಅಸಾಧ್ಯವಾದ ಅದ್ಭುತ ಕಾಯನಾದ ಭಗವಂತ ಸ್ಥವಿಷ್ಠಃ.

೫೪)ಸ್ಥವಿರೋ ಧ್ರುವಃ

ಸ್ಥವಿರೋ ಧ್ರುವ ಅಂದರೆ- ಮೇಲೆ ಹೇಳಿರುವ ಇಷ್ಟೊಂದು ವೈವಿಧ್ಯತೆಗಳಿಂದ ಎಲ್ಲಾ ಆಕಾರದಲ್ಲೂ ಇದ್ದು ನಿರ್ವಿಕಾರನಾಗಿರುವ ಭಗವಂತ. ಎಲ್ಲಕ್ಕಿಂತ ಮೊದಲಿದ್ದ ಅಚಲ ತತ್ವ

ಅಗ್ರಾಹ್ಯಃ ಶಾಶ್ವತಃ ಕೃಷ್ಣೋ ಲೋಹಿತಾಕ್ಷಃ ಪ್ರತರ್ದನಃ ।
ಪ್ರಭೂತಸ್ತ್ರಿಕಕುಬ್ಧಾಮ ಪವಿತ್ರಂ ಮಙ್ಗಲಂ ಪರಮ್ ॥೧೦ ॥

೫೫) ಅಗ್ರಾಹ್ಯಃ

ಭಗವಂತ ಅನಂತ ವಿಶ್ವದಲ್ಲಿ ಅನಂತ ರೂಪದಲ್ಲಿ ತುಂಬಿದ್ದರೂ ಕೂಡಾ ಆತ ನಿರ್ವಿಕಾರ! ಇದನ್ನು ಹೇಗೆ ಊಹಿಸುವುದು ಅನ್ನುತ್ತೀರಾ? ಇಲ್ಲ , ಮನುಷ್ಯನ ಮನಸ್ಸಿನಿಂದ ಅವನನ್ನು ಸಂಪೂರ್ಣ ಗ್ರಹಿಸಲು ಅಸಾಧ್ಯ. ಏಕೆಂದರೆ ಆತ ಅಗ್ರಾಹ್ಯ- ಗ್ರಹಿಸಲು ಅಸಾಧ್ಯವಾದವನು. ಇಷ್ಟೇ ಅಲ್ಲ ಅವನು ಅಗ್ರ-ಅಹ್ಯ-- ಅಂದರೆ ಎಲ್ಲಕ್ಕಿಂತ ಮೊದಲು ಇದ್ದವನು ಮತ್ತು ಎಲ್ಲಕ್ಕಿಂತ ಶ್ರೇಷ್ಠನಾದವನು.

೫೬ ) ಶಾಶ್ವತಃ

ಭಗವಂತ ಎಂದೂ ಯಾವುದೇ ಬದಲಾವಣೆಗೆ ಒಳಪಡದೆ, ಎಂದೆಂದೂ ಶಾಶ್ವತವಾಗಿರುವವನು ಅದ್ದರಿಂದ ಅವನು ಶಾಶ್ವತಃ.

೫೭) ಕೃಷ್ಣಃ

ಮೇಲ್ನೋಟಕ್ಕೆ ಕೃಷ್ಣ ಎನ್ನುವುದು ವಸುದೇವ ದೇವಕಿಯರಲ್ಲಿ ಅವತರಿಸಿದ ಭಗವಂತನ ಹೆಸರು. ಆದರೆ ಕೃಷ್ಣ ಎನ್ನುವುದು ಭಗವಂತನ ಮೂಲ ರೂಪದ ಹೆಸರೂ ಹೌದು. ಗರ್ಗಾಚಾರ್ಯರು ಮಗುವಿನ ಹೆಸರಿಡುವಾಗ ತಾಯಿ ಯಶೋದೆಯಲ್ಲಿ ಹೀಗೆ ಹೇಳುತ್ತಾರೆ: "ಈ ಮಗುವಿಗೆ ನಾನು ಹೆಸರಿಡುತ್ತಿಲ್ಲ. ಈ ಜಗತ್ತಿನಲ್ಲಿ ಇರುವ ಎಲ್ಲಾ ಹೆಸರು ಇವನದೇ, ಇವನಿಗೆ ಇರುವ ಹೆಸರನ್ನೇ ನಿಮಗೆ ನೆನಪಿಸುತ್ತಿದ್ದೇನೆ. ಈತ ಶ್ಯಾಮ, ಸುಂದರ, ವಾಸುದೇವ, ಶ್ರೀ ಕೃಷ್ಣ " ಎಂದು ಹೇಳಿ ನಾಮಕರಣ ಮಾಡುತ್ತಾರೆ. ಚತುರ್ವಂಶ ಮೂರ್ತಿಗಳಲ್ಲಿ ಇಪ್ಪತ್ನಾಲ್ಕನೇ ರೂಪವೂ "ಕೃಷ್ಣ". ಧರ್ಮ

ದೇವತೆಯಲ್ಲಿ ಹುಟ್ಟಿದ ಒಂದು ರೂಪ "ಕೃಷ್ಣ" (ನರ, ನಾರಾಯಣ, ಹರಿ, ಕೃಷ್ಣ). ಭಗವಂತನ ಸಹಸ್ರರೂಪಗಳಲ್ಲಿ ಕೃಷ್ಣ ರೂಪ ಕೂಡಾ ಒಂದು.

ಮೂಲತಃ ಕೃಷ್ಣ ಎಂದರೆ ಕಪ್ಪು, ನೀಲ ಮೇಘ ಶ್ಯಾಮ. 'ನೀಲ' ಅಂದದ ಪ್ರತೀಕ ಕೂಡಾ ಹೌದು. ಹಾಗಾಗಿ ಅತ್ಯಂತ ಸೌಂದರ್ಯವತಿಯಾಗಿದ್ದ ದ್ರೌಪದಿಯನ್ನು ಕೃಷ್ಣೆ ಎಂದು ಕರೆಯುತ್ತಿದ್ದರು.

ದ್ರೋಣಾಚಾರ್ಯರು ಬಿಳಿ ಗಡ್ಡದ ಶ್ವೇತ ವಸ್ತ್ರಧಾರಿಯಾಗಿದ್ದ ಕಪ್ಪಗಿನ ಆಕರ್ಷಕ ವ್ಯಕ್ತಿ. ಇಲ್ಲಿ ಕಪ್ಪು ಜ್ಞಾನದ ಸಂಕೇತ. ಅತಿಕೋಪಬಂದಾಗ ನಾವು ಕೆಂಪಾಗಿ ಕಾಣುತ್ತೇವೆ. ಅದೇ ರೀತಿ ಸಂಪೂರ್ಣಜ್ಞಾನಿ ನೀಲವಾಗಿ ಕಾಣುತ್ತಾನೆ. ಅದ್ದರಿಂದ ಪರಿಪೂರ್ಣಜ್ಞಾನಿ, ಸೌದರ್ಯಮೂರ್ತಿ ಭಗವಂತ ತನ್ನ ಅವತಾರದಲ್ಲಿ ಕಾಣಿಸಿದ್ದು ನೀಲಮೇಘ ಶ್ಯಾಮನಾಗಿ. ಇದೇ ರೀತಿಯಲ್ಲಿ ಇನ್ನೂ ಹಲವು ರೂಪದಲ್ಲಿ ಕೃಷ್ಣ ಎನ್ನುವ ನಾಮದ ಅರ್ಥವನ್ನು ಹುಡುಕಬಹುದು.

ಕೃಷ್ಣ ಹುಟ್ಟುವ ಮೊದಲು ದೇವಕಿಯ ಗರ್ಭದಲ್ಲಿ ಸಂಕರ್ಷಣ (ಬಲರಾಮ) ಇದ್ದ. ಸಂಕರ್ಷಣನನ್ನು ಸಂಕರ್ಷಿಸಿ ಆನಂತರ ದೇವಕಿಯ ಅಷ್ಟಮ ಗರ್ಭದಲ್ಲಿ ಹುಟ್ಟಿದ ಕಾರಣಕ್ಕೆ ಆತನನ್ನು ಕೃಷ್ಣ ಎನ್ನುತ್ತಾರೆ.

ಆತ ಹುಟ್ಟಿದ ಮೇಲೆ ಮಾಡಿದ ಪ್ರತಿಯೊಂದು ಕೆಲಸವೂ ಕರ್ಷಣವೇ. ಪೂತನಿ, ಶಕಟಾಸುರ, ಕೇಶಿ, ಕಂಸ.. ಹೀಗೆ ದುಷ್ಟ ಶಕ್ತಿಗಳನ್ನೆಲ್ಲವನ್ನು ಕರ್ಷಣೆ ಮಾಡಿದವ ಕೃಷ್ಣ. ಹಾಗೇ ಜ್ಞಾನ ಮೂರ್ತಿಯಾದ ಆತ ಹಕ್ಕಿಗಳು , ಹಸುಗಳು, ಗೋಪಾಲಕರು, ಗೋಪಿಕೆಯರು ಹಾಗೂ ಯಮುನಾ ನದಿಯನ್ನೂ ಕೂಡಾ ತನ್ನ ಸೌಂದರ್ಯದಿಂದ ಆಕರ್ಷಿಸಿ ಉತ್ಕರ್ಷಣೆ ಮಾಡಿದವ. ಅದ್ದರಿಂದ ಆತ 'ಕೃಷ್ಣ'. ಅರ್ಜುನನ ರಥದಲ್ಲಿ ನಿಂತು ಹದಿನೆಂಟು ಅಕ್ಷೋಹಿಣಿ ಸೈನ್ಯವನ್ನು ಕರ್ಷಣೆ ಮಾಡಿದ ಭಗವಂತ ಕೃಷ್ಣ. ಹೀಗೆ ಅಸುರರನ್ನು ನಿಗ್ರಹಿಸಿ ಭೂ ಭಾರವನ್ನು ಕರ್ಷಣೆ ಮಾಡಿ, ಸಜ್ಜನರ ಹಾಗೂ ಧರ್ಮದ ಉದ್ಧಾರಕ್ಕಾಗಿ ಅವತರಿಸಿದ ಭಗವಂತ 'ಕೃಷ್ಣ'.

ಇನ್ನು ಕೃಷ್ಣ ಪದವನ್ನು ಒಡೆದು ನೋಡಿದರೆ ಕೃಷಿ+ಣ=ಕೃಷ್ಣ . ಕೃಷಿ ಅಂದರೆ ಭೂಮಿ, ಣ ಅಂದರೆ ಬಲ ಅಥವ ಆನಂದ. ಅದ್ದರಿಂದ ಕೃಷ್ಣ ಎಂದರೆ ಧರ್ಮವನ್ನು ಬಲಪಡಿಸಲು ಭೂಮಿಯಲ್ಲಿ ಅವತರಿಸಿದ ಆನಂದಸ್ವರೂಪ ಭಗವಂತ.

೫೮) ಲೋಹಿತಾಕ್ಷಃ

ಲೋಕ+ಹಿತ+ಅಕ್ಷ - ಅಂದರೆ ಲೋಕದ ಹಿತಕ್ಕಾಗಿ ಭಕ್ತರ ಮನೋಭಿಲಾಷೆ ಪೂರ್ತಿಗಾಗಿ ತಾವರೆಯಂತಹ ಅರಳು ಕಣ್ಣು ಉಳ್ಳವನು ಎಂದರ್ಥ.ಈ ನಾಮದ ಅರ್ಥವನ್ನು ತಿಳಿಯಬೇಕಾದರೆ ನಾವು ಭಗವಂತ ಕೊಪೋದ್ರಿಕ್ತನಾದ ಕೆಲವು ಘಟನೆಗಳನ್ನು ನೋಡಬೇಕಾಗುತ್ತದೆ. ಮಹಾಭಾರತ ಯುದ್ಧದಲ್ಲಿ ಅರ್ಜುನ ಮತ್ತು ಭೀಷ್ಮ ಪಿತಾಮಹರ ನಡುವೆ ಯುದ್ಧ ಪ್ರಾರಂಭವಾದಾಗ ನಡೆದ ಒಂದು ಘಟನೆಯನ್ನು ನೋಡೋಣ. ಅರ್ಜುನ ತನ್ನನ್ನು ಮುದ್ದಿಸಿ ಆಡಿಸಿ ಬೆಳೆಸಿದ ಪಿತಾಮಹನೊಂದಿಗೆ ಮನಸ್ಸಿಲ್ಲದ ಮನಸ್ಸಿನಿಂದ ಯುದ್ಧ ಮಾಡುತ್ತಿರುತ್ತಾನೆ. ಇದನ್ನು ಗಮನಿಸಿದ ಸಾರಥಿ ಕೃಷ್ಣ ಕೋಪಗೊಳ್ಳುತ್ತಾನೆ. ಮಹಾಭಾರತ ಯುದ್ಧದ ಮೊದಲು ತಾನು ಶಸ್ತ್ರ ಹಿಡಿಯುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದ ಕೃಷ್ಣ, ಕೋಪಾವೇಶದಿಂದ ಭೀಷ್ಮನನ್ನು ಸಾಯಿಸಲೆಂಬಂತೆ ಚಕ್ರವನ್ನು ಹಿಡಿದು ಮುಂದೊತ್ತಿ ಬರುತ್ತಾನೆ! ಆಗ ಆತನ ಕಣ್ಣು ಕೆಂದಾವರೆ ಹೂವಿನಂತೆ ಕೆಂಪಾಗಿ ಕಾಣುತ್ತಿರುತ್ತದೆ. ಇದನ್ನು ನೋಡಿದ ಭೀಷ್ಮಾಚಾರ್ಯರು ತನ್ನ ಎರಡೂ ಕೈಯನ್ನು ಜೋಡಿಸಿ ಹೀಗೆ ಹೇಳುತ್ತಾರೆ: "ಓ ಭಗವಂತ; ನಿನ್ನ ಕೈಯಲ್ಲಿ ಚಕ್ರ ಹಿಡಿಸುತ್ತೇನೆ, ಹಾಗೇ ಯುದ್ಧ ಮಾಡುತ್ತೇನೆ ಎಂದು ನಾನು ಪ್ರತಿಜ್ಞೆ ಮಾಡಿದ್ದೆ. ಚಕ್ರ ಹಿಡಿಯುವುದಿಲ್ಲ ಎಂದಿದ್ದೆ ನೀನು. ಆದರೆ ಈಗ ನನ್ನ ಪ್ರತಿಜ್ಞೆಯನ್ನು ಈಡೇರಿಸಲು ನೀನು ಚಕ್ರ ಹಿಡಿದಿರುವೆ. ನಿನ್ನನ್ನೇ ಮರೆತಿರುವೆ, ಆದರೆ ನಿನ್ನ ಭಕ್ತನನ್ನು ಮರೆತಿಲ್ಲ; ನೀನಲ್ಲದೆ ನಮಗೆ ಗತಿ ಇನ್ನಾರು?" ಎನ್ನುತ್ತಾರೆ. ಈ ಘಟನೆಯಲ್ಲಿ ಲೋಕಕಲ್ಯಾಣಕ್ಕಾಗಿ ಭಗವಂತನ ಕೋಪ ಮತ್ತು ಅದರ ಹಿಂದಿರುವ ಕರುಣೆ ವ್ಯಕ್ತವಾಗಿದೆ. ಇದೇ ರೀತಿ ಇನ್ನೊಂದು ಘಟನೆ ನರಸಿಂಹ ಅವತಾರದಲ್ಲಿ ಕಂಡು ಬರುತ್ತದೆ.

ಹಿರಣ್ಯಕಶಿಪುವನ್ನು ಕೊಂದು ಆತನ ಕರುಳನ್ನು ಬಗೆದು ಕೊರಳಿಗೆ ಹಾಕಿಕೊಂಡರೂ, ಶಾಂತನಾಗದ ಭಗವಂತನ ಕೋಪೋದ್ರಿಕ್ತ ರೂಪವನ್ನು ಕಂಡು, ದೇವತೆಗಳೆಲ್ಲರೂ ಭಯಗೊಂಡಾಗ, ಐದು ವರ್ಷದ ಪುಟ್ಟ ಬಾಲಕ ಪ್ರಹ್ಲಾದನ ಪ್ರಾರ್ಥನೆಗೆ ಮಣಿದು, ಶಾಂತ ಮೂರ್ತಿಯಾಗುತ್ತಾನೆ.

ಮೇಲಿನ ಘಟನೆಯಲ್ಲಿ ಲೋಕಕಲ್ಯಾಣಕ್ಕಾಗಿ ಭಗವಂತ ದುಷ್ಟರನ್ನು ತನ್ನ ಕೆಂಗಣ್ಣಿನಿಂದ ನಾಶಮಾಡಿ, ಭಕ್ತರ ಅಭಿಲಾಷೆಯನ್ನು ಪೂರ್ತಿಮಾಡುವುದು ಕಂಡುಬರುತ್ತದೆ. ಇಂತಹ ಅರಳುಗಣ್ಣಿನ ಭಗವಂತ ಲೋಹಿತಾಕ್ಷ!

೫೯) ಪ್ರತರ್ದನಃ

ಭಾಷೆಯಲ್ಲಿ, ಬರವಣಿಗೆಯಲ್ಲಿ, 'ಸಂಕ್ಷಿಪ್ತಪದ' **(Abbreviation)** ಉಪಯೋಗಿಸುವುದು ಮೂಲತಃ ಬಂದಿದ್ದು ಸಂಸ್ಕೃತದಿಂದ. ಸಂಸ್ಕೃತ ಗ್ರಂಥಗಳಲ್ಲಿ ವಿಶೇಷವಾಗಿ ಪದದ ಸಂಕ್ಷಿಪ್ತ ರೂಪವನ್ನು ಉಪಯೋಗಿಸುತ್ತಾರೆ. ಪ್ರತರ್ದನ ಎನ್ನುವ ಪದವನ್ನು ಈ ಕೆಳಗಿನಂತೆ ಬಿಡಿಸಬಹುದು.

೧)ಪ್ರ+ತರ್ದನ ೨) ಪ್ರ+ತರ್ದ+ನಯತಿ

ಪ್ರ+ತರ್ದನ- ಇಲ್ಲಿ 'ಪ್ರ' ಎನ್ನುವುದು ಪ್ರಕೃಷ್ಟರು ಎನ್ನುವ ಪೂರ್ಣ ಪದದ ಸಂಕ್ಷಿಪ್ತ ರೂಪ. ಪ್ರತರ್ದನಃ ಅಂದರೆ ಪ್ರಕೃಷ್ಟರಿಗೆ ಹಿಂಸೆ ಕೊಡುವ ದುಷ್ಟ ಶಕ್ತಿಯನ್ನು ನಿರ್ಮೂಲ ಮಾಡುವವನು ಎಂದರ್ಥ.

ಪ್ರ+ತರ್ದ+ನಯತಿ-ಇಲ್ಲಿ 'ಪ್ರ' ಎನ್ನುವುದು ಪ್ರಹ್ಲಾದ ಎನ್ನುವ ಪೂರ್ಣ ಪದದ ಸಂಕ್ಷಿಪ್ತ ರೂಪ. ತರ್ದ ಎಂದರೆ ಹಿಂಸೆ. ನಯತಿ ಎಂದರೆ ಹೋಗಲಾಡಿಸಿದವನು. ಅದ್ದರಿಂದ ಪ್ರತರ್ದನಃ ಎಂದರೆ ಪ್ರಹ್ಲಾದನಿಗೆ ಹಿಂಸೆ ಕೊಟ್ಟಂತಹ ಹಿರಣ್ಯಕಶಿಪುವನ್ನು ಮರ್ದಿಸಿ ಆತನ ಕಷ್ಟವನ್ನು ಪರಿಹರಿಸಿ ಲೋಕವನ್ನು ಹಿಂಸೆಯಿಂದ ಪಾರುಮಾಡಿದವನು ಎಂದರ್ಥ.

೬೦) ಪ್ರಭೂತಃ

ಭೂಮ ಎಂದರೆ ಪರಿಪೂರ್ಣತೆ. ಪ್ರಭೂತಿ ಎಂದರೆ ಭೂತಿಗಳಲ್ಲಿ ಪ್ರಕೃಷ್ಟವಾದ ಸ್ಥಿತಿ. ಪ್ರಭೂತ ಎಂದರೆ ಪರಿಪೂರ್ಣವಾದ, ಆನಂದಸ್ವರೂಪನಾದ, ಗುಣಗಳಿಂದ ತುಂಬಿ ತುಳುಕುವ ಭಗವಂತ.

೬೧)ತ್ರಿಕಕುಬ್ಧಾಮ

ತ್ರಿ+ ಕಕುತ್+ ಧಾಮ= ತ್ರಿಕಕುಬ್ಧಾಮ; ಇಲ್ಲಿ 'ತ್ರಿ' ಅಂದರೆ ಮೂರು, 'ಕಕುತ್' ಅಂದರೆ ಶಿಕೆ ಅಥವಾ ತುತ್ತ-ತುದಿ, ಧಾಮ ಎಂದರೆ ನೆಲೆಸಿರುವವನು. ತ್ರಿಕಕುಬ್ಧಾಮ ಎಂದರೆ ಮೂರು ಶಿಕೆಗಳಲ್ಲಿ ನೆಲೆಸಿರುವವನು. ಭೂಮಿ , ಅಂತರಿಕ್ಷ ಮತ್ತು ಸ್ವರ್ಗ ಇವು ಮೂರು ಲೋಕಗಳು. ಈ ಮೂರು ಲೋಕಗಳ ತುದಿಯಲ್ಲಿ ಮೂರು ಸ್ಥಾನಗಳಿವೆ. ಭೂಮಿಯಲ್ಲಿ 'ಶ್ವೇತದ್ವೀಪ', ಅಂತರಿಕ್ಷದಲ್ಲಿ 'ಅನಂತಾಸನ', ಸ್ವರ್ಗದಲ್ಲಿ 'ವೈಕುಂಠ'. ಮೂರು ತೇಜೋಮಯ ಮೂರ್ತಿಗಳು-ಬ್ರಹ್ಮ, ವಿಷ್ಣು, ಮಹೇಶ್ವರ. ಓಂಕಾರದ ಮೂರು ಅಕ್ಷರಗಳು-ಅ, ಉ, ಮ್. ಈ ಮೂರು ಅಕ್ಷರದಿಂದಾದ ಮೂರು ಪದಗಳು 'ಭೂಃ, ಭುವಃ ಸ್ವಃ (ಭೂರ್ಭುವಃ ಸ್ವಃ )', ಈ ಪದಗಳಿಂದಾದ ಮೂರು ಪಾದಗಳು- "ತತ್ಸವಿತುರ್ವರೇಣ್ಯಂ, ಭರ್ಗೋದೇವಸ್ಯ ಧೀಮಹಿ, ಧಿಯೋ ಯೋನಃ ಪ್ರಚೋದಯಾತ್". ಮೂರು ಪಾದಗಳಿಂದಾದ ಮೂರು ವರ್ಗವಿರುವ-ಪುರುಷ ಸೂಕ್ತ (ಸೂಕ್ತಗಳಲ್ಲಿ ಶ್ರೇಷ್ಠವಾದ ಪುರುಷ ಸೂಕ್ತದಲ್ಲಿ ಮೂರು ವರ್ಗಗಳಿವೆ. ಒಂದರಿಂದ-ಐದು ಮೊದಲ ವರ್ಗ, ಆರರಿಂದ-ಹತ್ತು ಎರಡನೇ ವರ್ಗ, ಹನ್ನೊಂದರಿಂದ-ಹದಿನಾರು ಮೂರನೇ ವರ್ಗ). ಸೂಕ್ತಗಳಿಂದಾದ ಅತ್ಯಂತ ಶ್ರೇಷ್ಠವಾದ ಮೂರು ವೇದಗಳು-"ಋಗ್ವೇದ, ಯಜುರ್ವೇದ ಮತ್ತು ಸಾಮವೇದ". ಹೀಗೆ ಎಲ್ಲವೂ ಶಿಕೆಗಳು. ಅದ್ದರಿಂದ ತ್ರಿಕಕುಬ್ಧಾಮ ಅಂದರೆ: ಮೂರು ಲೋಕದಲ್ಲಿ ನೆಲೆಸಿರುವವನು; ಮೂರು ಲೋಕದಲ್ಲಿರುವ ಮೂರು ನಿತ್ಯ ಸ್ಥಾನದಲ್ಲಿ ನೆಲೆಸಿರುವವನು; ಅಲ್ಲಿ ನೆಲೆಸಿರುವ ಮೂರು ತೇಜೋಮಯ ಮೂರ್ತಿಗಳಲ್ಲಿ ನೆಲೆಸಿರುವವನು; ಮೂರು

ಅಕ್ಷರಗಳಿಂದಾದ ಓಂಕಾರದಲ್ಲಿ ಪ್ರತಿಪಾದ್ಯನಾದವನು; ಮೂರು ವ್ಯಾಹೃತಿಗಳಿಂದ ವಾಚ್ಯನಾದವನು; ಗಾಯತ್ರಿಯ ಮೂರು ಪಾದಗಳಲ್ಲಿ ವಾಚ್ಯನಾದವನು; ಪುರುಷಸೂಕ್ತದ ಮೂರು ವರ್ಗದಿಂದ ವಾಚ್ಯನಾದವನು; ಮೂರು ವೇದದಿಂದ ವಾಚ್ಯನಾದವನು; ಇತ್ಯಾದಿ.

ಒಟ್ಟಿನಲ್ಲಿ ತ್ರಿಕಕುಬ್ಧಾಮ ಎಂದರೆ ಮೂರು ಲೋಕದಲ್ಲಿ, ತ್ರಿಮೂರ್ತಿರೂಪನಾಗಿ, ಸಮಸ್ತ ಶಬ್ದ ಭಂಡಾರ ಮತ್ತು ಸಮಸ್ತ ಶಾಸ್ತ್ರದಿಂದ ವಾಚ್ಯನಾದ ಭಗವಂತ.

೬೨) ಪವಿತ್ರಂ

ಈ ದೇಹದಿಂದ ಭಗವಂತ ಹೊರಟುಹೋದ ಮೇಲೆ ಈ ದೇಹ ಅಪವಿತ್ರವಾಗುತ್ತದೆ. ಆದ್ದರಿಂದ ಎಲ್ಲವನ್ನೂ ಪವಿತ್ರಗೊಳಿಸುವ ಶಕ್ತಿಯುಳ್ಳವನು "ಪವಿತ್ರ" . ಆದರೆ ಈ ಭೌತಿಕ ಶರೀರ ಸಂಪೂರ್ಣ ಪವಿತ್ರವಲ್ಲ. ದೇಹ ಕೆಸರಿನಲ್ಲಿ ಅರಳಿದ ತಾವರೆಯಂತೆ. ಈ ದೇಹದಲ್ಲಿರುವ ಕೆಸರು ಅನೇಕ ! ನಿಜವಾದ ಪಾವಿತ್ರ್ಯತೆ ಸಿಗುವುದು ಈ ದೇಹದಿಂದ ಹೊರಟು ಹೋದ ಮೇಲೆ. ಶಾಶ್ವತವಾದ ಪಾವಿತ್ರ್ಯ ಮೋಕ್ಷದಲ್ಲಿ. ಇಂತಹ ಪವಿತ್ರವಾದ ಮೋಕ್ಷವನ್ನು ಕರುಣಿಸುವ ಭಗವಂತ "ಪವಿತ್ರಂ"

೬೩) ಮಙ್ಗಲಂ(ಮಂಗಲಂ)ಪರಮ್

ಮಙ್ಗಲಂ ಅಂದರೆ ಕಲ್ಯಾಣ. ಕಲ್ಯಾಣ ಎಂದರೆ ನಮ್ಮನ್ನು ಎತ್ತರಕ್ಕೆ ಕೊಂಡೊಯ್ಯುವುದು ಎಂದರ್ಥ. ಸಾಮಾನ್ಯವಾಗಿ ಮದುವೆಗೆ ಕಲ್ಯಾಣ ಎನ್ನುತ್ತಾರೆ. ಮದುವೆಯ ನಂತರ ಧರಿಸುವ ತಾಳಿಯನ್ನು "ಮಂಗಳ ಸೂತ್ರ" ಎನ್ನುತ್ತಾರೆ. ಆದರೆ ಎಲ್ಲಾ ಮದುವೆಯೂ ಮಂಗಳವಲ್ಲ! ಯಾವ ವಿವಾಹದಿಂದ ಗಂಡು ಮತ್ತು ಹೆಣ್ಣು ಎತ್ತರಕ್ಕೆ ಏರುತ್ತಾರೋ ಅಂತಹ ಮದುವೆ ಮಾತ್ರ ಕಲ್ಯಾಣ. ನಮ್ಮನ್ನು ಅಧಃಪಾತಕ್ಕೆ ಒಯ್ಯುವ ಮದುವೆ ಅಮಂಗಲ. ಜನಸಾಮಾನ್ಯರು ಸಾಮಾನ್ಯವಾಗಿ ಸಾವನ್ನು ಅಮಂಗಲ ಎಂದು ತಿಳಿಯುತ್ತಾರೆ. ಆದರೆ ಮೋಕ್ಷ ಪ್ರಧಾನವಾದ ಸಾವು ಮಂಗಲ. ಆತ್ಮಹತ್ಯೆ ಅಮಂಗಲ. ತನ್ನೆಲ್ಲಾ ಕರ್ಮವನ್ನು ಭಗವಂತನಿಗೆ ಅರ್ಪಿಸುವ ಇಹಕರ್ಮ ಮಂಗಲ. (ಪಾಂಡವರು ಮಾಡಿದ ಕರ್ಮ); ತನ್ನ ಸ್ವಾರ್ಥಕ್ಕಾಗಿ ಮಾಡುವ ಪರಕರ್ಮ ಅಮಂಗಲ. ಕೇವಲ ಮೇಲಕ್ಕೇರುವುದು ಮಂಗಲವಲ್ಲ, ಕೆಳಕ್ಕೆ ಇಳಿಯದ ದಾರಿಯಲ್ಲಿ ಸಾಗುವುದು ಮಂಗಲ-ಅದೇ ಮೋಕ್ಷ. ಭಗವಂತ ಮಂಗಲ ಮತ್ತು ನಮ್ಮನ್ನು ಮಂಗಲದತ್ತ ನಡೆಸುವವನು- ಅದ್ದರಿಂದ ಆತ ಮಙ್ಗಲಂ ಪರಮ್.

**ಈಶಾನಃ ಪ್ರಾಣದಃ ಪ್ರಾಣೋ ಜ್ಯೇಷ್ಠಃ ಶ್ರೇಷ್ಠಃ ಪ್ರಜಾಪತಿಃ ।**
**ಹಿರಣ್ಯಗರ್ಭೋ ಭೂಗರ್ಭೋ ಮಾಧವೋ ಮಧುಸೂದನಃ ॥೧೦॥**

೬೪)ಈಶಾನಃ

ಈಶ ಎಂದರೆ ನಮ್ಮನ್ನು ನಿಯಂತ್ರಿಸುವ ಪರಮ ಶಕ್ತಿಗಳು. ಈಶಾನಃ ಅಂದರೆ ಈ ಪರಮಶಕ್ತಿಗಳ ಒಡೆಯ.

೬೫)ಪ್ರಾಣದಃ

ಪ್ರಾಣ+ದಃ=ಪ್ರಾಣದಃ. ಇಲ್ಲಿ ದಃ ಅನ್ನುವ ಪದಕ್ಕೆ "ಕೊಡುವವನು" ಮತ್ತು "ಕಸಿದುಕೊಳ್ಳುವವನು" ಎನ್ನುವ ತದ್ವಿರುದ್ಧವಾದ ಎರಡು ಅರ್ಥವಿದೆ. ಪ್ರಾಣದಃ ಅಂದರೆ ನಮಗೆ ಈ ದೇಹದಲ್ಲಿ ಪ್ರಾಣಶಕ್ತಿಯನ್ನು ತುಂಬಿ, ಇಂದ್ರಿಯಗಳನ್ನು ಕೊಟ್ಟು, ಬದುಕಿಗೆ ಬೇಕಾದ ಕಲೆಯನ್ನು ಕೊಡುವವನು; ಕೊನೆಗೆ ಭೌತಿಕ ಶರೀರವನ್ನು ಕಸಿದುಕೊಂಡು, ಮುಕ್ತಿಯನ್ನು ದಯಪಾಲಿಸುವ ಭಗವಂತ ಪ್ರಾಣದಃ.

೬೬) ಪ್ರಾಣಃ

ಪ್ರ+ಆ+ಣ= ಪ್ರಾಣ. 'ಪ್ರ' ಎಂದರೆ ಪ್ರಕೃಷ್ಟವಾದ, ದುಃಖ ಸ್ಪರ್ಶವಿಲ್ಲದ, ನಿರ್ದಿಷ್ಟವಾದ. 'ಆ' ಎಂದರೆ ಪರಿಪೂರ್ಣನಾದ. 'ಣ' ಎಂದರೆ ಆನಂದಮಯನಾದ ಎಂದರ್ಥ. ಆದ್ದರಿಂದ ಭಗವಂತ ಪ್ರ+ಆ+ಣ=ಪ್ರಾಣಃ

ಇನ್ನು 'ಆಣ' ಅಂದರೆ ವಾಗ್ದೇವಿ. ಅದ್ದರಿಂದ ವಾಗ್ದೇವಿಯಲ್ಲಿ ನೆಲೆಸಿ, ಎಲ್ಲಾ ವೇದ ವಾಣಿಗಳಲ್ಲಿ ಸನ್ನಿಹಿತನಾಗಿದ್ದು, ಜಗತ್ತಿನ ಎಲ್ಲಾ ಚೇಷ್ಟೆಗಳನ್ನು ನಿಯಂತ್ರಿಸುವ ಭಗವಂತ ಪ್ರಾಣಃ.

೬೭)ಜ್ಯೇಷ್ಠಃ

ಜ್ಯೇಷ್ಠಃ ಎಂದರೆ ಹಿರಿಯ. ಎಲ್ಲಾ ಪ್ರಾಣ ತತ್ವಗಳನ್ನು ಸೃಷ್ಟಿ ಮಾಡಿ ನಿಯಂತ್ರಿಸುವ ಭಗವಂತ-ಜ್ಯೇಷ್ಟ.

೬೮) ಶ್ರೇಷ್ಠಃ

ಶ್ರೇಷ್ಠತೆ ವಯಸ್ಸಿನಿಂದ ಬರುವುದಲ್ಲ. ಕೆಲವರು ಜ್ಞಾನದಲ್ಲಿ ಶ್ರೇಷ್ಠರು, ಕೆಲವರು ಹಣದಲ್ಲಿ ಶ್ರೇಷ್ಠರು, ಇನ್ನು ಕೆಲವರು ಬಲದಲ್ಲಿ ಶ್ರೇಷ್ಠರು. ಈ ರೀತಿ ಎಲ್ಲಿ ಭಗವಂತನ ವಿಶಿಷ್ಟವಾದ ತೇಜಸ್ಸಿನ ಸನ್ನಿಧಾನವಿದೆಯೋ ಅಲ್ಲಿ ಶ್ರೇಷ್ಠತೆ ಇರುತ್ತದೆ. ಇಂತಹ ಶ್ರೇಷ್ಠತೆಯನ್ನು ದಯಪಾಲಿಸುವ ತಂದೆ ಶ್ರೇಷ್ಠಃ.

೬೯) ಪ್ರಜಾಪತಿಃ

ಚತುರ್ಮುಖನಿಗೆ ಪ್ರಜಾಪತಿ ಎನ್ನುವ ಹೆಸರಿದೆ. ಅಂತಹ ಚತುರ್ಮುಖನೊಳಗಿದ್ದು, ಸಮಸ್ತ ಜೀವಕೋಟಿಯ ಪಾಲನೆ ಮಾಡುವ ಭಗವಂತ ಪ್ರಜಾಪತಿಃ.

೭೦)ಹಿರಣ್ಯಗರ್ಭಃ

ಇಲ್ಲಿ ಹಿರಣ್ಯ ಎಂದರೆ ಚಿನ್ನ ಅಥವಾ ಬಂಗಾರ. ಈ ಹಿಂದೆ ಬ್ರಹ್ಮಾಂಡವನ್ನು ಕಮಲ ರೂಪದ ಬ್ರಹ್ಮನಮೊಟ್ಟೆ ಎಂದು ವರ್ಣಿಸಿರುವುದನ್ನು ನೋಡಿದ್ದೇವೆ. ಈ ಬ್ರಹ್ಮಾಂಡ ಭಗವಂತನ ಉದರದಿಂದ ನಿರ್ಮಾಣವಾಯಿತು ಎನ್ನುವುದನ್ನು 'ನಾಭಿ-ಕಮಲ' ರೂಪದಲ್ಲಿ ಕಲ್ಪಿಸಲಾಗಿದೆ.

ಕವಿಯ ಕಲ್ಪನೆಯಂತೆ ಈ ಬ್ರಹ್ಮಾಂಡವನ್ನು ದೂರದಲ್ಲಿ ನಿಂತು ನೋಡಿದರೆ ನೂರು ಸೂರ್ಯರು ಒಮ್ಮೆಲೇ ಉದಯಿಸಿದರೆ ಹೇಗೆ ಕಾಣಬಹುದೋ ಹಾಗೆ ಚಿನ್ನದ ಮೊಟ್ಟೆಯಂತೆ ಕಾಣಬಹುದು. ಇಂತಹ ಅಪೂರ್ವವಾದ ಸೃಷ್ಟಿಯನ್ನು ತನ್ನ ಉದರಲ್ಲಿ ಧರಿಸಿರುವವನು ಹಿರಣ್ಯಗರ್ಭ.

೭೧)ಭೂಗರ್ಭಃ

ಇಲ್ಲಿ ಭೂ ಎನ್ನುವ ಪದ ಪ್ರಕೃತಿ ಹಾಗೂ ಭೂಮಿ ಎನ್ನುವ ಅರ್ಥವನ್ನು ಕೊಡುತ್ತದೆ. ಈ ಪ್ರಕೃತಿಯನ್ನು ಹಾಗೂ ಅದರ ಒಂದು ಭಾಗವಾದ ಭೂಮಿಯನ್ನು ತನ್ನ ಒಡಲಲ್ಲಿ ಹೊತ್ತವನು ಭೂಗರ್ಭ. ಭೂಮಿಯ ಗುರುತ್ವಾಕರ್ಷಣ ಶಕ್ತಿಯನ್ನು ಸಂಕರ್ಷಣ ಶಕ್ತಿ ಎನ್ನುತ್ತಾರೆ. ಸಂಕರ್ಷಣ ಆದಿಶೇಷನ ಅನ್ವರ್ಥ ನಾಮ. ಸಂಕರ್ಷಣನೊಳಗಿರುವ ಭಗವಂತ ಈ ಭೂಮಿಯನ್ನು ನಿಯಮಬದ್ಧವಾಗಿ ಹಿಡಿದಿಟ್ಟು ಕಾಪಾಡುತ್ತಿದ್ದಾನೆ. ಈ ಭೂಮಿಯ ಸೃಷ್ಟಿಕರ್ತ ಹಾಗೂ ಸಂರಕ್ಷಕನಾದ ಭಗವಂತ ಭೂಗರ್ಭಃ.

೭೨)ಮಾಧವಃ

'ಮಾ' ಎಂದರೆ ಮಾತೆ ಲಕ್ಷ್ಮಿ. ಆದ್ದರಿಂದ ಮಾಧವ ಎಂದರೆ ಲಕ್ಷ್ಮೀಪತಿ ಭಗವಂತ. ಇನ್ನು 'ಮಾ' ಎಂದರೆ ಜ್ಞಾನ ಕೂಡಾ ಹೌದು. ಭಗವಂತ ಜ್ಞಾನದ ಒಡೆಯ, ಅದ್ದರಿಂದ ಆತ ಮಾಧವ. ಕೃಷ್ಣಾವತಾರದಲ್ಲಿ ಭಗವಂತ ಮಧುವಂಶದಲ್ಲಿ ಹುಟ್ಟಿ ಬಂದದ್ದರಿಂದಲೂ ಆತನಿಗೆ ಈ ಹೆಸರಿದೆ. ವೇದದಲ್ಲಿ ಮಾತೃ ಎನ್ನುವ ಪದವನ್ನು ಮಾತು ಅಥವಾ ವಾಙ್ಮಯ ಎನ್ನುವ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಏಳು ಮಹಾನ್ ಗ್ರಂಥಗಳಾದ ಋಗ್ವೇದ,

ಯಜುರ್ವೇದ, ಸಾಮವೇದ, ಅಥರ್ವವೇದ, ರಾಮಾಯಣ, ಮಹಾಭಾರತ ಹಾಗೂ ಪುರಾಣಗಳನ್ನು ಮಾತ್ರ ಎನ್ನುತ್ತಾರೆ. ಅದ್ದರಿಂದ ಸಮಸ್ತ ವೈದಿಕ ವಾಙ್ಮಯ ಪ್ರತಿಪಾದ್ಯನಾದ ಭಗವಂತ ಮಾಧವ.

೭೩)ಮಧುಸೂದನಃ

ಮಧು ಎನ್ನುವ ಪದ ಕಾಮ(Sex), ಬಯಕೆ(Desire), ಆನಂದ(Ultimate bliss) ಎನ್ನುವ ಅನೇಕ ಅರ್ಥವನ್ನು ಕೊಡುತ್ತದೆ. ಕಾಮ(ಮಧು)ವೇ ಕ್ರೋಧ(ಕೈತಪ)ಕ್ಕೆ ಕಾರಣ. ಈ ಮಧು-ಕೈತಪರು ನಮ್ಮೊಳಗಿದ್ದು, ನಮ್ಮೆಲ್ಲಾ ಕಷ್ಟ-ಕಾರ್ಪಣ್ಯಕ್ಕೆ ಮೂಲ ಕಾರಣಕರ್ತರಾಗಿರುತ್ತಾರೆ. ಇಂತಹ ಮಧು-ಕೈತಪರಿಂದ ನಮಗೆ ಮುಕ್ತಿ ದೊರೆಯಬೇಕಿದ್ದರೆ ನಾವು ಭಗವಂತನ ಮೊರೆ ಹೋಗಬೇಕು. ಆತನೊಬ್ಬನೇ ಈ ಮಧುವನ್ನು ಸೂದಿಸಬಲ್ಲ (ನಾಶಮಾಡಬಲ್ಲ). ಇಂತಹ ಭಗವಂತ ಮಧುಸೂದನ.

ಇನ್ನು ಮಧು ಎಂದರೆ ಆನಂದ ಎನ್ನುವ ಅರ್ಥವನ್ನು ವಿಶ್ಲೇಷಿಸಿದಾಗ, ಮಧುಸೂದನ ಎಂದರೆ ಆನಂದ ನಾಶಕ ಎಂದಾಗುತ್ತದೆ! ಇದೇನಿದು-ಆನಂದ ಸ್ವರೂಪನಾದ ಭಗವಂತ ಆನಂದ ನಾಶಕ ಅನ್ನುತ್ತಾರಲ್ಲಪ್ಪಾ ಎಂದು ಗಾಬರಿಯಾಗಬೇಡಿ! ಧರ್ಮ ಮಾರ್ಗವನ್ನು ಬಿಟ್ಟು, ಅಧರ್ಮಿಯಾಗಿ, ಮದ(ಅಹಂಕಾರ)ದಿಂದ ಸಾಗುವವರ ಆನಂದವನ್ನು ನಾಶ ಮಾಡಿ, ಸಜ್ಜನರ ಉದ್ಧಾರ ಮಾಡುವ ಆನಂದರೂಪಿ ಭಗವಂತ ಮಧುಸೂದನ.

ಈಶ್ವರೋ ವಿಕ್ರಮೀ ಧನ್ವೀ ಮೇಧಾವೀ ವಿಕ್ರಮಃ ಕ್ರಮಃ ।
ಅನುತ್ತಮೋ ದುರಾಧರ್ಷಃ ಕೃತಜ್ಞಃ ಕೃತಿರಾತ್ಮವಾನ್ ॥೨೨॥

೭೪)ಈಶ್ವರಃ

ಈಶ್ವರ ಎಂದರೆ ಜಗತ್ತನ್ನು ನಿಯಂತ್ರಿಸುವ ಎಲ್ಲಾ ಶಕ್ತಿಗಳ ಈಶ ಎಂದರ್ಥ.

೭೫)ವಿಕ್ರಮೀ

ಈ ನಾಮದ ವಿಶ್ಲೇಷಣೆ ಮಾಡಲು ನಾವು ಭಗವಂತನ ವಾಮನ ಅವತಾರದ ಕಥೆಯನ್ನು ಒಮ್ಮೆ ಮೆಲುಕು ಹಾಕಬೇಕಾಗುತ್ತದೆ. ನಿಮಗೆ ತಿಳಿದಿರುವಂತೆ ವಾಮನ ರೂಪಿ ಭಗವಂತ, ಮಹಾದಾನಿ ಬಲಿಚಕ್ರವರ್ತಿಯಲ್ಲಿ ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಕೇಳುತ್ತಾನೆ. ಶುಕ್ರಾಚಾರ್ಯರ ವಿರೋಧವನ್ನು ಲೆಕ್ಕಿಸದೆ ಬಲಿ ವಾಮನನಿಗೆ ಮೂರು ಹೆಜ್ಜೆ ಭೂಮಿಯನ್ನು ದಾನ ಮಾಡಲು ಒಪ್ಪಿಕೊಳ್ಳುತ್ತಾನೆ. ವಾಮನನು ತನ್ನ ಮೊದಲ ಹೆಜ್ಜೆಯಿಂದ ಭೂಮಿಯನ್ನೂ ಮತ್ತು ಎರಡನೇ ಹೆಜ್ಜೆಯಿಂದ ಆಕಾಶವನ್ನು ಆವರಿಸಿ ನಿಲ್ಲುತ್ತಾನೆ. ಆಗ ಮೂರನೇ ಹೆಜ್ಜೆಗೆ ಬಲಿ ತನ್ನ ತಲೆಯನ್ನು ಅರ್ಪಿಸುತ್ತಾನೆ. ಇದರಿಂದ ಪ್ರಸನ್ನನಾದ ಹರಿ ಬಲಿಯನ್ನು ಪಾತಾಳ ಲೋಕದ ಅಧಿಪತಿಯನ್ನಾಗಿ ಮಾಡುತ್ತಾನೆ. ಬಲಿ ಪಾತಳವನ್ನು ಸೇರಿ ಉದ್ಧಾರವಾಗುತ್ತಾನೆ. ಈ ಕಾರಣಕ್ಕಾಗಿ ಭಗವಂತನನ್ನು 'ತ್ರಿವಿಕ್ರಮ' ಎನ್ನುತ್ತಾರೆ.

ಈ ಕಥೆಯನ್ನು ನಾವು ಸ್ವಲ್ಪ ಆಳವಾಗಿ ವಿಶ್ಲೇಷಿಸಿದರೆ ಮಾತ್ರ ಇದರ ಹಿಂದಿರುವ ಗುಹ್ಯ ಅರ್ಥ ತಿಳಿಯುತ್ತದೆ. ಸಂಸಾರ ಸಾಗರದಲ್ಲಿ ಮುಳುಗಿರುವ ನಾವೆಲ್ಲರೂ ಒಂದು ರೀತಿಯಲ್ಲಿ ಬಲಿಗಳು. ಭಗವಂತನ ಸಾಕ್ಷಾತ್ಕಾರವಾಗಲು ನಾವೆಲ್ಲರೂ ಮಾನಸಿಕವಾಗಿ, ಆಧ್ಯಾತ್ಮಿಕವಾಗಿ ಬಲಿಷ್ಠರಾಗಬೇಕು. ಉಪಾಸನೆಯಲ್ಲಿ ಪ್ರಮುಖವಾಗಿ ಮೂರು ಹೆಜ್ಜೆಗಳಿವೆ. ಮೊದಲನೆಯದು ಭಗವಂತನ ಪುಟ್ಟ (ವಾಮನ) ಮೂರ್ತಿಯನ್ನು ದೇವರು ಎಂದು ಆರಾಧಿಸುವುದು; ಎರಡನೆಯದು ಉಪಾಸನೆ ಮಾಡುತ್ತಾ-ಮಾಡುತ್ತಾ ಭಗವಂತ ಕೇವಲ ಮೂರ್ತಿಯಲ್ಲಿ ಅಲ್ಲದೇ, ಇಡೀ ಲೋಕದಲ್ಲಿ ವ್ಯಾಪಿಸಿರುವ ಶಕ್ತಿ ಎಂದು ತಿಳಿಯುವುದು. ಪ್ರಮುಖವಾದ ಮೂರನೇ ಹೆಜ್ಜೆ- ಭಗವಂತ ಸರ್ವಾಂತರ್ಯಾಮಿ, ಆತ ನನ್ನೊಳಗೂ ತುಂಬಿದ್ದಾನೆ ಎಂದು ತಿಳಿದು, ಆ ಪರಶಕ್ತಿಗೆ ತಲೆ ಬಾಗುವುದು. ಆಗ ನಮಗೆ ನಿಜವಾದ ಭಗವಂತನ

ಸಾಕ್ಷಾತ್ಕಾರವಾಗುತ್ತದೆ, ಹಾಗೂ ಭಗವಂತ ನಮ್ಮನ್ನು ಉದ್ಧರಿಸುತ್ತಾನೆ. ಈ ಮೇಲಿನ ಮೂರು ವಿಕ್ರಮಗಳಿಂದ ನಮ್ಮನ್ನು ಉದ್ಧರಿಸುವ ಭಗವಂತ ವಿಕ್ರಮೀ.

೭೬)ಧನ್ವೀ

ಧನ್ವೀ ಎಂದರೆ ಧನುರ್ಧಾರಿ. ಅಂದರೆ ಧನುಸ್ಸನ್ನು ಕೈಯಲ್ಲಿ ಹಿಡಿದಿರುವವನು. ಇಲ್ಲಿ ಧನುಸ್ಸು ದುಷ್ಟ ನಿಗ್ರಹದ ಸಂಕೇತ. ಧರ್ಮದ ಸಂಸ್ಥಾಪನೆಗಾಗಿ ಕೈಯಲ್ಲಿ ಆಯುಧ ಹಿಡಿದಿರುವ ಭಗವಂತ- ಧನ್ವೀ. ಭಗವಂತನಿಗೆ ಯಾವುದೇ ವಿಶೇಷ ಆಯುಧದ ಅಗತ್ಯವಿಲ್ಲ. ಭಗವಂತ ದುಷ್ಕರ್ಮದ ನಾಶಕನಾಗಿರುವುದರಿಂದ ಆತನನ್ನು ಧನ್ವೀ ಎನ್ನುತ್ತಾರೆ.

೭೭)ಮೇಧಾವೀ

ಮೇಧಾ ಎಂದರೆ ಸ್ಮರಣಶಕ್ತಿ. ಯಾವುದನ್ನು ಕೇಳುತ್ತೇವೋ, ಯಾವುದನ್ನೂ ಓದುತ್ತೇವೋ, ಅದನ್ನು ಶಾಶ್ವತವಾಗಿ ಮಸ್ತಕದಲ್ಲಿಟ್ಟುಕೊಳ್ಳುವುದು. ಮನಸ್ಸು ಬಯಸುತ್ತದೆ, ಬುದ್ಧಿ ನಿಶ್ಚಯವಾಗಿ ಗ್ರಹಿಸುತ್ತದೆ, ಚಿತ್ತ ನೆನಪಿಡುತ್ತದೆ. ಗ್ರಹಿಸಿದ ವಿಷಯವನ್ನು ಶಾಶ್ವತವಾಗಿ ನೆನಪಿನಲ್ಲಿಡುವವರು ಮೇಧಾವಿಗಳು. ಭಗವಂತ ಸ್ವತಃ ಮೇಧಾವಿ ಹಾಗೂ ನಮಗೆ ಚಿತ್ತವನ್ನು ಕರುಣಿಸುವವ.

೭೮)ವಿಕ್ರಮಃ

ವಿಕ್ರಮ ಎಂದರೆ ಕ್ರಮವಿಲ್ಲದವನು! ಅಂದರೆ ಭಗವಂತನು ಯಾವುದೇ ಕ್ರಮದ ನಿರ್ಬಂಧಕ್ಕೆ ಒಳಗಾಗಿಲ್ಲ. ಅವನು ನಡೆದ ದಾರಿಯೆಲ್ಲವೂ ನಮಗೆ ಕ್ರಮ.

೭೯)ಕ್ರಮಃ

ಮೇಲೆ ಹೇಳಿದಂತೆ ಭಗವಂತ ವಿಕ್ರಮ, ಆತ ನಿರ್ಮಿಸಿರುವ ಈ ಸೃಷ್ಟಿ ಸಂಪೂರ್ಣ ಕ್ರಮಬದ್ಧವಾಗಿದೆ. ಪ್ರತಿಯೊಂದು ಗ್ರಹದ ಚಲನೆ ಗಣಿತಬದ್ಧವಾಗಿದೆ. ಉದಾಹರಣೆಗೆ: ಯಾವಾಗ ಗ್ರಹಣವಾಗಿದೆ, ಯಾವಾಗ ಗ್ರಹಣವಾಗುತ್ತದೆ ಎನ್ನುವುದನ್ನು ಕರಾರುವಾಕ್ಕಾಗಿ ಗಣಿತದಿಂದ ತಿಳಿಯಬಹುದು. ಪ್ರತಿಯೊಂದು ಗ್ರಹ ಗೋಲಗಳು ನಿಯತವಾದ ಸ್ಥರದಲ್ಲಿ ನಿಯತವಾದ ವೇಗದಲ್ಲಿ ಸುತ್ತುತ್ತಿವೆ. ಈ ಗಣಿತ ಅಷ್ಟೊಂದು ಕ್ರಮಬದ್ಧವಾಗಿದೆ. ಇಂತಹ ಕ್ರಮಬದ್ಧವಾದ ಸೃಷ್ಟಿಯ ಕರ್ತನಾದ ಭಗವಂತ ಕ್ರಮಃ

೮೦)ಅನುತ್ತಮಃ

ಭಗವಂತನ ಹೆಜ್ಜೆ ಆನೆಯ ಹೆಜ್ಜೆಯಂತೆ. ಇತರ ಎಲ್ಲಾ ಹೆಜ್ಜೆಗಳು ಅದರ ವ್ಯಾಪ್ತಿಯ ಒಳಗೆ ಸೀಮಿತ. ಅನುತ್ತಮ ಎಂದರೆ ಉತ್ತಮರಲ್ಲಿ ಉತ್ತಮ. ಅವನಿಂದ ಉತ್ತಮರು ಯಾರೂ ಇಲ್ಲ.

೮೧)ದುರಾಧರ್ಷಃ

ಧರ್ಷಣೆಗೆ ನಿಲುಕದೇ ಇರುವುದು ದುರಾಧರ್ಷ. ಭಗವಂತನನ್ನು ನಲುಗಿಸುವುದು, ವಿಚಲಿತಗೊಳಿಸುವುದು ಅಸಾಧ್ಯ. ಆತ ತನ್ನ ಕ್ರಮದಿಂದ, ತನ್ನ ತೀರ್ಮಾನದಿಂದ, ತನ್ನ ಸ್ಥಾನದಿಂದ ವಿಚಲಿತಗೊಳ್ಳಲಾರ. ಇಂತಹ ಭಗವಂತ ದುರಾಧರ್ಷ.

೮೨)ಕೃತಜ್ಞಃ

ಮೇಲಿನ ಕೆಲವು ನಾಮಗಳಲ್ಲಿ ನಾವು ಭಗವಂತನಿಗೆ ಕ್ರಮವಿಲ್ಲ, ಅವನ ಕ್ರಮವನ್ನು ಯಾರೂ ಮೀರಲಾರರು, ಅವನು ಅನುತ್ತಮ, ದುರಾಧರ್ಷ, ಇತ್ಯಾದಿ ಗುಣಗಳನ್ನು ನೋಡಿದೆವು. ಈಗ ನಮ್ಮಲ್ಲಿ ಒಂದು ಪ್ರಶ್ನೆ ಮೂಡಬಹುದು. ಭಗವಂತ ಏಕೆ ಪಕ್ಷಪಾತಿ? ಒಬ್ಬ ಬಡವ, ಒಬ್ಬ ಶ್ರೀಮಂತ, ಒಬ್ಬರಿಗೆ ಸುಖ, ಇನ್ನೊಬ್ಬರಿಗೆ ಕಷ್ಟ. ಏಕೆ ಹೀಗೆ? ಈ

ಪ್ರಶ್ನೆಗೆ ಉತ್ತರವೇ 'ಕೃತಜ್ಞ' ನಾಮದ ಅರ್ಥ. ಕೃತಜ್ಞ ಎಂದರೆ ಏನನ್ನೂ ಮರೆಯದೆ ಮರಳಿ ಕೊಡುವವನು ಎಂದರ್ಥ. ನಾವು ಏನನ್ನು ಮಾಡಿದ್ದೆವೋ, ಆ ಕರ್ಮಕ್ಕನುಗುಣವಾಗಿ ಫಲವನ್ನು ಕೊಡುವ ಭಗವಂತ ಕೃತಜ್ಞ.

೮೩)ಕೃತಿಃ

ಭಗವಂತನ ಜ್ಞಾನ, ಬಲ, ಕ್ರಿಯೆ ಎಲ್ಲವೂ ಆತನ ಸ್ವರೂಪ. ವಿಶ್ವವನ್ನೆಲ್ಲಾ ನಿರ್ಮಿಸಿದ ಕ್ರಿಯಾಸ್ವರೂಪ ಭಗವಂತ ಕೃತಿಃ.

೮೪)ಆತ್ಮವಾನ್

ಆತ್ಮದ ಸ್ಥೂಲವಾದ ಅರ್ಥ ಶರೀರ. ಭಗವಂತನಿಗೆ ಮಣ್ಣು, ನೀರು ಮತ್ತು ಬೆಂಕಿಯಿಂದಾದ, ಒಂದು ದಿನ ಬಿದ್ದು ಹೋಗುವ ಶರೀರ ಅಥವಾ ಆಕಾರವಿಲ್ಲ. ಅವನು ವಿಶ್ವಾಕಾರ. ಆತ ಯಾವ ರೂಪದಲ್ಲಿ ಕೂಡಾ ಕಾಣಿಸಿಕೊಳ್ಳಬಲ್ಲ. ಜ್ಞಾನ ಆತನ ಸ್ವರೂಪ. ಎಲ್ಲಾ ಆತ್ಮರ ತಂದೆಯಾದ ಭಗವಂತ ಆತ್ಮವಾನ್.

**ಸುರೇಶಃ ಶರಣಂ ಶರ್ಮ ವಿಶ್ವರೇತಾಃ ಪ್ರಜಾಭವಃ ।**
**ಅಹಃ ಸಂವತ್ಸರೋ ವ್ಯಾಲಃ ಪ್ರತ್ಯಯಸ್ಸರ್ವದರ್ಶನಃ ॥೨೩॥**

೮೫)ಸುರೇಶಃ

ಸುರರು ಅಂದರೆ ದೇವತೆಗಳು. ಭಗವಂತ ಸುರರ-ಈಶ(ಒಡೆಯ) ಆದ್ದರಿಂದ ಆತ ಸುರೇಶ.

೮೬)ಶರಣಮ್

ಶರಣು ಎಂದರೆ ಮೂಲತಃ ಆಶ್ರಯ ಎನ್ನುವ ಅರ್ಥವನ್ನೂ ಕೊಡುತ್ತದೆ. ಆದರೆ ವಾಡಿಕೆಯಲ್ಲಿ ಈ ಅರ್ಥ ತಪ್ಪಿಹೋಗಿ ವಿಪರೀತ ಅರ್ಥದಲ್ಲಿ ಪ್ರಚಲಿತದಲ್ಲಿದೆ. ಮೂಲ ಅರ್ಥದ ಪ್ರಕಾರ ದೇವರು ನಮಗೆ ಶರಣು ಹೊರತು ನಾವು ದೇವರಿಗೆ ಶರಣಾಗಲು ಸಾಧ್ಯವಿಲ್ಲ. ಅಂದರೆ ದೇವರೇ ನಮಗೆ ಆಶ್ರಯದಾತ ಹೊರತು ನಾವು ದೇವರಿಗೆ ಆಶ್ರಯದಾತರಾಗಲು ಸಾಧ್ಯವಿಲ್ಲ. ಆದ್ದರಿಂದ ಎಲ್ಲಾ ಜೀವ ಜಂತುಗಳಿಗೂ ಆಶ್ರಯದಾತನಾದ ಭಗವಂತ ಶರಣು.

೮೭)ಶರ್ಮ

ಶರ್ಮ ಅಂದರೆ ಆನಂದ. ಜ್ಞಾನಾನಂದಮಯನಾದ ಭಗವಂತ ಶರ್ಮ.

೮೮)ವಿಶ್ವರೇತಾಃ

ಭಗವಂತನ ರೇತಸ್ಸಿನಿಂದ ಈ ವಿಶ್ವ ಸೃಷ್ಟಿಯಾದ್ದರಿಂದ ಆತನನ್ನು ವಿಶ್ವರೇತಾ ಎನ್ನುವುದು ಮೇಲ್ನೋಟಕ್ಕೆ ಕಾಣುವ ಅರ್ಥ. ಆದರೆ ಈ ನಾಮಕ್ಕೆ ಇನ್ನೂ ಹೆಚ್ಚಿನ ಅರ್ಥವಿದೆ. ರೇತಸ್ ಅಂದರೆ ಆನಂದರೂಪ ಎಂದರ್ಥ.ವಿಶ್ವರೇತಾ ಎಂದರೆ ಜೀವಕೋಟಿಯ ಆನಂದದಲ್ಲಿ ಪರಿಪೂರ್ಣ ಆನಂದರೂಪ ಎಂದರ್ಥ. 'ರೇತಸ್ಸು' ಸಾರಭೂತವಾದದ್ದು ಎನ್ನುವ ಅರ್ಥವನ್ನೂ ಕೊಡುತ್ತದೆ. ಆದ್ದರಿಂದ ಇಡೀ ಬ್ರಹ್ಮಾಂಡದಲ್ಲಿ ಸಾರಭೂತನಾಗಿರುವ ಭಗವಂತ ವಿಶ್ವರೇತಾಃ.

೮೯)ಪ್ರಜಾಭವಃ

ಧರ್ಮದ ಮಾರ್ಗದಲ್ಲಿ, ಜ್ಞಾನದ ಹಸಿವಿನಿಂದ, ಭಗವಂತನಲ್ಲಿ ಶರಣುಕೋರಿ ಬಂದ ಭಕ್ತರನ್ನು ಪ್ರಜಾ ಎನ್ನುತ್ತಾರೆ. ಭವ ಎಂದರೆ ಆನಂದವನ್ನು ದಯಪಾಲಿಸುವುದು ಎಂದರ್ಥ. ಆದ್ದರಿಂದ ಪ್ರಜಾಭವ ಎಂದರೆ ಧರ್ಮ ಮತ್ತು ಜ್ಞಾನ ಮಾರ್ಗದಲ್ಲಿರುವವರಿಗೆ ಆನಂದಪ್ರದನಾದ ಭಗವಂತ ಎಂದರ್ಥ.

೯೦)ಅಹಃ

ಅಹಃ ಅಂದರೆ ಮೇಲ್ನೋಟದ ಅರ್ಥ 'ನಾನು'. ಪ್ರತಿಯೊಂದು ಮಾತಿನಲ್ಲೂ ನಾವು 'ನಾನು' ಅನ್ನುವ ಪದವನ್ನು ಉಪಯೋಗಿಸುತ್ತೇವೆ. ಈಗ 'ನಾನು' ಅನ್ನುವ ಪದವನ್ನು ಸ್ವಲ್ಪ ಆಳವಾಗಿ ಯೋಚಿಸಿ. ನಾನು ಅಂದರೆ ನನ್ನ ಕೈ ,

ಕಾಲು, ತಲೆ, ಹೃದಯ ....... ನನ್ನ ದೇಹ ?? ಅಲ್ಲ ! ನನ್ನ ಉಸಿರು? ಅದೂ ಅಲ್ಲ ! ನನ್ನ ಜೀವ ........?? ಅಲ್ಲ. ಏಕೆಂದರೆ ಈ ಜೀವವನ್ನು ನಡೆಸುವವನು ಯಾರು? ಅವನೇ ಬಿಂಬ ರೂಪಿ ಭಗವಂತ. ಆದ್ದರಿಂದ ಆತ ಅಹಃ . ಒಂದು ಕೆಲಸವನ್ನು ನಾನು ಮಾಡಿದೆ, ನನ್ನಿಂದಾಯಿತು ಎಂದು ಜಂಬ ಪಡುವ ನಾವು, ಆ 'ನಾನು' ಅಂದರೆ ನನ್ನೊಳಗೆ ಕುಳಿತ ಭಗವಂತ ಅನ್ನುವುದನ್ನು ಸಂಪೂರ್ಣ ಮರೆತಿರುತ್ತೇವೆ!

ಅಹಃ ಅನ್ನುವುದಕ್ಕೆ ಇನ್ನೊಂದು ಅರ್ಥ ಬೆಳಕು. ಅಂದರೆ ಬೆಳಕಿನ ಮೂಲವಾದ ಸೂರ್ಯನಲ್ಲಿ ತುಂಬಿ ಜಗತ್ತನ್ನು ಬೆಳಗುವವವನು. ಆದ್ದರಿಂದ ಪಿಂಡಾಂಡದಲ್ಲಿ ಬಿಂಬರೂಪಿಯಾಗಿ, ನಿಸರ್ಗದಲ್ಲಿ ಸೂರ್ಯಕಿರಣ ರೂಪದಲ್ಲಿ ತುಂಬಿರುವ ಭಗವಂತ ಅಹಃ.

೯೧)ಸಂವತ್ಸರಃ

ಸಂವತ್ಸರ ಎಂದರೆ ಸಂಸ್ಕೃತದಲ್ಲಿ ವರ್ಷ ಎಂದು ಅರ್ಥ. ಒಂದು ಸಂವತ್ಸರದಲ್ಲಿ ೩೬೦ ಹಗಲು ಹಾಗೂ ೩೬೦ ರಾತ್ರಿಗಳಿರುತ್ತವೆ. ಇಂತಹ ನೂರು ಸಂವತ್ಸರಗಳು ಮನುಷ್ಯನ ಆಯಸ್ಸು (೩೬,೦೦೦ ಹಗಲು ಹಾಗೂ ೩೬,೦೦೦ ರಾತ್ರಿ). ಮನುಷ್ಯನ ದೇಹ ೭೨,೦೦೦ ನಾಡಿಗಳಿಂದ ಹಾಗೂ ೩೬೦ ಅಸ್ಥಿಗಳಿಂದ ತುಂಬಿದೆ (ಅದಕ್ಕಾಗಿ ಯಜ್ಞ ಕುಂಡ ತಯಾರಿಸುವಾಗ ೩೬೦ ಇಟ್ಟಿಗೆಗಳನ್ನು ಉಪಯೋಗಿಸುತ್ತಾರೆ. ೩೬೦ ಅಸ್ಥಿಗಳಿಂದ ತುಂಬಿದ ಈ ದೇಹವೇ ಒಂದು ಕುಂಡ). ಈ ಎಲ್ಲಾ ನಾಡಿಗಳಲ್ಲಿ ತುಂಬಿರುವ ಕಾಲನಿಯಾಮಕನಾದ ಹಾಗೂ ಶರೀರ ನಿಯಾಮಕನಾದ ಭಗವಂತ ಸಂವತ್ಸರ.

೯೨)ವ್ಯಾಲಃ

ನಿಘಂಟಿನಲ್ಲಿ ವ್ಯಾಲ ಅನ್ನುವ ಪದದ ಅರ್ಥ ಹೀಗಿದೆ: ಮತ್ತೇರಿದ ಆನೆ, ಬುಸುಗುಡುವ ಸರ್ಪ ಅಥವಾ ಹೊಂಚು ಹಾಕಿ ಬಲಿತೆಗೆದುಕೊಳ್ಳಲು ಕಾದಿರುವ ಕ್ರೂರ ವ್ಯಾಘ್ರ!!!! ಈ ಅರ್ಥವನ್ನು ನೋಡಿ ಗಾಬರಿಯಾಗಬೇಡಿ. ಭಗವಂತ ವಿ+ಆ+ಲಾ. ಅಂದರೆ ಎಲ್ಲಾ ದೋಷಗಳನ್ನು ನಾಶ ಮಾಡುವವನು. ಪ್ರಳಯ ಕಾಲದಲ್ಲಿ ಎಲ್ಲವೂ ಅವನಲ್ಲಿ ಲೀನವಾಗುತ್ತವೆ. ಮೇಲ್ನೋಟಕ್ಕೆ ಪ್ರಳಯ ಒಂದು ಭಯಂಕರ ಕ್ರಿಯೆ. ಆದರೂ ಕೂಡಾ, ಈ ಕ್ರಿಯೆಯಲ್ಲಿ ಭಗವಂತ ಎಲ್ಲವನ್ನೂ ಪ್ರೀತಿಯಿಂದ ಸ್ವೀಕರಿಸಿ, ಜೀವಕ್ಕೆ ವಿಶ್ರಾಂತಿ ಕೊಟ್ಟು, ಮರುಸೃಷ್ಟಿ ಕಾಲದಲ್ಲಿ ಪುನಃ ಜೀವರನ್ನು ಈ ಪ್ರಪಂಚಕ್ಕೆ ಪ್ರೀತಿಯಿಂದ ಕಳುಹಿಸಿಕೊಡುತ್ತಾನೆ! ಇಂತಹ ಅದ್ಭುತವಾದ ಶಕ್ತಿ ಭಗವಂತ-ವ್ಯಾಲಃ.

೯೩)ಪ್ರತ್ಯಯಃ

ಪ್ರತ್ಯಯ ಎಂದರೆ ಜ್ಞಾನಸ್ವರೂಪನಾಗಿ, ಪ್ರತಿಯೊಂದನ್ನು ತಿಳಿದವ ಹಾಗೂ ಪ್ರತಿಯೊಂದರೊಳಗೂ ಇರುವವನು **(Omnipresence , omniscient)**

೯೪) ಸರ್ವದರ್ಶನಃ.

ಭಗವಂತ ವಿಶ್ವಚಕ್ಷು, ವಿಶ್ವತೋಮುಖ. ಆತ ಪ್ರತಿಯೊಂದನ್ನೂ ಕಣ್ಣಾರೆ ಕಾಣುತ್ತಿರುತ್ತಾನೆ. ಅವನಿಂದ ಯಾವುದನ್ನೂ ಮುಚ್ಚಿಡಲು ಸಾಧ್ಯವಿಲ್ಲ. ಸರ್ವ ವೇದ-ಶಾಸ್ತ್ರಗಳು ಯಾರನ್ನು ವರ್ಣಿಸುತ್ತವೋ ಅಂತಹ ಭಗವಂತ ಸರ್ವದರ್ಶನಃ.

ಅಜಃ ಸರ್ವೇಶ್ವರಃ ಸಿದ್ಧಃ ಸಿದ್ಧಿಃ ಸರ್ವಾದಿರಚ್ಯುತಃ ।
ವೃಷಾಕಪಿರಮೇಯಾತ್ಮಾ ಸರ್ವಯೋಗವಿನಿಸ್ಸೃತಃ ॥೨೪॥

೯೫)ಅಜಃ

ಅಜಃ ಅಂದರೆ ಯಾರಿಂದಲೂ ಹುಟ್ಟದವನು ಆದರೆ ಎಲ್ಲರಲ್ಲೂ ಹುಟ್ಟುವವನು ಎಂದರ್ಥ. ತದ್ವಿರುದ್ಧವಾದ ಅರ್ಥ ಎನ್ನುತೀರಾ? ಹೌದು, ಭಗವಂತ ಯಾರಿಂದಲೋ ಹುಟ್ಟಿ ಬರುವ ವಸ್ತುವಲ್ಲ. ಆದರೆ ಬಿಂಬ ರೂಪನಾಗಿ ಪ್ರತಿಯೊಂದು

ಗರ್ಭದಲ್ಲಿ ನೆಲೆಸಿ ಏಕ ಕಾಲದಲ್ಲಿ ಅನೇಕ ರೂಪಿಯಾಗಿ ಹುಟ್ಟುವವನು. ಗರ್ಭಿಣಿಯ ಹೊಟ್ಟೆ ಹಾಗೂ ದೇವರ ಗುಡಿಯಲ್ಲಿ ಮುಖ್ಯಮೂರ್ತಿ ಇರುವ ಸ್ಥಳ-ಇವೆರಡನ್ನೂ "ಗರ್ಭ" ಎನ್ನುವ ಏಕಪದದಿಂದ ಸಂಬೋಧಿಸುತ್ತಾರೆ (ಬೇರೆ ಪದ ಲಭ್ಯವಿಲ್ಲ). ದೇವಸ್ಥಾನದ ಗರ್ಭಗುಡಿಯಲ್ಲಿರುವ ಮೂರ್ತಿಯಲ್ಲಿ ಆಹ್ವಾನ ಮಾಡಿದಾಗ ದೇವರ ಆಗಮನವಾದರೆ, ಗರ್ಭಿಣಿಯ ಗರ್ಭದಲ್ಲಿ ಭಗವಂತ ಬಿಂಬರೂಪನಾಗಿ ನೆಲೆಸಿ ಜನಿಸುತ್ತಾನೆ. ಇಂತಹ ಭಗವಂತ ಅಜಃ .

೯೬)ಸರ್ವೇಶ್ವರಃ

ಯಾರು ತನ್ನನ್ನು ಭಕ್ತಿಯಿಂದ ಕರೆಯುತ್ತಾರೋ ಅಂತವರಿಗೆ ಸದಾಕಾಲ ಲಭ್ಯವಿರುವ, ಎಲ್ಲಾ ಈಶ್ವರರ-ಈಶ್ವರ ಸರ್ವೇಶ್ವರ.

೯೭)ಸಿದ್ಧಃ

ಈ ಜಗತ್ತಿನಲ್ಲಿರುವ ಎಲ್ಲಾ ಶಾಸ್ತ್ರ ಹಾಗೂ ವೇದಗಳು ಸರ್ವ ಸಿದ್ಧನಾದ ಭಗವಂತನನ್ನು ಹಾಗೂ ಅವನ ತತ್ವಗಳನ್ನು ತಿಳಿಸುತ್ತವೆ. ಈ ಎಲ್ಲಾ ವೇದ-ಶಾಸ್ತ್ರಗಳ ಮೂಲನಾಗಿರುವ, ಭಕ್ತರ ಹೃದಯನಿವಾಸಿ, ಪರಮಪುರುಷಾರ್ಥರೂಪ, ಸದಾ ಏಕ ರೂಪನಾಗಿರುವ ಭಗವಂತ ಸಿದ್ಧಃ.

೯೮)ಸಿದ್ಧಿಃ

ಸಮಸ್ತ ಪುರುಷಾರ್ಥ ಸಿದ್ಧಿ ಯಾರಿಂದ ಆಗುತ್ತದೋ ಅವನು ಸಿದ್ಧಿಃ. ಸಮಸ್ತ ಕಾರ್ಯಗಳ ಸಿದ್ಧಿದಾಯಕನಾದ ಭಗವಂತ ಸಿದ್ಧಿಃ.

೯೯)ಸರ್ವಾದಿಃ

ಎಲ್ಲವುದರ ಆದಿ, ಎಲ್ಲವುದರ ಮೊದಲು ಇರುವವ, ಹಾಗೂ ಎಲ್ಲವನ್ನೂ ಸ್ವೀಕರಿಸುವ, ಎಲ್ಲಕ್ಕೂ ಮೂಲ ಕಾರಣನಾದ ಭಗವಂತ ಸರ್ವಾದಿ.

ಸಹಸ್ರನಾಮ ವಿವರಣೆ-೧೦೦

೧೦೦)ಅಚ್ಯುತಃ

ಎಲ್ಲವನ್ನೂ ಸ್ವೀಕರಿಸಿ, ಎಲ್ಲವನ್ನೂ ನಾಶಮಾಡಿ(ಪ್ರಳಯ), ಯಾವುದೇ ಚ್ಯುತಿ ಇಲ್ಲದೇ ಅನಂತವಾಗಿ ಅಖಂಡವಾಗಿ ಇರುವ, ಎಂದೂ ಕುಂದದ ಗುಣ-ಕ್ರಿಯೆಗಳಿಂದ ನಿತ್ಯಪೂರ್ಣನಾಗಿರುವ ಭಗವಂತ ಅಚ್ಯುತಃ.

೧೦೧)ವೃಷಾಕಪಿಃ

ಮೇಲ್ನೋಟಕ್ಕೆ ವೃಷ+ಕಪಿ=ವೃಷಾಕಪಿ. ಅಂದರೆ ನಾವು ಬಾಯಾರಿ ಬಳಲಿದಾಗ ನಮ್ಮ ಪೀಪಾಸವನ್ನು ತಣಿಸುವವ.(ವೃಷ ಎಂದರೆ ಮಳೆ ಸುರಿಸುವವನು, ಕಪಿ (ಕಂ+ಪಾಯತೆ) -ಅಂದರೆ ನೀರು ಕುಡಿಸುವವನು).

ವೃಷಾ ಎಂದರೆ 'ಧರ್ಮ ಸ್ವರೂಪ'; ಈ ಪದ 'ನಮ್ಮ ಅಭೀಷ್ಟದ ಮಳೆ ಸುರಿಸುವವ' ಎನ್ನುವ ಅರ್ಥವನ್ನೂ ಕೂಡಾ ಕೊಡುತ್ತದೆ. ಅಕಪಿ ಎಂದರೆ ದುಃಖ ನಿವಾರಕ ಎಂದರ್ಥ. ಆದ್ದರಿಂದ ವೃಷಾಕಪಿ ಎಂದರೆ ನಮ್ಮ ಮೇಲೆ ಧರ್ಮದ ಮೂಲಕ ಅಭೀಷ್ಟದ ಮಳೆಗರೆದು, ನಮ್ಮ ಮನಸ್ಸಿನ ದುಃಖ ದುಗುಡವನ್ನು ನಿವಾರಿಸಿ, ಪೂರ್ಣಾನಂದವನ್ನು ಕೊಟ್ಟು, ತಾನೂ ಪೂರ್ಣಾನಂದವನ್ನು ಅನುಭವಿಸುವವನು ಎಂದರ್ಥ.

೧೦೨)ಅಮೇಯಾತ್ಮಾ

ನಮ್ಮ ಮನಸ್ಸು ಬುದ್ಧಿಗೆ ಒಂದು ಸೀಮೆ ಇದೆ. ಅದರಿಂದಾಚೆಗೆ ನಾವು ಗ್ರಹಿಸಲಾರೆವು. ಭಗವಂತನನ್ನು ನಮ್ಮ ಬುದ್ಧಿಯಿಂದ ಅಳೆಯಲು ಅಸಾಧ್ಯ. ಇಂತಹ ಭಗವಂತ ಅಮೇಯಾತ್ಮಾ. ಭಗವಂತನನ್ನು ನಮಗೆ ತಿಳಿಯಲು ಅಸಾಧ್ಯವಾದರೂ ಕೂಡಾ, ಆತ ಅಣುವಿನಲ್ಲಿ ಅಣುವಾಗಿ ನಮ್ಮೊಳಗೇ ತುಂಬಿದ್ದಾನೆ. ಆತ ಸೂಕ್ಷ್ಮಾತಿ ಸೂಕ್ಷ್ಮನೂ ಹೌದು. ನಮಗೆ ತಿಳಿದಿರುವುದು ಮಣ್ಣು, ನೀರು, ಬೆಂಕಿ, ಗಾಳಿ,ಆಕಾಶ, ಹಾಗೂ ಈ ಪಂಚಭೂತಗಳಿಂದಾದ ವಸ್ತುಗಳು ಮಾತ್ರ. ಆದರೆ ಭಗವಂತ ಇವೆಲ್ಲಕ್ಕಿಂತಲೂ ಬೇರೆ. ನಮ್ಮ ಜೀವಸ್ವರೂಪನಾದ ಭಗವಂತನ ಕಲ್ಪನೆ ನಮಗಿಲ್ಲ. ಭಗವಂತನನ್ನು ನಮ್ಮ ಒಳಗಣ್ಣಿನಿಂದ ನೋಡುವ ಪ್ರಯತ್ನ ಮಾಡಬೇಕೇ ಹೊರತು, ಹೊರ ಪ್ರಪಂಚದಲ್ಲಿ ಹುಡುಕಿ ಪ್ರಯೋಜನವಿಲ್ಲ.

೧೦೩)ಸರ್ವಯೋಗವಿನಿಸ್ಸೃತಃ

ಇಲ್ಲಿ ಯೋಗ ಎನ್ನುವ ಪದ ಸಂಬಂಧ ಅಥವಾ ಉಪಾಯ ಎನ್ನುವ ಅರ್ಥವನ್ನು ಕೊಡುತ್ತದೆ. ನಾವು ಎಲ್ಲಿ ಇರುತ್ತೇವೋ ಅದರ ಸಂಬಂಧದಲ್ಲಿರುತ್ತೇವೆ. ಭಗವಂತ ಎಲ್ಲಾ ಕಡೆ ಇದ್ದಾನೆ, ಆದರೆ ಅವನು ಯಾವುದಕ್ಕೂ ಅಂಟಿಕೊಂಡಿಲ್ಲ. ಇದಕ್ಕೆ ಉತ್ತಮ ಉದಾಹರಣೆ ಎಂದರೆ ಆಕಾಶ. ಮಣ್ಣು, ನೀರು, ಬೆಂಕಿ ಅಥವಾ ಗಾಳಿ-ಇದನ್ನು ಮುಟ್ಟಿದಾಗ ಅಂಟಿಕೊಳ್ಳುತ್ತದೆ. ಆದರೆ ಆಕಾಶ ಎಲ್ಲಾ ಕಡೆ ಇದ್ದರೂ ಕೂಡಾ, ಯಾವುದಕ್ಕೂ ಅಂಟಿಕೊಂಡಿಲ್ಲ. ಭಗವಂತ ಕೂಡಾ ಹೀಗೆ. ಆತ ಎಲ್ಲಾ ಕಡೆ ಇದ್ದರೂ ಕೂಡಾ ಯಾವುದನ್ನೂ ಅಂಟಿಸಿಕೊಳ್ಳದವನು. ಇಂತಹ ಭಗವಂತ ಸರ್ವಯೋಗವಿನಿಸ್ಸೃತಃ.

ವಸುರ್ವಸುಮನಾಃ ಸತ್ಯಃ ಸಮಾತ್ಮಾ ಸಮ್ಮಿತಃ ಸಮಃ ।
ಅಮೋಘಃ ಪುಂಡರೀಕಾಕ್ಷೋ ವೃಷಕರ್ಮಾ ವೃಷಾಕೃತಿಃ ॥೨೫॥

೧೦೪) ವಸುಃ

ನಿಘಂಟಿನಲ್ಲಿ ವಸು ಅನ್ನುವ ಪದಕ್ಕೆ ಸಿರಿ ಅಥವಾ ಸಂಪತ್ತು ಅನ್ನುವ ಅರ್ಥವಿದೆ. ಸಾಮಾನ್ಯವಾಗಿ ಸಿರಿ-ಸಂಪತ್ತು ಅಂದಾಗ ನಮಗೆ ದುಡ್ಡಿನ ನೆನಪಾಗುತ್ತದೆ. ಆದರೆ ಒಬ್ಬೊಬ್ಬರಿಗೆ ಒಂದೊಂದು ಸಂಪತ್ತು. ನಮಗೆ ಜೀವನದಲ್ಲಿ ಯಾವುದು ಸುಖ-ಸಂತೋಷವನ್ನು ಕೊಡುತ್ತದೋ ಅದನ್ನು ಸಂಪತ್ತು ಎಂದು ತಿಳಿಯುತ್ತೇವೆ. ಕೆಲವರಿಗೆ ಮಣ್ಣು ಸಂಪತ್ತಾಗಿ ಕಾಣಿಸಿದರೆ ಇನ್ನು ಕೆಲವರಿಗೆ ಹೆಣ್ಣು-ಹೊನ್ನು ಸಂಪತ್ತು ಎನ್ನುವ ಭ್ರಮೆ ಇರುತ್ತದೆ. ಆದರೆ ನಿಜವಾದ ಸಂಪತ್ತು ಯಾವುದು? ಯಾವುದನ್ನು ಹಂಚುವುದರಿಂದ ಬೆಳೆಯುತ್ತಾ ಹೋಗಿ ಸಾವಿರ-ಸಾವಿರ ವರ್ಷಗಳ ತನಕ ಅಜರಾಮರವಾಗಿ ಉಳಿಯುತ್ತದೋ ಅದು ನಿಜವಾದ ಸಂಪತ್ತು. ಅದೇ ಜ್ಞಾನ. ಯಾವುದೋ ವ್ಯರ್ಥವಾದ ಜ್ಞಾನ ಸಂಪತ್ತಲ್ಲ. ಯಾವುದು ನಮ್ಮನ್ನು ಉದ್ಧಾರ ಮಾಡುವ ಶಕ್ತಿಯೋ, ಅದರ ಜ್ಞಾನ ನಿಜವಾದ ಸಂಪತ್ತು. ಆದ್ದರಿಂದ ಜಗತ್ತಿನಲ್ಲಿ ಅತ್ಯಂತ ದೊಡ್ಡ ಸಂಪತ್ತು 'ಭಗವಂತನ ಜ್ಞಾನ'. ಇಂತಹ ಅಪರಿಮಿತ ಸಿರಿಯಾದ ಭಗವಂತ ವಸುಃ.

೧೦೫)ವಸುಮನಾಃ

ಇಲ್ಲಿ ವಸುಗಳು ಎಂದರೆ ಭಗವಂತನನ್ನು ಅರಿತವರು. ಮುಖ್ಯವಾಗಿ ದೇವತೆಗಳು ಹಾಗೂ ಯಾರು ತನ್ನ ಹೃದಯದಲ್ಲಿ ಭಗವಂತ ವಾಸವಾಗಿದ್ದಾನೆ ಎಂದು ತಿಳಿದಿದ್ದಾರೋ ಅವರು ವಸುಗಳು. ಪರಿಶುದ್ಧವಾದ ಮನಸ್ಸುಳ್ಳವರನ್ನೂ ಕೂಡಾ ವಸುಗಳು ಎನ್ನುತ್ತಾರೆ. ಆದ್ದರಿಂದ ಪರಿಶುದ್ಧವಾದ, ಸತ್ವಗುಣದಿಂದ, ಅನನ್ಯವಾಗಿ ಪ್ರಾರ್ಥಿಸುವ 'ವಸುಗಳಿಗೆ' ಕಾಣಿಸಿಕೊಳ್ಳುವ ಭಗವಂತ ವಸುಮನಾಃ.

೧೦೬)ಸತ್ಯಃ

ಸತ್ ಅನ್ನುವ ಪದಕ್ಕೆ ಅನೇಕ ಅರ್ಥಗಳಿವೆ. ಸರ್ವಸೃಷ್ಟ, ಸರ್ವ ನಿಯಾಮಕ, ಸರ್ವ ಸ್ಥಿತಿ ಕಾರಣ, ಸರ್ವ ಸಂಹಾರಕ ಇತ್ಯಾದಿ. ಅದೇ ರೀತಿ ಸತ್ ಅಂದರೆ ಜ್ಞಾನ-ಅಜ್ಞಾನ-ಬಂಧ-ಮೋಕ್ಷ. ಆದ್ದರಿಂದ ಸತ್ಯಃ ಎಂದರೆ ಸೃಷ್ಟಿಪ್ರದ, ಸ್ಥಿತಿಪ್ರದ, ಸಂಹಾರಪ್ರದ, ನಿಯಾಮಕ, ಜ್ಞಾನಪ್ರದ, ಅಜ್ಞಾನಪ್ರದ, ಬಂಧಪ್ರದ ಮತ್ತು ಮೋಕ್ಷಪ್ರದನಾದ ಭಗವಂತ. ಸೃಷ್ಟಿ-ಸ್ಥಿತಿ-ಸಂಹಾರ ನಿಯಾಮಕನಾಗಿ, ಜ್ಞಾನಾಜ್ಞಾನ-ಬಂಧ-ಮೋಕ್ಷಗಳಿಗೆ ಕಾರಣನಾಗಿರುವ, ಸದ್ಗುಣಸ್ವರೂಪ ಜ್ಞಾನಾನಂದಮಯನಾದ ಭಗವಂತ 'ಸತ್ಯಃ'.

೧೦೭) ಸಮಾತ್ಮಾ

ಭಗವಂತ 'ಸರ್ವೇಶು ಸಮಾತ್ಮಾ'. ಎಂದರೆ ಸರ್ವರನ್ನು ಸಮನಾಗಿ ತಾರತಮ್ಯ ಇಲ್ಲದೆ ಕಾಣುವವನು. ಈ ಪ್ರಪಂಚ ಒಂದು ತೋಟವಿದ್ದಂತೆ ಹಾಗೂ ಭಗವಂತ ಒಬ್ಬ ತೋಟಗಾರನಂತೆ. ಈ ಜೀವರು ಬೀಜಗಳು! ಬೀಜವನ್ನು ಮನೆಯೊಳಗಿಟ್ಟರೆ ಅದು ಫಲ ಕೊಡಲಾರದು. ಅದನ್ನು ಉತ್ತಿ-ಬಿತ್ತಿ ಪಾಲಿಸಿದಾಗ ಆ ಚಿಕ್ಕ ಬೀಜ ಹೆಮ್ಮರವಾಗಿ ಬೆಳೆಯುತ್ತದೆ ಮತ್ತು ತನ್ನ ಗುಣ ಸ್ವಭಾವದಂತೆ ಫಲವನ್ನು ಕೊಡುತ್ತದೆ. ಹುಣಸೆ ಹಣ್ಣು ಹುಳಿಯಾಗಿರುವುದಕ್ಕೆ ತೋಟಗಾರ ಕಾರಣನಲ್ಲ, ಅದರ ಗುಣ ಸ್ವಭಾವ ಕಾರಣ. ಅದೇ ರೀತಿ ಈ ಪ್ರಪಂಚದಲ್ಲಿ ಜೀವಸ್ವಭಾವಕ್ಕನುಗುಣವಾಗಿ ಬೇರೆ ಬೇರೆ ರೀತಿಯ ಜನರನ್ನು ಕಾಣುತ್ತೇವೆ. ಭಗವಂತ ಒಬ್ಬ ತೋಟಗಾರನಂತೆ ಪ್ರತಿಯೊಬ್ಬರನ್ನೂ ಪಾಲಿಸಿ ಪೋಷಿಸುತ್ತಾನೆ. ಜೀವರು ಭಗವಂತನ ಕೃಪೆಯಿಂದ ತನ್ನ ಜೀವ ಸ್ವಭಾವದಂತೆ, ತನ್ನ ಕರ್ಮಫಲದಂತೆ ಬೆಳೆಯುತ್ತಾರೆ. ಭಗವಂತ ಜೀವರಿಗೆ ಕೊಡುವುದು ಶಿಕ್ಷೆ ಅಲ್ಲ ಶಿಕ್ಷಣ. ಭಗವಂತ ತನ್ನ ಎಲ್ಲಾ ಅವತಾರಗಳಲ್ಲಿ ಎಲ್ಲಾ ಕ್ರಿಯೆಗಳಲ್ಲಿ ಸಮಾತ್ಮ, ಅದರಲ್ಲಿ ಅಂತರವಿಲ್ಲ. ಭಗವಂತ ಅಖಂಡ. ಆದರೆ ಆತನ ಅಭಿವ್ಯಕ್ತ ಮಾತ್ರ ಬೇರೆ ಬೇರೆಯಾಗಿ ಕಾಣುತ್ತದೆ. ಎಲ್ಲರಲ್ಲೂ ಇರುವ ಬಿಂಬ ಒಂದೇ, ಆದರೆ ಪ್ರತಿಬಿಂಬ ಬೇರೆಬೇರೆ. ಇರುವೆ ಒಳಗೆ ಇರುವ ಬಿಂಬ ರೂಪಿ ಭಗವಂತನಿಗೂ ಆನೆಯೊಳಗಿರುವ ಬಿಂಬ ರೂಪಿ ಭಗವಂತನಿಗೂ ಯಾವುದೇ ರೀತಿ ವ್ಯತ್ಯಾಸವಿಲ್ಲ,.ಇಂತಹ ಭಗವಂತ ಸಮಾತ್ಮಾ.

೧೦೮) ಸಮ್ಮಿತಃ (ಅಸಮ್ಮಿತಃ)

ಮೇಲೆ ಹೇಳಿದಂತೆ ಭಗವಂತ 'ಸಮಾತ್ಮಾ' ಎಂದು ಎಲ್ಲಾ ಜ್ಞಾನಿಗಳು ಬಲ್ಲರು. ಆದ್ದರಿಂದ ಆತ ಸಮ್ಮಿತಃ. ಅವನು ಎಲ್ಲಾ ಕಡೆ ಸಮನಾಗಿದ್ದರೂ ಕೂಡಾ ಆತನಿಗೆ ಸಮನಾದವರು ಇನ್ನೊಬ್ಬರಿಲ್ಲ. ಆದ್ದರಿಂದ ಆತ ಅಸಮ್ಮಿತಃ ಕೂಡಾ ಹೌದು!

೧೦೯)ಸಮಃ

ಸಮಃ ಅನ್ನುವ ಶಬ್ದ ಎಲ್ಲರೂ ಎಲ್ಲಾ ಭಾಷೆಗಳಲ್ಲಿ ಉಪಯೋಗಿಸುವ ಸರ್ವೇಸಾಮಾನ್ಯ ಶಬ್ದ. ಆದರೆ ಇದು ಭಗವಂತನ ನಾಮ ಎಂದು ಹೆಚ್ಚಿನವರಿಗೆ ತಿಳಿದಿಲ್ಲ. ಸಮ ಎಂದರೆ ಎಲ್ಲರನ್ನೂ ಏಕ ರೂಪದಲ್ಲಿ ನೋಡುವವ ಎನ್ನುವುದು ಎಲ್ಲರಿಗೂ ಹೊಳೆಯುವ ಅರ್ಥ. ಈ ಪದವನ್ನು ಒಡೆದರೆ 'ಸ' ಮತ್ತು 'ಮ' ಎನ್ನುವ ಅಪೂರ್ವ ಅರ್ಥವುಳ್ಳ ಸಂಕ್ಷಿಪ್ತ (Abbreviation)ಪದ ಕಾಣ ಸಿಗುತ್ತದೆ. 'ಸ' ಎಂದರೆ ಸಾರ, 'ಮ' ಎಂದರೆ ಜ್ಞಾನ ಅಥವಾ ಆನಂದ. ಆದ್ದರಿಂದ ಸಮ ಎಂದರೆ ಜ್ಞಾನಾನಂದ ಸ್ವರೂಪ ಎಂದರ್ಥ. ಈ ರೀತಿ ಪದಗಳನ್ನು ಒಡೆದಾಗ ವಿಶಿಷ್ಟ ಅರ್ಥ ಕೊಡುವ ಅಪೂರ್ವ ಭಾಷೆ ಸಂಸ್ಕೃತ. [ನೀವು ಕೆಲವು ಆಮಂತ್ರಣ ಪತ್ರಿಕೆಯಲ್ಲಿ 'ಸ-ಕುಟುಂಬ', 'ಸ-ಪರಿವಾರ' ಅನ್ನುವ ಪದವನ್ನು ನೋಡಿರಬಹುದು. ಇಲ್ಲಿ 'ಸ' ಎಂದರೆ ಸಹಿತ ಎಂದರ್ಥ]. ಇನ್ನು 'ಮಃ' ಎನ್ನುವ ಪದ ಮಾತೆ, ಮಾತು, ವಾಚ್ಯ, ಮಾನ ಅಥವಾ ಪ್ರಮಾಣ ಎನ್ನುವ ಹಲವು ಅರ್ಥವನ್ನೂ ಕೊಡುತ್ತದೆ. ಆದ್ದರಿಂದ ಸಮಃ ಎಂದರೆ ಸಮಸ್ತ ವೇದವಾಚ್ಯ, ಸಮಸ್ತ ಶಬ್ದವಾಚ್ಯ ಎಂದಾಗುತ್ತದೆ. ಇಂತಹ ಭಗವಂತನ ನಿಜವಾದ ಅನುಭವವಾಗದೇ ಅವನನ್ನು ಯಾವ

ಯುಕ್ತಿಯಿಂದಲೂ ತಿಳಿಯಲು ಸಾಧ್ಯವಿಲ್ಲ. ಒಮ್ಮೆ ಭಗವಂತನನ್ನು ತಿಳಿದ ಮೇಲೆ ಎಲ್ಲಾ ಯುಕ್ತಿಗಳು ಆತನನ್ನೇ ಹೇಳುತ್ತವೆ ಎನ್ನುವುದು ತಿಳಿಯುತ್ತದೆ. ಇಂತಹ ಭಗವಂತ ಯಾವಾಗಲೂ ಮಾತೆ ಲಕ್ಷ್ಮೀದೇವಿ ಸಮೇತನಾಗಿ ಇರುತ್ತಾನೆ. ಈ ಎಲ್ಲಾ ಕಾರಣದಿಂದಾಗಿ ಭಗವಂತ ಸಮಃ.

೧೧೦) ಅಮೋಘಃ

ಮೋಘ ಎಂದರೆ ವ್ಯರ್ಥ; ಅಮೋಘ ಎಂದರೆ ವ್ಯರ್ಥವಲ್ಲದ್ದು. ಯಾರ ಸಂಕಲ್ಪ ವ್ಯರ್ಥವಾಗುವುದಿಲ್ಲವೋ ಅವನು ಅಮೋಘ. ಭಗವಂತನ ಸಂಕಲ್ಪ ಎಂದೂ ವ್ಯರ್ಥವಾಗಲಾರದು. ಆತನ ಸಂಕಲ್ಪವನ್ನು ಯಾರಿಂದಲೂ ಬದಲಿಸಲು ಸಾಧ್ಯವಿಲ್ಲ. ಭಗವಂತ ಈ ಪ್ರಪಂಚವನ್ನು ಏಕೆ ಸೃಷ್ಟಿ ಮಾಡಿದ? ಅವನಿಗೆ ಇದರಿಂದ ಏನು ಪ್ರಯೋಜನ? ಈ ಪ್ರಪಂಚ ಭಗವಂತನಿಗೆ ಮೋಘ(ವ್ಯರ್ಥ). ಆದರೆ ನಮಗೆ ಅಮೋಘ! ಈ ಪ್ರಪಂಚವನ್ನು ಭಗವಂತ ಜೀವರಿಗಾಗಿಯೇ ಸೃಷ್ಟಿ ಮಾಡಿರುವುದು. ಇಂತಹ ಭಗವಂತ ಅಮೋಘ.

೧೧೧) ಪುಂಡರೀಕಾಕ್ಷಃ

ಅಮರಕೋಶದಲ್ಲಿ ಪುಂಡರೀಕಾಕ್ಷ ಎಂದರೆ ಬಿಳಿ ತಾವರೆಯಂತಹ ಕಣ್ಣುಳ್ಳವನು ಎಂದಿದೆ. ಆದರೆ ಪುಂಡರೀಕಾಕ್ಷ ಎಂದರೆ ಕೆಂದಾವರೆಯಂತಹ ಕಣ್ಣುಳ್ಳವನು ಎಂದರ್ಥ. ಭಗವಂತನ ಕಣ್ಣು ಯಾವಾಗಲೂ ಕೆಂದಾವರೆ ಎಸಳಿನಂತೆ ಅರಳಿ ನಳನಳಿಸುತ್ತಿರುತ್ತದೆ. ಸಾಮಾನ್ಯವಾಗಿ ನಮಗೆ ಅತ್ಯಂತ ಸಂತೋಷವಾದಾಗ ನಮ್ಮ ಕಣ್ಣು ಅರಳುತ್ತವೆ. ಆದರೆ ಭಗವಂತ ಸದಾ ಸಂತೋಷದ ಬುಗ್ಗೆ. ಭಗವಂತನ ಕೈಯಲ್ಲಿರುವ ನಾಲ್ಕು ಆಯುಧಗಳಲ್ಲಿ ಪದ್ಮ ಕೂಡಾ ಒಂದು. ಈ ನಾಲ್ಕು ಆಯುಧಗಳು(ಚಕ್ರ, ಶಂಖ, ಗದಾ, ಪದ್ಮ)ಕ್ರಮವಾಗಿ ಧರ್ಮ, ಅರ್ಥ, ಕಾಮದ ನಿಯಂತ್ರಣ ಹಾಗೂ ಮೋಕ್ಷದ ಸಂಕೇತ. ಆದ್ದರಿಂದ ಪುಂಡರೀಕ ಎಂದರೆ ಮೋಕ್ಷಪ್ರದಾಯಕ. ಭಗವಂತನ ಹೊಕ್ಕುಳಿನಿಂದ ಪದ್ಮಕೋಶ ರೂಪದ ಈ ಬ್ರಹ್ಮಾಂಡ ರಚನೆಯಾಗಿದೆ. ತನ್ನ ಹೃದಯಕಮಲದಲ್ಲಿ ಬ್ರಹ್ಮಾಂಡವನ್ನು ತುಂಬಿಕೊಂಡಿರುವ ಭಗವಂತ ಪುಂಡರೀಕಾಕ್ಷ.

೧೧೨) ವೃಷಕರ್ಮಾ

ಭಗವಂತನ ಈ ನಾಮವನ್ನು ವಿಶ್ಲೇಷಿಸುವ ಮೊದಲು ಭಗವದ್ಗೀತೆಯ ಈ ಕೆಳಗಿನ ಶ್ಲೋಕವನ್ನು ಒಮ್ಮೆ ನೋಡೋಣ.

ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾऽऽತ್ಮಾನಾಂ ಸೃಜಾಮ್ಯಹಮ್ । (ಅ ೪- ಶ್ಲೋ ೭)
ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥ (ಅ ೪- ಶ್ಲೋ ೮)

ಧರ್ಮನಾಶವಾದಾಗ, ಧರ್ಮದ ಉದ್ಧಾರಕ್ಕಾಗಿ; ಸಜ್ಜನರನ್ನು ರಕ್ಷಿಸಿ, ದುಷ್ಟರನ್ನು ಶಿಕ್ಷಿಸಿ, ಧರ್ಮ ಸಂಸ್ಥಾಪನೆ ಮಾಡುಲು ಪದೇ ಪದೇ ಅವತರಿಸಿಬರುತ್ತೇನೆ ಎನ್ನುವುದು ಈ ಶ್ಲೋಕದ ಮುಖ್ಯಾರ್ಥ.

ವೃಷ ಎಂದರೆ ಧರ್ಮ. ವೃಷಕರ್ಮಾ ಎಂದರೆ ಧರ್ಮಕ್ಕಾಗಿ ಕರ್ಮ ಮಾಡುವ ಭಗವಂತ. ಧರ್ಮ ಸಂಸ್ಥಾಪನೆಗಾಗಿ ಪದೇ ಪದೇ ಅವತರಿಸಿಬರುವುದು ಭಗವಂತನ ಕರ್ಮ. ಈ ರೀತಿ ಅವತರಿಸಿ ಬಂದು ಭಕ್ತಕೋಟಿಯ ಅಭೀಷ್ಟವನ್ನು ಪೂರೈಸಿ ಧರ್ಮದ ರಕ್ಷಣೆ ಮಾಡುವ ಭಗವಂತ ವೃಷಕರ್ಮಾ.

೧೧೩) ವೃಷಾಕೃತಿಃ

ಮೇಲೆ ಹೇಳಿದಂತೆ ಧರ್ಮದ ರಕ್ಷಣೆಗಾಗಿ ಭಗವಂತ ಭೂಮಿಯ ಮೇಲೆ ಅವತರಿಸಿ ಬರುತ್ತಾನೆ. ಈ ರೀತಿ ಅವತರಿಸುವಾಗ ಆತ ನಾನಾ ಆಕೃತಿಗಳಲ್ಲಿ ಧರೆಗಿಳಿದು ಬರುತ್ತಾನೆ. ಹೀಗೆ ಅನೇಕ ಆಕೃತಿಯೊಂದಿಗೆ ಅವತರಿಸುವ

ಭಗವಂತ ವೃಷಾಕೃತಿ. ಆತ ಧರಿಸುವ ಎಲ್ಲಾ ಆಕೃತಿಗಳು ಆತನ ಭಕ್ತಕೋಟಿಯ ಅಭೀಷ್ಟಕ್ಕೆ ತಕ್ಕನಾಗಿರುತ್ತದೆ. ಭಕ್ತರ ಕೋರಿಕೆಯಂತೆ ವಿಶಿಷ್ಟ ಆಕೃತಿಯನ್ನು ಧರಿಸುವ ಭಗವಂತ ವೃಷಾಕೃತಿಃ

**ರುದ್ರೋ ಬಹುಶಿರಾ ಬಭ್ರುರ್ವಿಶ್ವಯೋನಿಃ ಶುಚಿಶ್ರವಾಃ ।**
**ಅಮೃತಃ ಶಾಶ್ವತಃ ಸ್ಥಾಣುರ್ವರಾರೋಹೋ ಮಹಾತಪಾಃ ॥೨೬॥**

೧೧೪) ರುದ್ರಃ

ರುದ್ರ ಎನ್ನುವ ಪದ ಮೇಲ್ನೋಟಕ್ಕೆ ದುಃಖ ಕೊಡುವವನು, ಸುಡುವವನು ಎನ್ನುವ ಅರ್ಥವನ್ನು ಕೊಡುತ್ತದೆ. ವೇದಗಳಲ್ಲಿರುವ ರುದ್ರಸೂಕ್ತಗಳಿಗೆ ಸಾಯಣರು ಅರ್ಥ ಬರೆಯುವಾಗ ರುದ್ರ ಎಂದರೆ ಅಗ್ನಿ ಎಂದು ಬರೆಯುತ್ತಾರೆ. ಮುಟ್ಟಿದರೆ ಕಣ್ಣೀರು ಬರುವುದು ಪಂಚಭೂತಗಳಲ್ಲಿ ಅಗ್ನಿಯಿಂದ ಮಾತ್ರ. ಆದ್ದರಿಂದ ಅಗ್ನಿ ಕೂಡಾ ರುದ್ರ. ಆದರೆ ಭಗವಂತ ಏಕೆ ದುಃಖ ಕೊಡುತ್ತಾನೆ? ಭಗವಂತ ದುಃಖ ಕೊಡುವುದು ಪಾಪಿಗಳಿಗೆ ಮಾತ್ರ. ದುಃಖ ಕೊಡುವ ಉದ್ದೇಶ ಶಿಕ್ಷಣ. ನಮಗೆ ಕಷ್ಟ ಬಂದರೆ ಅದರ ಹಿಂದೆ ಭಗವಂತನ ಮಹಾ ಕಾರುಣ್ಯ ಅಡಗಿದೆ ಎಂದು ನಾವು ತಿಳಿದಿರಬೇಕು.

ಇನ್ನು ಈ ಪದವನ್ನು ಒಡೆದು ನೋಡಿದಾಗ ರುಕ್+ದ್ರಾ; ಇಲ್ಲಿ 'ರುಕ್' ಎಂದರೆ ಭವರೋಗ, ಹಾಗೂ 'ದ್ರಾ' ಎಂದರೆ ನಾಶಕ ಅಥವಾ ಪಾರುಮಾಡುವವನು ಎಂದರ್ಥ. ಆದ್ದರಿಂದ ರುದ್ರ ಎಂದರೆ ಭವರೋಗ ನಾಶಕ. ಈ ನಾಮವನ್ನು ನಾವು ರುತ್+ದ್ರಾ ಎಂದೂ ಒಡೆದು ಅರ್ಥೈಸಬಹುದು. ಇಲ್ಲಿ ರುತ್ ಎಂದರೆ ದುಃಖ. ಆದ್ದರಿಂದ ರುದ್ರ ಅಂದರೆ ದುಃಖನಾಶಕ.

೧೧೫) ಬಹುಶಿರಾಃ

'ಸಹಸ್ರ ಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ ಎಂದು ಭಗವಂತನನ್ನು ಪುರುಷಸೂಕ್ತದಲ್ಲಿ ವರ್ಣಿಸಿದ್ದಾರೆ. ಇಲ್ಲಿ ಬಹುಶಿರ ಎಂದರೆ ಸಹಸ್ರ-ಸಹಸ್ರ ಶಿರಸ್ಸನ್ನು ಹೊಂದಿರುವವನು ಎಂದರ್ಥ.[ಭಗವದ್ಗೀತೆಯ ವಿಶ್ವರೂಪ ದರ್ಶನದಲ್ಲಿ ಈ ವರ್ಣನೆ ಇದೆ] ಈ ಹಿಂದೆ ಹೇಳಿದಂತೆ ಭಗವಂತ ಬಿಂಬ ರೂಪಿಯಾಗಿ ಪ್ರತಿಯೊಂದು ಜೀವರಲ್ಲಿ ತುಂಬಿದ್ದಾನೆ- ಆದ್ದರಿಂದ ಆತ ಬಹುಶಿರಾ.

ತಲೆ ಐದು ಶ್ರೀಗಳಿಗೆ (ಚಕ್ಷು-ಕಣ್ಣು, ಶ್ರೋತ್ರ-ಕಿವಿ, ಮನಃ-ಮನಸ್ಸು, ವಾಕ್-ಮಾತು, ಪ್ರಾಣ-ಉಸಿರು) ಆಶ್ರಯವಾಗಿರುವುದರಿಂದ ಅದನ್ನು ಶಿರಸ್ಸು ಎನ್ನುತ್ತಾರೆ. ಭಗವಂತ ಸರ್ವಾಶ್ರಯದಾತ ಆದ್ದರಿಂದ ಆತ ಬಹುಶಿರಾ.

೧೧೬) ಬಭ್ರುಃ

ಈ ನಾಮ ಭಗವಂತನ ಚಿದಾನಂದ ಸ್ವರೂಪವನ್ನು ಹೇಳುತ್ತದೆ. ಭಗವಂತ ಉದಿಸುವ ಸೂರ್ಯನಂತೆ ನಸುಗೆಂಪು ಬಣ್ಣದವನು; ಆತ ನೀಲಮೇಘಶ್ಯಾಮ. ಸಾಮಾನ್ಯವಾಗಿ ದೇವಸ್ಥಾನಗಳಲ್ಲಿ ಮೂರ್ತಿ ಕಪ್ಪಗಿದ್ದು(ನೀಲ), ಪ್ರಭಾವಳಿ ಚಿನ್ನದಿಂದ ಮಾಡಿರುತ್ತಾರೆ. ಇಲ್ಲಿ ನೀಲ ಅಘಾದತೆಯನ್ನೂ, ಅನಂತತೆಯನ್ನೂ ಸೂಚಿಸುತ್ತದೆ. ನಸುಗೆಂಪು ಜ್ಞಾನಾನಂದದ ಸಂಕೇತ. ಬಭ್ರು ಎನ್ನುವ ಪದ ಬಲಸ್ವರೂಪ(ಬ), ಪೂರ್ಣಕಾಮ(ಭ್ರು-ಸರ್ವ ಕಾಮನೆಗಳನ್ನು ಈಡೇರಿಸುವವನು)ಎನ್ನುವ ಅರ್ಥವನ್ನೂ ಕೊಡುತ್ತದೆ. ಇಂತಹ ಅಗಾಧ, ಅನಂತ, ಜ್ಞಾನಾನಂದಮಯ, ಬಲಸ್ವರೂಪ ಮತ್ತು ಪೂರ್ಣಕಾಮನಾದ ಭಗವಂತ ಬಭ್ರುಃ.

೧೧೭) ವಿಶ್ವಯೋನಿಃ

ಸಂಸ್ಕೃತದಲ್ಲಿ ಯೋನಿ ಎಂದರೆ ಕಾರಣಕರ್ತ. ಇಡೀ ವಿಶ್ವಕ್ಕೆ ಕಾರಣಪುರುಷನಾದ, ಜಗತ್ತಿನ ತಾಯಿ-ತಂದೆ ಭಗವಂತ ವಿಶ್ವಯೋನಿ.

೧೧೮) ಶುಚಿಶ್ರವಾಃ

ಶ್ರವಸ್ಸು ಎಂದರೆ ಕೀರ್ತಿ. ಭಗವಂತ ಪುಣ್ಯಕೀರ್ತಿ. ಪವಿತ್ರವಾದ ಕೀರ್ತಿಯುಳ್ಳ ಭಗವಂತನನ್ನು ಎಲ್ಲರೂ ಕೀರ್ತನೆ ಮಾಡುತ್ತಾರೆ. ಭಗವಂತನ ಗುಣಕೀರ್ತನ ಶ್ರವಣದಿಂದ ನಾವು ಪವಿತ್ರವಾಗುತ್ತೇವೆ. ಇಂತಹ ಪವಿತ್ರವಾದ ಹಾಗೂ ನಮ್ಮನ್ನು ಪವಿತ್ರ ಮಾಡುವ ಭಗವಂತ ಶುಚಿಶ್ರವಾಃ. ಭಗವಂತ ಪವಿತ್ರವಾದ ಹೆಸರುಳ್ಳವ. ಆತನ ನಾಮದಲ್ಲೇ ಅಪರಿಮಿತ ಬಲವಿದೆ. ಇದಕ್ಕಾಗಿ ದಾಸರು 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವಿದ್ದರೆ ಸಾಕೋ' ಎಂದು ಹಾಡಿರುವುದು.

೧೧೯ ) ಅಮೃತಃ

ಅಮೃತಃ ಅಂದಾಗ ನಮಗೆ ತಕ್ಷಣ ಹೊಳೆಯುವುದು 'ಎಂದೆಂದೂ ಸಾವಿಲ್ಲದವರು' ಎನ್ನುವ ಅರ್ಥ. ಸಾಮಾನ್ಯವಾಗಿ ಸಂಸ್ಕೃತದಲ್ಲಿ ಮನುಷ್ಯರನ್ನು ಮರ್ತ್ಯರು ಎಂದು ಕರೆಯುತ್ತಾರೆ. ಅಂದರೆ ಒಂದು ದಿನ ಸಾಯುವವರು ಎಂದರ್ಥ. ಈ ಸಾವಿನಲ್ಲಿ ನಾಲ್ಕು ವಿಧ.

೧. ಸ್ವರೂಪ ನಾಶ: ಉದಾಹರಣೆಗೆ ಮಣ್ಣಿನಿಂದ ಮಾಡಿದ ಮಡಿಕೆ ಕೈಜಾರಿ ಬಿದ್ದಾಗ ಅದರ ಸ್ವರೂಪವಾದ ಆಕಾರ ನಾಶವಾಗುತ್ತದೆ.

೨. ದೇಹ ನಾಶ: ಅಂದರೆ ನಮ್ಮ ದೇಹದಿಂದ ಪ್ರಾಣ ಪಕ್ಷಿ ಹಾರಿ ಹೋದ ಮೇಲೆ ನಮ್ಮ ದೇಹ ನಾಶವಾಗುತ್ತದೆ.

೩. ದುಃಖ ಪ್ರಾಪ್ತಿ: ದುಃಖ ಕೂಡಾ ಒಂದು ರೀತಿಯ ಸಾವು.

೪. ಅಪೂರ್ಣತೆ (Imperfection is death)

ಆದರೆ ಭಗವಂತ ಈ ನಾಲ್ಕು ರೀತಿಯ ನಾಶವಿಲ್ಲದ ನಿತ್ಯ ಸ್ವರೂಪ. ಆದ್ದರಿಂದ ಆತ ಅಮೃತ. ಉಪನಿಷತ್ತುಗಳು ಹೇಳುವಂತೆ ಭಗವಂತನಿಗೆ ಮೂರು ಸ್ಥಾನಗಳಿವೆ. ಅಮೃತ, ಕ್ಷೇಮ ಹಾಗೂ ಅಭಯ. ಇಂತಹ ಅಮೃತ ಸ್ಥಾನದಲ್ಲಿರುವ ಭಗವಂತ ಅಮೃತಃ. ದೇವತೆಗಳ ಆಯುಸ್ಸು ಅತಿದೀರ್ಘ. ಅದರಲ್ಲೂ ವಾಯುದೇವರ ಮತ್ತು ಚತುರ್ಮುಖ ಬ್ರಹ್ಮನ ಆಯುಸ್ಸು ಮತ್ತೂ ದೀರ್ಘ. ಈ ರೀತಿ ಪ್ರಾಣದೇವರಿಗೆ, ಚತುರ್ಮುಖನಿಗೆ, ದೇವತೆಗಳಿಗೆ, ಮುಕ್ತಿ ಪಡೆದ ಜೀವರಿಗೆ, ಅಮರತ್ವವನ್ನು ಕರುಣಿಸಿದ, ಲಕ್ಷ್ಮೀಪತಿ ಭಗವಂತ ಅಮೃತಃ.

೧೨೦)ಶಾಶ್ವತಸ್ಥಾಣು

ಶಾಶ್ವತ ಎಂದರೆ ಎಂದೆಂದೂ ಬದಲಾವಣೆ ಹೊಂದದೆ, ಒಂದೇ ರೀತಿಯಾಗಿ ಇರುವವನು ಎಂದರ್ಥ. ಸ್ಥಾಣು ಎಂದರೆ ಸ್ಥಿರ. ನಮಗೆ ಬಾಲ್ಯ, ಯೌವನ, ಪ್ರೌಢ ಹಾಗೂ ವೃದ್ಧಾಪ್ಯ, ಹೀಗೆ ಒಂದು ರೂಪದಲ್ಲಿ ಅನೇಕ ಬದಲಾವಣೆಗಳಿವೆ. ಆದರೆ ಭಗವಂತ ಬಿಂಬ ರೂಪನಾಗಿ ಎಲ್ಲರ ಒಳಗೂ-ಹೊರಗೂ ತುಂಬಿದ್ದರೂ ಸಹ, ಆತನಿಗೆ ಯಾವುದೇ ತರಹದ ವಿಕಾರವಿಲ್ಲ. ಅವನು ಶಾಶ್ವತ ಮತ್ತು ಸ್ಥಿರ(ಸ್ಥಾಣು).

೧೨೧)ವರಾರೋಹಃ

ಯಾರು ತನ್ನ ಸಾಧನೆ ಮೂಲಕ ಮೋಕ್ಷಕ್ಕೆ ಅರ್ಹರಾಗುತ್ತಾರೋ, ಅಂತವರನ್ನು ಮೇಲಕ್ಕೆತ್ತುವವ ವರಾರೋಹ. ವರಂ-ಆರೋಹತಿ- ಅಂದರೆ ಯಾರು ಯಾವ ಪದವಿಗೆ ಅರ್ಹರೋ, ಅಂತವರನ್ನು ಆ ಪದವಿಗೇರಿಸುವವ. ಬ್ರಹ್ಮನಿಗೆ ಸತ್ಯಲೋಕದ ಪದವಿ, ಇಂದ್ರನಿಗೆ ದೇವಲೋಕದ ಪದವಿಯನ್ನು ಕರುಣಿಸಿ, ಸ್ವತಃ ತಾನು ಲಕ್ಷ್ಮೀಸಮೇತನಾಗಿ ನಿತ್ಯಲೋಕದ ಅಧಿಪತಿ ಎನಿಸಿರುವ ಭಗವಂತ ವರಾರೋಹ.

೧೨೨)ಮಹಾತಪಾಃ

ಯಾವುದೇ ವಿಷಯವನ್ನು ಆಳವಾಗಿ ಚಿಂತಿಸಿ ತಿಳಿಯುವುದು ತಪಸ್ಸು. ಪ್ರತಿಯೊಬ್ಬರ ಆವಿಷ್ಕಾರ ಅವರ ತಪಸ್ಸಿನ ಫಲ. ತಪಸ್ಸಿಗೆ ವೇಷ ಮುಖ್ಯವಲ್ಲ, ಆದರೆ ಆಳವಾದ ಚಿಂತನೆ ಅತ್ಯಗತ್ಯ. ಕಾಮ-ಕ್ರೋಧಗಳನ್ನು ಗೆದ್ದು, ಪ್ರಶಾಂತಚಿತ್ತದಿಂದ, ವಿಷಯವನ್ನು ಆಳವಾದ ಚಿಂತನೆ ಮೂಲಕ ತಿಳಿದುಕೊಳ್ಳುವುದು ನಿಜವಾದ ತಪಸ್ಸು. ಸಾಮಾನ್ಯವಾಗಿ ಕಾಮವನ್ನು ಗೆಲ್ಲುವುದು ಸುಲಭ. ಆದರೆ ಕ್ರೋಧವನ್ನು ಗೆಲ್ಲುವುದು ತುಂಬಾ ಕಷ್ಟ. ನಮಗೆ ಕೋಪ ಬರಲು ಕಾರಣ ನಮ್ಮಲ್ಲಿ ಹುದುಗಿರುವ ಅಪೇಕ್ಷೆ; ಕಳೆದುಕೊಳ್ಳುತ್ತೇನೆ ಎನ್ನುವ ಭಯ. ಮಹಾನ್ ಋಷಿ ಮುನಿಗಳೂ ಕೋಪವನ್ನು ಗೆಲ್ಲಲಿಲ್ಲ. ಉದಾಹರಣೆಗೆ ವಿಶ್ವಾಮಿತ್ರ. ಮೇನಕೆಯ ಪ್ರೇಮ ಪಾಶದಿಂದ ಹೊರಬಂದ ವಿಶ್ವಾಮಿತ್ರ ಪುನಃ ತಪಸ್ಸು ಮಾಡುತ್ತಾನೆ. ಆಗ ರಂಬೆ ಆತನ ತಪಸ್ಸನ್ನು ಕೆಡಿಸಲು ಬರುತ್ತಾಳೆ. ಸಿಟ್ಟಿಗೆದ್ದ ವಿಶ್ವಾಮಿತ್ರ "ನೀನು ಕಲ್ಲಾಗು" ಎಂದು ಆಕೆಗೆ ಶಾಪ ಕೊಡುತ್ತಾನೆ. ಇಲ್ಲಿ ಆತ ಕಾಮಕ್ಕೆ ಸಮನಾದ ಕ್ರೋಧವನ್ನು ಗೆಲ್ಲದೇ ಸೋಲುವುದನ್ನು ಕಾಣುತ್ತೇವೆ. ಭಗವಂತ ನಿಜವಾದ ತಪಸ್ಸು ಹೇಗಿರಬೇಕು ಎನ್ನುವುದನ್ನು ಸ್ವತಃ ಲೋಕಕ್ಕೆ ತೋರಿಸಿರುವ ಘಟನೆ ನಮಗೆ ತಿಳಿದಿದೆ. ಧರ್ಮ ಮತ್ತು ಮೂರ್ತಿಯ ಮಕ್ಕಳಾದ ನರ-ನಾರಾಯಣರ ದೀರ್ಘ ತಪಸ್ಸು ಎಲ್ಲಾ ಋಷಿ-ಮುನಿಗಳಿಗೆ ಭಗವಂತ ತೋರಿಸಿಕೊಟ್ಟ ಒಂದು ಅಮೂಲ್ಯ ದೃಷ್ಟಾಂತ. ನರ-ನಾರಾಯಣರ ತಪಸ್ಸನ್ನು ಕೆಡಿಸಲು ಬಂದ ತಿಲೋತ್ತಮೆಯನ್ನು, ಆದರದಿಂದ ಸತ್ಕರಿಸಿದ ನಾರಾಯಣ, ತನ್ನ ತೊಡೆಯಿಂದ ಊರ್ವಶಿಯನ್ನು ಸೃಷ್ಟಿ ಮಾಡಿ, ಇಂದ್ರನಿಗೆ ಕಾಣಿಕೆಯಾಗಿ ಕಳುಹಿಸುತ್ತಾನೆ. ಕಾಮ ಮತ್ತು ಕ್ರೋಧವನ್ನು ಸಂಪೂರ್ಣ ಗೆದ್ದು, ತಪಸ್ಸಿನ ಮೂಲಕ ನಾವು ಕಂಡುಕೊಳ್ಳುವ ಪರಬ್ರಹ್ಮಶಕ್ತಿಯಾದ ಭಗವಂತ ಮಹಾತಪಾಃ.

ತಪಸ್ಸಿನ ಅಭಿಮಾನಿ ದೇವತೆ ಶಿವ(ಹರ). ಹರಿ-ಹರ ಶಕ್ತಿಗಳು ಹಾಲಿನಲ್ಲಿ ಬೆಣ್ಣೆ ಇರುವಂತೆ. ಶಿವಶಕ್ತಿ ಭಗವಂತನ ಹೃದಯದಿಂದ ಆವಿಷ್ಕಾರವಾಗಿರುವುದು. ಇಂತಹ ಹಿರಿಯ ಅರಿವಿನಮೂರ್ತಿ, ಮಹಾಪ್ರತಾಪಶಾಲಿ ಭಗವಂತನನ್ನು ಮಹಾತಪಾಃ ಎನ್ನುತ್ತೇವೆ.

**ಸರ್ವಗಃ ಸರ್ವವಿದ್ಭಾನುರ್ವಿಷ್ವಕ್ಸೇನೋ ಜನಾರ್ದನಃ ।**
**ವೇದೋ ವೇದವಿದವ್ಯಂಗೋ ವೇದಾಂಗೋ ವೇದವಿತ್ ಕವಿಃ ॥೨೭॥**

೧೨೩) ಸರ್ವಗಃ

ಸರ್ವಗಃ ಎಂದರೆ ಎಲ್ಲಾ ಕಡೆ ಇರುವ, ಪರಿಪೂರ್ಣ ಜ್ಞಾನವುಳ್ಳ, ಎಲ್ಲವನ್ನೂ ತಿಳಿದಿರುವ, ಕೊನೆಗೆ ಎಲ್ಲವನ್ನೂ ಸಂಹಾರ ಮಾಡುವ ಭಗವಂತ.

೧೨೪) ಸರ್ವವಿದ್ಭಾನುಃ

ಸರ್ವವಿತ್+ಭಾನು. ಇಲ್ಲಿ ಸರ್ವವಿತ್ ಎಂದರೆ ಎಲ್ಲವನ್ನೂ ಪಡೆದ-ಸತ್ಯಸಂಕಲ್ಪ-ಆಪ್ತಕಾಮ. ಭಾನು ಎಂದರೆ ಎಲ್ಲಾ ಬೆಳಕನ್ನು ಬೆಳಗಿಸುವ ಮೂಲ ಕಾರಣನಾದ ಸೂರ್ಯ. ಸರ್ವವಿದ್ಭಾನುಃ ಎಂದರೆ ಸತ್ಯಸಂಕಲ್ಪ ಹಾಗೂ ಎಲ್ಲಾ ಬೆಳಕನ್ನು ಪ್ರೇರೇಪಿಸುವ ಮೂಲ ಬೆಳಕು.

೧೨೫) ವಿಷ್ವಕ್ಸೇನಃ

ಭಗವಂತನ ಕಣ್ಣು ತಪ್ಪಿಸಿ ಏನನ್ನೂ ಮಾಡಲು ಸಾಧ್ಯವಿಲ್ಲ. ಆತನ ಸೇನೆ ಪ್ರಪಂಚದ ಮೂಲೆ ಮೂಲೆಗಳಲ್ಲಿ, ಅಂಡಾಂಡ-ಪಿಂಡಾಂಡಗಳಲ್ಲಿ, ಇಡೀ ಬ್ರಹ್ಮಾಂಡದಲ್ಲಿ ವ್ಯಾಪಿಸಿ ನಿಂತಿದೆ. ಭಗವಂತ ನಮ್ಮ ಹೃತ್ಕಮಲದಲ್ಲಿ ನೆಲೆಸಿದ್ದಾನೆ ಹಾಗೂ ಆತನ ಸುತ್ತ ಅವನ ಪರಿವಾರ ದೇವತೆಗಳು ವ್ಯಾಪಿಸಿದ್ದಾರೆ. ಕಣ್ಣಿನಲ್ಲಿ ಸೂರ್ಯ, ಕಿವಿಯಲ್ಲಿ ಚಂದ್ರ, ಮೂಗಿನಲ್ಲಿ ವಾಯು, ನಾಲಿಗೆಯಲ್ಲಿ ವರುಣ, ಬಾಯಲ್ಲಿ ಅಗ್ನಿ, ಕೈಯಲ್ಲಿ ಇಂದ್ರ, ಕಾಲಲ್ಲಿ ಜಯಂತ, ಹೀಗೆ ಸಮಸ್ತ ಇಂದ್ರಿಯಗಳಲ್ಲಿ ಭಗವಂತನ ಸೇನೆ ತುಂಬಿದೆ. ಪಂಚಭೂತಗಳಿಂದ ಮತ್ತು ಪಂಚ ಕೋಶಗಳಿಂದಾದ

(ಅನ್ನಮಯ ಕೋಶ, ಪ್ರಾಣಮಯ ಕೋಶ ,ವಿಜ್ಞಾನಮಯ ಕೋಶ, ಮನೋಮಯ ಕೋಶ ಹಾಗೂ ಆನಂದಮಯ ಕೋಶ) ನಮ್ಮ ದೇಹದಲ್ಲಿ ನೆಲೆಸಿರುವ ಎಲ್ಲಾ ದೇವತೆಗಳನ್ನು, ಪುಂಡರೀಕಾಕ್ಷನಾಗಿ, ಶ್ರೀಲಕ್ಷ್ಮೀ ಜೊತೆಗಿದ್ದು, ಆ ಭಗವಂತ ನಿಯಂತ್ರಿಸುತ್ತಿರುತ್ತಾನೆ. ಸೂರ್ಯಮಂಡಲದಲ್ಲಿದ್ದು, ಸೂರ್ಯ ಕಿರಣದೊಂದಿಗೆ ಈ ಬ್ರಹ್ಮಾಂಡದಲ್ಲಿ ವ್ಯಾಪಿಸಿರುವ ಭಗವಂತನನ್ನು ವಿಷ್ವಕ್ಸೇನ ಎನ್ನುತ್ತಾರೆ.

೧೨೬) ಜನಾರ್ದನಃ

ಜನ+ಅರ್ದನ-ಜನಾರ್ದನ. ಇಲ್ಲಿ ಅರ್ದನ ಎನ್ನುವ ಪದ ಕೊನೆಗೊಳಿಸುವವನು ಎನ್ನುವ ಅರ್ಥವನ್ನು ಕೊಡುತ್ತದೆ. 'ಜನ' ಅನ್ನುವ ಪದಕ್ಕೆ ಅನೇಕ ಅರ್ಥಗಳಿವೆ:

೧)ಜನ ಎಂದರೆ ದುರ್ಜನ. ಜನಾರ್ದನ ಎಂದರೆ ದುರ್ಜನ ನಾಶಕ.

೨)ಜನ ಎಂದರೆ ಜನನ ಉಳ್ಳವರು. ಜನಾರ್ದನ ಎಂದರೆ ಜನನ ಮುಕ್ತಗೊಳಿಸುವವನು. ಅಂದರೆ ಮುಕ್ತಿಪ್ರದಾಯಕ.

೩)ಜನ ಎಂದರೆ ದೇಹ. ಜನಾರ್ದನ ಎಂದರೆ ಜೀವರಿಗೆ ದೇಹದಿಂದ ಮುಕ್ತಿ ಕೊಡುವವನು[ಮೋಕ್ಷಪ್ರದ].

೪)ಜನ ಎಂದರೆ ಸಜ್ಜನ. ಜನಾರ್ದನ ಎಂದರೆ ಸಜ್ಜನರ ಪ್ರಾರ್ಥನೆ ಸ್ವೀಕರಿಸಿ ಅವರ ಅಭೀಷ್ಟವನ್ನು ಪೂರೈಸುವವನು.

೧೨೭) ವೇದಃ

ಭಗವಂತ ಸಮಸ್ತ ವೇದಗಳಿಂದ ಪ್ರತಿಪಾದ್ಯನಾದವನು. ಅವನು ಅನಾದಿನಿತ್ಯ, ಎಲ್ಲವನ್ನೂ ತಿಳಿದವನು, ಎಲ್ಲವನ್ನೂ ನಮಗೆ ತಿಳಿಯುವಂತೆ ಮಾಡುವವನು. ನಮಗೆ ಜ್ಞಾನದ ಜೊತೆಗೆ ಸ್ಮರಣಶಕ್ತಿ ದಯಪಾಲಿಸುವ ಭಗವಂತ ವೇದಃ

೧೨೮)ವೇದವಿತ್

ಭಗವಂತ ಗೀತೆಯಲ್ಲಿ ತಾನೇ ಹೇಳುವಂತೆ: "ವೇದಾಂತಕೃದ್ ವೇದವಿದೇವ ಚ ಅಹಮ್"(ಅ-೧೫, ಶ್ಲೋ-೧೫) ಆತ ಮಾತ್ರ ವೇದದ ಸಂಪೂರ್ಣ ಅರ್ಥವನ್ನು ತಿಳಿದವನು. ವೇದಗಳಲ್ಲಿ ಭಗವಂತನ ಅನಂತ ಗುಣಗಳನ್ನು ಹೇಳಿದ್ದಾರೆ. ಆದರೆ ನಮಗೆ ಎಲ್ಲವೂ ಅರ್ಥವಾಗುವುದಿಲ್ಲ. ಏಕೆಂದರೆ ನಮಗಿರುವುದು ಸೀಮಿತವಾದ ಬುದ್ಧಿ. ವೇದದ ಎಲ್ಲಾ ಅರ್ಥವನ್ನು ಗ್ರಹಿಸುವ ಶಕ್ತಿ ಮಾನವರಿಗಿಲ್ಲ. ವೇದಮಂತ್ರಗಳಿಗೆ ಕನಿಷ್ಠ ಮೂರು ಅರ್ಥಗಳಿವೆ. ಎಲ್ಲವನ್ನೂ ತಿಳಿದವನು ಕೇವಲ ಭಗವಂತನೊಬ್ಬನೇ. ಸಾಮಾನ್ಯರಾದ ನಾವು ನಮ್ಮ ಜೀವಿತ ಕಾಲದಲ್ಲಿ ವೇದದ ಅಲ್ಪ-ಸ್ವಲ್ಪ ಅರ್ಥವನ್ನು ಮಾತ್ರ ತಿಳಿಯಲು ಸಾಧ್ಯ. ಈ ರೀತಿ ವೇದದ ಸಂಪೂರ್ಣ ಅರ್ಥವನ್ನು ತಿಳಿದ ಭಗವಂತ ವೇದವಿತ್.

೧೨೯)ಅವ್ಯಂಗಃ.

ಇಲ್ಲಿ ವ್ಯಂಗ ಎಂದರೆ ವಿಕಲಾಂಗ. ಅವ್ಯಂಗ ಎಂದರೆ ಪರಿಪೂರ್ಣವಾದ ಅಂಗ ಎಂದರ್ಥ. ಭಗವಂತನ ಒಂದೊಂದು ಅಂಗವೂ ಅವನ ಸ್ವರೂಪ, ಆದ್ದರಿಂದ ಆತ ಅವ್ಯಂಗ. ಇನ್ನು 'ಅವಿ' ಎಂದರೆ ಸೂರ್ಯ, 'ಅವಿಹಿ' ಎಂದರೆ ಅಗ್ನಿ. ಸೂರ್ಯ ಆಕಾಶದಲ್ಲಿ, ವಾಯು ಉಸಿರಿನಲ್ಲಿ ಹಾಗೂ ಅಗ್ನಿ ಭೂಮಿಯಲ್ಲಿ ಭಗವಂತನ ಮೂರು ಜ್ಯೋತಿರ್ಮಯ ಸ್ವರೂಪಗಳು. ಹಿಂದೆ ಋಷಿಗಳು ಸಾಮಾನ್ಯವಾಗಿ ಭಗವಂತನನ್ನು ಸೂರ್ಯನಲ್ಲಿ ಉಪಾಸನೆ ಮಾಡುತ್ತಿದ್ದರು. ಅಗ್ನಿ ಮುಖೇನ ಉಪಾಸನೆ ಸರ್ವೇ ಸಾಮಾನ್ಯ. ಆದ್ದರಿಂದ ಗಾಯತ್ರಿ ಹೀಗೆ ಹೇಳುತ್ತದೆ:

ಓಂ ಭೂರ್ಭುವಃ ಸ್ವಃ । ತತ್ಸವಿತುರ್ವರೇಣ್ಯಂ ।

ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋನಃ ಪ್ರಚೋದಯಾತ್ ॥

ಹೀಗೆ ಮೂರು ರೂಪದಲ್ಲಿ ಜಗತ್ತನ್ನು ರಕ್ಷಣೆ ಮಾಡುವ ಭಗವಂತ ಅವ್ಯಂಗಃ.

೧೩೦)ವೇದಾಂಗಃ

ವೇದಗಳ ಅಂಗಗಳು ಯಾರನ್ನು ಪ್ರತಿಪಾದಿಸುತ್ತವೆಯೋ ಅವನು ವೇದಾಂಗ. ವೇದದ ಆರು ಮುಖ್ಯ ಅಂಗಗಳು ಹೀಗಿವೆ:

೧)ಶಿಕ್ಷಾ : ಶಿಕ್ಷಾ ಎಂದರೆ ಶಿಕ್ಷಣ. ನಮ್ಮ ಧ್ವನಿಯಿಂದ ನಮ್ಮ ಅನುಭವದಿಂದ ವೇದಮಂತ್ರಗಳನ್ನು ಉಚ್ಚರಿಸುವುದು ಹೇಗೆ ಎಂದು ತಿಳಿಸುವ ಶಾಸ್ತ್ರ-ಶಿಕ್ಷಾ. ಸಂಸ್ಕೃತದಲ್ಲಿ ನಾವು ಉಚ್ಚಾರವನ್ನು ಸ್ವಲ್ಪ ತಪ್ಪಾಗಿ ಹೇಳಿದರೆ ಅದು ವ್ಯತಿರಿಕ್ತ ಅರ್ಥವನ್ನು ಕೊಡುತ್ತದೆ. ಉದಾಹರಣೆಗೆ 'ಫಲ' ಮತ್ತು 'ಪಲ'. ಇಲ್ಲಿ ಫಲ ಎಂದರೆ ಹಣ್ಣು, ಪಲ ಎಂದರೆ ಮಾಂಸ. ಆದ್ದರಿಂದ ನಾವು ತುಂಬಾ ಎಚ್ಚರವಾಗಿ ವೇದಮಂತ್ರಗಳನ್ನು ಉಚ್ಚರಿಸಬೇಕು. ಇದಕ್ಕಾಗಿ ತಪ್ಪನ್ನು ಕ್ಷಮಿಸುವಂತೆ ಪ್ರಾಯಶ್ಚಿತ್ತ ಮಂತ್ರವನ್ನು ಜಪದ ಕೊನೆಗೆ ಹೇಳುತ್ತೇವೆ:

ಸ್ವರ ವರ್ಣ ಲೋಪ ದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯಮಂತ್ರಜಪಂ ಕರಿಷ್ಯೇ-ಎಂದು ಹೇಳಿ, ಈ ಕೆಳಗಿನಂತೆ ಮೂರು ಬಾರಿ ಹೇಳುತ್ತೇವೆ:

। ಅಚ್ಯುತಾಯ ನಮಃ । ಅನಂತಾಯ ನಮಃ । ಗೋವಿಂದಾಯ ನಮಃ ।

।ಅಚ್ಯುತಾನಂತ ಗೋವಿಂದೇಭ್ಯೋ ನಮಃ ।

೨.ಕಲ್ಪ: ಕಲ್ಪ ಯಾವ ಮಂತ್ರವನ್ನು ಯಾವ ವಿಧಾನದಲ್ಲಿ ಉಪಯೋಗಿಸಿ ಆರಾಧನೆ ಮಾಡಬೇಕು ಎನ್ನುವುದನ್ನು ತಿಳಿಸುತ್ತದೆ.

೩.ವ್ಯಾಕರಣ: ಶಬ್ದವನ್ನು ಸರಿಯಾಗಿ ಉಚ್ಚಾರ ಮಾಡುವುದಕ್ಕೆ ಬೇಕಾದ ಅಂಶಗಳನ್ನು ವ್ಯಾಕರಣ ತಿಳಿಸುತ್ತದೆ.

೪.ನಿರುಕ್ತ: ಶಬ್ದವನ್ನು ಒಡೆದಾಗ ಅದು ಯಾವ ಯಾವ ಧಾತುವಿನಿಂದ ಹುಟ್ಟಿದೆ, ಅದರ ಅರ್ಥ ವಿಸ್ತಾರ ಏನು ಎನ್ನುವುದನ್ನು ನಿರುಕ್ತ ತಿಳಿಸುತ್ತದೆ.

೫.ಜ್ಯೋತಿಷ: ಜ್ಯೋತಿಷ -ಪುಣ್ಯಕರ್ಮ ಮಾಡಲು ಯಾವ ಕಾಲ ಹೆಚ್ಚು ಪ್ರಾಶಸ್ತ್ಯವಾದ ಕಾಲ ಎಂದು ತಿಳಿಸುತ್ತದೆ. ವಾತಾವರಣದಲ್ಲಿ ಕೆಲವೊಮ್ಮೆ ಪ್ರತಿಬಂಧಕ ಶಕ್ತಿಗಳಿರುತ್ತವೆ ಹಾಗೂ ಇನ್ನು ಕೆಲವೊಮ್ಮೆ ಅನುಕೂಲಕರ ಶಕ್ತಿಗಳಿರುತ್ತವೆ. ವಾತಾವರಣದಲ್ಲಿ ಅನುಕೂಲಕರ ಶಕ್ತಿಗಳಿರುವಾಗ ಮಾಡಿದ ಕರ್ಮ ಕೈಗೂಡುತ್ತದೆ. ಇದನ್ನು ತಿಳಿಸುವ ಶಾಸ್ತ್ರ ಜ್ಯೋತಿಷ.

೬.ಛಂದಸ್ಸು: ಭಗವಂತನ ಗುಣಗಾನ ಮಾಡುವ ಮಂತ್ರಗಳು ಶೃತಿಬದ್ಧವಾಗಿ, ಲಯಬದ್ಧವಾಗಿ ಹೇಗೆ ಹೇಳಬೇಕು ಎನ್ನುವುದನ್ನು ಛಂದಸ್ಸು ತಿಳಿಸುತ್ತದೆ.

ಈ ಮೇಲಿನ ಆರು ಅಂಶಗಳು ವೇದದಲ್ಲಿ ಯಾರಿಗೋಸ್ಕರ ಇವೆಯೋ ಅವನು ವೇದಾಂಗಾ.

೧೩೧)ವೇದವಿತ್

ಈ ನಾಮ ಒಂದೇ ಶ್ಲೋಕದಲ್ಲಿ ಎರಡನೇ ಬಾರಿ ಬಂದಿದೆ. ಇಲ್ಲಿ ವೇದ ಎಂದರೆ ಜ್ಞಾನ ಹಾಗೂ ವಿತ್ ಎಂದರೆ ಜ್ಞಾನಿ. ಭಗವಂತ ಜ್ಞಾನವುಳ್ಳವನೂ ಹೌದು, ಹಾಗೂ ಜ್ಞಾನ ಸ್ವರೂಪನೂ ಹೌದು. ಜ್ಞಾನವೂ ಅವನೇ, ಜ್ಞಾನಿಯೂ ಅವನೆ. ವೇದವನ್ನು ನಮಗೆ ಋಷಿ-ಮುನಿಗಳ ಮೂಲಕ ಕೊಟ್ಟವನು ಮತ್ತು ವೇದಗಳಿಂದ ಪ್ರತಿಪಾದ್ಯನಾದವನು ವೇದವಿತ್.

೧೩೨)ಕವಿಃ

ನಾವು ದೇವರ ಪೂಜೆ ಪ್ರಾರಂಭದಲ್ಲಿ ಗಣಪತಿ ಸ್ತೋತ್ರ ಹೇಳುತ್ತೇವೆ. "ಗಣಾನಾಂ ತ್ವಾ ಗಣಪತಿಂ ಹವಾಮಹೇ, ಕವಿಂ ಕವೀನಾಂ ಉಪಮಶ್ರಮವಸ್ತಮಂ" ಎನ್ನುವ ಗಣಪತಿ ಸ್ತೋತ್ರದಲ್ಲಿ ಗಣಪತಿಯನ್ನು ಕವಿಗಳ ಕವಿ ಎಂದು ವರ್ಣಿಸಿದ್ದಾರೆ. ಅದೇ ರೀತಿ "ಗಣಗಳಲ್ಲಿ ಶ್ರೇಷ್ಠನಾದ, ಕವಿಗಳ ಕವಿಯಾದ ನೀನು ನನ್ನಲ್ಲಿ ಬಂದು ಕೂಡು" ಎಂದು

ಪೂಜೆ ಪ್ರಾರಂಭದಲ್ಲಿ ಹೇಳುತ್ತೇವೆ. ಏನಿದರ ಅರ್ಥ? ಭಗವಂತನನ್ನು ಗಣಪತಿ ಎಂದು ಕರೆಯಲು ಕಾರಣವೇನು? ಪೂಜೆಯನ್ನು ಗಣಪತಿ ಸ್ತೋತ್ರದಿಂದ ಏಕೆ ಪ್ರಾರಂಭಿಸಬೇಕು?

ಗಣಪತಿ ಆಕಾಶ ತತ್ತ್ವ ದೇವತೆ. ಆತ ಜೀವಗಣ, ಇಂದ್ರಿಯಗಣ, ಜ್ಞಾನಗಣ ಮತ್ತು ಭೂತಗಣ. ಇಡೀ ವಿಶ್ವ ಆಕಾಶದಿಂದ ಪ್ರಾರಂಭವಾಗುತ್ತದೆ. ಗಣಪತಿ ಪಂಚಭೂತಗಳ ಒಡೆಯ. ಪಂಚಭೂತಗಳಿಂದಾದ ಈ ನಮ್ಮ ದೇಹ ಮತ್ತು ಇಂದ್ರಿಯಗಳ ಅಧಿಪತಿ ಆತ. ಇಂದ್ರಿಯಗಳ ಒಡೆಯನಾದ ಆತನನ್ನು ಮೊದಲು ಸ್ಮರಿಸಿ, "ಬಾರಯ್ಯ , ನನ್ನ ಇಂದ್ರಿಯಗಳಲ್ಲಿ ಕುಳಿತು, ನನ್ನ ಕೈಯಿಂದ ನಿನ್ನ ಪೂಜೆಯನ್ನು ಮಾಡುವಂತೆ, ನನ್ನ ಕಣ್ಣಿನಿಂದ ನಿನ್ನನ್ನು ನೋಡುವಂತೆ, ನನ್ನ ಬಾಯಿಯಿಂದ ನಿನ್ನ ಗುಣಗಾನ ಮಾಡುವಂತೆ ಮಾಡು"-ಎಂದು ಪ್ರಾರ್ಥಿಸಿಕೊಳ್ಳುತ್ತೇವೆ. ಭಗವಂತ ಅನಾದಿಕವಿ ಹಾಗೂ ಚತುರ್ಮುಖ ಬ್ರಹ್ಮ ಆದಿಕವಿ. ಇಲ್ಲಿ ಕವಿ ಎಂದರೆ ಎಲ್ಲವನ್ನೂ ಬಲ್ಲವನು (omniscient) ಎಂದರ್ಥ.

ಇದಲ್ಲದೆ ಇನ್ನೂ ಅನೇಕ ಅರ್ಥ ಕವಿ ಎನ್ನುವ ಪದಕ್ಕಿದೆ. ಶಬ್ದ ಸೃಷ್ಟಿಮಾಡುವವನು, ಶಬ್ದಾರ್ಥ ಸಂಬಂಧ ತಿಳಿದವನು, ಶಬ್ದಗಳಿಗೆ ಹೊಸ ಆಯಾಮ ಕೊಡುವವನು ಇತ್ಯಾದಿ. ಜನಸಾಮಾನ್ಯರಾದ ನಾವು ದೈನಂದಿನ ಕಾರ್ಯದಲ್ಲಿ ಅನೇಕ ಶಬ್ದಗಳನ್ನು ಅರ್ಥ ತಿಳಿಯದೇ ಉಪಯೋಗಿಸುತ್ತೇವೆ. ನಮ್ಮ ಈಗಿನ ಶಿಕ್ಷಣ ಪದ್ಧತಿ ಕೂಡಾ ಇದಕ್ಕೆ ಮೂಲ ಕಾರಣ. ಉದಾಹರಣೆಗೆ ಪತ್ರ ಬರೆಯುವಾಗ, "ನಾನು ಕ್ಷೇಮ, ನಿಮ್ಮ ಯೋಗ-ಕ್ಷೇಮದ ಬಗ್ಗೆ ತಿಳಿಸಿ" ಎಂದು ಬರೆಯುತ್ತೇವೆ. ಇಲ್ಲಿ ಯೋಗ-ಕ್ಷೇಮ ಎಂದರೆ ಏನು ಎನ್ನುವುದು ನಮ್ಮಲ್ಲಿ ಹೆಚ್ಚಿನವರಿಗೆ ತಿಳಿದೇ ಇಲ್ಲ!! ಇಲ್ಲದ್ದನ್ನು ಪಡೆಯುವುದು ಯೋಗ (ಅಪ್ರಾಪ್ತಂ ಪ್ರಾಪ್ತಿಹೀ ಯೋಗಃ ). ಪಡೆದದ್ದನ್ನು ಉಳಿಸಿಕೊಳ್ಳುವುದು ಕ್ಷೇಮ. ಶಬ್ದದ ಅಂತರಾಳದ ಅರ್ಥವನ್ನು ಅರಿತು ಮಾತನಾಡುವವರು ಕವಿಗಳು. ಭಗವಂತ ಕವಿಗಳ ಕವಿ, ಸರ್ವನಾಮರೂಪಾತ್ಮಕನಾದ ಸರ್ವಜ್ಞ. ಸಂಸ್ಕೃತದ ಏಕಾಕ್ಷರ ಕೋಶದಲ್ಲಿ ನೋಡಿದರೆ ಆ, ಕ, ಯ, ಪ್ರ, ವಿ, ಸಂ, ಭೂ, ಮಾ, ಸಾ , ಹಾ.. ಇತ್ಯಾದಿ ಏಕಾಕ್ಷರಗಳು ಭಗವಂತನ ಗುಣವನ್ನು ವರ್ಣಿಸುತ್ತವೆ. ಇಲ್ಲಿ 'ಕ' ಎಂದರೆ ಆನಂದ, 'ವ' ಎಂದರೆ ಜ್ಞಾನ, 'ವಿ' ಎಂದರೆ ವಿಶಿಷ್ಟವಾದ ಜ್ಞಾನ. ಆದ್ದರಿಂದ ಕವಿ ಎಂದರೆ 'ವಿಶಿಷ್ಟವಾದ ಜ್ಞಾನಾನಂದ ಸ್ವರೂಪ'.

**ಲೋಕಾಧ್ಯಕ್ಷಃ ಸುರಾಧ್ಯಕ್ಷೋ ಧರ್ಮಾಧ್ಯಕ್ಷಃ ಕೃತಾಕೃತಃ ।**

**ಚತುರಾತ್ಮಾ ಚತುರ್ವ್ಯೂಹಶ್ಚತುರ್ದಂಷ್ಟ್ರಶ್ಚತುರ್ಭುಜಃ. ॥೨೮॥**

ಈ ಶ್ಲೋಕದಲ್ಲಿ ಭಗವಂತನನ್ನು ಅಧ್ಯಕ್ಷ ಎನ್ನುತ್ತಾರೆ. ಇಲ್ಲಿ ಅಧ್ಯಕ್ಷ ಎಂದರೆ ಎಲ್ಲರನ್ನೂ ನೋಡುವವ, ಎಲ್ಲರ ಮೇಲೆ ನಿಗಾ ಇರಿಸುವವ, ಪ್ರತಿಯೊಂದು ಕ್ರಿಯೆಯನ್ನು ನಿರ್ವಹಿಸುವವ ಎಂದರ್ಥ.

೧೩೩)ಲೋಕಾಧ್ಯಕ್ಷಃ

ಭಗವಂತ ಲೋಕಾಧ್ಯಕ್ಷ. ಇಲ್ಲಿ ಲೋಕ ಎಂದರೆ ಭೂಲೋಕ; ಬ್ರಹ್ಮಾಂಡ-ಪಿಂಡಾಂಡ. ಆತ ಎಲ್ಲವುದರ ಅಧ್ಯಕ್ಷ.

೧೩೪)ಸುರಾಧ್ಯಕ್ಷಃ

ಸುರರು ಎಂದರೆ ದೇವತೆಗಳು. ಈ ಬ್ರಹ್ಮಾಂಡ ಹಾಗೂ ಪಿಂಡಾಂಡದಲ್ಲಿ ಅನೇಕ ದೇವತೆಗಳಿದ್ದಾರೆ. ಈ ಹಿಂದೆ ಹೇಳಿದಂತೆ ನಮ್ಮ ದೇಹದ ಒಳಗೆ ಹಾಗೂ ಹೊರಗೆ ದೇವತೆಗಳು ಭಗವಂತನ ನಿಯಮದಂತೆ ಎಲ್ಲವನ್ನೂ ನಿಯಂತ್ರಿಸುತ್ತಿರುತ್ತಾರೆ. ದೇಹದ ಹೊರಗೆ ಸೂರ್ಯ ಬೆಳಕಿನ ದೇವತೆಯಾದರೆ, ಆತನೇ ದೇಹದಲ್ಲಿ ಕಣ್ಣಿನ ದೇವತೆ. ಸೋಮ ದೇಹದ ಹೊರಗೆ ಶಬ್ದದ ದೇವತೆ ಹಾಗೂ ದೇಹದಲ್ಲಿ ಕಿವಿಯ ದೇವತೆ. ವರುಣ ನೀರಿನ ದೇವತೆ ಹಾಗೂ ಬಾಯಲ್ಲಿ ನೀರೂರಿಸುವ ನಾಲಿಗೆಯ ಅಭಿಮಾನಿ ದೇವತೆ. ಇದೇ ರೀತಿ ಅಗ್ನಿ-ಮಾತಿನ, ಇಂದ್ರ-ಕೈಯ, ಇಂದ್ರನ ಮಗ ಯಜ್ಞ-ಕಾಲಿನ, ಯಮ-ಮಲಮೂತ್ರ ವಿಸರ್ಜನಾಂಗದ ಮತ್ತು ದಕ್ಷ ಸಂತಾನಕ್ಕೆ ಸಂಬಂಧಪಟ್ಟ ಅಂಗದ ದೇವತೆ.

ಇವರಲ್ಲದೆ ಇಂದ್ರ ಮತ್ತು ಕಾಮರು ಮನಸ್ಸಿನ, ಗರುಡ-ಶೇಷ-ರುದ್ರರು ಮನಸ್ಸು-ಬುದ್ಧಿ-ಅಹಂಕಾರದ ದೇವತೆಗಳು. ಸರಸ್ವತಿ-ಭಾರತಿ-ಪಾರ್ವತಿಯರು ವಾಕ್ ದೇವಿಯರು. ಇನ್ನು ಬ್ರಹ್ಮ-ವಾಯು ಚಿತ್ತದ ದೇವತೆಗಳು. ಈ ರೀತಿ ದೇಹದ ಪ್ರತಿಯೊಂದು ಇಂದ್ರಿಯ ನಿರ್ವಹಣೆ ಒಬ್ಬೊಬ್ಬ ದೇವತೆಗಳ ಅಧೀನ. ಇಂತಹ ಸುರರ ಅಧಿಪತಿಯಾದ ಭಗವಂತ ಸುರಾಧ್ಯಕ್ಷ.

೧೩೫)ಧರ್ಮಾಧ್ಯಕ್ಷಃ

ಭಗವಂತನ ಪ್ರತೀ ಅವತಾರ ಈ ಭೂಮಿಯಲ್ಲಿ ಧರ್ಮಸಂಸ್ಥಾಪನೆಗಾಗಿ ಆಗಿದೆ.ಇಡೀ ಲೋಕವನ್ನು ಧಾರಣೆ ಮಾಡಿ ಈ ಭೂಮಿಯಲ್ಲಿ ಧರ್ಮ ಸಂಸ್ಥಾಪನೆ ಮಾಡಿದ ಭಗವಂತ ಧರ್ಮಾಧ್ಯಕ್ಷ. ಇನ್ನು ಆದಿಶೇಷ ಮತ್ತು ಪ್ರಾಣದೇವರನ್ನೂ ಕೂಡಾ ಧರ್ಮ ಎನ್ನುತ್ತಾರೆ. ದೇಹದ ಒಳಗೆ ಪ್ರಾಣಶಕ್ತಿಯಾಗಿ, ದೇಹದ ಹೊರಗೆ ವಾತಾವರಣದಲ್ಲಿ ತುಂಬಿರುವ ಪ್ರಾಣದೇವರು; ಭೂಮಿಯ ಆಕರ್ಷಣ ಶಕ್ತಿಯಾದ(Gravity) ಸಂಕರ್ಷಣ(ಶೇಷ)- ಇವರಿಬ್ಬರ ಮುಖಾಂತರ ಈ ಭೂಮಿಯನ್ನು ಧಾರಣೆ ಮಾಡಿರುವ ಭಗವಂತ ಧರ್ಮಾಧ್ಯಕ್ಷ.

೧೩೬)ಕೃತಾಕೃತಃ

ಎರಡು ತದ್ವಿರುದ್ಧ ಅರ್ಥವಿರುವ ಪದಗಳಿಂದ ಈ ನಾಮವಾಗಿದೆ. ಒಂದು ಕೃತ(ಕರ್ತ) ಹಾಗೂ ಇನ್ನೊಂದು ಅಕೃತ (ಅಕರ್ತ). ಭಗವಂತ ಸೃಷ್ಟಿಕರ್ತ, ಆದರೆ ಆತನಿಗೆ ಯಾವುದೇ ಪುಣ್ಯ ಪಾಪಗಳ ಲೇಪವಿಲ್ಲ. ಎಲ್ಲವನ್ನೂ ಮಾಡುವವ ಆತ. ಆದರೆ ಯಾವುದರ ಲೇಪವೂ ಅವನಿಗಿಲ್ಲ. ನಮ್ಮೊಳಗಿದ್ದು, ನಮ್ಮಿಂದ ಎಲ್ಲವನ್ನೂ ಮಾಡಿಸಿ, ಪುಣ್ಯ-ಪಾಪಗಳಿಗೆ ನಮ್ಮನ್ನು ಭಾಧ್ಯರನ್ನಾಗಿ ಮಾಡಿ, ತಾನು ನಿರ್ಲಿಪ್ತನಾಗಿ ದೂರ ನಿಲ್ಲುವ ಭಗವಂತ ಕೃತಾಕೃತಃ. ಭಗವಂತನಿಗೆ ಸ್ವಯಂ ಕೃತದ ಅಗತ್ಯವಿಲ್ಲ, ಆದರೆ ಭಕ್ತರ ಅಭಿಲಾಷೆಗಾಗಿ ಅವತಾರವನ್ನು ಧರಿಸುತ್ತಾನೆ, ಭಕ್ತರ ಅಭೀಷ್ಟವನ್ನು ಪೂರೈಸುತ್ತಾನೆ.

೧೩೭)ಚತುರಾತ್ಮಾ

ಭಗವಂತನು ನಾಲ್ಕು ರೂಪಗಳಲ್ಲಿ ಈ ಜಗತ್ತನ್ನು ನಿಯಂತ್ರಿಸುತ್ತಾನೆ. ನಮ್ಮ ಬದುಕಿನಲ್ಲಿ ಸಹಜವಾದ ಸ್ಥಿತಿ ಮೂರು. ಎಚ್ಚರ-ಕನಸು-ನಿದ್ದೆ. ಈ ಮೂರು ಸ್ಥಿತಿಗಳನ್ನು ಎಲ್ಲರೂ ನಿರಂತರ ಅನುಭವಿಸುತ್ತಾರೆ. ಆದರೆ ಈ ಮೂರನ್ನೂ ಮೀರಿದ ನಾಲ್ಕನೇ ಸ್ಥಿತಿ ತುಂಬಾ ಪ್ರಮುಖವಾದದ್ದು. ಅದೇ ತುರೀಯ ಸ್ಥಿತಿ.

೧.ಎಚ್ಚರ ನಿಯಂತ್ರಣಕ್ಕಾಗಿ ನಮ್ಮ ಆಜ್ಞಾಚಕ್ರದಲ್ಲಿ ವಿಶ್ವ ನಾಮಕನಾಗಿ ಕುಳಿತ ಭಗವಂತ ಓಂಕಾರದ ಮೊದಲ ಅಕ್ಷರನಾಮಕ ವಿಶ್ವಾತ್ಮ.

೨.ವಿಶುದ್ಧಿಚಕ್ರದ ತುದಿಯಲ್ಲಿ ಕಿರುನಾಲಿಗೆಯ ಕೆಳಗೆ ಇಂದ್ರಯೋನಿಯಲ್ಲಿ, ಎಚ್ಚರಾವಸ್ಥೆಯಲ್ಲಿ ಸೆರೆ ಹಿಡಿದ ಪಡಿಯಚ್ಚನ್ನು ನಾವು ಮಲಗಿದ್ದಾಗ ನಮಗೆ ಕನಸಿನ ಮೂಲಕ ತೋರಿಸುವ ಭಗವಂತ ತೈಜಸಾತ್ಮ.

೩.ಮನಸ್ಸಿನ ನಿಯಂತ್ರಣದಿಂದ ಆಚೆಗೆ ಇರುವ ನಿದ್ರಾವಸ್ಥೆಯನ್ನು ನಿಯಂತ್ರಿಸುವ ಭಗವಂತ ಪ್ರಾಜ್ಞಾತ್ಮ.

೪.ನಮ್ಮ ಎಚ್ಚರ-ಕನಸು ಮನಸ್ಸಿನ ವ್ಯವಹಾರವಾದರೆ, ನಿದ್ದೆ ಮನಸ್ಸಿನ ನಿಯಂತ್ರಣವಿಲ್ಲದೆ, ಆತ್ಮವೇ ತನ್ನನ್ನು ತಾನು ಅನುಭವಿಸುವ ಸ್ಥಿತಿ. ಎಚ್ಚರದಲ್ಲೂ, ಕನಸಿನಲ್ಲೂ, ಎಲ್ಲಾ ಸ್ಥಿತಿಯಲ್ಲೂ, ಮನಸ್ಸಿನ ಹತೋಟಿಯನ್ನು ದಾಟಿನಿಲ್ಲುವ ನಾಲ್ಕನೇ ಸ್ಥಿತಿ ತುರೀಯಾವಸ್ಥೆ. ಈ ಸ್ಥಿತಿಯಲ್ಲಿ ನಾವು ನಮ್ಮನ್ನು ಬಂಧಿಸಿದ ಹದಿನೈದು ಬೇಲಿಗಳನ್ನು(೨೪ನೇ ನಾಮದ ವಿವರಣೆಯಲ್ಲಿ ವಿವರಿಸಲಾದ ಹದಿನೈದು ಬೇಲಿಗಳು) ದಾಟಿ ನಿಂತು, ಜ್ಞಾನಾನಂದಮಯವಾದ ನಮ್ಮ ಸ್ವರೂಪವನ್ನು ನೋಡುತ್ತೇವೆ. ಆಗ ನಾವು ಕೇವಲ ಪ್ರತಿಬಿಂಬ ಎನ್ನುವ ಸತ್ಯವನ್ನು ತಿಳಿಯುತ್ತೇವೆ ಹಾಗೂ ಮೂಲಬಿಂಬ ಭಗವಂತ ಎನ್ನುವ ಸತ್ಯದ ಅರಿವಾಗುತ್ತದೆ. ಈ ಸ್ಥಿತಿಯಲ್ಲಿ ನಾವು ದೇವರನ್ನು

ನೋಡಬಹುದು ಹಾಗೂ ದೇವರಲ್ಲಿ ಮಾತನಾಡಬಹುದು. ನಮ್ಮ ಸ್ವರೂಪ ದೃಷ್ಟಿಯಿಂದ ಭಗವಂತನನ್ನು ಕಾಣುವ ಈ ನಾಲ್ಕನೇ ಸ್ಥಿತಿಯನ್ನು ತುರೀಯಾವಸ್ಥೆ ಎನ್ನುತ್ತೇವೆ.

ಈ ರೀತಿ ವಿಶ್ವ, ತೈಜಸ, ಪ್ರಾಜ್ಞ, ತುರೀಯ, ಈ ನಾಲ್ಕು ಸ್ಥಿತಿಗಳಲ್ಲಿ ನಮ್ಮನ್ನು ನಿಯಂತ್ರಿಸುವ ಭಗವಂತ ಚತುರಾತ್ಮಾ.

ಇದಲ್ಲದೆ ಪ್ರಪಂಚದ ಅನುಭವಕ್ಕಾಗಿ ನಾಲ್ಕು ಬಗೆಯ ದೇಹವನ್ನು ಭಗವಂತ ಜೀವರಿಗೆ ಕರುಣಿಸಿದ್ದಾನೆ.

೧. ಕಣ್ಣಿಗೆ ಕಾಣುವ ಪಂಚಭೂತಗಳಿಂದಾದ ಸ್ಥೂಲ ಶರೀರ.

೨. ಕಣ್ಣಿಗೆ ಕಾಣದ ಸೂಕ್ಷ್ಮ ಶರೀರ (Arial body). [ಸೂಕ್ಷ್ಮ ಶರೀರ ಸ್ಥೂಲದೇಹವನ್ನು ತ್ಯಜಿಸಿದಾಗ ಮಾನವನ ಸ್ಥೂಲ ಶರೀರ ಸಾಯುತ್ತದೆ].

೩.ಸೃಷ್ಟಿಗೆ ಮೊದಲು ಅನಾದಿಯಾಗಿ ಬಂದ ಲಿಂಗರೂಪಿ ಶರೀರ.

೪. ಸ್ವರೂಪಭೂತವಾದ ಶರೀರ[ಜೀವ ಮೋಕ್ಷವನ್ನು ಸೇರುವಾಗ ಇರುವ ಸ್ಥಿತಿ].

ಈ ರೀತಿ ಪ್ರಪಂಚದ ಅನುಭವಕ್ಕಾಗಿ ಸ್ಥೂಲ, ಸೂಕ್ಷ್ಮ, ಲಿಂಗ ಹಾಗೂ ಸ್ವರೂಪ ಎನ್ನುವ ನಾಲ್ಕು ಬಗೆಯ ಶರೀರವನ್ನು ಕೊಟ್ಟ ಭಗವಂತ ಚತುರಾತ್ಮಾ.

ಜೀವ ಸೃಷ್ಟಿಯಲ್ಲಿ ಚತುರ್ವಿಧ.

೧. ಜರಾಯುಜ: ಗರ್ಭದಲ್ಲಿ ಸಂಪೂರ್ಣ ಬೆಳವಣಿಗೆಯಾಗಿ ಹುಟ್ಟುವುದು (ಉದಾ: ಮನುಷ್ಯ, ಹಸು ಇತ್ಯಾದಿ)

೨.ಅಂಡಜ: ಮೊಟ್ಟೆಯ ರೂಪದಲ್ಲಿ ಭೂಮಿಗೆ ಬಂದು, ನಂತರ ಮೊಟ್ಟೆಗೆ ಕಾವು ಕೊಟ್ಟಾಗ ಸಂಪೂರ್ಣ ಬೆಳೆದು, ಮೊಟ್ಟೆಯೊಡೆದು ಹುಟ್ಟುವುದು (ಉದಾ: ಕೋಗಿಲೆ, ಕೋಳಿ, ಇತ್ಯಾದಿ).

೩. ಸ್ವೇದಜ: ನೀರಿನ ಪಸೆ, ಬೆವರಿನಿಂದ ಹುಟ್ಟುವುದು (ಉದಾ: ವೈರಸ್, ಬ್ಯಾಕ್ಟೀರಿಯ ಇತ್ಯಾದಿ).

೪.ಉದ್ಭಿಜ : ಬೀಜ ರೂಪದಲ್ಲಿದ್ದು, ಬೀಜ ಒಡೆದು ಬೆಳೆಯುವವು (ಉದಾ: ವೃಕ್ಷ)

ಈ ರೀತಿ ಅಂಡಜ-ಸ್ವೇದಜ-ಉದ್ಭಿಜ ಮತ್ತು ಜರಾಯುಜ ಎನ್ನುವ ನಾಲ್ಕು ಬಗೆಯಲ್ಲಿ ಜೀವಜಾತದ ಸೃಷ್ಟಿ ಮಾಡುವ ಭಗವಂತ ಚತುರಾತ್ಮಾ.

೧೩೮)ಚತುರ್ವ್ಯೂಹಃ

ಭಗವಂತ ನಾಲ್ಕು ವ್ಯೂಹ(ಗುಂಪು ಅಥವಾ ಸಮುದಾಯ)ದಿಂದ ಉಪಾಸ್ಯನಾಗಿದ್ದಾನೆ.

೧.ಸೃಷ್ಟಿಗೆ ಕಾರಣನಾದ ಪ್ರದ್ಯುಮ್ನ

೨.ಸ್ಥಿತಿಗೆ ಕಾರಣನಾದ ಅನಿರುದ್ಧ

೩.ಸಂಹಾರಕ್ಕೆ ಕಾರಣನಾದ ಸಂಕರ್ಷಣ

೪.ಮೋಕ್ಷಪ್ರದನಾದ ವಾಸುದೇವ.

ಜೀವವು ಮೊದಲು ಅನಿರುದ್ಧನನ್ನು ಸೇರಿ ಅನ್ನಮಯಕೋಶದಿಂದ ಸಂಬಂಧವನ್ನು ಕಳಚಿಕೊಳ್ಳುತ್ತದೆ. ನಂತರ ಪ್ರದ್ಯುಮ್ನನನ್ನು ಸೇರಿ ಮನೋಮಯಕೋಶದ ಸಂಬಂಧವನ್ನು ಕಳಚಿಕೊಂಡು, ಸಂಕರ್ಷಣನಿಂದ ವಿಜ್ಞಾನಮಯಕೋಶದ ಬಿಡುಗಡೆಯನ್ನು ಪಡೆದು, ಕೊನೆಗೆ ವಾಸುದೇವನನ್ನು ಸೇರಿ ಆನಂದಮಯನಾಗುತ್ತಾನೆ. ಈ ರೀತಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎನ್ನುವ ನಾಲ್ಕು ವ್ಯೂಹಗಳಿಂದ ಉಪಾಸ್ಯನಾದ ಭಗವಂತ ಚತುರ್ವ್ಯೂಹ.

ಭಗವಂತ ಪ್ರಪಂಚದಲ್ಲಿ ನಾಲ್ಕು ವರ್ಣದ ಸೃಷ್ಟಿಗೆ ಕಾರಣಕರ್ತ. ಇಲ್ಲಿ ವರ್ಣ ಎಂದರೆ ಜಾತಿ ಅಲ್ಲ. ಜಾತಿ ಪದ್ಧತಿ ಜನರಿಂದ ಬಂದ ಪದ್ಧತಿ. ಆದರೆ ವರ್ಣ ಭಗವಂತನ ಸೃಷ್ಟಿ. ನಾಲ್ಕು ವರ್ಣವನ್ನು ನಾವು ಪ್ರಪಂಚದ ಎಲ್ಲಾ ಭಾಗದಲ್ಲಿ ಕಾಣಬಹುದು. ಅವುಗಳೆಂದರೆ: ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ.

೧. ಬ್ರಾಹ್ಮಣ: ಅಧ್ಯಯನ ಮಾಡಿ ಅಧ್ಯಾಪನ ಮತ್ತು ಸಂಶೋಧನೆ ಮಾಡುವ ಜ್ಞಾನಿಗಳು **(Intellects)**

೨. ಕ್ಷತ್ರಿಯ: ರಕ್ಷಣೆ ಮತ್ತು ವ್ಯವಸ್ಥಾಪಕ ಗುಣ ಇರುವವರು **(Defence & Administrators)**

೩. ವೈಶ್ಯ: ಉತ್ಪಾದನೆ ಮತ್ತು ವಿತರಣೆಯಲ್ಲಿ ಚಾಣಾಕ್ಷರು **(Production and Sale)**

೪. ಶೂದ್ರ: ಶುಶ್ರೂಷೆ ಅಥವಾ ಸೇವೆಯಲ್ಲಿ ಚಾಣಾಕ್ಷರು **(Service)**

ಈ ಮೇಲಿನ ನಾಲ್ಕು ವರ್ಣಗಳನ್ನು ಒಂದೇ ಕುಟುಬದಲ್ಲಿ ನೋಡಬಹುದು. ಅವರವರ ಜೀವ ಗುಣಕ್ಕೆ ಸರಿಹೊಂದುವ ಕೆಲಸವನ್ನು ಮಾಡುವವರು ಶೀಘ್ರ ಯಶಸ್ಸನ್ನು ಕಾಣುತ್ತಾರೆ. ಈ ರೀತಿ ಪ್ರಪಂಚ ನಡೆಯಲು ಅನಿವಾರ್ಯವಾಗಿ ಬೇಕಾಗುವ ನಾಲ್ಕು ವರ್ಣಗಳನ್ನು ನಿರ್ಮಿಸಿದ ಭಗವಂತ ಚತುರ್ವ್ಯೂಹ.

೧೩೯)ಚತುರ್ದಂಷ್ಟ್ರ

ಭಗವದ್ಗೀತೆಯ ವಿಶ್ವರೂಪ ದರ್ಶನದಲ್ಲಿ ಅರ್ಜುನನು ಹೇಳುವಂತೆ:

ದಂಷ್ಟ್ರಾಕರಾಳಾನಿ ಚ ತೇ ಮುಖಾನಿ ದೃಷ್ಟ್ವೈವ ಕಾಲಾನಲಸನ್ನಿಭಾನಿ ।
ದಿಶೋ ನ ಜಾನೇ ನ ಲಭೇ ಚ ಶರ್ಮ ಪ್ರಸೀದ ದೇವೇಶ ಜಗನ್ನಿವಾಸ ॥ಅ ೧೧- ಶ್ಲೋ ೨೫॥

ಅಂದರೆ "ಪ್ರಳಯ ಕಾಲದ ಬೆಂಕಿಯಂತೆ ಕೋರೆದಾಡೆಗಳ ಅಬ್ಬರದ ನಿನ್ನ ಮೋರೆಗಳನ್ನು ಕಂಡದ್ದೇ ದಿಕ್ಕು ತಿಳಿಯದಾಗಿದೆ, ನೆಮ್ಮದಿ ಇಲ್ಲವಾಗಿದೆ. ಓ ಸಗ್ಗಿಗರೊಡೆಯನೇ, ಜಗದ ಆಸರೆಯೇ, ದಯೆ ತೋರು". ಇಲ್ಲಿ ಯುದ್ಧನಿರತ ಕೌರವಸೇನೆ ಭಗವಂತನ ಕೋರೆದಾಡೆಗಳ ಮಧ್ಯೆ ಸಿಕ್ಕಿ ನುಚ್ಚು ನೂರಾಗುವುದನ್ನು ಕಂಡ ಅರ್ಜುನ, ತಾನು ಕೇವಲ ನೆಪಮಾತ್ರ ಎನ್ನುವುದನ್ನು ಅರ್ಥ ಮಾಡಿಕೊಳ್ಳುತ್ತಾನೆ. ಇಲ್ಲಿ ದಂಷ್ಟ್ರ ಎಂದರೆ ಕೋರೆದಂತ ಉಳ್ಳವನು ಎಂದರ್ಥ. ಚತುರ್ದಂಷ್ಟ್ರ ಎಂದರೆ ನಾಲ್ಕು ಕೋರೆ ಹಲ್ಲುಗಳಿರುವವನು ಎಂದರ್ಥ.

ಭಗವಂತನು ವರಾಹ ಅವತಾರಿಯಾಗಿ ಹಿರಣ್ಯಾಕ್ಷನನ್ನು ಹಾಗೂ ನರಸಿಂಹ ಅವತಾರಿಯಾಗಿ ಹಿರಣ್ಯಕಶಿಪುವನ್ನು ತನ್ನ ಕೋರೆ ಹಲ್ಲುಗಳಿಂದ ಸಂಹಾರ ಮಾಡಿದವನು. ನಮ್ಮೊಳಗೆ ಕೂಡಾ ಈ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರಿದ್ದಾರೆ!! ಇಲ್ಲಿ ಹಿರಣ್ಯ ಎಂದರೆ ಚಿನ್ನ, ಅಂದರೆ ದುಡ್ಡು ಅಥವಾ ಸಂಪತ್ತು. ಯಾವಾಗಲೂ ದುಡ್ಡಿನ ಮೇಲೆ ಕಣ್ಣನ್ನಿಟ್ಟು, ಅದರಿಂದಾಚೆಗೆ ಏನನ್ನೂ ಯೋಚಿಸದೆ, ದುಡ್ಡಿನ ಆಸೆಯಲ್ಲಿ ಇರುವ ಮನುಷ್ಯನ ಗುಣವೇ ಆತನಲ್ಲಿರುವ ಹಿರಣ್ಯಾಕ್ಷ. ಇನ್ನು ಒಮ್ಮೆ ದುಡ್ಡು ಬಂದಿತು, ಅದನ್ನು ತನ್ನ ತಲೆದಿಂಬನ್ನಾಗಿ(ಕಶಿಪು) ಇಟ್ಟು-ಕೊಂಡು ದುಡ್ಡಿನ ಲೋಭದಲ್ಲಿ ಮುಳುಗುವ, ಹಾಗೂ ತಮ್ಮ ಲೋಭಕ್ಕೆ ಅಡ್ಡಿ ಆದಾಗ, ಕ್ರೋಧಗೊಳ್ಳುವ ಮನುಷ್ಯ ಗುಣವೇ ಆತನಲ್ಲಿರುವ ಹಿರಣ್ಯಕಶಿಪು. ನಮ್ಮಲ್ಲಿರುವ ಈ ಕಾಮ-ಕ್ರೋಧ-ಲೋಭವನ್ನು ಸಂಹಾರ ಮಾಡಬಲ್ಲ ಭಗವಂತ ಚತುರ್ದಂಷ್ಟ್ರ.

೧೪೦)ಚತುರ್ಭುಜಃ

ಸಾಮಾನ್ಯವಾಗಿ ದೇವರ ಮೂರ್ತಿಗಳಲ್ಲಿ ನಾವು ನಾಲ್ಕು ಕೈ ಹಾಗೂ ನಾಲ್ಕು ಆಯುಧವನ್ನು ನೋಡುತ್ತೇವೆ. ಉದಾಹರಣೆಗೆ ವಿಷ್ಣು- ಶಂಖ, ಚಕ್ರ, ಗದಾ, ಪದ್ಮಧಾರಿ. ಹಾಗೇ ಗಣಪತಿ-ಪಾಶ, ದಂತ, ಅಂಕುಶ ಮತ್ತು ಅಭಯಧಾರಿ. ಏನಿದು? ಏನಿದರ ಅರ್ಥ?

೧. ಚಕ್ರ: ಚಕ್ರ 'ಧರ್ಮದ' ಸಂಕೇತ. ಅಧರ್ಮವನ್ನು ಸಂಹಾರಮಾಡುವ, ನಿರಂತರ ತಿರುಗುವ ವಿಷ್ಣು ಚಕ್ರ, ಸಂಹಾರಶಕ್ತಿ ಮಾತೆ ದುರ್ಗೆಯ ಸಂಕೇತ.

೨. ಶಂಖ: ಧರ್ಮದ ಪಂಚಾಂಗದಲ್ಲಿ ನಮ್ಮ ಬದುಕು ಸಮೃದ್ಧಿಯಾಗಿರುವ 'ಅರ್ಥದ' ಸಂಕೇತ.

೩.ಗದಾ: ಭಗವಂತನ ಗದೆ ಸ್ವಚ್ಛಂದ 'ಕಾಮದ ನಿಯಂತ್ರಣ'ದ ಸಂಕೇತ.

೪. ಪದ್ಮ: 'ಶಾಂತಿಯ ಮತ್ತು ಮೋಕ್ಷದ' ಸಂಕೇತ

ಇದೇ ರೀತಿ ಗಣಪತಿಯನ್ನು ನೋಡಿದರೆ:

೧. ಪಾಶ: ನಮ್ಮ ಬದುಕಿಗೆ ಬೇಕಾದ ಧರ್ಮದ ಬಿಗಿ (ಪಾಶ).

೨.ದಂತ: ಸಂಪತ್ತಿನ ಜೊತೆಗೆ ಆತ್ಮ ಸಂಯಮ (ತನ್ನ ದಾಡೆಯನ್ನು ಮುರಿದು ಹಿಡಿದಿರುವುದು).

೩.ಅಂಕುಶ: ಸ್ವಚ್ಛಂದ ಕಾಮಕ್ಕೆ ಅಂಕುಶ.

೪. ಅಭಯ: ಈ ಮೇಲಿನ ಮೂರನ್ನು ಪಾಲಿಸಿದರೆ ಮೋಕ್ಷದ ಅಭಯ.

ವಿಷ್ಣುವಿನ ಕೈಯಲ್ಲಿನ ನಾಲ್ಕು ಆಯುಧಗಳನ್ನು ಇಪ್ಪತ್ನಾಲ್ಕು ವಿಧದಲ್ಲಿ ಇಡಲು ಬರುತ್ತದೆ. ಚಕ್ರ(ಬಲ ಕೈ), ಶಂಖ, ಗದಾ, ಪದ್ಮಧಾರಿ-ಜನಾರ್ದನ ಮೂರ್ತಿಯಾದರೆ, ಶಂಖ(ಬಲ ಕೈ) ಚಕ್ರ ಗದಾ ಪದ್ಮಧಾರಿ-ಕೇಶವ ಮೂರ್ತಿ. ಈ ರೀತಿ ವಿಷ್ಣುವಿನ ಇಪ್ಪತ್ನಾಲ್ಕು ಮೂರ್ತಿಗಳಿವೆ. ಅವುಗಳೆಂದರೆ ೧.ಕೇಶವ ೨.ನಾರಾಯಣ ೩.ಮಾಧವ ೪.ಗೋವಿಂದ. ೫.ಮಧುಸೂದನ ೬.ತ್ರಿವಿಕ್ರಮ ೭.ವಿಷ್ಣು ೮.ಶ್ರೀಧರ ೯.ಹೃಷೀಕೇಶ ೧೦.ಪದ್ಮನಾಭ ೧೧.ದಾಮೋದರ ೧೨.ಸಂಕರ್ಷಣ ೧೩.ವಾಮನ ೧೪.ವಾಸುದೇವ ೧೫.ಪ್ರದ್ಯುಮ್ನ ೧೬.ಅನಿರುದ್ಧ ೧೭.ಪುರುಷೋತ್ತಮ ೧೮.ಅಧೋಕ್ಷಜ ೧೯.ನರಸಿಂಹ ೨೦.ಅಚ್ಯುತ ೨೧.ಜನಾರ್ದನ ೨೨.ಉಪೇಂದ್ರ ೨೩.ಹರಿ ೨೪.ಕೃಷ್ಣ.

ಈ ರೀತಿ ವಿಶಿಷ್ಟವಾದ ನಾಲ್ಕು ಬಾಹುಗಳುಳ್ಳ ಭಗವಂತನನ್ನು ಚತುರ್ಭುಜ ಎನ್ನುತ್ತಾರೆ. ಭುಜ ಎನ್ನುವುದಕ್ಕೆ ಭೋಜನ ಎನ್ನುವ ಅರ್ಥ ಕೂಡಾ ಇದೆ. ನಾಲ್ಕು ವಿಧದಲ್ಲಿ ತಿನ್ನುವವನು ಹಾಗೂ ತಿನ್ನಿಸುವವನು ಚತುರ್ಭುಜ. ಕೃಷ್ಣ ಗೀತೆಯಲ್ಲಿ ಹೇಳಿರುವಂತೆ:

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ಅ ೧೫- ಶ್ಲೋ ೧೪॥

ಇಲ್ಲಿ 'ಪಚಾಮ್ಯನ್ನಂ ಚತುರ್ವಿಧಮ್' ಎಂದರೆ ನಾಲ್ಕು ಬಗೆಯ ಅನ್ನವನ್ನು ಅರಗಿಸುವೆ" ಎಂದರ್ಥ. ಅನ್ನವೆಂದರೆ ಎಲ್ಲಾ ರೀತಿಯ 'ಆಹಾರ'. "ಪ್ರಾಣಿನಾಂ ದೇಹಮಾಶ್ರಿತಃ" ಎಂದರೆ 'ಪ್ರಾಣಿ'ಗಳು ತಿನ್ನಬಲ್ಲ ಆಹಾರ ಎಂದರ್ಥ. ಪ್ರಾಣಿಗಳ ಅಹಾರವನ್ನು ನಾಲ್ಕು ವಿಧಗಳಲ್ಲಿ ವಿಂಗಡಿಸಬಹುದು. ಅವುಗಳೆಂದರೆ: ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಚೋಷ್ಯ.

ಭಕ್ಷ್ಯ = ಅಗಿದು, ಕಡಿದು ತಿನ್ನಲು ಯೋಗ್ಯವಾದುದು (ತಿನ್ನುವುದು)

ಭೋಜ್ಯ = ಅಗಿಯದೆಯೇ, ನವಣಿಸಿ ತಿನ್ನಲು ಯೋಗ್ಯವಾದುದು (ಉಣ್ಣುವುದು).

ಲೇಹ್ಯ = ನೆಕ್ಕಿ ತಿನ್ನಲು ಯೋಗ್ಯವಾದುದು.

ಚೋಷ್ಯ = ಕುಡಿಯಲು ಯೋಗ್ಯವಾದುದು.

ಈ ನಾಲ್ಕು ವಿಧದ 'ಅನ್ನ'ವನ್ನು ಸೇವಿಸುವ ಎಲ್ಲಾ ಜೀವಿಗಳ ಜಠರದಲ್ಲಿ ಅಗ್ನಿಯ ರೂಪದಲ್ಲಿದ್ದು, ನಾಲ್ಕು ಬಗೆಯ ಅನ್ನವನ್ನು ಮೂರು ಬಗೆಯಲ್ಲಿ ವಿಭಾಗಮಾಡಿ, ದೇಹಕ್ಕೆ ಉಣಬಡಿಸಿ ನಮಗೆ ಬದುಕಲು ವ್ಯವಸ್ಥೆ ಮಾಡಿಸುವವನು ಚತುರ್ಭುಜ. ಎಲ್ಲಾ ಆಹಾರ ಮಣ್ಣು-ನೀರು-ಬೆಂಕಿಯ ಮಿಶ್ರಣದಿಂದಾಗಿರುತ್ತದೆ. ಆಹಾರದ ಮಣ್ಣಿನ ಸೂಕ್ಷ್ಮ ಭಾಗ

ಮೆದುಳಿಗೆ, ಮಧ್ಯ ಭಾಗ ಮಾಂಸ-ಚರ್ಮಕ್ಕೆ ಹಾಗೂ ಸ್ಥೂಲ ಭಾಗ ಮಲವಾಗಿ ವಿಸರ್ಜನೆಯಾಗುತ್ತದೆ. ಅದೇ ರೀತಿ ನೀರಿನ ಸೂಕ್ಷ್ಮ ಭಾಗ ಉಸಿರಾಗಿ, ಮಧ್ಯ ಭಾಗ ನೆತ್ತರಾಗಿ ಹಾಗೂ ಸ್ಥೂಲ ಭಾಗ ಮೂತ್ರವಾಗಿ ವಿನಿಯೋಗವಾಗುತ್ತದೆ. ಇನ್ನು ಬೆಂಕಿಯ ಸೂಕ್ಷ್ಮ ಭಾಗ ವಾಕ್ ಶಕ್ತಿಯಾಗಿ, ಮಧ್ಯ ಭಾಗ ಅಸ್ಥಿಮಜ್ಜೆಯಾಗಿ, ಸ್ಥೂಲ ಭಾಗ ಹಲ್ಲು ಮತ್ತು ಅಸ್ಥಿಯಾಗಿ ವಿನಿಯೋಗವಾಗುತ್ತದೆ. ಈ ರೀತಿ, ಚಿನ್ನದ ಗಣಿಯಿಂದ ಚಿನ್ನವನ್ನು ಬೇರ್ಪಡಿಸುವುದಕ್ಕಿಂತ ಕಠಿಣವಾದ ಈ ಕಾರ್ಯವನ್ನು ನಮ್ಮೊಳಗಿದ್ದು ವ್ಯವಸ್ಥಿತ ರೀತಿಯಲ್ಲಿ ಮಾಡಿ, ನಾಲ್ಕು ಬಗೆಯ ಆಹಾರವನ್ನು ಮೇಲಿನ ಮೂರು ರೀತಿಯಲ್ಲಿ ವಿನಿಯೋಗ ಮಾಡುವ ಭಗವಂತ ಚತುರ್ಭುಜ.

ಭ್ರಾಜಿಷ್ಣುರ್ಭೋಜನಂ ಭೋಕ್ತಾ ಸಹಿಷ್ಣುರ್ಜಗದಾದಿಜಃ ।
ಅನಘೋ ವಿಜಯೋ ಜೇತಾ ವಿಶ್ವಯೋನಿಃ ಪುನರ್ವಸುಃ ॥೨೯॥

೧೪೧)ಭ್ರಾಜಿಷ್ಣುಃ

ಭ್ರಾಜಿಷ್ಣು ಎಂದರೆ ಬೆಳಕಿನ ಪುಂಜವಾಗಿ ಪ್ರಕಾಶಿಸುವವನು ಎಂದರ್ಥ. ಗೀತೆಯಲ್ಲಿ ಕೃಷ್ಣ ಹೇಳುವಂತೆ:

ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ಅ-೧೦, ಶ್ಲೋ-೨೧॥

ಅಂದರೆ ರವಿಯಲ್ಲಿ ರವಿಯಾಗಿ ಪ್ರತೀ ಕಿರಣದಲ್ಲಿ ನಾನಿದ್ದೇನೆ ಎಂದರ್ಥ.

ಇನ್ನು ಈ ಪದವನ್ನು ಒಡೆದರೆ ಭ್ರಾ+ವಿಷ್ಣು, ಇಲ್ಲಿ 'ಭ್ರಾ' ಎಂದರೆ 'ಭರಣ'. ಆದ್ದರಿಂದ ಭ್ರಾಜಿಷ್ಣು ಎಂದರೆ ಎಲ್ಲವನ್ನೂ ಧರಿಸಿದವನು. ಈ ಪದವನ್ನು ಮುಂದಕ್ಕೆ ಒಡೆದರೆ, ಭ+ಆಜಿ+ಷ್ಣು. ಇಲ್ಲಿ 'ಆಜಿ' ಎಂದರೆ ಯುದ್ಧ, 'ಭ' ಎಂದರೆ ಗೆಲ್ಲುವಂತೆ ಮಾಡುವವನು, 'ಷ್ಣು' ಎಂದರೆ ಎಲ್ಲರ ಒಳಗೆ ನಿಂತು ಪ್ರೇರಣೆ ಮಾಡುವವ. ಆದ್ದರಿಂದ ಭ್ರಾಜಿಷ್ಣು ಎಂದರೆ ನಮ್ಮೊಳಗೇ ಇರುವ ವೈರಿಗಳಾದ ಕಾಮ, ಕ್ರೋಧ, ಮದ, ಮತ್ಸರ, ಇತ್ಯಾದಿ ವೈರಿಗಳ ವಿರುದ್ಧ ಹೋರಾಟದಲ್ಲಿ ನಮಗೆ ಗೆಲುವನ್ನು ತಂದು ಕೊಡುವವನು. ಇದು ನಮಗೆ ಭಗವಂತ ಕೊಡುವ ಶಿಕ್ಷಣ. ದೇವತೆಗಳು ನಮ್ಮನ್ನು ಪರೀಕ್ಷೆಗೆ ಒಡ್ಡಿ ನಮಗೆ ಶಿಕ್ಷಣ ಕೊಡುತ್ತಾರೆ. ಇಂತಹ ಪರೀಕ್ಷೆಯಲ್ಲಿ ನಾವು ಉತ್ತೀರ್ಣರಾಗಿ ಹೊರಬರಲು ಭಗವಂತ ನಮಗೆ ಸದಾ ಸಹಕಾರವನ್ನು ಕೊಡುತ್ತಾನೆ. ಆದ್ದರಿಂದ ಇದು ಶಿಕ್ಷೆ ಅಲ್ಲ-ಶಿಕ್ಷಣ.

೧೪೨) ಭೋಜನಂ

ಭಗವಂತ ಅನ್ನವೂ ಹೌದು, ಉಣ್ಣುವವನೂ ಹೌದು!!

ಗೀತೆಯಲ್ಲಿ ಹೇಳುವಂತೆ:

ಬ್ರಹ್ಮಾರ್ಪಣಂ ಬ್ರಹ್ಮಹವಿಃ, ಬ್ರಹ್ಮಾಗ್ನೌಬ್ರಹ್ಮಣಾ ಹುತಮ್ ।
ಬ್ರಹ್ಮೈವತೇನ ಗಂತವ್ಯಂ, ಬ್ರಹ್ಮಕರ್ಮ ಸಮಾಧಿನಾ ॥ಅ-೪,ಶ್ಲೋ-೨೪॥

ಅಂದರೆ ಅರ್ಪಣವೂ ಭಗವಂತ, ಅರ್ಪಿಸುವ ಹವಿಸ್ಸೂ ಭಗವಂತ. ಭಗವಂತನ ಸನ್ನಿಧಾನವಿಲ್ಲದ ಯಾವ ವಸ್ತುವೂ ಇಲ್ಲ. ಅನ್ನವೂ ಭಗವಂತ, ಅನ್ನವನ್ನು ತಿನ್ನುವವನೂ ಭಗವಂತ. ನಮಗೆ ತಿನ್ನುವ ಯೋಗ ಬಂದಿದ್ದೂ ಭಗವಂತನಿಂದ. ಈ ರೀತಿ ಎಲ್ಲರಿಗೂ ಆನಂದವನ್ನು ಕೊಡುವ(ಭೋಜಯತಿ) ಭಗವಂತನನ್ನು ಭೋಜನಂ ಎನ್ನುತ್ತಾರೆ.[ಇಲ್ಲಿ ಅನ್ನ ಎಂದರೆ ಅಕ್ಕಿಯಿಂದ ಮಾಡಿದ ಅನ್ನ ಮಾತ್ರವಲ್ಲ. ಸಂಸ್ಕೃತದಲ್ಲಿ ಅನ್ನ ಎಂದರೆ ತಿನ್ನುವಂತಹ ವಸ್ತು **(Eatables)** ಎಂದರ್ಥ].

೧೪೩) ಭೋಕ್ತಾ

ಭೋಕ್ತಾ ಎಂದರೆ ಆಹಾರವನ್ನು ಸ್ವೀಕರಿಸುವವ. ಜಗತ್ತಿನ ಎಲ್ಲಾ ಸಾರವನ್ನು ಸ್ವೀಕರಿಸುವವ.

ಗೀತೆಯಲ್ಲಿ ಹೇಳುವಂತೆ:

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ । (ಅ-೯ ಶ್ಲೋ ೨೪)

ಯಜ್ಞದಲ್ಲಿ ನಾವು ಮಾಡುವ ಎಲ್ಲಾ ಆಹುತಿಯನ್ನು ಸ್ವೀಕರಿಸುವವ ಆ ಭಗವಂತ. ಆದ್ದರಿಂದ ಆತ ಯಜ್ಞ, ಯಜ್ಞಪುರುಷ, ಯಜ್ಞಭಾವನ, ಯಜ್ಞಭೋಕ್ತ. ನಾವು ದೇವರಿಗೆ ಅರ್ಪಿಸುವ ನೈವೇದ್ಯ/ಹವಿಸ್ಸನ್ನು ನಮಗೆ ಕೊಟ್ಟವನೂ ಭಗವಂತ, ಸ್ವೀಕರಿಸುವವನೂ ಅವನೇ. ಹೀಗೆ ಆನಂದಭೋಕ್ತನಾದ ಭಗವಂತನನ್ನು ನಾವು ಭೋಕ್ತಾ ಎನ್ನುವ ನಾಮದಿಂದ ಉಪಾಸನೆ ಮಾಡುತ್ತೇವೆ.

೧೪೪) ಸಹಿಷ್ಣುಃ

ಸಹಿಷ್ಣು ಎಂದರೆ ಸಹನೆ ಉಳ್ಳವನು ಎಂದರ್ಥ. ಯಾವುದಕ್ಕೂ ಮಣಿಯದ, ತಾಕತ್ತಿದ್ದರೂ ಇನ್ನೊಬ್ಬರ ತಪ್ಪನ್ನು ಕ್ಷಮಿಸುವ ಮಹತ್ತಾದ ಗುಣವನ್ನು 'ಸಹಸ್ಸು' ಎನ್ನುತ್ತಾರೆ. ನಾವು ಮಾಡುವ ಕಾರ್ಯದ ಹಿಂದಿನ ಭಾವ ಪಾಪ ಅಥವಾ ಪುಣ್ಯಗಳನ್ನು ನಿರ್ಧರಿಸುತ್ತದೆ. ಸಾಮಾಜಿಕವಾಗಿ ಕಾಣುವ ಕೆಟ್ಟ ಕೆಲಸವನ್ನು ಮಾಡಿದ ನಮ್ಮ ಭಾವಕ್ಕನುಗುಣವಾಗಿ ನಮ್ಮನ್ನು ಭಗವಂತ ಕ್ಷಮಿಸಿ, ಪಾಪದ ಲೇಪದಿಂದ ವಿಮುಕ್ತನಾಗಿಸುತ್ತಾನೆ. ಭಗವಂತ 'ಸರ್ವ ಭಕ್ತಾಪರಾಧ ಸಹಿಷ್ಣು'. ಆತನ ಕ್ಷಮಾಗುಣಕ್ಕೆ ಅಜಾಮಿಳನ ಕಥೆ ಉತ್ತಮ ದೃಷ್ಟಾಂತ.

ಅಜಾಮಿಳ ಒಬ್ಬ ಬ್ರಾಹ್ಮಣ. ಸರಳ, ಮಿತಭಾಷಿ, ಸಾತ್ತ್ವಿಕ ವಿದ್ವಾಂಸನಾಗಿದ್ದ. ಗುರು, ಅತಿಥಿ, ಹಿರಿಯರ ಸೇವೆ ಮಾಡುತ್ತಿದ್ದ. ತನ್ನ ಕೈ ಹಿಡಿದ ಹೆಂಡತಿಯನ್ನೂ ಪ್ರೀತಿಸುತ್ತಿದ್ದ. ಒಂದು ದಿನ ಆತ ಕಾಡಿನಲ್ಲಿ ಸುಂದರಿಯಾದ ಒಬ್ಬ ಹೆಣ್ಣನ್ನು, ಅರೆನಗ್ನ ಸ್ಥಿತಿಯಲ್ಲಿ ನೋಡಿ ಆಕರ್ಷಣೆಗೊಳಪಟ್ಟ. ಇದರಿಂದ ಆತ ತನ್ನ ಹೆಂಡತಿ ಮತ್ತು ತಂದೆ ತಾಯಿಯರನ್ನು ಮರೆತು, ತಾನು ಕಂಡ ಕಾಡಿನ ಹುಡುಗಿಯ ಸಂಗದಲ್ಲಿ ಲೋಕವನ್ನು ಮರೆತ. ಆಕೆಯನ್ನು ಸಂತೋಷಪಡಿಸಲು ಮಾಡಬಾರದ ಕೆಲಸವನ್ನೆಲ್ಲಾ ಮಾಡಿದ. ಕುಡುಕನಾದ, ಕಳ್ಳತನ ಮಾಡಿದ, ಜೂಜಾಡಿದ. ಕಾಡಿನಲ್ಲಿ ಆಕೆಯೊಂದಿಗೆ ಸಂಸಾರ ಬೆಳೆಯಿತು, ಮಕ್ಕಳಾದವು. ಆತನ ಕೊನೆಯ ಮಗನ ಹೆಸರು 'ನಾರಾಯಣ'. ಒಂದು ರಾತ್ರಿ ಅಜಾಮಿಳನಿಗೆ ಘೋರ ರೂಪದ ಯಮದೂತರೇ ಕಣ್ಣೆದುರು ನಿಂತಂತಾಯಿತು. ಅವರ ಕೈಯಲ್ಲಿ ಯಮಪಾಶ! ಅಜಾಮಿಳನಿಗೆ ನಿಜಕ್ಕೂ ಭಯವಾಯಿತು. ತನ್ನ ಮಗ ನಾರಾಯಣನನ್ನು ಕೂಗಿ ಕರೆದ! - ಆಗ ಮಗನ ಬದಲು ಆತನಿಗೆ ವಿಷ್ಣುದೂತರು ಕಾಣಿಸುತ್ತಾರೆ. ತಕ್ಷಣ ಆತನಿಗೆ ಅಂತಃಪ್ರಜ್ಞೆ ಜಾಗೃತವಾಗಿ ಜ್ಞಾನೋದಯವಾಗುತ್ತದೆ. ಈ ರೀತಿ ಭಗವಂತ ಹಳಿತಪ್ಪಿ ಚಲಿಸುತ್ತಿದ್ದ ಆತನನ್ನು ಪುನಃ ಸರಿಯಾದ ದಾರಿಯಲ್ಲಿ ತಂದು ಉದ್ಧಾರ ಮಾಡುತ್ತಾನೆ. ನಂತರದ ದಿನಗಳಲ್ಲಿ ಆತ ಮಹಾತ್ಮನಾಗಿ ಬದುಕುತ್ತಾನೆ.

ನಮ್ಮಲ್ಲಿ ಸಾತ್ವಿಕತೆ ಮತ್ತು ಜ್ಞಾನ ಅನೇಕ ಜನ್ಮಗಳ ಫಲದಿಂದ ಬಂದಿರುತ್ತದೆ. ಯಾವುದೋ ಕೆಟ್ಟ ಕಾರಣದಿಂದ ನಾವು ದಾರಿತಪ್ಪಿದಾಗ, ಕರುಣಾಮಯನಾದ ಭಗವಂತ ನಮ್ಮನ್ನು ಶಿಕ್ಷಿಸುವ ಬದಲು ಕ್ಷಮಿಸಿ ಉದ್ಧಾರ ಮಾಡುತ್ತಾನೆ. ಎಂತಹ ತಪ್ಪನ್ನೂ ಕೂಡಾ ಕ್ಷಮಿಸುವ ಕಾರುಣ್ಯಮೂರ್ತಿ ಆ ಭಗವಂತ. ಆತ ನಮಗೆ ಕೊಡುವ ದುಃಖ ತಾಯಿ ತನ್ನ ಮಗುವನ್ನು ತಿದ್ದಲು ಕೊಡುವ ಶಿಕ್ಷೆಯಂತೆ. ಆತನ ಶಿಕ್ಷೆ ಕಾರುಣ್ಯದ ರಕ್ಷೆ. ಆತ ಯಾರನ್ನೂ ದ್ವೇಷಿಸುವುದಿಲ್ಲ. ಎಲ್ಲರ ಅಪರಾಧವನ್ನೂ ಸಹಿಸುವ ಭಗವಂತ ಸಹಿಷ್ಣು.

೧೪೫) ಜಗದಾದಿಜಃ

ಜಗದಾದಿಜ ಎಂದರೆ ಸೃಷ್ಟಿಯ ಮೊದಲು ಇದ್ದವ ಹಾಗೂ ಜಗತ್ತನ್ನು ಸೃಷ್ಟಿಸುವ ಮೊದಲು ಚತುರ್ವ್ಯೂಹ ಮೂರ್ತಿಗಳಾದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎನ್ನುವ ನಾಲ್ಕು ರೂಪದಲ್ಲಿ ತನ್ನನ್ನು ತಾನು

ಸೃಷ್ಟಿ ಮಾಡಿಕೊಂಡವ. ಇಲ್ಲಿ ಸೃಷ್ಟಿಯಾಗುವುದು ಎಂದರೆ ಇದ್ದದ್ದು ಕಾಣುವ ರೂಪ- ತಳೆಯುವುದು. ಭಗವಂತ ಮೊದಲು ಪುರುಷನಾಮಕ ರೂಪವನ್ನು ಧರಿಸಿದ. ನಂತರ ಮಹತತ್ವದ ಸೃಷ್ಟಿ ಮಾಡಿದ. ಆನಂತರ ಅಹಂಕಾರ ತತ್ವ(ಶಿವ)ದ ಸೃಷ್ಟಿಯಾಯಿತು. ಅಹಂಕಾರ ತತ್ವದಿಂದ ಪಂಚಭೂತಗಳ ಸೃಷ್ಟಿಯಾಯಿತು. ಪಂಚಭೂತಗಳಿಂದ ಪ್ರಪಂಚಪುರುಷನ ಸೃಷ್ಟಿ ಹಾಗೂ ಬ್ರಹ್ಮಾಂಡ ಸೃಷ್ಟಿಯಾಯಿತು. ಬ್ರಹ್ಮಾಂಡದಿಂದ ಪಿಂಡಾಂಡ ಸೃಷ್ಟಿಯಾಯಿತು. ಭಗವಂತ ಒಂದೊಂದು ಪಿಂಡಾಂಡದಲ್ಲಿ ಬಿಂಬ ರೂಪಿಯಾಗಿ ನೆಲೆಸಿದ.

ಸೂಕ್ಷ್ಮ ಸೃಷ್ಟಿ ಭಗವಂತನ ನಾಭಿ ಕಮಲ. ಈ ಸೂಕ್ಷ್ಮ ಪ್ರಪಂಚವನ್ನು ಚತುರ್ಮುಖ ವಿಸ್ತಾರಗೊಳಿಸಿ ಸ್ಥೂಲ ಪ್ರಪಂಚ ಸೃಷ್ಟಿ ಮಾಡಿದ. ಮಹತತ್ವದಿಂದ ಅಹಂಕಾರ ತತ್ವದ ಒಡೆಯನಾಗಿ ಶಿವ ಬಂದ. ಶಿವನಿಂದ ಅಹಂಕಾರ ತತ್ವದ ಮೂರು ರೂಪಗಳ ಸೃಷ್ಟಿಯಾಯಿತು. ಅವುಗಳೆಂದರೆ: ೧. ಸಾತ್ವಿಕ ಅಹಂಕಾರ ತತ್ವ ೨.ರಾಜಸ ಅಹಂಕಾರ ತತ್ವ ೩.ತಾಮಸ ಅಹಂಕಾರ ತತ್ವ. ಸಾತ್ವಿಕ ಮತ್ತು ರಾಜಸ ಅಹಂಕಾರ ತತ್ವದಿಂದ ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ ಹಾಗೂ ಅದರ ತತ್ವಾಭಿಮಾನಿ ದೇವತೆಗಳ ಸೃಷ್ಟಿಯಾಯಿತು. ತಾಮಸ ಅಹಂಕಾರತತ್ವದಿಂದ ಪಂಚ ಭೂತಗಳ ಹಾಗೂ ಅದರ ತತ್ವಾಭಿಮಾನಿ ದೇವತೆಗಳ ಸೃಷ್ಟಿಯಾಯಿತು. ಈ ರೀತಿ ನಮಗೆ ಕಾಣುವ ಈ ಪ್ರಪಂಚ ಸೃಷ್ಟಿಯಾಯಿತು. ಈ ರೀತಿ ಜಗತ್ತಿಗೆ ಮೂಲ ಕಾರಣನಾಗಿ ಸೃಷ್ಟಿ-ಸ್ಥಿತಿ-ಸಂಹಾರಗಳಿಗೆ ಕಾರಣನಾಗಿರುವ ಎಲ್ಲರ ಜನಕನಾದ ಭಗವಂತ ಜಗದಾದಿಜ.

೧೪೭) ಅನಘಃ

ಅಘ ಎಂದರೆ ಪಾಪ, ದುಃಖ, ವ್ಯಸನ ಇತ್ಯಾದಿ. ಇಲ್ಲಿ ವ್ಯಸನ ಎಂದರೆ ಚಾಳಿ ಅಥವಾ ಚಟ. ಭಗವಂತನಿಗೆ ಯಾವ ಪಾಪದ ಲೇಪವೂ ಇಲ್ಲ. ಆತ ಸಂಹಾರ ಮಾಡುವುದು ಕಾರುಣ್ಯದಿಂದ ಹೊರತು ದ್ವೇಷದಿಂದಲ್ಲ. ಉದಾಹರಣೆಗೆ ಕೃಷ್ಣ ದ್ರೋಣಾಚಾರ್ಯರನ್ನು "ಅಶ್ವತ್ಥಾಮ ಸತ್ತ" ಎಂದು ಧರ್ಮರಾಯನಲ್ಲಿ ಹೇಳಿಸಿ ಕೊಲ್ಲುತ್ತಾನೆ. ಇದರ ಹಿಂದಿರುವ ಕಾರುಣ್ಯ ಅಪಾರವಾದದ್ದು. ದುರ್ಯೋಧನನಂತಹ ದುಷ್ಟ, ಸಮಾಜಕಂಟಕ, ದ್ರೋಹಿಯ-ಅನ್ನದ ಋಣಕ್ಕೋಸ್ಕರ ಪ್ರತಿದಿನ ಹತ್ತು ಸಾವಿರ ಸೈನಿಕರನ್ನು ಸಾಯಿಸುತ್ತೇನೆ ಎನ್ನುವ ಮಹಾ ಪಾತಕವಾದ ಪ್ರತಿಜ್ಞೆ ಮಾಡಿದ್ದ ದ್ರೋಣರನ್ನು, ಪಾಪದ ಕಡಲಿನಿಂದ ರಕ್ಷಿಸಲು ಭಗವಂತ ಆತನನ್ನು ಸಾಯಿಸುತ್ತಾನೆ. ಇಲ್ಲಿ ಭಗವಂತ ನಿರ್ವಿಕಾರ ಹಾಗೂ ನಿರ್ಲಿಪ್ತ. ಆತನಿಗೆ ಸಾಯಿಸುವುದು ವ್ಯಸನವಲ್ಲ ಹಾಗೂ ದುಃಖ-ಪಾಪದ ಲೇಪ ಅವನಿಗಿಲ್ಲ.

೧೪೮)ವಿಜಯಃ

ಅರ್ಜುನನನ್ನು 'ವಿಜಯ' ಎಂದು ಕರೆಯುತ್ತಾರೆ. ಹೆಚ್ಚು ಯುದ್ಧಗಳಲ್ಲಿ ಪಾಲ್ಗೊಂಡು ಕಪ್ಪ-ಕಾಣಿಕೆ ಸಂಗ್ರಹಿಸಿದ್ದರಿಂದ ಆತನಿಗೆ ಈ ಅನ್ವರ್ಥನಾಮ. ಸೂಕ್ಷ್ಮವಾಗಿ ನೋಡಿದರೆ ಅತಿಹೆಚ್ಚು ಸಂಪತ್ತು ಹಾಗೂ ಅತಿದೊಡ್ಡ ವಿಜಯ ಪಾಂಡವರಿಗೆ ಭೀಮಸೇನ ಜರಾಸಂಧನನ್ನು ಜಯಿಸಿದಾಗ ಬಂದಿರುವುದು. ಆದರೂ ರೂಢಿಯಲ್ಲಿ ಅರ್ಜುನನನ್ನು 'ವಿಜಯ', 'ಧನಂಜಯ' ಎಂದು ಕರೆಯುತ್ತಾರೆ. ಅರ್ಜುನನಲ್ಲಿ 'ನರ' ನಾಮಕ ಭಗವಂತನ ಸನ್ನಿಧಾನವಿದ್ದುದರಿಂದ, ಆಂಜನೇಯ ರೂಪಿ ಪ್ರಾಣದೇವರು ಆತನ ರಥದ ಧ್ವಜದಲ್ಲಿದ್ದುದರಿಂದ ಅರ್ಜುನ ವಿಜಯನಾದ. ಭಾಗವತದಲ್ಲಿ ಹೇಳುವಂತೆ ಅರ್ಜುನನ ಹಾಗೂ ಭೀಮನ ಒಳಗೆ ಕುಳಿತು, ವಿಜಯ ಸಾರಥಿಯಾಗಿ, ಧರ್ಮಸಂಸ್ಥಾಪನೆ ಮಾಡಿದ ಭಗವಂತ ನಿಜವಾದ ವಿಜಯ. ಪಾಂಡವರನ್ನು ಹೆಜ್ಜೆ ಹೆಜ್ಜೆಗೂ ವಿಜಯ ಪಥದತ್ತ ಕೊಂಡೊಯ್ದ ಭಗವಂತ ವಿಜಯ. ಇಷ್ಟೇ ಅಲ್ಲದೇ, ರಾಮಾವತಾರದಲ್ಲಿ ರಾವಣ-ಕುಂಭಕರ್ಣರನ್ನು, ನರಸಿಂಹ ಅವತಾರಿಯಾಗಿ ಹಿರಣ್ಯಕಷಿಪುವನ್ನು, ವರಾಹ ಅವತಾರದಲ್ಲಿ ಹಿರಣ್ಯಾಕ್ಷನನ್ನು, ಹೀಗೆ ಅನೇಕ ರಾಕ್ಷಸರನ್ನು ವಿಶಿಷ್ಟವಾದ ರೂಪದಲ್ಲಿ ಜಯಿಸಿದ ಭಗವಂತ ವಿಜಯ.

೧೪೮ ) ಜೇತಾ

ಜೇತೃ ಎಂದರೆ ಎಲ್ಲವನ್ನೂ ಗೆದ್ದವನು. ವಿಜಯ ನಾಮದಲ್ಲಿ ನೋಡಿದಂತೆ ಭಗವಂತ ಎಲ್ಲರನ್ನೂ ಗೆದ್ದವನು. ಎಲ್ಲರನ್ನೂ ಗೆದ್ದು, ಎಲ್ಲರಿಗಿಂತ ಎತ್ತರದಲ್ಲಿದ್ದು, ನಮ್ಮನ್ನು ಎತ್ತರಕ್ಕೇರಿಸುವ ಅರಿಗಳನ್ನು ಗೆದ್ದ ಭಗವಂತ ಜೇತಾ.

೧೪೯) ವಿಶ್ವಯೋನಿಃ

ಈ ನಾಮ ಹಿಂದೊಮ್ಮೆ ಬಂದಿದೆ. ಇಲ್ಲಿ 'ವಿ' ,'ಶ್ವ' ಎಂದರೆ ಹಕ್ಕಿಯ ಮೇಲೆ ಕೂರುವವ, ಹಾಗೂ ಯೋನಿ ಎಂದರೆ ಎಲ್ಲಕ್ಕೂ ಕಾರಣಕರ್ತ, ಜಗದ ಜನಕ ಎಂದರ್ಥ.

ಗೀತೆಯಲ್ಲಿ ಹೇಳುವಂತೆ:

ಮಮ ಯೋನಿರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ (ಅ-೧೪,ಶ್ಲೋ ೩)

ಬ್ರಹ್ಮ ಶಬ್ದ ವಾಚ್ಯಳಾದ ಚಿತ್ ಪ್ರಕೃತಿ ಯಾರ ಪತ್ನಿಯೋ, ಇಡೀ ವಿಶ್ವವು ಯಾರ ಅಭಿವ್ಯಕ್ತಿಗೆ ಕಾರಣವೋ, ಅವನು ವಿಶ್ವಯೋನಿ. ಈ ರೀತಿ ಮುಖ್ಯಪ್ರಾಣಾಂತರ್ಗತನಾದ ನಾರಾಯಣನನ್ನು ವಿಶ್ವಯೋನಿ ಎನ್ನುತ್ತಾರೆ.

೧೫೦) ಪುನರ್ವಸುಃ

ಇಲ್ಲಿ ವಸು ಎಂದರೆ ಸಂಪತ್ತು. ಭಗವಂತ ಒಮ್ಮೆ ಬಡತನ ಕೊಟ್ಟರೆ ಪುನಃ ಸಂಪತ್ತನ್ನು ಕೊಡುತ್ತಾನೆ. ದೇವತೆಗಳ ಸಂಪತ್ತನ್ನೆಲ್ಲಾ ಅಪಹಾರ ಮಾಡಿದ ಬಲಿಯನ್ನು ಸೋಲಿಸಿ, ದೇವತೆಗಳಿಗೆ ಅವರ ಸಂಪತ್ತನ್ನು ಪುನಃ ಹಿಂತಿರುಗಿಸಿದ ಭಗವಂತ, ತಲೆಯನ್ನು ತನ್ನ ಪಾದ ಪೀಠವನ್ನಾಗಿ ಮಾಡಿದ ಬಲಿಯನ್ನು ಮುಂದಿನ ಮನ್ವಂತರದಲ್ಲಿ ಇಂದ್ರನನ್ನಾಗಿ ಮಾಡಿದ. ಹೀಗೆ ಒಮ್ಮೆ ಜ್ಞಾನವನ್ನೂ, ಇನ್ನೊಮ್ಮೆ ಅಜ್ಞಾನವನ್ನೂ, ಒಮ್ಮೆ ಸಂಪತ್ತನ್ನೂ, ಇನ್ನೊಮ್ಮೆ ಬಡತನವನ್ನೂ ಕೊಟ್ಟು, ನಮ್ಮನ್ನು ಪರಿಣತರನ್ನಾಗಿ ಮಾಡುವ ಭಗವಂತ ಪುನರ್ವಸುಃ.

ಉಪೇಂದ್ರೋ ವಾಮನಃ ಪ್ರಾಂಶುರಮೋಘಃ ಶುಚಿರೂರ್ಜಿತಃ ।
ಅತೀಂದ್ರಃ ಸಂಗ್ರಹಃ ಸರ್ಗೋ ಧೃತಾತ್ಮಾ ನಿಯಮೋ ಯಮಃ ॥೩೦॥

೧೫೧) ಉಪೇಂದ್ರಃ

ಉಪೇಂದ್ರ ಎನ್ನುವ ಭಗವಂತನ ನಾಮ ತುಂಬಾ ರೋಚಕವಾದ ಅರ್ಥವನ್ನು ಕೊಡುವ ನಾಮ. ಹಿಂದೆ ನೋಡಿದಂತೆ(೩೯ನೇ ನಾಮ)ಅದಿತಿ-ಕಶ್ಯಪರ ಹನ್ನೆರಡು ಮಂದಿ ಮಕ್ಕಳಲ್ಲಿ ಒಬ್ಬ ಇಂದ್ರ ಹಾಗೂ ಕೊನೇಯ ಮಗ ವಾಮನ ರೂಪಿ ಭಗವಂತ. ಇಂದ್ರನ ತಮ್ಮನಾಗಿ ಹುಟ್ಟಿದ ಭಗವಂತನನ್ನು ಉಪೇಂದ್ರ ಎನ್ನುತ್ತಾರೆ. ಅಜಗನ್ಯಃ ಜಗನ್ಯಜಃ - ಅಂದರೆ ಯಾರಿಗೂ ಚಿಕ್ಕವನಲ್ಲ ಆದರೆ ಹುಟ್ಟಿನಲ್ಲಿ ಎಲ್ಲರಿಗಿಂತ ಚಿಕ್ಕವ-ವಾಮನ.

ಚತುರ್ಮುಖನ ಒಂದು ದಿನ ಅಂದರೆ ೪೩೨ ಕೋಟಿ ವರ್ಷಗಳ ಹಗಲು(ಸೃಷ್ಟಿ) ಹಾಗೂ ೪೩೨ ಕೋಟಿ ವರ್ಷಗಳ ರಾತ್ರಿ (ಪ್ರಳಯ). ಈ ೪೩೨ ಕೋಟಿ ವರ್ಷಗಳ ಹಗಲಿನಲ್ಲಿ ೧೪ ಮನ್ವಂತರಗಳಿರುತ್ತವೆ. ಪ್ರತೀ ಮನ್ವಂತರಕ್ಕೆ ಒಬ್ಬ ಇಂದ್ರ. ಪ್ರತೀ ಮನ್ವಂತರಕ್ಕೆ ಒಮ್ಮೆ ಸಂಪೂರ್ಣ ದೇವಗಣ ಬದಲಾಗುತ್ತದೆ. ಆದ್ದರಿಂದ ಪ್ರತೀ ಮನ್ವಂತರದಲ್ಲೂ ಇಂದ್ರನಿಗೆ ಸಹಾಯಕನಾಗಿ ಭಗವಂತ ಅವತರಿಸುತ್ತಾನೆ. ಹೀಗೆ ಇಂದ್ರನ ಬೆಂಬಲಕ್ಕಾಗಿ ಅವತರಿಸುವ ಭಗವಂತನನ್ನು ಉಪೇಂದ್ರ ಎನ್ನುತ್ತಾರೆ. ಮೊದಲನೇ ಮನ್ವಂತರದಲ್ಲಿ ಭಗವಂತ ಸ್ವತಃ ಇಂದ್ರನಾಗಿದ್ದುದರಿಂದ ಅಲ್ಲಿ ಉಪೇಂದ್ರ ಕಾಣಸಿಗುವುದಿಲ್ಲ. ವೈವಸ್ವತ ಮನ್ವಂತರದ ಉಪೇಂದ್ರರೂಪ-ವಾಮನ. ಆದ್ದರಿಂದ, ಇಂದ್ರನಿಂದ ಬಲಿ ರಾಜ್ಯವನ್ನು ಕಿತ್ತುಕೊಂಡಾಗ, ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಕೇಳಿ, ಇಂದ್ರನ ಸಂಪತ್ತನ್ನು ಮರಳಿ ಇಂದ್ರನಿಗೆ ಕೊಟ್ಟವ ಉಪೇಂದ್ರನಾದ ವಾಮನ ರೂಪಿ ಭಗವಂತ.

ಇನ್ನು ಉಪೇಂದ್ರ ಎನ್ನುವ ನಾಮದಲ್ಲಿ 'ಉಪ' ಎಂದರೆ 'ಉಪರಿ'-ಅಂದರೆ ಉತ್ಕೃಷ್ಟ ಎಂದರ್ಥ. ಈ ಸಂಸ್ಕೃತ ಶಬ್ದ ಇಂಗ್ಲೀಷಿನಲ್ಲಿ **up** ಅಥವಾ **upper** ಎಂದಾಯಿತು. ಜರ್ಮನ್ ಭಾಷೆಯಲ್ಲಿ **Über (Ueber )** ಎಂದಾಯಿತು. ಹಿಂದಿಯಲ್ಲಿ **ऊपर** ಎಂದಾಯಿತು. 'ಉಪ' ಎಂದರೆ ಎತ್ತರ ಎನ್ನುವ ಅರ್ಥವನ್ನು ಅನೇಕ ಕಡೆ ಬಳಸುತ್ತೇವೆ. ಉದಾಹರಣೆಗೆ 'ಉಪನಿಷತ್ತು' ಅಂದರೆ ನಮ್ಮನ್ನು ಎತ್ತರಕ್ಕೆ ಕೊಂಡೊಯ್ಯುವ ಗ್ರಂಥ. 'ಉಪನಯನ' ಅಂದರೆ ಜ್ಞಾನಗಳಿಸಲು ಬೇಕಾದ ಎತ್ತರಕ್ಕೆ ಏರುವ ಕ್ರಿಯೆ. 'ಉಪವಾಸ' ಅಂದರೆ ಮನಸ್ಸನ್ನು ಎತ್ತರಕ್ಕೇರಿಸಲು ನಮ್ಮ ಹೊಟ್ಟೆಯನ್ನು ಖಾಲಿ ಇಡುವುದು ಇತ್ಯಾದಿ. ಆದ್ದರಿಂದ ಇಲ್ಲಿ ಉಪೇಂದ್ರ ಎಂದರೆ ಸ್ವರ್ಗದ ಒಡೆಯನಾದ ಇಂದ್ರನಿಗಿಂತ ಮೇಲಿರುವ, ಮೂರುಲೋಕದ ಒಡೆಯನಾದ, ಬ್ರಹ್ಮಾಂಡ ನಾಯಕ ಭಗವಂತ ಎಂದರ್ಥ.

೧೫೨) ವಾಮನಃ

ಬಲಿಚಕ್ರವರ್ತಿಯನ್ನು ವಾಮನರೂಪಿ ಭಗವಂತ ಮೂರು ಹೆಜ್ಜೆ ಭೂಮಿ ಕೇಳಿ, ಸೋಲಿಸಿ ಉದ್ಧಾರ ಮಾಡಿದ ಕಥೆಯನ್ನು ನಾವು ಭಗವಂತನ ವಿಕ್ರಮೀ ಎನ್ನುವ ನಾಮ(೭೫ ನೇ ನಾಮ)ದಲ್ಲಿ ನೋಡಿದ್ದೇವೆ. ಇಲ್ಲಿ ವಾಮನ ಎಂದರೆ ಚಿಕ್ಕ ಗಾತ್ರದವ ಎಂದರ್ಥ. ಭಗವಂತ ಅಣುವಿಗಿಂತ ಅಣುವಾಗಿ ನಮ್ಮ ಹೃದಯಕಮಲದಲ್ಲಿ ತುಂಬಿದ್ದಾನೆ.

'ವಾಮ' ಎಂದರೆ ಸೌಂದರ್ಯ. ವಾಮನ ಎಂದರೆ ಸೌಂದರ್ಯವನ್ನು ಕೊಡುವವನು. ಸೌಂದರ್ಯದ ಕೇಂದ್ರಬಿಂದು ಕಣ್ಣು. ಭಗವಂತನ ಸನ್ನಿಧಾನ ಕಣ್ಣಿನಲ್ಲಿರುತ್ತದೆ. ಎಷ್ಟೇ ಸೌಂದರ್ಯವಿದ್ದರೂ, ಕಣ್ಣಿಲ್ಲದವ ಕುರೂಪಿಯಾಗಿರುತ್ತಾನೆ. ಈ ರೀತಿ ಸೌಂದರ್ಯದ ಸಾರಭೂತನಾದ ಭಗವಂತ ವಾಮನ. ಈ ಪದವನ್ನು ವಾ+ಅಮ+ನ ಎಂದು ಒಡೆದು ಅರ್ಥೈಸಬಹುದು. ಇಲ್ಲಿ 'ವಾ' ಎಂದರೆ ಜ್ಞಾನ, 'ಅಮ' ಎಂದರೆ ಅಜ್ಞಾನ ಹಾಗೂ 'ನ' ಎಂದರೆ ನಯತಿ. ಆದ್ದರಿಂದ ಜ್ಞಾನವನ್ನಾಗಲೀ, ಅಜ್ಞಾನವನ್ನಾಗಲೀ, ಅವರವರ ಯೋಗ್ಯತೆಗೆ ತಕ್ಕಂತೆ ಕರುಣಿಸುವ, ಜ್ಞಾನಮೂರ್ತಿಯೂ, ಆನಂದಮೂರ್ತಿಯೂ ಆದ ಭಗವಂತ ವಾಮನ.

೧೫೩) ಪ್ರಾಂಶುಃ

ಪ್ರಾಂಶುಃ ಎಂದರೆ ಪ್ರಕೃಷ್ಟವಾದ ಕಿರಣಗಳುಳ್ಳವ ಹಾಗೂ ಎತ್ತರದಲ್ಲಿರುವವ ಎಂದರ್ಥ. ಸೂರ್ಯನಲ್ಲಿ, ಚಂದ್ರನಲ್ಲಿ, ಎಲ್ಲಾ ಜೀವರಲ್ಲಿ, ಎಲ್ಲೆಲ್ಲೂ ತುಂಬಿರುವ ಭಗವಂತ ಪ್ರಾಂಶುಃ. ಬಲಿಚಕ್ರವರ್ತಿ ಭಗವಂತನ ಈ ರೂಪವನ್ನು ತಿಳಿದ ಮರುಕ್ಷಣದಲ್ಲಿ ಭಗವಂತನ ಪಾದಕಮಲಕ್ಕೆ ತಲೆಯೊಡ್ಡಿ ಶರಣಾಗುತ್ತಾನೆ.

೧೫೪) ಅಮೋಘಃ

ಮೋಘ ಎಂದರೆ ವ್ಯರ್ಥ ಎಂದರ್ಥ. ಭಗವಂತನ ಯಾವ ಕ್ರಿಯೆಯೂ ವ್ಯರ್ಥವಲ್ಲ-ಅದು ಅ-ಮೋಘ. ಭಗವಂತನಿಗೆ ಅರ್ಪಿಸಿ ನಾವು ಮಾಡುವ ಯಾವ ಕ್ರಿಯೆಯೂ ವ್ಯರ್ಥವಲ್ಲ. ಗೀತೆಯಲ್ಲಿ ಹೇಳುವಂತೆ:

ನೇಹಾಭಿಕ್ರ ಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ (ಅ-೨ ಶ್ಲೋ-೪೦)

ಎಂದರೆ "ಭಗವದ್ಸಾಧನೆಯ ಒಂದು ತೊದಲು ಹೆಜ್ಜೆ ಕೂಡಾ ವ್ಯರ್ಥವಲ್ಲ". ನಾವು ಕೋಟ್ಯಾಧಿಪತಿಯಾಗಬೇಕು ಎಂದು ದೇವರನ್ನು ಮರೆತು, ಜೀವನ ಪರ್ಯಂತ ಸಾಧನೆ ಮಾಡಿ ಗಳಿಸಿದ ಹಣ ನಮ್ಮೊಂದಿಗೆ ಬರುವುದಿಲ್ಲ. ಆದರೆ ಭಗವಂತನ ಜ್ಞಾನ ಅಥವಾ ಭಗವಂತನನ್ನು ತಿಳಿಯುವ ಇಚ್ಛೆ ನಮ್ಮ ಮುಂದಿನ ಜನ್ಮದ ಮೆಟ್ಟಿಲಾಗಿ ನಮ್ಮೊಂದಿಗೆ ಬರುತ್ತದೆ. ನಾವು ಮಾಡಿದ ಯಾವ ಕರ್ಮವಿರಲಿ, ಅದು ಒಳ್ಳೆಯದಾಗಿರಲೀ ಅಥವಾ ಕೆಟ್ಟದ್ದಾಗಿರಲೀ, ಅದು ಮೋಘವಾಗದೇ ಮುಂದಿನ ಜನ್ಮದಲ್ಲಿ ಫಲಿಸಿಯೇ ತೀರುವಂತೆ ನೋಡಿಕೊಳ್ಳುವ ಭಗವಂತ ಅಮೋಘಃ

೧೫೫) ಶುಚಿಃ

ಶುಚಿಃ ಎಂದರೆ "Ever Pure". ದೋಷದ ಸ್ಪರ್ಶವೇ ಇಲ್ಲದೆ ನಿರ್ಮಲವಾಗಿರುವ ಬೆಳಕಿನ ಪುಂಜ. ಭಗವಂತ ಬೆಂಕಿಯಂತೆ. ಬೆಂಕಿಗೆ ಏನನ್ನೇ ಹಾಕಿ, ಅದು ಕೊಳೆಯಾಗುವುದಿಲ್ಲ. ಆದರೆ ನೀರು, ಗಾಳಿ ಕೊಳೆಯಾಗುತ್ತದೆ. ಬೆಂಕಿಗೆ ಹಾಕಿದ ಕೊಳೆ ಕೂಡಾ ಶುಚಿಯಾಗುತ್ತದೆ. ಭಗವಂತ ಕೂಡಾ ಅಗ್ನಿಯಂತೆ. ಆತ ಸ್ವಯಂ ಬೆಳಕು ಹಾಗೂ ಎಲ್ಲರಿಗೂ ಬೆಳಕನ್ನು ಕೊಡುವವ. ಅಧರ್ಮಿಗಳಿಗೆ 'ಶೋಚ' ಅಥವಾ 'ದುಃಖ' ಕೊಡುವವನೂ ಅವನೇ.

೧೫೬) ಊರ್ಜಿತಃ

ಊರ್ಜಿತ ಎಂದರೆ ಅತ್ಯಂತ ಬಲಶಾಲಿ. ಭಗವಂತ ಎಲ್ಲವುದರಲ್ಲೂ ಪೂರ್ಣತೆ ಪಡೆದ, ಅನಂತವಾದ, ಅತ್ಯಂತ ಬಲಶಾಲಿ. ಆದ್ದರಿಂದ ಆತ ಊರ್ಜಿತಃ

೧೫೭) ಅತೀಂದ್ರಃ

ಅತೀಂದ್ರ ಎಂದರೆ ಇಂದ್ರನನ್ನು ಮೀರಿ ನಿಂತವನು ಹಾಗೂ ಬ್ರಹ್ಮ- ವಾಯುವನ್ನೂ ಮೀರಿ ನಿಂತವನು. ಇಂದ್ರ ಎಂದರೆ ಸರ್ವಸಮರ್ಥ. ಜಗತ್ತಿನಲ್ಲಿ ನಾವು ಯಾವುದನ್ನು ಸರ್ವಸಮರ್ಥ ಎಂದು ತಿಳಿದಿದ್ದೇವೋ, ಆ ಎಲ್ಲಾ ಶಕ್ತಿಗಳನ್ನು ಮೀರಿನಿಂತ ಶಕ್ತಿಯಾದ ಭಗವಂತ ಅತೀಂದ್ರ. ಇಂದ್ರ ಎಂದರೆ ದೇವೇಂದ್ರ ಕೂಡಾ ಹೌದು. ಭಗವಂತ ದೇವೇಂದ್ರನನ್ನು ಮೀರಿ ನಿಂತ ಶಕ್ತಿ ಎಂದು ನಿರೂಪಿಸುವ ಕಥೆ ಶ್ರೀ ಕೃಷ್ಣ ನಮಗೆ ಗೋವರ್ಧನ ಪರ್ವತ ಎತ್ತಿ ತೋರಿಸಿಕೊಟ್ಟಿದ್ದಾನೆ. ಈ ರೀತಿ ಇಂದ್ರನನ್ನು, ಪ್ರಾಣ-ವಾಯುವನ್ನು, ಬ್ರಹ್ಮಾದಿ ದೇವತೆಗಳನ್ನು ಮೀರಿನಿಂತ, ಓಂಕಾರ ನಾಮಕ ಭಗವಂತ ಅತೀಂದ್ರಃ .

೧೫೮) ಸಂಗ್ರಹಃ

ನಮ್ಮ ಮನಸ್ಸಿನ ಶಕ್ತಿ ಸೀಮಿತ. ನಮಗೆ ಕೇವಲ ಸತ್ಯವನ್ನು ಮಾತ್ರ ಗ್ರಹಿಸುವ ಶಕ್ತಿ ಇಲ್ಲ. ಕೆಲವೊಮ್ಮೆ ನಾವು ಅಸತ್ಯವನ್ನು ಸತ್ಯವನ್ನಾಗಿ ಗ್ರಹಿಸುತ್ತೇವೆ. ಆದರೆ ಯಾವುದೇ ವಿಷಯವನ್ನು ನಿಶ್ಚಿತವಾಗಿ, ತದ್ವತ್ತಾಗಿ, ವಿಪರೀತ ಜ್ಞಾನದ ಸ್ಪರ್ಶವಿಲ್ಲದೇ, ಯಥಾರ್ಥವಾಗಿ ಗ್ರಹಿಸಬಲ್ಲ ಭಗವಂತ ಸಂಗ್ರಹಃ. ನಮಗೆ ಗ್ರಹಣ ಶಕ್ತಿಯನ್ನು ದಯಪಾಲಿಸಿದ, ನಾವು ಜಾರಿ ಬಿದ್ದಾಗ ಕೈಹಿಡಿದು ನಮ್ಮನ್ನು ಮೇಲಕ್ಕೆತ್ತಿ, ಆತ್ಮೀಯವಾಗಿ ಸ್ವೀಕರಿಸಿ, ಅಜ್ಞಾನವನ್ನು ತೊಲಗಿಸಿ, ಜ್ಞಾನವನ್ನು ಕೊಡುವ ಭಗವಂತ ಸಂಗ್ರಹಃ. ಪ್ರಳಯ ಕಾಲದಲ್ಲಿ ಎಲ್ಲಾ ಜೀವರನ್ನು ತನ್ನ ಉದರದಲ್ಲಿ ಸಂಗ್ರಹಿಸಿ, ಸೃಷ್ಟಿ ಕಾಲದಲ್ಲಿ ಪುನಃ ಆಯಾ ಜೀವಗಳ ಕರ್ಮಾನುಸಾರವಾಗಿ ಮರುಸೃಷ್ಟಿ ಮಾಡುವ ಭಗವಂತ ಸಂಗ್ರಹಃ.

೧೫೯) ಸರ್ಗಃ

ಸರ್ಗ ಎಂದರೆ ಎಲ್ಲವನ್ನೂ ಸೃಷ್ಟಿಮಾಡುವ ಶಕ್ತಿ. ಸೃಷ್ಟಿ ಎಂದರೆ ಸ್ವರೂಪೋತ್ಪತಿ. ಆಕಾಶದ ಸೃಷ್ಟಿ ಎಂದರೆ ಏನೂ ಇಲ್ಲದ ಆಕಾಶದಲ್ಲಿ ಎಲ್ಲವನ್ನೂ ತುಂಬಿ ಹೊಸ ರೂಪ ಕೊಡುವುದು. ಕಾಲದ ಸೃಷ್ಟಿ ಎಂದರೆ- ಕಾಲ ಎನ್ನುವ ಅಖಂಡವಾದದ್ದನ್ನು ಸೂರ್ಯ ಚಂದ್ರರ ಸೃಷ್ಟಿ ಮುಖೇನ ಅನೇಕ ಭಾಗಗಳನ್ನಾಗಿ ಮಾಡಿ, ಹೊಸ ರೂಪ ಕೊಡುವುದು. ಹೀಗೆ ಇಡೀ ವಿಶ್ವದ ಸೃಷ್ಟಿಕರ್ತ ಭಗವಂತ ಸರ್ಗಃ

೧೬೦) ಧೃತಾತ್ಮಾ

ಧೃತಾತ್ಮಾ ಎಂದರೆ ಎಲ್ಲವನ್ನೂ ಧರಿಸಿದವನು ಎಂದರ್ಥ. ಆತ ಬಿಂಬ ರೂಪನಾಗಿ, ಅನೇಕರೂಪಿಯಾಗಿ, ನಮ್ಮೊಳಗೇ ಇದ್ದಾನೆ. ಈ ದೇಹದ ಪಂಚಕೋಶಗಳಲ್ಲಿ, ಪಂಚ ಜ್ಞಾನೇಂದ್ರಿಯಗಳಲ್ಲಿ, ಪಂಚ ಕರ್ಮೇಂದ್ರಿಯಗಳಲ್ಲಿ, ಪಂಚ ರೂಪನಾಗಿ ಭಗವಂತನಿದ್ದಾನೆ.

ಸಪ್ತ ಧಾತುಗಳಲ್ಲಿ ಸಪ್ತರೂಪನಾಗಿ, ೩೬೦ ಅಸ್ಥಿಗಳಲ್ಲಿ, ೭೨,೦೦೦ ನಾಡಿಗಳಲ್ಲಿ, ಅನಂತ ರೂಪನಾಗಿ ವ್ಯಾಪಿಸಿದ್ದಾನೆ. ಪ್ರತಿಯೊಂದು ಮಾನವ ಶರೀರದಲ್ಲೂ ಭಗವಂತನ ಅನಂತ ರೂಪವಡಗಿದೆ. ಈ ಕಾರಣದಿಂದ ನಮ್ಮ ದೇಹವೇ ಒಂದು ದೇವಾಲಯ. ಆದ್ದರಿಂದ ಇಂತಹ ದೇವಾಲಯವನ್ನು ಛಿದ್ರಗೊಳಿಸುವ ಆತ್ಮಹತ್ಯೆ ಮಹಾ ಪಾಪ. ಜಗತ್ತಿನ ಇತರ ಜೀವ ಜಂತುಗಳಲ್ಲಿ ಭಗವಂತನಿದ್ದರೂ ಕೂಡಾ, ಪೂರ್ಣತೆ ಪಡೆಯದ ಇತರ ಜೀವಗಳಿಗಿಂತ ಮನುಷ್ಯನಲ್ಲಿ ಆತನ ಅಭಿವ್ಯಕ್ತ ಅತಿಹೆಚ್ಚು. ಈ ರೀತಿ ನಮ್ಮೊಳಗಿದ್ದು ಎಲ್ಲಾ ದೇವತೆಗಳನ್ನು ಧಾರಣೆ ಮಾಡಿ, ಎಲ್ಲಾ ಕಡೆ ತುಂಬಿರುವ ಆ ಭಗವಂತ ಧೃತಾತ್ಮಾ.

೧೬೧) ನಿಯಮಃ

ಭಗವಂತನನ್ನು ತಿಳಿಯಬೇಕಾದರೆ ನಾವು ನಮ್ಮಲ್ಲಿ ಐದು ನಿಯಮಗಳನ್ನು ಅಳವಡಿಸಿಕೊಳ್ಳಬೇಕು. ಅವುಗಳೆಂದರೆ: ಶೌಚ, ತಪಃ, ತೃಪ್ತಿಃ, ಸ್ವಾಧ್ಯಾಯ ಮತ್ತು ಪುರುಷಾರ್ಚನ.

೧)ಶೌಚ : ಕೊಳಕು ತುಂಬಿದ ಮೈ, ಕೊಳಕು ತುಂಬಿದ ಮನಸ್ಸಿಗೆ ಎಂದೂ ಭಗವಂತ ಗೋಚರಿಸುವುದಿಲ್ಲ. ನಮ್ಮ ದೇಹ-ಮನಸ್ಸು-ಮನೆ ಎಲ್ಲವೂ ಸ್ವಚ್ಛವಾಗಿರಬೇಕು. ನಾವು ನಮ್ಮ ತಲೆ ಮೇಲೆ ಒಂದು ಕೊಡ ನೀರು ಹಾಕಿಕೊಂಡಾಗ ಮಡಿಯಾಗುವುದಿಲ್ಲ . ಭಗವಂತನ ನೆನಪಿಗೆ ಪೋಷಕವಾದ ನಡೆ "ಮಡಿ". ನಿಜವಾದ ಮಡಿ ಎಂದರೆ ಏನೆಂದು ಈಗ ನೋಡೋಣ.

॥ಅಥಃ ಪ್ರಾತಃ ಸಂಧ್ಯಾ॥ ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಪಿವಾ ।ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥

ಅಂದರೆ ನೀನು ಯಾವುದೇ ಸ್ಥಿತಿಯಲ್ಲಿರು, ಕೆಂದಾವರೆಯ ಅರಳಿದ ಎಸಳಿನಂತೆ, ನಸುಗೆಂಪಾಗಿ, ಪ್ರೀತಿಯ ಕಾರುಣ್ಯದ ರಸಪೂರವನ್ನು ಹರಿಸುತ್ತಿರುವ, ಅರಳುಗಣ್ಣಿನ ಭಗವಂತನನ್ನು ನೆನೆಸಿಕೋ. ಆತನ ರಸಧಾರೆ ನಿನ್ನ ಮೇಲೆ ಬೀಳುತ್ತಿದೆ ಎಂದು ಯೋಚಿಸು. ಆಗ ನೀನು ಮಡಿಯಾಗುತ್ತೀಯ. ಈ ಸ್ಥಿತಿಯಲ್ಲಿ ನೀನು ಮೈಲಿಗೆಯಾಗಲು ಸಾಧ್ಯವಿಲ್ಲ. ನಿನ್ನನ್ನು ಮುಟ್ಟಿದವರೂ ಕೂಡಾ ನಿನ್ನಿಂದ ಮಡಿಯಾಗುತ್ತಾರೆ. ನೀನು ಧರಿಸಿರುವ ಬಟ್ಟೆಯಾಗಲೀ, ಇತರ ಯಾವುದೇ ವಸ್ತು ನಿನ್ನನ್ನು ಮೈಲಿಗೆ ಮಾಡಲಾರದು. ಭಗವಂತನ ಚಿಂತನೆ, ಭಗವಂತನ ಪ್ರಜ್ಞೆಯನ್ನು ಜಾಗೃತಗೊಳಿಸುವ ನಡೆಯೇ 'ಮಡಿ'. ಭಗವಂತನಿಂದ ದೂರ ಸರಿಸುವ ಅಜ್ಞಾನವೇ ಮೈಲಿಗೆ. ಇತರರನ್ನು ಮೈತ್ರಿಭಾವದಿಂದ ಕಾಣುವುದು, ಸಕಲವೂ ಪರಮಾತ್ಮನ ಸ್ವರೂಪವೇ ಎಂದು ಭಾವಿಸುವುದು ಶೌಚ. ಈ ಮನಃಸ್ಥಿತಿಯಿಂದ ನಿಜವಾದ ಸುಖ ದೊರೆಯುವುದು.

೨) ತಪಃ : ನಮ್ಮ ದೇಹ ಮತ್ತು ಮನಸ್ಸಿನ ಖಯಾಲಿಗಳಿಗೆ ಒಳಗಾಗದೆ, ನಮ್ಮ ಇಷ್ಟಕ್ಕೆ ತಕ್ಕಂತೆ ನಮ್ಮ ದೇಹ ಮನಸ್ಸನ್ನು ಮಣಿಸುವ ಕ್ರಿಯೆ ತಪಸ್ಸು. ಇವುಗಳ ಆಚರಣೆಯಿಂದ ಅಶುದ್ಧಿ ನಾಶವಾಗಿ ಅಂತಃಕರಣವು ಶುದ್ಧವಾಗುತ್ತದೆ.

೩) ತೃಪ್ತಿಃ : ಇದ್ದದರಲ್ಲಿ ತೃಪ್ತಿಪಟ್ಟು, ಹರಿಯ ಚರಣದ ಅರಿವಿನಿಂದ ನಮ್ಮ ಪಾಲಿನ ಕರ್ಮ ನಾವು ಮಾಡುವುದು.

೪) ಸ್ವಾಧ್ಯಾಯ: ಅಂದರೆ ನಿರಂತರ ಅಧ್ಯಯನ. ವೈದಿಕಮಂತ್ರಗಳ ಅರ್ಥಾನುಸಂಧಾನದಿಂದ ಸಿದ್ಧಿ ದೊರೆಯುತ್ತದೆ. ಮಂತ್ರರಹಸ್ಯ ಅರಿಯಲು ಸದ್ಗುರುವಿನ ಆಶ್ರಯ ಅವಶ್ಯ. (ಸ್ವಾಧ್ಯಾಯಾದಿಷ್ಟದೇವತಾ ಸಂಪ್ರಯೋಗಃ).

೫) ಪುರುಷಾರ್ಚನ: ಬದುಕಿನ ಪ್ರತಿಯೊಂದು ಕ್ರಿಯೆಯೂ ಭಗವಂತನ ಆರಾಧನೆ, ಹರಿಯ ಪೂಜೆ ಎನ್ನುವ ಎಚ್ಚರ, ಸಕಲಕ್ರಿಯಾದಿಗಳ ಫಲವನ್ನು ಅಪೇಕ್ಷಿಸದೇ ಈಶ್ವರನಲ್ಲಿ ಅರ್ಪಣೆ ಮಾಡುವುದು ಪುರುಷಾರ್ಚನ

ಕಾಮತೋಕಾಮತೋವಾಪಿ ಯತ್ಕರೋಮಿ ಶುಭಾಶುಭಂ ।

ತತ್ಸರ್ವಂ ತ್ವಯಿ ವಿನ್ಯಸ್ಯ ತ್ವತ್ಪ್ರಯುಕ್ತಃ ಕರೋಮ್ಯಹಂ ॥

ಅಂದರೆ, ಆಸೆಯಿಂದಲೋ ಅಥವಾ ಆಸೆ ಇಲ್ಲದೆಯೋ ಯಾವ ಶುಭಾಶುಭ ಕರ್ಮಗಳನ್ನು ಮಾಡುತ್ತೇವೆಯೋ, ಅವೆಲ್ಲವನ್ನೂ ಅವನಲ್ಲಿ ಅರ್ಪಿಸಿ, ಭಗವಂತನಿಗಾಗಿಯೇ ನಾನು ಎಲ್ಲಾ ಕರ್ಮಗಳನ್ನೂ ಮಾಡುತ್ತೇನೆ ಎಂದು ಈಶ್ವರನಲ್ಲಿ ಕಾಯೇನ-ವಾಚಾ-ಮನಸಾ ಅರ್ಪಣೆ ಮಾಡುವುದು.

ಈ ರೀತಿ ಮೇಲಿನ ಐದು ನಿಯಮಗಳಿಂದ ತಿಳಿಯಲ್ಪಡುವವನು, ಹಾಗೂ ನಮ್ಮ ಅಭಿವೃದ್ಧಿಗಾಗಿ ಈ ಐದು ನಿಯಮಗಳನ್ನು ನಿಯಮಿಸಿದವನು ನಿಯಮಃ.

೧೬೨) ಯಮಃ

ಯಮಃ ಎಂದರೆ ಯಮನೊಳಗಿದ್ದು ಪಾಪಿಗಳಿಗೆ ಶಿಕ್ಷೆ ಕೊಡುವವ, ಎಲ್ಲರನ್ನೂ ನಿಯಂತ್ರಿಸುವವ ಎನ್ನುವುದು ಸಾಮಾನ್ಯ ಅರ್ಥ. ಯಮಃ ಅನ್ನುವುದಕ್ಕೆ "ಯಮಗಳಿಂದ ವೇದ್ಯನಾದವನು" ಎನ್ನುವ ವಿಶೇಷ ಅರ್ಥವಿದೆ. ನಮ್ಮ ಅಭಿವೃದ್ಧಿಗೊಸ್ಕರ, ಸಮಾಜದ ಸ್ವಾಸ್ಥ್ಯಕ್ಕೋಸ್ಕರ ನಾವು ಬಿಡಬೇಕಾದ ಐದು ದುರ್ಗುಣಗಳನ್ನು ಯಮಗಳು ಎನ್ನುತ್ತಾರೆ. ಅವುಗಳೆಂದರೆ ೧) ಹಿಂಸೆ , ೨) ಸುಳ್ಳು ಹೇಳುವುದು , ೩) ಕಳ್ಳತನ ಮಾಡುವುದು , ೪) ಅನಗತ್ಯ ಇನ್ನೊಬ್ಬರ ಮುಂದೆ ಕೈ ಚಾಚುವುದು ಮತ್ತು ೫) ಅತಿ ಕಾಮುಕತೆ.

ಸಮಾಜಜೀವಿಯಾಗಿ ನಾವು ಅನುಸರಿಸಬೇಕಾದ ಐದು ನೀತಿ ಸಂಹಿತೆಗಳೆಂದರೆ: ೧) ಅಹಿಂಸಾ, ೨) ಸತ್ಯ, ೩)ಅಸ್ತೇಯ, ೪) ಬ್ರಹ್ಮಚರ್ಯ ಮತ್ತು ೫) ಅಪರಿಗ್ರಹ.

೧) ಅಹಿಂಸಾ: ಇನ್ನೊಬ್ಬರಿಗೆ ನೋವುಂಟುಮಾಡದಂತೆ ಬದುಕುವುದು.

೨) ಸತ್ಯ : ಸ್ವಾರ್ಥಕ್ಕೋಸ್ಕರ ಇನ್ನೊಬ್ಬರಲ್ಲಿ ಸುಳ್ಳು ಹೇಳದೇ, ಪ್ರಾಮಾಣಿಕನಾಗಿ ಬದುಕುವುದು. ಇನ್ನೊಬ್ಬರ ಮನ ನೋಯಿಸುವ ಸತ್ಯ ಹೇಳದೇ ಇರುವುದು.

೩) ಅಸ್ತೇಯ : ಕಳ್ಳತನ ಮಾಡದೇ ಇರುವುದು ನಮ್ಮ ನೀತಿಯಾಗಿರಬೇಕು.

೪) ಬ್ರಹ್ಮಚರ್ಯ: ಅತಿ ಕಾಮುಕನಾಗದೇ ಬದುಕುವುದು. ಇಲ್ಲಿ ಬ್ರಹ್ಮಚರ್ಯ ಎಂದರೆ ಮದುವೆಯಾಗದೇ ಇರುವುದು ಎನ್ನುವ ಅರ್ಥವಲ್ಲ. ಸಂಸಾರಿಯಾಗಿದ್ದೂ ಕೂಡಾ ಬ್ರಹ್ಮಚರ್ಯ ಪಾಲಿಸಬಹುದು. ಎಂದೂ ಪರಸ್ತ್ರೀ, ಪರಪುರುಷ ಸಂಗ ಬಯಸದೇ, ಕಾಮುಕನಾಗದೇ, ಭಗವಂತನ ಚಿಂತನೆಯಲ್ಲಿ ಬದುಕುವುದು ಸಂಸಾರಿಯ ಬ್ರಹ್ಮಚರ್ಯ.

೫) ಅಪರಿಗ್ರಹ : ಈ ಜಡ ಶರೀರಕ್ಕೆ ಬೇಕಾದ ಭೋಗವಸ್ತುಗಳನ್ನು ಬಯಸದಿರುವುದು. ನಮಗೆ ಬೇಕಾಗಿರುವುದನ್ನು ಇನ್ನೊಬ್ಬರಲ್ಲಿ ಒತ್ತಾಯಪೂರ್ವಕವಾಗಿ ಬಯಸದೇ, ಇನ್ನೊಬ್ಬರು ಕೊಟ್ಟದ್ದರಲ್ಲಿ ತೃಪ್ತಿ ಪಡುವುದು.

ಈ ರೀತಿ ಐದು ಯಮಗಳೆಂಬ ನೀತಿ ಸಂಹಿತೆಯನ್ನು ಸೃಷ್ಟಿಸಿದ ಭಗವಂತ ಯಮಃ

**ವೇದ್ಯೋ ವೈದ್ಯಃ ಸದಾಯೋಗೀ ವೀರಹಾ ಮಾಧವೋ ಮಧುಃ ।**
**ಅತೀಂದ್ರಿಯೋ ಮಹಾಮಾಯೋ ಮಹೋತ್ಸಾಹೋ ಮಹಾಬಲಃ ॥೩೧॥**

೧೬೩) ವೇದ್ಯಃ

ವೇದ್ಯಃ ಎಂದರೆ ಎಲ್ಲರೂ ತಿಳಿಯಬೇಕಾದವನು. ಜಗತ್ತಿನಲ್ಲಿ ಪ್ರತಿಯೊಂದು ಶಬ್ದ ಭಗವಂತನನ್ನು ಹೇಳುತ್ತದೆ. ಭಗವಂತನ ಹೆಸರಿಲ್ಲದ ನಾದವಿಲ್ಲ. ನಾವು ಜಗತ್ತನ್ನು ತಿಳಿಯಬೇಕಾದರೆ ಜಗತ್ತಿನ ತಂದೆಯಾದ ಆ ಭಗವಂತನನ್ನು ತಿಳಿಯಬೇಕು. ಅನಾದಿ ಕಾಲದಿಂದ ನಮ್ಮ ತಂದೆಯಾಗಿ ಪಾಲಿಸುತ್ತಿರುವವ ಆ ಭಗವಂತ. ಯಾರನ್ನು ತಿಳಿದರೆ ಎಲ್ಲವೂ ತಿಳಿಯುತ್ತದೋ, ಅವನೇ ಎಲ್ಲದರಿಂದ ವೇದ್ಯನಾದ ಭಗವಂತ. ಅವನ ಅರಿವಿಲ್ಲದ ಯಾವುದೇ ಅರಿವು ಈ ಪ್ರಪಂಚದಲ್ಲಿಲ್ಲ.

೧೬೪) ವೈದ್ಯಃ

ಎಲ್ಲಾ ವಿದ್ಯೆಗಳಿಂದ ಪ್ರತಿಪಾದನಾದವನು ವೈದ್ಯ. ಸಮಸ್ತ ವಿದ್ಯೆಗಳೂ ಅವನಿಗೆ ವೇದ್ಯ ಹಾಗೂ ಸಮಸ್ತ ವಿದ್ಯೆಗಳಿಂದ ಅವನೇ ವೇದ್ಯ. ಸದಾ ವೇದವಿದ್ಯೆಯ ಅಭಿಮಾನಿ ದೇವಿಯಾದ ಶ್ರೀ ತತ್ವದ ಜೊತೆಗಿರುವ ಲಕ್ಷ್ಮೀಪತಿ ಭಗವಂತ ವೈದ್ಯಃ

೧೬೫) ಸದಾಯೋಗೀ :

ಭಗವಂತ ಸರ್ವ ಯೋಗದಿಂದ ಗಮ್ಯನಾದವನು. ಆತ ಯೋಗ ಸಾಧನೆಯಲ್ಲಿ ಸದಾ ಗೋಚರಿಸುತ್ತಾನೆ. ಯೋಗಗಳಲ್ಲಿ ಅನೇಕ ವಿಧ.

೧) ಜ್ಞಾನಯೋಗ : ಭಗವಂತನನ್ನು ಜ್ಞಾನ ಯೋಗದಿಂದ ತಿಳಿಯಬಹುದು, ತಿಳಿದು ಪಡೆಯಬಹುದು.

೨) ಭಕ್ತಿಯೋಗ: ಭಗವಂತ ಸದಾ ಭಕ್ತಿಗೆ ಅಧೀನ. ಭಕ್ತಿಪೂರ್ವಕವಲ್ಲದ ಜ್ಞಾನ ಅಹಂಕಾರವಾಗುತ್ತದೆ. ಅನನ್ಯ, ನಿರಂತರ ಭಕ್ತಿ, ಸಾಧಕನ ಅತ್ಯಂತ ಶ್ರೇಷ್ಠ ಗುಣ. ನಾವು ಈ ಹಿಂದೆ ನೋಡಿದ ನಿಯಮ ಮತ್ತು ಯಮಗಳ ಜೊತೆಗೆ ಅಧ್ಯಾತ್ಮ ಭಕ್ತಿ ಇಲ್ಲದಿದ್ದರೆ ಯಮವೂ ಕೂಡಾ ದ್ವೇಷವಾಗಬಹುದು; ನಿಯಮ ಕೂಡಾ ಸ್ವಾರ್ಥವಾಗಬಹುದು!! ಪ್ರಾಮಾಣಿಕತೆ ಬರಬೇಕೆಂದರೆ ಸಾಮಾಜಿಕ ಕಾಳಜಿ (Horizontal line) ಜೊತೆಗೆ ಆಧ್ಯಾತ್ಮಿಕ ಭಕ್ತಿ (Vertical line) ಅತೀ ಮುಖ್ಯ. ಈ ಅಡ್ಡ(Horizontal) ಮತ್ತು ಲಂಬ(Vertical) ಗೆರೆಗಳ(lines) ಸಮಾಗಮದ ಚಿಹ್ನೆಯೇ ನಮ್ಮಲ್ಲಿ ಸ್ವಸ್ತಿಕ್ (卐) ಹಾಗೂ ಕ್ರಿಶ್ಚನ್ ಜನಾಂಗದಲ್ಲಿ ಕ್ರಾಸ್ (†) ಆಗಿ ಬಳಕೆಯಲ್ಲಿದೆ.

೩) ಕರ್ಮಯೋಗ : ಭಗವಂತನ ನಿಯಮದಂತೆ, ಭಗವಂತ ಮೆಚ್ಚುವಂತೆ ನಡೆಯುವುದು ಜ್ಞಾನಿಗಳ ದೊಡ್ಡ ಹೊಣೆಗಾರಿಕೆ. ಜ್ಞಾನಿಗಳು ಇಟ್ಟ ಹೆಜ್ಜೆಯನ್ನು ಎಲ್ಲರೂ ಹಿಂಬಾಲಿಸುತ್ತಾರೆ. ಆದ್ದರಿಂದ ಜ್ಞಾನಿ ಮಾಡುವ ಕರ್ಮಗಳಾದ ವೃತ, ನೇಮ, ಧ್ಯಾನ, ನಿಷ್ಠೆ, ಉಪಾಸನೆ, ಇತ್ಯಾದಿಗಳು ನಿಯಮಬದ್ಧವಾಗಿರಬೇಕು.

೪)ವೈರಾಗ್ಯಯೋಗ ಮತ್ತು ಐಶ್ವರ್ಯಯೋಗ : ಈ ಎರಡು ಯೋಗಗಳು ಒಟ್ಟಿಗೇ ಇರುವುದು ಅತೀ ವಿರಳ. ಕೇವಲ ಭಗವಂತನಲ್ಲಿ ಹಾಗೂ ಭಗವಂತನ ಸಾನಿಧ್ಯವಿರುವ ಯೋಗಿಗಳಲ್ಲಿ ಈ ಗುಣವನ್ನು ಕಾಣುತ್ತೇವೆ.

ಈ ರೀತಿ ಸದಾ ಯೋಗದಿಂದ ತಿಳಿಯಲ್ಪಡುವ ಹಾಗೂ ಸದಾ ವಿಯೋಗವಿಲ್ಲದೆ ಶ್ರೀತತ್ವದೊಂದಿಗಿರುವ ಭಗವಂತ ಸದಾಯೋಗೀ.

೧೬೬) ವೀರಹಾ

ನಮಗೆ ಪೌರುಷ ಕೊಡುವವನು ಹಾಗೂ ನಾವು ಪೌರುಷದ ಅಹಂಕಾರ ತೋರಿಸಿದಾಗ ಅದನ್ನು ಮುರಿಯುವ ಭಗವಂತ, ಪ್ರತೀ ವೀರರ ಒಳಗೆ ಬಲ ದೇವತೆಯಾಗಿ ನಿಂತಿದ್ದಾನೆ. ಹಿಂದೆ ಹೇಳಿದಂತೆ 'ವೀ' ಎಂದರೆ ಪಕ್ಷಿ, 'ಇರ' ಎಂದರೆ ಪ್ರಾಣದೇವರು. ಪಕ್ಷಿ ವಾಹನನಾಗಿ, ವಾಯು ದೇವರಲ್ಲಿದ್ದು ವಿಹರಿಸುವ ಸರ್ವವೀರ ಭಗವಂತ ವೀರಹಾ.

೧೬೭) ಮಾಧವಃ

ಈ ನಾಮ ಹಿಂದೊಮ್ಮೆ ಬಂದಿದೆ. ಈ ನಾಮಕ್ಕೆ ಲಕ್ಷ್ಮೀಪತಿ, ಮಧು ವಂಶದಲ್ಲಿ ಅವತರಿಸಿದವ, ಸರ್ವಶಬ್ದ ವಾಚ್ಯ, ಸರ್ವವೇದ ವಾಚ್ಯ ಇತ್ಯಾದಿ ಅರ್ಥಗಳನ್ನು ನಾವು ಈ ಹಿಂದೆ ನೋಡಿದ್ದೇವೆ. ಮುಂದೆ ಈ ನಾಮವನ್ನು ವಿಶ್ಲೇಷಿಸಿದರೆ- 'ಮಾ' ಎಂದರೆ ಜ್ಞಾನ. ಭಗವಂತ ಎಲ್ಲಾ ಜ್ಞಾನಗಳ ಸ್ವಾಮಿ. ಸಮಸ್ತ ದೇವತೆಗಳಿಗೆ ಆತನೇ ಲೋಕ ಗುರು. ಅದಕ್ಕಾಗಿ ನಾವು "ಕೃಷ್ಣಂ ಒಂದೇ ಜಗದ್ಗುರುಂ" ಎನ್ನುತ್ತೇವೆ. ನಾವು ಯಾವುದೇ ಗ್ರಂಥ ಅಧ್ಯಯನ ಮಾಡುವ ಮೊದಲು "ಸಹ ನಾವವತು । ಸಹ ನೌ ಭುನಕ್ತು । " ಎನ್ನುತ್ತೇವೆ. ಅಂದರೆ ಗುರು-ಶಿಷ್ಯರ ಒಳಗೆ ಭಗವಂತ ಪ್ರವೇಶಿಸಲಿ ಎಂದರ್ಥ. ಹೀಗೆ ಎಲ್ಲಾ ಜ್ಞಾನಗಳ ಸ್ವಾಮಿ, ಜಗದ್ಗುರು, ಭಗವಂತ ಮಾಧವಃ .

೧೬೮) ಮಧುಃ

ಮಧು ಎಂದರೆ ಆನಂದ. ಭಗವಂತ ಆನಂದದ ಕಡಲು. ಕಡಲಿಗಾದರೂ ಸೀಮೆ ಇದೆ, ಆದರೆ ಭಗವಂತ ಅನಂತ ಆನಂದ ಸ್ವರೂಪ.

೧೬೯) ಅತೀಂದ್ರಿಯಃ

ಭಗವಂತ ಎಲ್ಲಾ ಕಡೆ ಇದ್ದರೂ, ಆತ ನಮ್ಮ ಇಂದ್ರಿಯಗಳಿಗೆ ಗೋಚರಿಸುವುದಿಲ್ಲ. ಏಕೆಂದರೆ ಆತನದು ನಮ್ಮ ಮಾತು-ಮನಗಳಿಗೆ ನಿಲುಕದ ಸ್ವರೂಪ. ನಾವು ಸಮುದ್ರದ ಜೊತೆಗಿದ್ದೂ ಸಮುದ್ರವನ್ನು ಗ್ರಹಿಸಲಾರದ ಮರಳಿನ ಕಣದಂತೆ. ಯಾವಾಗಲೂ ಭಗವಂತನ ಜೊತೆಗಿದ್ದರೂ ನಮ್ಮ ಇಂದ್ರಿಯ ಆತನನ್ನು ಗ್ರಹಿಸಲು ಸಾಧ್ಯವಿಲ್ಲ. ಇಂತಹ ಭಗವಂತ ಅತೀಂದ್ರಿಯಃ .

೧೭೦) ಮಹಾಮಾಯಃ

ಭಗವಂತ ಮಹಾನ್ ಮೋಡಿಗಾರ ! ಆತ ಪಾಪಿಗಳ ಎದುರೇ ನಿಂತಿದ್ದರೂ, ಅವರು ಆತನನ್ನು ತಿಳಿಯಲಾರರು. ಪ್ರಕೃತಿಮಾತೆ ಲಕ್ಷ್ಮಿ ಮಾಯೆ. ಭಗವಂತ ಮೂಲಪ್ರಕೃತೀಶ್ವರ. ಮಾಯ ಎಂದರೆ ಮಹಿಮೆ, ಇಚ್ಛೆ ಎನ್ನುವ ಅರ್ಥ ಕೂಡಾ ಪ್ರಚಲಿತದಲ್ಲಿದೆ. ಭಗವಂತನ ಸಂಕಲ್ಪ ಎಂದೂ ಹುಸಿಯಾಗದು. ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ ಮಾಡುವ ಅಖಂಡವಾದ ಇಚ್ಛೆಯುಳ್ಳ ಭಗವಂತ ಮಹಾಮಾಯಃ.

೧೭೧) ಮಹೋತ್ಸಾಹಃ

ಭಗವಂತ ಎಂದೂ ಬತ್ತದ ಉತ್ಸಾಹದ ಚಿಲುಮೆ. ಆತನ ಕಾರ್ಯತತ್ಪರತೆ ಅನಂತವಾದುದು. ಎಂತಹ ವಿಘ್ನ ಬಂದರೂ ಕೈ ಬಿಡದ ಕಾರ್ಯೋತ್ಸಾಹ ಆ ಭಗವಂತನದು. ಯಾವ ಕಾರ್ಯ ಯಾವಾಗ ಆಗಬೇಕೋ ಅದು ಭಗವಂತನ ಸಂಕಲ್ಪದಂತೆ ಆಗುತ್ತದೆ. ಚತುರ್ಮುಖ ಕೂಡಾ ಒಮ್ಮೊಮ್ಮೆ ನಿರುತ್ಸಾಹ ತೋರಿಸಬಹುದು, ಆದರೆ ಭಗವಂತ ಮಾತ್ರ ಎಂದೂ ನಿರುತ್ಸಾಹಿ ಅಲ್ಲ. ಆದ್ದರಿಂದ ಆತ ಮಹೋತ್ಸಾಹಃ

೧೭೨) ಮಹಾಬಲಃ

ಉತ್ಸಾಹ ಮತ್ತು ಬಲ ಒಟ್ಟಿಗಿರುತ್ತದೆ. ಭಗವಂತ ಅಮಿತ ಬಲಶಾಲಿ . ಭಗವಂತನಲ್ಲಿ ಬಯಸಿದ್ದನ್ನು ಮಾಡುವ ಅಪಾರ ಶಕ್ತಿಯಿದೆ. ಭಗವಂತನ ಬಯಕೆ ಮತ್ತು ಕ್ರಿಯೆ ಬೇರೆ ಬೇರೆ ಅಲ್ಲ. ಅವನ ಬಯಕೆಯೇ ಅವನ ಕ್ರಿಯೆ.

ಮಹಾಬುದ್ಧಿರ್ಮಹಾವೀರ್ಯೋ ಮಹಾಶಕ್ತಿರ್ಮಹಾದ್ಯುತಿಃ ।
ಅನಿರ್ದೇಶ್ಯವಪುಃ ಶ್ರೀಮಾನಮೇಯಾತ್ಮಾ ಮಹಾದ್ರಿಧೃಕ್ ॥೩೨॥

೧೭೩) ಮಹಾಬುದ್ಧಿಃ

ಬುದ್ಧಿ ಎಂದರೆ ಜ್ಞಾನ. ಒಂದು ವಸ್ತು ನಿರ್ಮಾಣವಾಗಬೇಕಾದರೆ ಇಚ್ಛಾಶಕ್ತಿ, ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿ ಬೇಕು. ಈ ಅಪೂರ್ವವಾದ ಸೃಷ್ಟಿಯನ್ನು ನಿರ್ಮಾಣ ಮಾಡಿದ ಸರ್ವಜ್ಞನಾದ ಭಗವಂತ, ಬುದ್ಧಿವಂತರಿಗೆಲ್ಲಾ ಹಿರಿಯ ಬುದ್ಧಿವಂತ. ಇಂತಹ ಮಹಾನ್ ಬುದ್ಧಿಶಾಲಿ ಭಗವಂತ ಮಹಾಬುದ್ಧಿಃ.

೧೭೪) ಮಹಾವೀರ್ಯಃ

ಮಹಾವೀರ್ಯ ಎಂದರೆ ಮಹಾನ್ ಪರಾಕ್ರಮಶಾಲಿ. ಸೃಷ್ಟಿ ನಿರ್ಮಾಣ ಮಾಡುವಾಗ ಅನೇಕ ದುಷ್ಟ ಶಕ್ತಿಗಳೂ ನಿರ್ಮಾಣವಾಗುತ್ತವೆ. ಇಡೀ ವಿಶ್ವ ನಿರ್ಮಾಣಕ್ಕೆ ಬೇಕಾದ ಸಾಮರ್ಥ್ಯವನ್ನು ಪೂರ್ಣ ಪ್ರಮಾಣದಲ್ಲಿ ತುಂಬಿರುವವ ಮಹಾವೀರ್ಯಃ

೧೭೫) ಮಹಾಶಕ್ತಿಃ

ನಮ್ಮಲ್ಲಿರುವ ವೀರ್ಯ (ತಾಕತ್ತು) ಅಭಿವ್ಯಕ್ತವಾಗುವುದನ್ನು ಶೌರ್ಯ ಎನ್ನುತ್ತಾರೆ. ಸೃಷ್ಟಿ ನಿರ್ಮಾಣ ಕಾರ್ಯದಲ್ಲಿ ಅಡ್ಡಿ ಬಂದ ದುಷ್ಟ ಶಕ್ತಿಗಳನ್ನು ಬಗ್ಗು ಬಡಿದ ಭಗವಂತ ಮಹಾಶಕ್ತಿಃ (ವರಾಹ ಅವತಾರ ಇದಕ್ಕೊಂದು ನಿದರ್ಶನ).

೧೭೩) ಮಹಾದ್ಯುತಿಃ

ಇಡೀ ಜಗತ್ತಿನ ಎಲ್ಲಾ ಬೆಳುಕುಗಳ ಬೆಳಕು ಭಗವಂತ. ಎಲ್ಲಾ ಬೆಳಕುಗಳ ಹಿಂದೆ ಬೆಳಕಾಗಿ ನಿಂತ, ಜ್ಯೋತಿರ್ಮಯ, ಪ್ರಕಾಶ ಸ್ವರೂಪ ಭಗವಂತ ಮಹಾದ್ಯುತಿಃ. ಗೀತೆಯಲ್ಲಿ ಕೃಷ್ಣ ಹೇಳುವಂತೆ:

ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ ಗತ್ವಾ ನ ನಿವರ್ತಂತೇ ತದ್ ಧಾಮ ಪರಮಂ ಮಮ ॥೬॥

ಅಂದರೆ ಭಗವಂತನನ್ನು ಸೂರ್ಯ ಬೆಳಗಿಸಲಾರ; ಚಂದ್ರ ಬೆಳಗಿಸಲಾರ; ಬೆಂಕಿ ಕೂಡಾ. ಆತ ಬೆಳಕುಗಳ ಬೆಳಕು. ಆತನನ್ನು ಸೇರಿದವರು ಮತ್ತೆ ಮರಳಿ ಸಂಸಾರ ಸಾಗರದಲ್ಲಿ ಬೀಳುವುದಿಲ್ಲ.

೧೭೭) ಅನಿರ್ದೇಶ್ಯವಪುಃ

ನಿರ್ದೇಶ ಎಂದರೆ "ಒಂದು ವಸ್ತು ಹೀಗಿದೆ ಎಂದು ಶಬ್ದಗಳ ಮೂಲಕ ಹೇಳಲು ಸಾಧ್ಯವಾದ ಸ್ವರೂಪ". ಆದರೆ ಭಗವಂತನನ್ನು ಶಬ್ದಗಳ ಮೂಲಕ ಸಂಪೂರ್ಣವಾಗಿ ವರ್ಣಿಸಲು ಅಸಾಧ್ಯ. ಭಗವಂತನಿಗೆ ನಾವು ಗ್ರಹಿಸಬಹುದಾದ ಆಕಾರವಿಲ್ಲ. ಆದರೆ ಸರ್ವಸಮರ್ಥನಾದ ಭಗವಂತ ತಾನು ಬಯಸಿದ ರೂಪ ಧಾರಣೆ ಮಾಡಬಲ್ಲ. ನಮಗೆ ಆತ್ಮಸಾಕ್ಷಾತ್ಕಾರವಾದಾಗ ಜ್ಞಾನಾನಂದಮಯನಾದ ಭಗವಂತನ ಆಕಾರದ ಕಿಂಚಿತ್ ರೂಪವನ್ನು ನಾವೂ ನೋಡಲು ಸಾಧ್ಯ. ಈ ರೀತಿ ನಮ್ಮ ಜ್ಞಾನದ ಮಿತಿಯಿಂದಾಚೆಗಿನ ಶರೀರವುಳ್ಳ ಭಗವಂತ ಅನಿರ್ದೇಶ್ಯವಪುಃ

೧೭೮) ಶ್ರೀಮಾನ್

ಭಗವಂತ ಶ್ರೀಮಾನ್. ಇಲ್ಲಿ ಶ್ರೀ ಎನ್ನುವ ಪದ ಸಂಪತ್ತು, ಚೆಲುವು, ಸೌಂದರ್ಯ ಎನ್ನುವ ಅರ್ಥವನ್ನು ಕೊಡುತ್ತದೆ. ಭಗವಂತ ಚಲುವಿನ ಮೂರ್ತಿ. ಆತನ ಚಲುವಿಗೆ ಕೃಷ್ಣಾವತಾರವೇ ಸಾಕ್ಷಿ. ಕೃಷ್ಣನ ಚಲುವಿಗೆ ಆಕರ್ಷಿತರಾಗದವರಿಲ್ಲ. ಭಾಗವತದಲ್ಲಿ ಹೇಳುವಂತೆ: ಗೋವುಗಳೂ ಕೂಡಾ ಹುಲ್ಲು ಮೇಯುವುದನ್ನು ನಿಲ್ಲಿಸಿ, ಸ್ತಬ್ಧವಾಗಿ ಆತನನ್ನೇ ನೋಡುತ್ತಿದ್ದವು. ಅಂತಹ ಚಲುವಿನ ಮೂರ್ತಿ ಆತ. ಇಂತಹ ಚಲುವ ಭಗವಂತ ಶ್ರೀಮಾನ್.

ಭಗವಂತ ನಮ್ಮಲ್ಲಿರುವ ಐದು ಮಹಾನ್ ಸಂಪತ್ತಿನ ಒಡೆಯ. ಅವುಗಳೆಂದರೆ ಕಣ್ಣು, ಕಿವಿ, ಮೂಗು, ಮನಸ್ಸು, ಉಸಿರು. ಈ ಐದು ಅಮೂಲ್ಯವಾದ "ಶ್ರೀ" ಗಳನ್ನು ನಮಗೆ ಕರುಣಿಸಿದ, ಲಕ್ಷ್ಮೀಪತಿಯಾದ, ಸರ್ವ ವೇದ-ವಿದ್ಯೆಗಳ ಸ್ವಾಮಿಯಾದ ಭಗವಂತ ಶ್ರೀಮಾನ್.

೧೭೯) ಅಮೇಯಾತ್ಮಾ

ಭಗವಂತ ನಮ್ಮ ಅಳತೆಗೆ ಎಟುಕುವವನಲ್ಲ. ಆತನನ್ನು ಪೂರ್ಣವಾಗಿ ತಿಳಿದವರು ಯಾರೂ ಇಲ್ಲ. **He is Smaller than Smallest and Bigger than Biggest!** ಪ್ರಪಂಚ ಸೃಷ್ಟಿಗಿಂತ ಮೊದಲು, ಸಂಹಾರದ ನಂತರ, ಎಲ್ಲಾ ಕಾಲದಲ್ಲಿರುವ ಭಗವಂತ ಅಮೇಯಾತ್ಮಾ.

೧೮೦) ಮಹಾದ್ರಿಧೃಕ್

ಮಹಾದ್ರಿಧೃಕ್ ಎಂದರೆ ಮಹಾ ಪರ್ವತವನ್ನು ಹೊತ್ತವನು ಎಂದರ್ಥ. ಭಗವಂತ ಬೆಟ್ಟವನ್ನು ಹೊತ್ತಿರುವ ಪ್ರಸಂಗ ಆತನ ಕೂರ್ಮಾವತಾರದಲ್ಲಿ ಹಾಗೂ ಕೃಷ್ಣಾವತಾರದಲ್ಲಿ ನೋಡುತ್ತೇವೆ. ಸಮುದ್ರಮಥನ ಕಾಲದಲ್ಲಿ ಮಂದರ ಪರ್ವತವನ್ನು ಕೂರ್ಮಾವತಾರಿಯಾಗಿ ಎತ್ತಿ ಹಿಡಿದ ಭಗವಂತ ಮಹಾದ್ರಿಧೃಕ್. ಅದೇ ರೀತಿ, ಗೋವರ್ಧನ ಗಿರಿಯನ್ನು ತನ್ನ ಕಿರಿಬೆರಳಲ್ಲಿ ಎತ್ತಿ, ಇಂದ್ರನ ಅಹಂಕಾರವನ್ನು ಮುರಿದು, ಗೋಪೂಜೆ ಮತ್ತು ಗಿರಿಪೂಜೆಯನ್ನು

ಆಚರಣೆಗೆ ತಂದ ಭಗವಂತ ಮಹಾದ್ರಿಧೃಕ್. ಸಮುದ್ರ ಮಥನ ನಮ್ಮ ಜೀವನಕ್ಕೆ ಸಂಬಂಧಪಟ್ಟ ಕಥೆ ಕೂಡಾ ಹೌದು. ಮನಸ್ಸು ಎಂಬ ಮಂದರ ಪರ್ವತದಿಂದ, ಶಾಸ್ತ್ರವೆಂಬ ಕಡಲನ್ನು ಮಥನ ಮಾಡುವಾಗ, ನಮ್ಮ ಮನಸ್ಸು ಪತನವಾಗದಂತೆ ಭಗವಂತ ಎತ್ತಿ ಹಿಡಿಯುತ್ತಾನೆ. ಈ ರೀತಿ ಶಾಸ್ತ್ರಾಧ್ಯಾಯನದಲ್ಲಿ ಮೊದಲು ಹೊರ ಬರುವ ವಿಷ 'ಸಂಶಯ ಅಥವಾ ಅಪನಂಬಿಕೆ'; ನಂತರ ಬರುವ ಕಾಮದೇನು-ಕಲ್ಪವೃಕ್ಷ 'ಸಂಪತ್ತು'. ಈ ಸಂಪತ್ತಿನ ಸೆಳೆತದಿಂದ ಆಚೆ ಬಂದು, ಶಾಸ್ತ್ರ ಮಥನ ಮುಂದುವರಿಸಿದಾಗ, ತತ್ವಜ್ಞಾನವೆಂಬ ಅಮೃತ ದೊರೆಯುತ್ತದೆ. ಸಂಶಯವೆಂಬ ವಿಷದಿಂದ ನಮ್ಮನ್ನು ಪಾರುಮಾಡುವವನು ಮನೋಭಿಮಾನಿ ಶಿವ. ನಮ್ಮ ಮನಸ್ಸನ್ನು ನಿರಂತರವಾಗಿ ಎತ್ತಿ ಹಿಡಿದು ನಿಲ್ಲಿಸುವ ಭಗವಂತ ಮಹಾದ್ರಿಧೃಕ್.

ನಮ್ಮಲ್ಲಿ ಗೋ(ವೇದ-ಜ್ಞಾನ) ವೃದ್ಧಿ (ವರ್ಧನ) ಆದಾಗ ಭಗವಂತ ನಮ್ಮನ್ನು ಎತ್ತಿ ಹಿಡಿದು, ಅಹಂಕಾರದಿಂದ ಮುಕ್ತಿ ಕರುಣಿಸುತ್ತಾನೆ. ಇದು ಭಗವಂತನ ಗೋವರ್ಧನ ಗಿರಿಧಾರಣೆ ಕಥೆಯ ಮೂಲ ಸಂದೇಶ.

**ಮಹೇಷ್ವಾಸೋ ಮಹೀಭರ್ತಾ ಶ್ರೀನಿವಾಸಃ ಸತಾಂ ಗತಿಃ ।**
**ಅನಿರುದ್ಧಃ ಸುರಾನಂದೋ ಗೋವಿಂದೋ ಗೋವಿದಾಂಪತಿಃ ॥೨೨॥**

೧೮೧) ಮಹೇಷ್ವಾಸಃ

ಮಹೇಷ್ವಾಸ(ಮಹಾ+ಇಷು+ಆಸ) ಅಂದರೆ ಮಹಾನ್ ಬಿಲ್ಲು ಹೊತ್ತ ಬಿಲ್ಲೋಜ. ಭಗವಂತನ ಅವತಾರದಲ್ಲಿ ಈ ನಾಮಕ್ಕೆ ಸಂಬಂಧಪಟ್ಟ ಕೆಲವು ನಿದರ್ಶನಗಳನ್ನು ಕಾಣುತ್ತೇವೆ. ಸೀತಾ ಸ್ವಯಂವರದಲ್ಲಿ ಶ್ರೀರಾಮ ಶಿವನ ಧನುಸ್ಸನ್ನು ಮುರಿದಿರುವುದು, ಬಿಲ್ಲ ಹಬ್ಬದಲ್ಲಿ ಶ್ರೀಕೃಷ್ಣ ಕಂಸ ಪೂಜಿಸುತ್ತಿದ್ದ ಶಿವಧನುಸ್ಸನ್ನು ಮುರಿದು ಕಂಸನ ಸಂಹಾರ ಮಾಡಿರುವುದು, ಶ್ರೀರಾಮ ಪರಶುರಾಮನಿಂದ ಪಡೆದ ವೈಷ್ಣವ ಧನುಸ್ಸನ್ನು ಧರಿಸಿ ರಾವಣ-ಕುಂಭಕರ್ಣರ ಸಂಹಾರ ಮಾಡಿರುವುದು, ಇತ್ಯಾದಿ.

ಈ ಮೇಲಿನ ಸಂಧರ್ಭಗಳಲ್ಲಿ ಯಾರೂ ಎತ್ತಲು ಆಗದ ಶಿವ ಧನುಸ್ಸನ್ನು ಹರಿ ಹೇಗೆ ಎತ್ತಿದ ? ಆ ಬಿಲ್ಲು ಎಷ್ಟು ದೊಡ್ಡದಿತ್ತು ? ಇತ್ಯಾದಿ ಪ್ರಶ್ನೆಗಳು ನಮಗೆ ಬರುತ್ತದೆ. ಬಿಲ್ಲು ಸಾಮಾನ್ಯವಾಗೇ ಇದ್ದರೂ, ಅದರಲ್ಲಿ ಶಿವಶಕ್ತಿ ಸನ್ನಿಧಾನವಿದ್ದುದರಿಂದ ಯಾರಿಂದಲೂ ಅದನ್ನು ಎತ್ತಲು ಸಾಧ್ಯವಾಗುತ್ತಿರಲಿಲ್ಲ. ಹಿಂದೆ ಹೇಳಿದಂತೆ ಶಿವಶಕ್ತಿ-ವಿಷ್ಣುಶಕ್ತಿಗಳು ಹಾಲಿನಲ್ಲಿರುವ ಬೆಣ್ಣೆಯಂತೆ- ಎರಡು ಅನ್ಯೋನ್ಯ ಶಕ್ತಿಗಳು. ಧನುರ್ಧಾರಣೆ ಈ ಶಕ್ತಿಗಳ ಸಮಾಗಮದ ಸಂಕೇತ.

ಈ ರೀತಿ ಮಹಾನ್ ಧನುಸ್ಸನ್ನು ಮುರಿದವ, ಮಹಾನ್ ಧನುಸ್ಸನ್ನು ಹಿಡಿದು ದುಷ್ಟಶಕ್ತಿಗಳ ಸಂಹಾರ ಮಾಡಿದವ, ಅರ್ಜುನನ ಒಳಗೆ ನರನಾಮಕನಾಗಿದ್ದು ಗಾಂಢೀವ ಧನುಸ್ಸಿನಿಂದ ಧರ್ಮ ಸಂಸ್ಥಾಪನೆ ಮಾಡಿದ ಭಗವಂತ ಮಹೇಷ್ವಾಸಃ.

೧೮೨) ಮಹೀಭರ್ತಾ

ಇಲ್ಲಿ ಮಹೀ ಎಂದರೆ ಭೂಮಿ. ಭರ್ತಾ ಎಂದರೆ ಧರಿಸಿದವ ಅಥವಾ ಪತಿ. ಭಗವಂತನನ್ನು ಭೂಮಾತೆಯ ಪತಿ ಎನ್ನುತ್ತಾರೆ. ಈ ಭೂಮಿಯನ್ನು ಸಂಕರ್ಷಣ ಶಕ್ತಿಯ (Gravitational force) ಮೂಲಕ ಹಿಡಿದಿಟ್ಟು, ನಿರಂತರ ಸಲಹುವವನು ಮಹೀಭರ್ತಾ.

೧೮೩) ಶ್ರೀನಿವಾಸಃ

'ಶ್ರೀ' ಎಂದರೆ ಸಿರಿ, ಸಂಪತ್ತು, ಮಾತೆ ಲಕ್ಷ್ಮಿ , ವೇದ ವಿದ್ಯೆಗಳು, ಇತ್ಯಾದಿ. ಭಗವಂತ ಮಾತೆ ಶ್ರೀಲಕ್ಷ್ಮಿಯನ್ನು ನಿರಂತರ ತನ್ನ ಹೃದಯದಲ್ಲಿ ಧರಿಸಿರುತ್ತಾನೆ. ಎಲ್ಲಾ ಸಂಪತ್ತುಗಳ, ಅಮೂಲ್ಯವಾದ ವೇದ-ವಿದ್ಯೆಗಳ ನೆಲೆಯಾದ ಭಗವಂತ-ಶ್ರೀನಿವಾಸಃ.

೧೮೪) ಸತಾಂಗತಿಃ

ಸಾತ್ವಿಕರಿಗೆ, ಸಜ್ಜನರಿಗೆ ಸದಾ ಆಶ್ರಯದಾತನಾದ ಭಗವಂತ ಸತಾಂಗತಿಃ. ಭಗವಂತ ಎಲ್ಲರಿಗೂ ಆಶ್ರಯದಾತ, ಆದರೆ ಆಶ್ರಯದ ಅರಿವು ಇರುವುದು ಕೇವಲ ಸಜ್ಜನರಿಗೆ ಮಾತ್ರ. ಅರಿವೇ ಇರವು. ಆಶ್ರಯದ ಅರಿವಿಲ್ಲದಿದ್ದರೆ ನಾವು ಅಭದ್ರತೆಯ ಭಯದಲ್ಲಿ ಬದುಕುತ್ತೇವೆ. ಆದರೆ ಜ್ಞಾನಿಗಳು ಭಗವಂತನ ಆಶ್ರಯವನ್ನು ಸದಾ ಅನುಭವಿಸುತ್ತಿರುತ್ತಾರೆ. ಏನೇ ಬಂದರೂ ಭಗವಂತನಿದ್ದಾನೆ ಎನ್ನುವ ಅಚಲ ವಿಶ್ವಾಸದಲ್ಲಿ ಸಂತೋಷವಾಗಿ ಬದುಕುತ್ತಾರೆ.

೧೮೫) ಅನಿರುದ್ಧಃ

ಈ ಹಿಂದೆ ನಾವು ಭಗವಂತನ ಚತುರ್ಮೂರ್ತಿ ರೂಪದ ಬಗ್ಗೆ ವಿಶ್ಲೇಷಿಸಿದ್ದೇವೆ. ಸೃಷ್ಟಿಯ ಆರಂಭದಲ್ಲಿ ಭಗವಂತ ನಾಲ್ಕು ಕ್ರಿಯೆಗಳನ್ನು ಪ್ರತಿನಿಧಿಸುವ ನಾಲ್ಕು ರೂಪದಲ್ಲಿ ವ್ಯಕ್ತವಾಗುತ್ತಾನೆ. ಅವುಗಳೆಂದರೆ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ. ವಾಸುದೇವ-ಮೋಕ್ಷಪ್ರದವಾದ ರೂಪ, ಸಂಕರ್ಷಣ-ಸಂಹಾರಪ್ರದವಾದ ರೂಪ, ಪ್ರದ್ಯುಮ್ನ-ಸೃಷ್ಟಿಕಾರಣ ರೂಪ ಹಾಗೂ ಅನಿರುದ್ಧ-ಸ್ಥಿತಿಕಾರಣ ರೂಪ.

ಜಗತ್ತಿನ ಸ್ಥಿತಿ ಅಥವಾ ಸಂರಕ್ಷಣೆಗೆ ಭಗವಂತ ತಾಳಿದ ರೂಪ ಅನಿರುದ್ಧ ರೂಪ. ಇದು ಬಾಹ್ಯ ಪ್ರಜ್ಞೆಯ ತಡೆ ಇಲ್ಲದೆ, ಬಾಹ್ಯ ಪ್ರಜ್ಞೆಯನ್ನು ಅನುಭವಿಸುವ ಭಗವಂತನ ರೂಪ. ಹೀಗೆ ನಮ್ಮ ದೇಹದಲ್ಲಿರುವ ಪಂಚಪ್ರಾಣಗಳ ಚಲನೆಗೆ ಕಾರಣ ಶಕ್ತಿಯಾದ ಭಗವಂತ ಅನಿರುದ್ಧ.

೧೮೬) ಸುರಾನಂದಃ

ಸುರರು ಎಂದರೆ ದೇವತೆಗಳು. ದೇವತೆಗಳ ಒಳಗಿದ್ದು ಅವರಿಗೆ ನಿರಂತರ ದುಃಖ ಸ್ಪರ್ಶವಿಲ್ಲದ ಆನಂದವನ್ನು ಕೊಡುವವನು; ಮುಕ್ತರಿಗೆ, ಮುಕ್ತಿ ಯೋಗ್ಯರಾದವರಿಗೆ ಆನಂದವನ್ನು ಕೊಡುವ ಭಗವಂತ ಸುರಾನಂದಃ

೧೮೭) ಗೋವಿಂದಃ

ಎಚ್ಚರ ಸ್ಥಿತಿಯಲ್ಲಿ ನಮ್ಮ ಆಜ್ಞಾ ಚಕ್ರದಲ್ಲಿ ಮೂರನೇ ಕಣ್ಣಾಗಿ ಕುಳಿತವ ಗೋವಿಂದಃ. ಒಳಗಣ್ಣಿನಿಂದ ನಮಗೆ ಮಾರ್ಗದರ್ಶನ ಮಾಡುವ ಶಕ್ತಿ. ಅದಕ್ಕಾಗಿ ಪ್ರಾತಃಕಾಲದಲ್ಲಿ "ಉತ್ತಿಷ್ಠೋತ್ತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ" ಎಂದು ಪ್ರಾರ್ಥನೆ ಮಾಡುತ್ತೇವೆ. ಅಂದರೆ "ನಮ್ಮ ಆಜ್ಞಾ ಚಕ್ರದಲ್ಲಿ ಕುಳಿತು ನಮಗೆ ಮಾರ್ಗದರ್ಶನ ಮಾಡು" ಎಂದರ್ಥ. ಊಟದ ಸಮಯದಲ್ಲಿ ನಮ್ಮ ಅಂತಃಕರಣ ಜಾಗೃತಿಗಾಗಿ 'ಗೋವಿಂದ' ಸ್ಮರಣೆ ಮಾಡುತ್ತೇವೆ. ಇಂದ್ರ ಗೋವರ್ಧನ ಪರ್ವತವನ್ನೆತ್ತಿದ ಭಗವಂತನನ್ನು ಗೋವಿಂದ ಎಂದು ಸಂಬೋಧಿಸಿದ. ಭೂಮಿಯ ಮೇಲೆ ಅನಂತ ರೂಪದಲ್ಲಿ ಇಳಿದು ಬಂದ ಭಗವಂತ ಗೋವಿಂದಃ.

೧೮೮) ಗೋವಿದಾಂಪತಿಃ

ವೇದಗಳನ್ನು ತಿಳಿದವನು, ವೇದಗಳನ್ನು ಸಲಹುವವನು, ವೇದಗಳನ್ನು ತಿಳಿದವರನ್ನು ಸಲಹುವವನು, ದೇವತೆಗಳ ಅಧಿಪತಿಯಾದ ಭಗವಂತ ಗೋವಿದಾಂಪತಿಃ.

**ಮರೀಚಿರ್ದಮನೋ ಹಂಸಃ ಸುಪರ್ಣೋ ಭುಜಗೋತ್ತಮಃ ।**

**ಹಿರಣ್ಯನಾಭಃ ಸುತಪಾಃ ಪದ್ಮನಾಭಃ ಪ್ರಜಾಪತಿಃ ॥೨೪॥**

೧೮೯) ಮರೀಚಿಃ

ಸೂರ್ಯ ಕಿರಣಗಳಲ್ಲಿದ್ದು, ಪ್ರಾಣ ಶಕ್ತಿಯನ್ನು ವಿಶ್ವದ ಜೀವ ಜಾತಕ್ಕೆ ಕೊಡುವವ ಮರೀಚಿಃ. 'ಮರಿ' ಎಂದರೆ ನೀರು ತುಂಬಿದ ಮೋಡ. ಮೋಡಗಳಿಗೆ ಚಲನೆಯನ್ನು ಕೊಟ್ಟು ಮಳೆ ಬರಿಸುವವ ಮರೀಚಿಃ .

ಗೀತೆಯಲ್ಲಿ ಹೇಳುವಂತೆ:

ಯದಾದಿತ್ಯ ಗತಂ ತೇಜೋ ಜಗದ್ ಭಾಸಯತೇಽಖಿಲಮ್ ।
ಯಚ್ಚಂದ್ರ ಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್ ॥ (ಅ-೧೫, ಶ್ಲೋ-೧೨)

ಅಂದರೆ "ಸೂರ್ಯನಲ್ಲಿದ್ದು ವಿಶ್ವವನ್ನೆಲ್ಲಾ ಬೆಳಗುವ ಬೆಳಕು, ಚಂದ್ರನಲ್ಲಿ, ಬೆಂಕಿಯಲ್ಲಿ ಕೂಡಾ, ಅದು ನನ್ನದೇ ಬೆಳಕೆಂದು ತಿಳಿ". ಈ ರೀತಿ ಜೀವರಲ್ಲಿ ತುಂಬಿರುವ ಬೆಳಕಿನ ಕುಡಿಯಾದ ಭಗವಂತ ಮರೀಚಿಃ.

೧೯೦) ದಮನಃ

ಸೂರ್ಯಕಿರಣದಲ್ಲಿ ಸನ್ನಿಹಿತನಾದ ಹಾಗೂ ಮೋಡಗಳ ರೂಪದಲ್ಲಿ ನೀರನ್ನು ಕೊಡುವ ಭಗವಂತ- ಪ್ರಳಯ ಕಾಲದಲ್ಲಿ ಅದೇ ಸೂರ್ಯ ಕಿರಣದ ಮೂಲಕ, ನೀರಿನ ಮೂಲಕ (ಜಲಪ್ರಳಯ) ಎಲ್ಲವನ್ನೂ ದಮನ ಮಾಡಿ ಯೋಗ ನಿದ್ರೆಯನ್ನು ಅನುಭವಿಸುತ್ತಾನೆ.

ಸಜ್ಜನರಿಗೆ ಭಗವಂತ 'ದಮ'. ಅಂದರೆ ಇಂದ್ರಿಯ ನಿಗ್ರಹ ಶಕ್ತಿಯನ್ನು ಕರುಣಿಸುವವ. ದುರ್ಜನರ ದಮನ (ನಾಶ) ಮಾಡುವ ಭಗವಂತ ದಮನಃ

೧೯೧) ಹಂಸಃ

ದೋಷಹೀನ; ಸಾರರೂಪ; ಸಂಸಾರವನ್ನು ನಾಶಗೊಳಿಸುವವನು; ಎಲ್ಲರೊಳಗೂ ಅಂತರ್ಯಾಮಿಯಾಗಿರುವವನು; ಎಲ್ಲೆಡೆಯೂ ತುಂಬಿರುವವನೂ ಆದ ಭಗವಂತ ಹಂಸಃ.

೧೯೨) ಸುಪರ್ಣಃ

ಗರುಡನಲ್ಲಿ ಅಂತರ್ಯಾಮಿಯಾಗಿರುವವನು; ದುಃಖವಿರದ ಪರಿಪೂರ್ಣಾನಂದ ಸ್ವರೂಪನು; ಜೀವರಿಗೆ ಸಾಧನೆಯಿಂದ ಪೂರ್ಣತೆಯನ್ನೀಯುವವನು; ಅವರವರ ಯೋಗ್ಯತೆಗೆ ತಕ್ಕಂತೆ ಪೂರ್ಣಾನಂದವನ್ನೀಯುವವನು ಸುಪರ್ಣಃ .

೧೯೩) ಭುಜಗೋತ್ತಮಃ

ಗರುಡನ ಹೆಗಲೇರಿ ಸಾಗುವ ಹಿರಿಯ ತತ್ವ; ಹಾವು (ನಾಗರ )ಗಳಲ್ಲಿ ಸನ್ನಿಹಿತನಾದ ಪುರುಷೋತ್ತಮ ಭಗವಂತ ಭುಜಗೋತ್ತಮಃ.

೧೯೪) ಹಿರಣ್ಯನಾಭಃ

ಹಿರಣ್ಯ ಎಂದರೆ ಚಿನ್ನ. ಆದ್ದರಿಂದ ಹಿರಣ್ಯನಾಭ ಎಂದರೆ ಚಿನ್ನದ ಮೊಟ್ಟೆಯಂತಿರುವ ಈ ಬ್ರಹ್ಮಾಂಡವನ್ನು ತನ್ನ ಹೊಕ್ಕುಳಲ್ಲಿ ಹೊತ್ತವನು ಎಂದರ್ಥ. ಬ್ರಹ್ಮಾಂಡದ ಇನ್ನೊಂದು ಹೆಸರು ವಿರಾಟ. ಅಂದರೆ ಥಳ-ಥಳ ಹೊಳೆಯುವ ಚಿನ್ನದ ಮೊಟ್ಟೆ. ಭೂಮಿಯಿಂದ ಅತಿದೂರದಲ್ಲಿ ನಿಂತು ಭೂಮಿಯನ್ನು ನೋಡಿದರೆ, ಭೂಮಿ ಕೂಡಾ ನಕ್ಷತ್ರದಂತೆ ಹೊಳೆಯುತ್ತದೆ. ಪ್ರಳಯ ಕಾಲದಲ್ಲಿ ಎಲ್ಲವನ್ನೂ ತನ್ನ ಉದರದಲ್ಲಿ ಧರಿಸಿ, ಸೃಷ್ಟಿ ಕಾಲದಲ್ಲಿ ತನ್ನ ನಾಭಿಯಿಂದ ಚಿನ್ನದ ಮೊಟ್ಟೆಯಂತಹ ಈ ಬ್ರಹ್ಮಾಂಡದ ನಿರ್ಮಾಣ ಮಾಡಿದ ಭಗವಂತ ಹಿರಣ್ಯನಾಭಃ

ಇನ್ನು ಹಿರಣ್ಯ ಎಂದರೆ ಹಿತವೂ, ರಮಣೀಯವೂ ಎಂದರ್ಥ. ಭಗವಂತ ಎಲ್ಲರಿಗೂ ಹಿತವೂ ರಮಣೀಯವೂ ಆಗಿ ಎಲ್ಲರೊಳಗೆ ಬಿಂಬರೂಪನಾಗಿದ್ದಾನೆ.

೧೯೫) ಸುತಪಾಃ

ಸುತಪಾಃ ಎಂದರೆ ಸಮೀಚೀನವಾದ ತಪಸ್ಸು ಮಾಡುವವ. ಇಲ್ಲಿ ತಪಸ್ಸು ಎಂದರೆ ಒಂದು ಸಂಗತಿಯನ್ನು ಆಳವಾಗಿ ಚಿಂತಿಸಿ, ಅದರ ತಳಸ್ಪರ್ಶಿ ಚಿಂತನ ಮಾಡುವುದು. ಎಲ್ಲಾ ವಿಷಯಗಳನ್ನು ಗ್ರಹಿಸುವ, ತಳಸ್ಪರ್ಶಿಯಾದ ಜ್ಞಾನವುಳ್ಳವ ಸುತಪಾಃ. ಈ ನಾಮವನ್ನು ಒಡೆದು ನೋಡಿದಾಗ ಸುತ+ಪಾ; ಇಲ್ಲಿ ಸುತ ಎಂದರೆ ಮಕ್ಕಳು, ಪಾ ಎಂದರೆ ಪಾಲಿಸುವವನು. ಎಲ್ಲರೂ ಭಗವಂತನ ಮಕ್ಕಳೇ. ಅವನಿಗೆ ಮೇಲು ಕೀಳು ಎನ್ನುವ ಭೇದವಿಲ್ಲ. ತನ್ನೆಲ್ಲಾ ಮಕ್ಕಳನ್ನು ನಿಷ್ಪಕ್ಷಪಾತವಾಗಿ ಅವರವರ ಪೂರ್ವ ಕರ್ಮಕ್ಕನುಸಾರವಾಗಿ ಫಲಕೊಟ್ಟು ಸಲಹುವವನು ಸುತಪಾಃ

ಇನ್ನು ಸು+ತ+ಪಾ-ಸುತಪಾ. ಇಲ್ಲಿ 'ಸು' ಎಂದರೆ ಸಮೀಚೀನವಾದ ಆನಂದ ಸ್ವರೂಪ; 'ತ' ಎಂದರೆ ತತಿ ಎಂದರೆ ಹಬ್ಬುವುದು(ಜ್ಞಾನದ ಮೂಲಕ ಹಬ್ಬುವುದು) , ಪಾ ಎಂದರೆ ಸರ್ವಪಾಲಕನಾದ ಆನಂದ ಸ್ವರೂಪ. ಆದ್ದರಿಂದ ಸುತಪಾಃ ಎಂದರೆ ಸತ್-ಚಿತ್-ಆನಂದ - ಸಚ್ಚಿದಾನಂದರೂಪಿ ಭಗವಂತ.

೧೯೭) ಪದ್ಮನಾಭಃ

ಈ ಬ್ರಹ್ಮಾಂಡವನ್ನು ತಾವರೆಗೆ ಹೋಲಿಸಲಾಗಿದೆ. ಯಾರ ನಾಭಿಯಿಂದ ಈ ಪದ್ಮಾಕಾರವಾದ ಭುವನ ಸೃಷ್ಟಿಯಾಯಿತೋ ಅವನು ಪದ್ಮನಾಭಃ.

೧೯೭) ಪ್ರಜಾಪತಿಃ

ಪ್ರಜಾಪತಿ ಎಂದರೆ ಸಮಸ್ತ ಜೀವಜಾತಗಳ ಪತಿ ಎನ್ನುವುದು ಒಂದು ಅರ್ಥ. ಇಲ್ಲಿ 'ಪತಿ' ಎಂದರೆ 'ರಕ್ಷಕ'. ಚತುರ್ಮುಖ ಬ್ರಹ್ಮನನ್ನೂ ಪ್ರಜಾಪತಿ ಎನ್ನುತ್ತಾರೆ. ಜೀವಸ್ವರೂಪದ ಅಭಿಮಾನಿ ದೇವತೆಯಾದ ಚತುರ್ಮುಖನನ್ನೂ ಕೂಡಾ  ಪ್ರಜಾಪತಿ ಎನ್ನುತ್ತಾರೆ. ಆದರೆ ಚತುರ್ಮುಖನೂ ಕೂಡಾ ಒಬ್ಬ ಪ್ರಜೆ. ಸಮಸ್ತ ಜೀವಜಾತಗಳೊಂದಿಗೆ ಚತುರ್ಮುಖನನ್ನೂ ರಕ್ಷಿಸುವ ಭಗವಂತ ಪ್ರಜಾಪತಿಃ.

ಇನ್ನು 'ಪ್ರಜಾ' ಎಂದರೆ 'ಜ್ಞಾನ'. ಭಗವಂತ ಜ್ಞಾನದ ರಕ್ಷಕ. ನಮ್ಮಲ್ಲಿ "ಸಂತಾನವಿಲ್ಲದವರಿಗೆ ವೇದಶಾಸ್ತ್ರ ಹೇಳಬಾರದು" ಎನ್ನುವ ಅಪನಂಬಿಕೆ ಇದೆ. ಶಾಸ್ತ್ರದಲ್ಲಿ ಈ ಬಗ್ಗೆ ಉಲ್ಲೇಖ ಇರುವುದು ನಿಜ. ಆದರೆ ಅಲ್ಲಿ ಮಕ್ಕಳು ಎಂದರೆ ಶಿಷ್ಯ ವರ್ಗ. ಯಾರು ತಾನು ಕಲಿತಿದ್ದನ್ನು ಇನ್ನೊಬ್ಬರಿಗೆ ಹೇಳಲಾರರೋ ಅಂಥವರಿಂದ ಜ್ಞಾನದ ರಕ್ಷಣೆ ಆಗದು. ಅವರಿಗೆ ವೇದ ಶಾಸ್ತ್ರ ಪಾಠ ಹೇಳಬಾರದು ಎನ್ನುವುದು ಶಾಸ್ತ್ರದ ಮೂಲಾರ್ಥ.  ನಮಗೆ ಸಂತಾನವಿದ್ದಾಕ್ಷಣ ಸದ್ಗತಿ ದೊರೆಯುವುದಿಲ್ಲ. ಸದ್ಗತಿ ನಾವು ಮಾಡುವ ಕರ್ಮದ ಮೇಲೆ ನಿರ್ಧಾರವಾಗುತ್ತದೆ.

ಪುರಾಣದಲ್ಲಿ "ಅಪುತ್ರಸ್ಯ ಗತಿರ್ನಾಸ್ತಿ" ಎಂದಿದೆ. ಇದನ್ನು "ಸಂತಾನವಿಲ್ಲದವರಿಗೆ ಮೋಕ್ಷವಿಲ್ಲ" ಎಂದು ಅಪಾರ್ಥ ಮಾಡುತ್ತಾರೆ. ಆದರೆ ನಿಜವಾದ ಅರ್ಥ:  "ನಾವು ಗಳಿಸಿದ ಜ್ಞಾನವನ್ನು ಮುಂದಿನ ಪೀಳಿಗೆಯ 'ಪ್ರಜಾ' ಅಥವಾ 'ಪ್ರಜ್ಞೆ ಉಳ್ಳವರಿಗೆ' ಕೊಡದೇ ಸತ್ತರೆ ಅಂತವರಿಗೆ ಸದ್ಗತಿ ಸಿಗದು" ಎಂಬುದಾಗಿದೆ. ಭಗವಂತ ಪ್ರಜಾ(ಜ್ಞಾನ) ರಕ್ಷಕ, ಹಾಗೂ ಜ್ಞಾನವನ್ನು ದಾನ ಮಾಡುವವರನ್ನು ಆತ ಉದ್ಧಾರ ಮಾಡುತ್ತಾನೆ. ಜ್ಞಾನದಾನ ಭಗವಂತನ ಜ್ಞಾನ ರಕ್ಷಣೆಯ ಅವಿಭಾಜ್ಯ ಅಂಗ. ಜ್ಞಾನ ರಕ್ಷಣೆಗಾಗಿ ಶ್ರೀಕೃಷ್ಣ  ಶರಶಯ್ಯೆಯಲ್ಲಿದ್ದ ಭೀಷ್ಮಾಚಾರ್ಯರಿಂದ ಧರ್ಮರಾಯನಿಗೆ ಜ್ಞಾನದ ಉಪದೇಶ ಮಾಡಿಸಿ, ಜ್ಞಾನದ ರಕ್ಷಣೆಯೊಂದಿಗೆ ಭೀಷ್ಮಾಚಾರ್ಯರ ಉದ್ಧಾರ ಮಾಡಿದ. ಈ ರೀತಿ ಜ್ಞಾನದ ಒಡೆಯ ಹಾಗೂ ಜ್ಞಾನದ ರಕ್ಷಕನಾದ ಭಗವಂತ ಪ್ರಜಾಪತಿಃ.

**ಅಮೃತ್ಯುಃ ಸರ್ವದೃಕ್ ಸಿಂಹಃ ಸಂಧಾತಾ ಸಂಧಿಮಾನ್ ಸ್ಥಿರಃ ।**
**ಅಜೋ ದುರ್ಮರ್ಷಣಃ ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ ॥೨೫॥**

೧೯೮) ಅಮೃತ್ಯುಃ

ಭಗವಂತ ಮೃತ್ಯು ಇಲ್ಲದವನು. ಮೃತ್ಯುವಿಗೆ ಇನ್ನೊಂದು ಹೆಸರು 'ಅಪಸ್ಮೃತಿ'- ಎಂದರೆ ನೆನಪನ್ನು ಅಳಿಸುವುದು. ಭಗವಂತ ಮೃತ್ಯುವನ್ನು ದಾಟಿ ನಿಂತವ. ಇತರ ದೇವಾದಿ ದೇವತೆಗಳಿಗೂ ಕೂಡಾ ಮೋಕ್ಷಕ್ಕೆ ಮೊದಲು ಮೃತ್ಯುವಿದೆ. ನಮಗೆ ಮೃತ್ಯುವೇ ಮೋಕ್ಷದ ಮಾರ್ಗ. ಯೋಗ್ಯರಾದವರಿಗೆ ಅನೇಕ ಮೃತ್ಯುವಿನ ಬಳಿಕ ಮೃತ್ಯು ರಹಿತ ಭಗವಂತನ ಸಾನಿಧ್ಯವಾದ ಮೋಕ್ಷ ದೊರೆಯುತ್ತದೆ.

೯೯) ಸರ್ವದೃಕ್

ಸಾಕ್ಷಿ ಮತ್ತು ಸರ್ವದೃಕ್ ಸುಮಾರಾಗಿ ಒಂದೇ ಅರ್ಥವನ್ನು ಕೊಡುತ್ತದೆ. ಸರ್ವವನ್ನೂ ಕಾಣಬಲ್ಲ ಭಗವಂತ ಸರ್ವದೃಕ್. ಭಗವಂತನಿಗೆ ತಿಳಿಯಲಾಗದ್ದು ಯಾವುದೂ ಇಲ್ಲ. ಅವನು ಎಲ್ಲವನ್ನೂ ಕಾಣುವವನು. ಆತ ನಮಗೆ ಈ ಪ್ರಪಂಚವನ್ನು ನೋಡುವ ಶಕ್ತಿಯನ್ನು ಕರುಣಿಸಿದವನು.

ಸಹಸ್ರನಾಮ ವಿವರಣೆ -೧೦೦

೧೦೦) ಸಿಂಹಃ

ಸಿಂಹಃ ಎಂದರೆ ಸರ್ವ ಸಂಹಾರಕ! ಯಾವುದು ನಮಗೆ ಬೇಡವಾಗಿದೆಯೋ ಅದನ್ನು ಸಂಹಾರ ಮಾಡುವವನು ಸಿಂಹಃ. ನಮಗೆ 'ನಿಜವಾಗಿ ಏನು ಬೇಕು'- ಎನ್ನುವ ಅರಿವು ಕೂಡಾ ಇರುವುದಿಲ್ಲ. ಆದರೆ ಭಗವಂತನಲ್ಲಿ ನಮಗೆ ಏನು ಬೇಕು- ಏನು ಬೇಡ ಎನ್ನುವುದರ ಪೂರ್ಣ ವಿವರಗಳಿರುತ್ತದೆ. ಅದಕ್ಕನುಗುಣವಾಗಿಯೇ ಎಲ್ಲವೂ ನಡೆಯುತ್ತದೆ. ಉದಾಹರಣೆಗೆ ನಾವು ಅನೇಕ ಕಾಯಿಲೆಯಿಂದ ಬಳಲುತ್ತಿದ್ದರೂ ಕೂಡಾ ನಮಗೆ ಬದುಕಬೇಕು ಎನ್ನುವ ಆಸೆ ಇರಬಹುದು. ಆದರೆ ಈ ಸ್ಥಿತಿಯಲ್ಲಿ ಸಾವು ನಿಜವಾದ ವರ. ಈ ಸ್ಥೂಲ ಶರೀರದಲ್ಲಿದ್ದು ಒದ್ದಾಡುತ್ತಿರುವ ಜೀವ ತನ್ನ ಸ್ವಾತಂತ್ರ್ಯಕ್ಕಾಗಿ ಕಾದು ಕುಳಿತಿರುತ್ತದೆ. ಕಾಯಿಲೆ ಮತ್ತು ಅಂಗಹೀನತೆ ಕೇವಲ ಸ್ಥೂಲ ಶರೀರಕ್ಕೆ ಸಂಬಂಧಪಟ್ಟಿದ್ದೇ ಹೊರತು, ಸೂಕ್ಷ್ಮ ಶರೀರಕ್ಕಲ್ಲ. ಆದ್ದರಿಂದ ಸಾವು ಜೀವವನ್ನು ಅದರ ಸಹಜ ಸ್ಥಿತಿಗೆ ಕೊಂಡೊಯ್ಯುವ ಸಹಜ ಕ್ರಿಯೆ. ಪಾಂಚಭೌತಿಕವಾದ ಈ ಶರೀರದ ಸಂಹಾರವಾಗದೇ ನಮಗೆ ಮುಕ್ತಿಯಿಲ್ಲ. ಭಗವಂತ ನಮ್ಮ ಪೂರ್ವ ಕರ್ಮಕ್ಕನುಗುಣವಾಗಿ ಮತ್ತು ಜೀವಸ್ವಭಾವಕ್ಕನುಗುಣವಾಗಿ ನಮಗೆ ಬೇಡವಾದುದ್ದನ್ನು ಸಂಹಾರ ಮಾಡುತ್ತಾನೆ. ನೈಸರ್ಗಿಕವಾಗಿ ಬರುವ ಸಾವು ಶ್ರೇಷ್ಠ ಹೊರತು ಆತ್ಮಹತ್ಯೆ ಅಲ್ಲ. ಆತ್ಮಹತ್ಯೆ ಮಹಾಪಾಪ. ಆದರೆ ಕೆಲವು ಮಹಾತ್ಮ ಸಾಧುಗಳಿಗೆ ದೇಹತ್ಯಾಗ ಎನ್ನುವುದು ತೀರಾ ಸಹಜ ಮತ್ತು ಆನಂದದ ಕ್ರಿಯೆ-ಅದು ಆತ್ಮಹತ್ಯೆ ಅಲ್ಲ. ಅವರಿಗೆ ತಮ್ಮ ಸಾವಿನ ದಿನಾಂಕ ಗೊತ್ತಿರುತ್ತದೆ. [ಸ್ವಾಮಿರಾಮ್ ಅವರು ಬರೆದ "ಲಿವಿಂಗ್ ವಿಥ್ ಹಿಮಾಲಯನ್ ಮಾಸ್ಟರ್ಸ್" ಎನ್ನುವ ಪುಸ್ತಕದಲ್ಲಿ ಈ ಬಗ್ಗೆ ದಾಖಲೆಗಳಿವೆ]. ಹೀಗೆ ಎಲ್ಲಾ ದೋಷಗಳ ಸಂಹಾರಕ, ದೇಹದ ಸಂಹಾರಕ ಮತ್ತು ಪೌರುಷದ ಗಣಿಯಾದ ಸರ್ವಶ್ರೇಷ್ಠ ಭಗವಂತ ಸಿಂಹಃ. ನಮ್ಮಲ್ಲಿರುವ ದೋಷದ ನಿವಾರಣೆಗಾಗಿ ನರಸಿಂಹ ಸ್ವರೂಪವನ್ನು ಉಪಾಸನೆ ಮಾಡುವುದು ಶಾಸ್ತ್ರೋಕ್ತ.

೧೦೧) ಸಂಧಾತಾ

ಧಾತಾ, ವಿಧಾತಾ, ಸಂಧಾತ ಇತ್ಯಾದಿ ನಾಮಗಳನ್ನು ವೇದಗಳಲ್ಲಿ ಕಾಣಬಹುದು. ಇಲ್ಲಿ 'ಧಾತಾ' ಎಂದರೆ ನಮ್ಮನ್ನು ಪೋಷಣೆ ಮಾಡುವ ಶಕ್ತಿ. ಸಂಧಾತ ಎಂದರೆ ಸರ್ವವನ್ನೂ ಧಾರಣೆ ಮಾಡಿ, ಸರ್ವರನ್ನೂ ಪೋಷಣೆ ಮಾಡುವ ಮಹಾ ಕರುಣಾಮೂರ್ತಿ.

ಇನ್ನು ಸಂಧಾತಾ ಎನ್ನುವುದು ಜೋಡಿಸುವುದು ಎನ್ನುವ ಅರ್ಥವನ್ನು ಕೊಡುತ್ತದೆ. ಈ ಬ್ರಹ್ಮಾಂಡದಲ್ಲಿ ಜ್ಯೋತಿರ್ವರ್ಷದಿಂದಲೂ ಅಳೆಯಲು ಸಾಧ್ಯವಾಗದಷ್ಟು ದೂರದವರೆಗೆ, ನಮ್ಮ ಕಣ್ಣಿಗೆ ಕಾಣುವ, ಕಾಣದಿರುವ ಎಲ್ಲಾ ಗ್ರಹ-ಗೋಲಗಳನ್ನು ನಿರಾಲಂಬ ಆಕಾಶದಲ್ಲಿ ನಿಯಮಿತವಾಗಿ ಜೋಡಿಸಿ ಹಿಡಿದಿಟ್ಟಿರುವ ಶಕ್ತಿ ಭಗವಂತ ಸಂಧಾತಾ.

೧೦೨) ಸಂಧಿಮಾನ್

ನಮ್ಮ ದೇಹದಲ್ಲಿರುವ ೩೬೦ ಮೂಳೆಗಳ ಅಪೂರ್ವ ಜೋಡಣೆ, ಅಸ್ಥಿ ಸಂಧಿಯಲ್ಲಿನ ಚಲನೆ ಮತ್ತು ನಿರ್ವಹಣೆಯ ಅಪೂರ್ವ ವಿನ್ಯಾಸಕಾರ ಭಗವಂತ ಸಂಧಿಮಾನ್. ಅನೇಕ ವರ್ಣಗಳ ಸಂಧಿಯಿಂದ ಶಬ್ದಗಳ ರಚನೆ, ಶಬ್ದಗಳ ಸಂಧಿಯಿಂದ ವಾಕ್ಯದ ರಚನೆ, ವಾಕ್ಯಗಳ ಸಂಧಿಯಿಂದ ಗ್ರಂಥಗಳ ರಚನೆ, ಹೀಗೆ ಅಕ್ಷರಗಳ ಸಮಾಗಮದಿಂದ ಹೊಸ ಅರ್ಥದ ಪದ ಹಾಗೂ ಗ್ರಂಥ ಸೃಷ್ಟಿಮಾಡುವ ಭಗವಂತ ಸಂಧಿಮಾನ್. ಇಷ್ಟೇ ಅಲ್ಲದೆ ಗಂಡು ಹೆಣ್ಣುಗಳ ಸಮಾಗಮದಲ್ಲಿ ಸನ್ನಿಹಿತನಾಗಿದ್ದು, ಜೀವದ ಸೃಷ್ಟಿಗೆ ಕಾರಣನಾದ ಭಗವಂತ ಸಂಧಿಮಾನ್.

೧೦೩) ಸ್ಥಿರಃ

ಭಗವಂತ ಬದಲಾಗದವನು, ಅವನಿಗೆ ಬಾಲ್ಯ-ಯೌವನ-ಮುದಿತನವೆನ್ನುವುದಿಲ್ಲ. ಅವನು ಅಚಲ. ಹೀಗೆ ಅಚಲ ಮತ್ತು ಆನಂದಮಯನಾಗಿ ಎಲ್ಲೆಡೆ ತುಂಬಿರುವ ಭಗವಂತ ಸ್ಥಿರಃ.

೧೦೪) ಅಜಃ

ಅಜಃ ಎಂದರೆ ಎಂದೂ ಹುಟ್ಟದವನು. ಎಲ್ಲರೂ ಭಗವಂತನ ಮಕ್ಕಳು, ಆದರೆ ಆತ ಯಾರಿಗೂ ಹುಟ್ಟಿದವನಲ್ಲ. ಭಗವಂತನ ಹುಟ್ಟಿನ ಬಗ್ಗೆ ಚರ್ಚೆ 'ಬೀಜ ಮೊದಲೋ ಮರ ಮೊದಲೋ' ಎನ್ನುವ ಚರ್ಚೆಯಂತೆ. ಆತನ ತಂದೆ ಯಾರೂ ಅಲ್ಲ. ಏಕೆಂದರೆ ಅವನಿಗೆ ಹುಟ್ಟು-ಸಾವು ಎಂಬುದಿಲ್ಲ. ಇನ್ನು ಅಜಃ ಎಂದರೆ ಎಲ್ಲಾ ಕಡೆ ವ್ಯಾಪಿಸಿರುವವನು ಕೂಡಾ ಹೌದು. ಅ+ಜ-ಅಜಃ. ಇಲ್ಲಿ 'ಅ' ಎಂದರೆ 'ಅಲ್ಲ' ಅಥವಾ ಇಲ್ಲ! ಅಂದರೆ ಅವನು ನಾವು ತಿಳಿದ ಯಾವ ವಸ್ತುವೂ ಅಲ್ಲ, ಅವನಲ್ಲಿ ಯಾವ ದೋಷವೂ ಇಲ್ಲ. 'ಜ' ಎಂದರೆ 'ಜನಕ'. ಭಗವಂತ ಎಲ್ಲರ ತಂದೆ.

೧೦೫) ದುರ್ಮರ್ಷಣಃ

'ಮರ್ಷಣ' ಎಂದರೆ ಎಂಥಹ ವಿರೋಧವನ್ನೂ ತಡೆಯಬಲ್ಲ ಶಕ್ತಿ. ದುರ್ಮರ್ಷಣ ಎಂದರೆ ಯಾರೂ ತಡೆಯಲು ಅಸಾಧ್ಯವಾದ ಶಕ್ತಿ. ಭಗವಂತನನ್ನು ತಡೆದು ನಿಲ್ಲುವ ಶಕ್ತಿ ಇನ್ನೊಂದಿಲ್ಲ. ಸರ್ವಜ್ಞನಾದ ಆತನ ಆನಂದ ಸ್ವರೂಪ ಎಲ್ಲಾ ಕಡೆ ತುಂಬಿ ತುಳುಕುತ್ತಿರುತ್ತದೆ ಹಾಗೂ ಅದನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ.

೧೦೬) ಶಾಸ್ತಾ

ಶಾಸ್ತಾ ಎಂದರೆ ಶಾಸನ ಮಾಡುವವನು, ಕರ್ಮಕ್ಕೆ ತಕ್ಕಂತೆ ಜೀವರ ನಿಯಮನ ಮಾಡುವವವನು. ಭಗವಂತನ ನಿಯಮದಲ್ಲಿ ಸತ್ಯ, ಅಸತ್ಯ, ಹಿಂಸೆ, ಅಹಿಂಸೆ, ಧರ್ಮ-ಅಧರ್ಮಗಳಿಗೆ ವಿಶಿಷ್ಟವಾದ ವಿವರಣೆಯಿದೆ. ಇನ್ನೊಬ್ಬರ ಕ್ಷೇಮಕ್ಕೋಸ್ಕರ ಹೇಳುವ ಸುಳ್ಳು ಸತ್ಯ! ನಮ್ಮ ಸ್ವಾರ್ಥಕ್ಕೋಸ್ಕರ ಇನ್ನೊಬ್ಬರಿಗೆ ತೊಂದರೆಯಾಗುವಂತೆ ಹೇಳುವ ಸತ್ಯ ಸುಳ್ಳು! ಸದ್ಭಾವನೆಯಿಂದ ಮಾಡಿದ ಕಾರ್ಯ ಧರ್ಮ. ಸ್ವ-ರಕ್ಷಣೆ, ದೇಶ ರಕ್ಷಣೆ ಕಾರ್ಯದಲ್ಲಿ ನಮ್ಮಿಂದ ನಡೆಯುವ ಹಿಂಸೆ ಅಹಿಂಸೆ. ಭಗವಂತನ ಈ ವಿಶಿಷ್ಟ ನಿಯಮಗಳ ಅನೇಕ ದೃಷ್ಟಾಂತಗಳನ್ನು ಮಹಾಭಾರತ ಅಥವಾ ಕೃಷ್ಣಾವತಾರದಲ್ಲಿ ಕಾಣುತ್ತೇವೆ. ಮೇಲ್ನೋಟಕ್ಕೆ ಕೃಷ್ಣ ಸುಳ್ಳು ಹೇಳಿಸಿದ, ಮೋಸ ಮಾಡಿಸಿದ ಎನ್ನುವಂತೆ ಕಾಣುವ ಅನೇಕ ಘಟನೆಗಳ ಹಿಂದೆ ಭಗವಂತನ ಕಾರುಣ್ಯಪೂರ್ಣ ಉದ್ದೇಶ ಅಡಗಿದೆ. ಹೀಗೆ ಶಾಸನಗಳನ್ನು ಬೋಧನೆ ಮಾಡುವ ಮತ್ತು ನೈಜ ಘಟನೆಗಳ ಮೂಲಕ ಅದನ್ನು ನಮ್ಮ ಮುಂದೆ ಇರಿಸಿ ತೋರಿಸುವ ಭಗವಂತ ಶಾಸ್ತಾ.

೧೦೭) ವಿಶ್ರುತಾತ್ಮಾ

ವಿಶ್ರುತ ಎಂದರೆ ಎಲ್ಲರಿಂದ ಶ್ರುತನಾದವನು. ಸರ್ವ ಶಾಸ್ತ್ರಗಳಲ್ಲಿ ಖ್ಯಾತನಾದ, ಜ್ಞಾನಿಗಳಿಗೆ ಆತ್ಮೀಯನಾದ ಭಗವಂತ ವಿಶ್ರುತಾತ್ಮಾ.

೧೦೮) ಸುರಾರಿಹಾ

ಸುರರು ಎಂದರೆ ಆನಂದದ ಅರಿವಿನಲ್ಲಿ ಅಥವಾ ಭಗವಂತನ ಅರಿವಿನಲ್ಲಿ ಬದುಕುವವರು. ಸುರರಿಗೆ ಅರಿಗಳು ಸುರಾರಿಗಳು. ಭೋಗ ಭಾಗ್ಯಗಳಿಂದ ಆಚೆಗೆ ಏನೂ ಇಲ್ಲ ಎಂದು ತಿಳಿದು, ನಿಜವಾದ ಆನಂದದ ಅರಿವಿಲ್ಲದೆ ಬದುಕುವವರು ಸುರಾರಿಗಳು. ಇಂತಹ ದೇವತೆಗಳ ಹಗೆಗಳನ್ನು ಸಾವಿನ ಕಡೆಗೆ ತಳ್ಳುವ ಭಗವಂತ ಸುರಾರಿಹಾ.

ಗುರುರ್ಗುರುತಮೋ ಧಾಮಃ ಸತ್ಯಃ ಸತ್ಯಪರಾಕ್ರಮಃ ।
ನಿಮಿಷೋನಿಮಿಷಃ ಸ್ರಗ್ವೀ ವಾಚಸ್ಪತಿರುದಾರಧೀಃ ॥೨೬॥

೧೦೯) ಗುರುಃ

ಪ್ರತಿಯೊಬ್ಬ ಜ್ಞಾನದಾತನ ಒಳಗೆ ಜ್ಞಾನ ಸ್ವರೂಪನಾಗಿದ್ದು, ಜ್ಞಾನ ಅಭಿವ್ಯಕ್ತ ಮಾಡುವ ಭಗವಂತ ಗುರು. ಎಲ್ಲಾ ವೇದ ವಿದ್ಯೆಗಳನ್ನು ಉಪದೇಶಿಸಿರುವ ಭಗವಂತ ಗುರುಃ.

೧೧೦) ಗುರುತಮಃ

"ಕೃಷ್ಣಂ ವಂದೇ ಜಗದ್ಗುರುಂ". ಭಗವಂತನಿಗಿಂತ ದೊಡ್ಡ ಗುರು ಇನ್ನೊಬ್ಬನಿಲ್ಲ. ಬ್ರಹ್ಮಾದಿ ದೇವತೆಗಳಿಗೂ ಗುರುವಾದ ಭಗವಂತ ಗುರುತಮಃ.

೧೧೧) ಧಾಮಃ

ಧಾಮ ಎನ್ನುವ ಪದ ಆಶ್ರಯ, ಮನೆ ಹಾಗೂ ತೇಜಸ್ಸು ಎನ್ನುವ ಅರ್ಥಗಳನ್ನು ಕೊಡುತ್ತದೆ. ನಾವೆಲ್ಲರೂ ಕೊನೆಗೆ ಒಂದು ದಿನ ಸೇರಬೇಕಾದ ಮನೆ ಭಗವಂತ. ಆತ ಎಲ್ಲರ ಆಶ್ರಯದಾತ. ಅದಕ್ಕಾಗಿ ದಾಸವರೇಣ್ಯರು "ಅಲ್ಲಿದೆ ನಮ್ಮನೆ ಇಲ್ಲಿರುವುದು ಸುಮ್ಮನೆ" ಎಂದಿದ್ದಾರೆ. ಈ ನಾಮವನ್ನು ಒಡೆದು ನೋಡಿದರೆ ಧಾ+ಅಮ=ಧಾಮ. ಇಲ್ಲಿ 'ಧಾ' ಎಂದರೆ ಧಾರಕ, 'ಅಮ' ಎಂದರೆ ಅಮಿತ ಅಥವಾ ಮಿತಿ ಇಲ್ಲದ ಎಂದರ್ಥ. ಧಾರಕವಾದ ಅನೇಕ ಶಕ್ತಿಗಳು ಈ ಪ್ರಪಂಚದಲ್ಲಿವೆ. ದೇವತೆಗಳಿಗೆ ಇಂದ್ರ ಧಾರಕ, ಇಂದ್ರನಿಗೆ ಗರುಡ-ಶೇಷ-ರುದ್ರರು ಧಾರಕರು ಹಾಗೂ ಅವರಿಗೆ ಬ್ರಹ್ಮ-ವಾಯು ಧಾರಕರಾಗಿದ್ದಾರೆ. ಬ್ರಹ್ಮ-ವಾಯುವನ್ನು ಮಾತೆ ಲಕ್ಷ್ಮಿ ಧಾರಣೆ ಮಾಡಿದ್ದಾಳೆ. ಈ ಎಲ್ಲರ 'ಧಾರಕಶಕ್ತಿ' ಮಿತವಾದದ್ದು. ಸರ್ವಾಧಾರಕನಾದ ಭಗವಂತ ಅಮಿತಧಾರಕನಾದ ಜ್ಞಾನಾನಂದ ಸ್ವರೂಪ.

೧೧೨) ಸತ್ಯಃ

ಸತ್ಯ ನಾಮದ ಸ್ಥೂಲವಾದ ಅರ್ಥ "ಸದ್ಗುಣಗಳಿಂದ ಪರಿಪೂರ್ಣನಾದವ". ಭಗವಂತನೊಬ್ಬನೇ ಸಂಪೂರ್ಣ. ಅದಕ್ಕಾಗಿ ವೇದದಲ್ಲಿ ಬರುವ ಶಾಂತಿ ಮಂತ್ರಗಳಲ್ಲಿ ಹೀಗೆ ಹೇಳಿದ್ದಾರೆ:

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಶ್ಯತೇ ॥
ಓಂ ಶಾಂತಿಃ ಶಾಂತಿಃ ಶಾಂತಿಃ

ಅಂದರೆ ಅದೂ ಪೂರ್ಣ ಹಾಗೂ ಇದೂ ಪೂರ್ಣ. ಪೂರ್ಣದಿಂದ ಪೂರ್ಣಬರುತ್ತದೆ, ಪೂರ್ಣದಲ್ಲಿ ಪೂರ್ಣ ಸೇರಿ ಪೂರ್ಣವಾಗುತ್ತದೆ. ಎಲ್ಲಾ ಸದ್ಗುಣಗಳಿಂದ ಪೂರ್ಣನಾದ ಭಗವಂತ ಸತ್ಯಃ. ಭಾಗವತ ಮಂಗಲಾಚರಣೆಯಲ್ಲಿ ಹೇಳುವಂತೆ:

ಧಾಮ್ನಾಸ್ವೇನ ಸದಾ ನಿರಸ್ತ-ಕುಹಕಂ ಸತ್ಯಂ ಪರಂ ಧೀಮಹೀ ॥

ಅಂದರೆ ಭಗವಂತ ಸತ್-ಚಿತ್-ಆನಂದ ಸ್ವರೂಪ. ಅದಕ್ಕಾಗಿ ಭಗವಂತನನ್ನು "ಸತ್ಯಂ ಜ್ಞಾನಂ ಅನಂತಮ್ ಬ್ರಹ್ಮ" ಎಂದಿದ್ದಾರೆ. ಸೃಷ್ಟಿ, ಸ್ಥಿತಿ, ಸಂಹಾರ, ನಿಯಾಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷ ಈ ಎಂಟು ಅಸಾಧಾರಣ ಕ್ರಿಯೆಗಳುಳ್ಳ ಭಗವಂತ ಸತ್ಯಃ.

೨೧೩) ಸತ್ಯಪರಾಕ್ರಮಃ

ಇಲ್ಲಿ 'ಪರರು' ಎಂದರೆ ಶತ್ರುಗಳು ಅಥವಾ ದುಷ್ಟರು. ಪರಾಕ್ರಮ ಎಂದರೆ ಶತ್ರುಗಳನ್ನು ಬಗ್ಗುಬಡಿಯುವ ಸಾಮರ್ಥ್ಯ. ಭಗವಂತನ ಪರಾಕ್ರಮ 'ಸಂಪೂರ್ಣ' ಅಥವಾ 'ಸತ್ಯ'. ನಮ್ಮೊಳಗಿರುವ ಕಾಮ-ಕ್ರೋಧ-ಮದ-ಮತ್ಸರ ಇತ್ಯಾದಿ ಶತ್ರುಗಳನ್ನು ನಿರ್ಮೂಲ ಮಾಡಬೇಕಾದರೆ ನಾವು ಭಗವಂತನಲ್ಲಿ ಶರಣಾಗಬೇಕು. ಕುರಾನ್ ನಲ್ಲಿ ಹೇಳುವಂತೆ "Drive them out from where You have been driven out." ಅಂದರೆ ಆತ್ಮದ ಸಾಧನೆಯಲ್ಲಿ ಬಾಧಕವಾಗಿರುವ ಮನೋದೋಷಗಳನ್ನು ಹೊಡೆದೋಡಿಸಿ ಅಂತರಂಗದ ರಾಜ್ಯದಲ್ಲಿ ನೆಲೆಗೊಳ್ಳು ಎಂದರ್ಥ. ನಮ್ಮೊಳಗಿರುವ ಈ ಶತ್ರುಗಳು ನಮ್ಮ ಇಂದ್ರಿಯಗಳನ್ನು ಕೆಟ್ಟ ಕಾರ್ಯದಲ್ಲಿ ತೊಡಗುವಂತೆ ಪ್ರೇರೇಪಿಸುತ್ತವೆ. ಇದರಿಂದ ಕಣ್ಣು ಕೆಟ್ಟದ್ದನ್ನು ನೋಡುತ್ತದೆ, ಕಿವಿ ಕೆಟ್ಟದ್ದನ್ನು ಕೇಳಲು ಹಂಬಲಿಸುತ್ತದೆ, ಬಾಯಿ ಕೆಟ್ಟ ಮಾತನ್ನು ಆಡುತ್ತದೆ! ಹೀಗೆ ನಮ್ಮ ವ್ಯಕ್ತಿತ್ವವನ್ನು ಈ ಶತ್ರುಗಳು ನಮ್ಮಿಂದ ದೂರ ತಳ್ಳುತ್ತವೆ. ನಾವು ನಮ್ಮೊಳಗಿರುವ ಈ ಶತ್ರುಗಳನ್ನು ಗೆಲ್ಲಬೇಕಾದರೆ ಸತ್ಯಪರಾಕ್ರಮಿಯಾದ ಭಗವಂತನಲ್ಲಿ ಶರಣಾಗಬೇಕು. "ನನಗೆ ನನ್ನೊಳಗಿರುವ ಶತ್ರುಗಳನ್ನು ಸೋಲಿಸುವ ಶಕ್ತಿ ಇಲ್ಲ, ನೀನೇ ಸರ್ವ ವಿಘ್ನಗಳನ್ನು ನಿವಾರಿಸಿ, ಈ ಶತ್ರುಗಳಿಂದ ನನ್ನನ್ನು ಪಾರುಮಾಡಿ, ಸತ್ಯದ ದಾರಿಯಲ್ಲಿ ಮುನ್ನಡೆಸು" ಎಂದು ಭಗವಂತನಲ್ಲಿ ಪ್ರಾರ್ಥಿಸಬೇಕು. "ಶುಕ್ಲಾಂ ಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪ ಶಾಂತಯೇ." ಭಗವಂತನೊಬ್ಬನೇ ಸರ್ವ ವಿಘ್ನಗಳ ನಾಶಕ ಹಾಗೂ ಸತ್ಯಪರಾಕ್ರಮಿ. ಈ ರೀತಿ ನಮ್ಮೊಳಗಿನ ಹಾಗೂ ಹೊರಗಿನ ದುಷ್ಟರನ್ನು ಬಗ್ಗು ಬಡಿಯಲು ನಾವು ಶರಣಾಗಬೇಕಾದ ಭಗವಂತ ಸತ್ಯಪರಾಕ್ರಮಃ

೨೧೪) ನಿಮಿಷಃ

ನಿಮಿಷಃ ಎಂದರೆ ಕಣ್ಮುಚ್ಚಿ ನಿದ್ರಿಸುವವ. ಇಲ್ಲಿ ಭಗವಂತನ ಪ್ರಳಯಕಾಲದ ಯೋಗನಿದ್ರೆಯನ್ನು ನಿಮಿಷಃ ಎಂದಿದ್ದಾರೆ.

೨೧೫)ಅನಿಮಿಷಃ

ಮೇಲಿನ ನಿಮಿಷಃ ಎನ್ನುವ ಪದದ ತದ್ವಿರುದ್ಧ ನಾಮ ಅನಿಮಿಷಃ. ಅಂದರೆ ಭಗವಂತ ಎಂದೂ ನಿದ್ರಿಸುವುದಿಲ್ಲ! ಆತನಿಗೆ ನಿದ್ರೆಯೇ ಇಲ್ಲ. ಅಂದರೆ ಭಗವಂತ ನಮ್ಮಂತೆ ನಿದ್ರಿಸುವುದಿಲ್ಲ. ಆತನ ನಿದ್ರೆ ಕೇವಲ ಎಚ್ಚರದ ಯೋಗ ನಿದ್ರೆ.

೨೧೬)ಸ್ರಗ್ವೀ

ಸ್ರಗ್ವೀ ಎಂದರೆ ಮಾಲೆ ತೊಟ್ಟವನು ಎಂದರ್ಥ. ಭಗವಂತನನ್ನು ಪಂಕಜ-ನಾಭ, ಪಂಕಜ-ನೇತ್ರ, ಪಂಕಜ-ಅಂಗ್ರಿ ಪಂಕಜ-ಮಾಲಿ ಎನ್ನುತ್ತಾರೆ. ಈ ಬ್ರಹ್ಮಾಂಡವನ್ನು ನಾಭಿಯಲ್ಲಿ ಧರಿಸಿದವನು ಪಂಕಜ-ನಾಭ, ಈ ಜಗದ ನೇತಾರ ಪಂಕಜ-ನೇತ್ರ, ಈ ಬ್ರಹ್ಮಾಂಡ ಭಗವಂತನ ಕಾಲಿನ ಒಂದು ದೂಳಿನ ಕಣ-ಅದ್ದರಿಂದ ಆತ ಪಂಕಜ-ಅಂಗ್ರಿ. ಅನಂತ ಕೋಟಿ ಬ್ರಹ್ಮಾಂಡಗಳ ಸರಮಾಲೆಗಳ ಸೃಷ್ಟಾರ ಭಗವಂತ ಪಂಕಜ-ಮಾಲಿ ಅಥವಾ ಸ್ರಗ್ವೀ. ಸ್ರಗ್ವೀ ನಾಮದ ಇನ್ನೊಂದು ಅರ್ಥ-ತುಳಸೀ ಮಾಲೆ ತೊಟ್ಟವ. ಭಗವಂತನಿಗೆ ಲಕ್ಷ್ಮೀ ಸಾನಿಧ್ಯವಿರುವ ತುಳಸೀಮಾಲೆ ಅತ್ಯಂತ ಪ್ರಿಯ. ಕೃಷ್ಣಾವತಾರದಲ್ಲಿ ಸದಾ ವನಮಾಲೆಯನ್ನು ತೊಡುತ್ತಿದ್ದ ಭಗವಂತನಿಗೆ ಭಕ್ತಿಯಿಂದ ಅರ್ಪಿಸುವ ಎಲ್ಲಾ ಮಾಲೆಯೂ ಇಷ್ಟ.

೧೦೭)ವಾಚಸ್ಪತಿಃ

ವಾಗ್ದೇವತೆಯ ಒಡೆಯ ಅಥವಾ ಎಲ್ಲಾ ವಾಕ್ ಗಳಿಗೆ ಪತಿ ಭಗವಂತ ವಾಚಸ್ಪತಿಃ. ಅನೇಕ ಭಾಷೆಗಳನ್ನು ತಿಳಿದು ಮಾತನಾಡುವವ ವಾಚಸ್ಪತಿಯಲ್ಲ. ಪ್ರಾಣಿಗಳಿಗೂ ಅವುಗಳದ್ದೇ ಆದ ಭಾಷೆ ಇದೆ. ಆದರೆ ಅದು ನಮಗೆ ಅರ್ಥವಾಗುವುದಿಲ್ಲ. ಭಾಷೆ ನಾಲ್ಕು ಮಜಲುಗಳಿಂದ ಬೆಳೆದಿದೆ. ಪರಾಶರ, ಪಶ್ಯಂತಿ, ಮಧ್ಯಮ ಹಾಗೂ ವೈಖರಿ. ಇಲ್ಲಿ ಪರಾಶರ ಅತ್ಯಂತ ಸೂಕ್ಷ್ಮವಾದ ಭಾಷೆಯ ಸ್ಥಿತಿ. ಮನಸ್ಸಿನ ಯೋಚನೆಗನುಗುಣವಾಗಿ ನಾಭಿಯಲ್ಲಿ ಉಂಟಾಗುವ ಕಂಪನ( Vibration)-'ಪರಾಶರ'. 'ಪಶ್ಯಂತಿ' ಎಂದರೆ ನಾಭಿಯಿಂದ ಹೊರಟ ಸೂಕ್ಷ್ಮ ಭಾಷೆ ಹೃದಯದಲ್ಲಿ ಅಭಿವ್ಯಕ್ತವಾಗುವ ಸ್ಥಿತಿ. ಆ ನಂತರ ಕುತ್ತಿಗೆ ಮೂಲಕ ಹೊರಹೊಮ್ಮುವ ಭಾಷೆಯ ಸ್ಥಿತಿ 'ಮಧ್ಯಮ'. ಕೊನೆಯದಾಗಿ ಬಾಯಿಯ ಮೂಲಕ ಹೊರಹೊಮ್ಮುವ ಶಬ್ದ 'ವೈಖರಿ'. ಹೀಗೆ ಪ್ರಾಣಿ-ಪಕ್ಷಿಗಳಿಂದ ಹಿಡಿದು, ಭಾಷೆಯ ವಿವಿಧ ಮಜಲನ್ನು ತಿಳಿದಿರುವ ಭಗವಂತ ವಾಚಸ್ಪತಿಃ. ಈ ಕಾರಣಕ್ಕಾಗಿ ಭಗವಂತನನ್ನು ನಾವು ಯಾವ ಭಾಷೆಯಲ್ಲಿ ಕೂಡಾ ಉಪಾಸನೆ ಮಾಡಬಹುದು. ಆತ ನಮ್ಮ ನಾಭಿ-ಹೃದಯ ಭಾಷೆಯನ್ನೂ ಕೂಡಾ ತಿಳಿಯಬಲ್ಲ.

೧೦೮)ಉದಾರಧೀಃ

ಉದಾರಧೀಃ ಎಂದರೆ ಉತ್ಕೃಷ್ಟವಾದ ಅರಿವಿನ ಅಲೆ ಅಥವಾ ಸರ್ವೋತ್ಕೃಷ್ಟವಾದ ಜ್ಞಾನ. ಭಗವಂತ ಸರ್ವವನ್ನೂ ಬಲ್ಲ ಸರ್ವಜ್ಞ.

ಅಗ್ರಣೀರ್ಗ್ರಾಮಣೀಃ ಶ್ರೀಮಾನ್ ನ್ಯಾಯೋ ನೇತಾ ಸಮೀರಣಃ ।
ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್ ॥೩೭॥

೧೦೯) ಅಗ್ರಣೀಃ

ಅಗ್ರ ಎಂದರೆ ಮುಂದಾಳು. ಅಗ್ರಣೀ ಎಂದರೆ ಎಲ್ಲರ ಮುಂದಾಳಾಗಿ ನಿಂತು, ಅಥವಾ ಮುಂದಾಳುವಿನ ಒಳಗೆ ಕುಳಿತು ದುಷ್ಟ ನಿಗ್ರಹ ಮಾಡುವವ ಎಂದರ್ಥ. ಇದಕ್ಕೆ ಉತ್ತಮ ಉದಾಹರಣೆ ಮಹಾಭಾರತ ಯುದ್ಧ. ಧರ್ಮ ಸಂಸ್ಥಾಪನೆಗಾಗಿ ಪಾಂಡವ ಸೇನೆಯ ಸಾರಥಿಯಾಗಿ, ನರನ ಆವೇಷವಿರುವ ಅರ್ಜುನನಲ್ಲಿ ವಿಶೇಷ ರೀತಿಯಲ್ಲಿ ಆವಿರ್ಭೂತನಾಗಿ, ದುಷ್ಟ ಸಂಹಾರ ಮಾಡಿ, ಪ್ರಪಂಚಕ್ಕೆ ಗೀತೆಯ ಮೂಲಕ ವಿಶೇಷ ಸಂದೇಶವನ್ನು ಕರುಣಿಸಿದ ಭಗವಂತ ಅಗ್ರಣೀಃ.

ಮಹಾಭಾರತ ಮೇಲ್ನೋಟಕ್ಕೆ ಒಂದು ಮಹಾಯುದ್ಧ. ಆದರೆ ಈ ಯುದ್ಧಕ್ಕೂ ನಮ್ಮ ಜೀವನಕ್ಕೂ ನೇರ ಸಂಬಂಧವಿದೆ. ಜೀವನವೇ ಒಂದು ಹೋರಾಟ. ನಮ್ಮ ಹೃದಯರಂಗವೇ ಕುರುಕ್ಷೇತ್ರ. ಅದರೊಳಗೆ ನಮ್ಮನ್ನು ದಾರಿತಪ್ಪಿಸುವ ಕೌರವರೂ ಇದ್ದಾರೆ, ಎಚ್ಚರಿಸುವ ಪಾಂಡವರೂ ಇದ್ದಾರೆ. ಕಣ್ಣಿಲ್ಲದ ಧೃತರಾಷ್ಟ್ರ ಅಥವಾ ಕಣ್ಣಿದ್ದೂ ಕುರುಡಿಯಾದ ಗಾಂಧಾರಿಯಂತೆ ನಾವು ನಮ್ಮನ್ನು ದಾರಿ ತಪ್ಪಿಸುವ ಶಕ್ತಿಗಳ ಮೋಹಪಾಶಕ್ಕೆ ಬಲಿಯಾಗಿ, ನಮ್ಮಲ್ಲಿರುವ ಅಮೂಲ್ಯ ಸಂಪತ್ತಾದ ಇಂದ್ರಿಯಗಳನ್ನು ದುರುಪಯೋಗ ಮಾಡಿಕೊಂಡು ದಾರಿ ತಪ್ಪಿದಾಗ, ನಮ್ಮೊಳಗಿರುವ ಬಿಂಬ ರೂಪಿ ಭಗವಂತ ಅಗ್ರಣಿಯಾಗಿ ನಿಂತು ದುಷ್ಟಶಕ್ತಿಗಳ ನಿರ್ಮೂಲ ಮಾಡುತ್ತಾನೆ. ಭಗವಂತನಲ್ಲಿ ಶರಣಾಗತಿ ಮಾತ್ರ ನಮ್ಮನ್ನು ಉದ್ಧಾರ ಮಾಡಬಲ್ಲದು ಎನ್ನುವುದು ಮಹಾಭಾರತದ ಮೂಲ ಸಂದೇಶ.

೧೧೦) ಗ್ರಾಮಣೀಃ

ಗ್ರಾಮ ಎಂದರೆ ಸಮುದಾಯ. ಗ್ರಾಮಣಿ ಎಂದರೆ ಸಮುದಾಯದ ಒಡೆಯನಾಗಿದ್ದು ದುಷ್ಟ ನಿಗ್ರಹ ಮಾಡುವ ಭಗವಂತ. ಎಲ್ಲಾ ಜೀವ ಸಮುದಾಯಕ್ಕೆ, ದೇವತೆಗಳ ಸಮುದಾಯಕ್ಕೆ ಆತ ನಿಯಾಮಕ. ಅಮಿತವಾದ ಜ್ಞಾನಾನಂದಗಳಿಂದ ತುಂಬಿರುವ ಹಾಗೂ ಪ್ರಪಂಚದಲ್ಲಿ ಅತೀ ಹೆಚ್ಚು ಸಂಖ್ಯೆಯಲ್ಲಿರುವ, ಆಸ್ತಿಕತೆಯ ಸೋಗಿನಲ್ಲಿ

ಬದುಕುವ ತಾಮಸರನ್ನು ನಿಗ್ರಹಿಸಿ, ಸಾತ್ವಿಕತೆಯ ರಕ್ಷಣೆ ಮಾಡುವ ಭಗವಂತ ಗ್ರಾಮಣೀಃ.

೨೨೧) ಶ್ರೀಮಾನ್

ನಮ್ಮಲ್ಲಿ ಶ್ರೀಮಂತರು ಎಂದರೆ ಅತೀ ಹೆಚ್ಚು ಹಣವುಳ್ಳವರು ಎನ್ನುವುದು ಸಾಮಾನ್ಯ ಜನರ ಅಭಿಪ್ರಾಯ. ಆದರೆ ನಿಜವಾದ ಸಂಪತ್ತು ಹಣವಲ್ಲ. ಏಕೆಂದರೆ ಹಣ "ಕರಗುವ ಸಂಪತ್ತು". ಒಮ್ಮೆ ಕೋಟ್ಯಾಧಿಪತಿಯಾಗಿದ್ದ ವ್ಯಕ್ತಿಗಳು ಇಂದು ಭಿಕ್ಷಾಧಿಪತಿಯಾಗಿರುವ ಅನೇಕ ಘಟನೆಗಳನ್ನು ನಾವು ನಮ್ಮ ದೈನಂದಿನ ಜೀವನದಲ್ಲಿ ನೋಡುತ್ತೇವೆ. ಹಣ ಬರುವಾಗ ಹೇಗೆ ಬರುತ್ತದೆ ಎಂದು ತಿಳಿಯುವುದಿಲ್ಲ, ಹಾಗೇ ಹೋಗುವಾಗ ಕೂಡಾ ಹೇಗೆ ಹೋಗುತ್ತದೆ ಎಂದು ನಮಗೆ ತಿಳಿಯುವುದಿಲ್ಲ. ನಾವು ನಿಜವಾದ ಶ್ರೀಮಂತರಾಗಬೇಕಾದರೆ 'ಎಂದೂ ಕರಗದ' ಸಂಪತ್ತನ್ನು ನಮ್ಮದಾಗಿಸಿಕೊಳ್ಳಬೇಕು. ವೇದವಿದ್ಯೆಗಳು ಹಾಗೂ ಅದರಿಂದ ಬರುವ ಜ್ಞಾನ ಎಂದೂ ಕರಗದ ಅಪೂರ್ವ ಸಂಪತ್ತು.

ವಿದ್ಯಾದೇವತೆಯಾದ ಸರಸ್ವತಿ-ಭಾರತಿಯರಿಗೂ ಭಗವಂತ ನಿಯಾಮಕ. ಆದ್ದರಿಂದ ಆತ ಶ್ರೀಮಾನ್. ಈ ಹಿಂದೆ ಹೇಳಿದಂತೆ ಭಗವಂತ ನಮಗೆ ಅತ್ಯಂತ ಅಮೂಲ್ಯವಾದ ಐದು ಶ್ರೀಗಳನ್ನು ಕರುಣಿಸಿದ ಶ್ರೀಮಾನ್. ಅವುಗಳೆಂದರೆ: ಚಕ್ಷು(ಕಣ್ಣು), ಶ್ರೋತ್ರ(ಕಿವಿ), ಮನಃ(ಮನಸ್ಸು), ವಾಕ್(ಮಾತು), ಪ್ರಾಣ(ಉಸಿರು). ಇದಕ್ಕಿಂತ ಹೆಚ್ಚಿನ ಸಂಪತ್ತು ಮನುಷ್ಯನಿಗೆ ಇನ್ನೊಂದಿಲ್ಲ. ಈ ಸಂಪತ್ತನ್ನು ನಾವು ಎಂದೂ ದುರುಪಯೋಗ ಮಾಡಿಕೊಳ್ಳಬಾರದು. ಅದಕ್ಕಾಗಿ ಶಾಂತಿ ಮಂತ್ರದಲ್ಲಿ: ಒಳ್ಳೆಯದನ್ನು ನೋಡೋಣ; ಒಳ್ಳೆಯದನ್ನು ಮಾಡೋಣ; ಒಳ್ಳೆಯದನ್ನು ಕೇಳೋಣ ಹಾಗೂ ಒಳ್ಳೆಯದನ್ನು ಯೋಚಿಸೋಣ ಎಂದು ಹೇಳಿದೆ.

ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಃ ಸ್ತುಷ್ಟುವಾಂ ಸಸ್ತನೂಭಿಃ ವ್ಯಶೇಮ ದೇವಹಿತಂ ಯದಾಯುಃ ॥ ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ ಸ್ವಸ್ತಿ ನಃ ಪೂಷಾ ವಿಶ್ವವೇದಾಃ । ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥ ಓಂ ಶಾಂತಿಃ ಶಾಂತಿಃ ಶಾಂತಿಃ

ಸಾಮಾನ್ಯವಾಗಿ ನಾವು ಜೀವನ ನಿರ್ವಹಣೆಯ ಹಾಗೂ ನಮ್ಮ ಮುಂದಿನ ಪೀಳಿಗೆಯ ಬಗ್ಗೆ ಯೋಚಿಸುತ್ತಾ, ಹಣದ ಹಿಂದೆ ಓಡುತ್ತಾ ಭಗವಂತನ ಅಭಯವನ್ನು ಮರೆತು ಬದುಕುತ್ತೇವೆ. ಗೀತೆಯಲ್ಲಿ ಭಗವಂತ ನಮಗೆ ರಕ್ಷಣೆಯ ಅಭಯವಿತ್ತಿದ್ದಾನೆ.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ (ಅ-೯, ಶ್ಲೋ-೨೨)

ಅಂದರೆ-"ಚಿಂತೆಯನ್ನು ತೊರೆದು ಭಕ್ತಿಯಿಂದ ನನ್ನನ್ನು ಪೂಜಿಸುವ ಭಕ್ತರ ಯೋಗ-ಕ್ಷೇಮದ ಹೊಣೆ ನನ್ನದು" ಎಂದು. ಆದ್ದರಿಂದ ಅತ್ಯಂತ ಶ್ರೀಮಂತನಾದ ಭಗವಂತನ ಮುಂದೆ ಕನಿಷ್ಠವಾದ ಹಣದ ಅಭೀಷ್ಟವನ್ನು ವ್ಯಕ್ತಪಡಿಸದೆ, ಅವನನ್ನು ಸಂಪೂರ್ಣ ಭಕ್ತಿಯಿಂದ ನಂಬಿ ಬದುಕಿದರೆ ನಮ್ಮ ಸಕಲ ಅಭೀಷ್ಟವನ್ನೂ ಆತ ಪೂರೈಸಿ ರಕ್ಷಿಸುತ್ತಾನೆ.

೨೨೨) ನ್ಯಾಯಃ

ನಿ+ಆಯ-ನ್ಯಾಯ. ಆಯ-ವ್ಯಯ ಅನ್ನುವ ಪದ ಎಲ್ಲರಿಗೂ ತಿಳಿದ ಸಾಮಾನ್ಯ ಪದ. ಇಲ್ಲಿ ಆಯ ಎಂದರೆ ಲಾಭ. ಎಲ್ಲಾ ನೀತಿಗಳ ಮೂಲ ಪ್ರವರ್ತಕನಾದ ಭಗವಂತ-ಭಕ್ತರ ದೊಡ್ಡ ಲಾಭ. ಆದ್ದರಿಂದ ಆತ ನ್ಯಾಯಃ.

೨೨೩) ನೇತಾ

ನೇತಾ ಎಂದರೆ ನೇತಾರ ಅಥವಾ ನಾಯಕ. ಸಮಸ್ತ ಚರಾಚರಾತ್ಮಕ ಪ್ರಪಂಚದ, ಬ್ರಹ್ಮಾದಿ ದೇವತೆಗಳ, ಇಂದ್ರಿಯಗಳ, ಪಂಚಭೂತಗಳ ಮತ್ತು ಪಂಚಭೂತಾತ್ಮಕ ಪ್ರಪಂಚದ ನಾಯಕನಾದ ಭಗವಂತ ನೇತಾ. ಅನೇಕ ಅವತಾರಗಳ ಮೂಲಕ ನೇತಾರನಾಗಿ ಭೂಮಿಯನ್ನು ಹಾಗೂ ನಮ್ಮನ್ನು ರಕ್ಷಿಸಿದ ಭಗವಂತ ನೇತಾ.

೨೨೪) ಸಮೀರಣಃ

ಈರಣ ಎಂದರೆ ಪ್ರೇರಣೆಮಾಡುವವನು. ನಮ್ಮೊಳಗೆ ಅನೇಕ ಅಸುರ ಶಕ್ತಿಗಳು ಹಾಗೂ ದೇವತಾ ಶಕ್ತಿಗಳು ಪ್ರೇರಣೆ ಮಾಡುತ್ತಿರುತ್ತವೆ. ನಾವು ಈ ಶಕ್ತಿಗಳ ಪ್ರೇರಣೆಗೊಳಗಾಗುತ್ತೇವೆ. ಆದರೆ ಈ ಎಲ್ಲಾ ಶಕ್ತಿಗಳನ್ನು ನಿಯಂತ್ರಿಸುವ ಒಬ್ಬ ಸಮೀರಣ ನಮ್ಮಲ್ಲಿದ್ದಾನೆ. "ಧಿಯೋ ಯೋನಃ ಪ್ರಚೋದಯಾತ್" ಅಂದರೆ ಯಾವ ಭಗವಂತ ಮನೋತತ್ವಗಳನ್ನು ಪ್ರೇರಣೆ ಮಾಡುತ್ತಾನೋ ಅವನು ನಮ್ಮನ್ನು ಒಳ್ಳೆಯ ದಾರಿಯತ್ತ ಪ್ರೇರೇಪಿಸಲಿ ಎಂದರ್ಥ. ಪುರುಷ-ಸೂಕ್ತದಲ್ಲಿ ಹೇಳುವಂತೆ:

ಓಂ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾऽತ್ಯತಿಷ್ಠದ್ದಶಾಂಗುಲಂ ॥ ಪುರುಷಸೂಕ್ತ-೧॥

ಇಲ್ಲಿ 'ಸಹಸ್ರ' ಎಂದರೆ 'ಅನಂತ'. ಅದೇ ರೀತಿ ಶೀರ್ಷಾ, ಅಕ್ಷ, ಪಾತ್ ಪದಗಳು ಸರ್ವವ್ಯಾಪಿ, ಸರ್ವಸಮರ್ಥ ಭಗವಂತನ 'ವಿಶ್ವವ್ಯಾಪಕತೆ' ಯ ಕಲ್ಪನೆ. ಭಗವದ್ಗೀತೆಯಲ್ಲಿ ಭಗವಂತನ ವಿಶ್ವರೂಪ ವರ್ಣನೆ ಹೀಗಿದೆ:

ಸರ್ವತಃ ಪಾಣಿಪಾದಂ ತತ್ ಸರ್ವತೋऽಕ್ಷಿಶಿರೋಮುಖಮ್ ।
ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ (ಅ-೧೩, ಶ್ಲೋ-೧೩)

ಅಂದರೆ "ಎಲ್ಲೆಡೆಯೂ ಕೈ-ಕಾಲುಗಳು; ಎಲ್ಲೆಡೆಯೂ ಕಣ್ಣು-ತಲೆ-ಬಾಯಿಗಳು; ಎಲ್ಲೆಡೆಯೂ ಕಿವಿ; ಲೋಕದೊಳಗೆಲ್ಲವನ್ನು ಆವರಿಸಿ ನಿಂತ ಅನಂತ ರೂಪ". ಅಂದರೆ ಪರಮಾತ್ಮ ಬ್ರಹ್ಮಾಂಡದಲ್ಲೆಲ್ಲ ಹಾಸುಹೊಕ್ಕಾಗಿದ್ದಾನೆ. ಬ್ರಹ್ಮಾಂಡದ ಪ್ರತಿಯೊಂದು ಅಣುಅಣುವಿನಲ್ಲೂ ಪರಮಾತ್ಮನ ಅಂಶವಿದೆ. ಪರಮಾತ್ಮನಿಲ್ಲದ ಸ್ಥಳ ಈ ಬ್ರಹ್ಮಾಂಡದಲ್ಲಿ ಎಲ್ಲೂ ಇಲ್ಲ.

ತೈತ್ತಿರೀಯ ಉಪನಿಷತ್ತಿನಲ್ಲಿ(೨-೧; ಬ್ರಹ್ಮಾನಂದವಲ್ಲಿ ಮೊದಲನೆಯ ಅನುವಾಕ) ಹೇಳುವಂತೆ: ತಸ್ಯೇದಮೇವ ಶಿರಃ । ಅಯಂ ದಕ್ಷಿಣಃ ಪಕ್ಷಃ ಅಯಮುತ್ತರಪಕ್ಷಃ । ಅಯಮಾತ್ಮಾ । ಇದಂ ಪುಚ್ಛಂ ಪ್ರತಿಷ್ಠಾ । ಅಂದರೆ ಸರ್ವ ಜೀವ ಜಂತುವಿನಲ್ಲಿ ಅಂತರ್ಯಾಮಿಯಾಗಿರುವ ಭಗವಂತ ಇರದ ಸ್ಥಳವಿಲ್ಲ, ಕಾಣದ ಸಂಗತಿಯಿಲ್ಲ, ಅವನು ಹೋಗದ ಜಾಗವಿಲ್ಲ. ಎಲ್ಲಾ ಪಿಂಡಾಂಡದೊಳಗೂ ಅವನೇ ತುಂಬಿರುವುದರಿಂದ ಎಲ್ಲಾ ಪ್ರಾಣಿಗಳ ತಲೆಯೊಳಗೆ ಅವನ ತಲೆ; ಕಾಲೊಳಗೆ ಕಾಲು. ಆದ್ದರಿಂದ ಅವನಿಗೆ ಅನಂತ ತಲೆಗಳು; ಅನಂತ ಕಣ್ಣುಗಳು; ಅನಂತ ಕಾಲುಗಳು. ಅವನ ಅನಂತ ಗುಣಗಳೇ ಅವನ ಅನಂತ ರೂಪಗಳು; ಅನಂತ ಅವಯವಗಳು. ಅವನು ಬೇರೆ ಅಲ್ಲ , ಅವನ ಅವಯವಗಳು ಬೇರೆ ಅಲ್ಲ. ಅವನೂ ಜ್ಞಾನಾನಂದಮಯ; ಅವನ ಶರೀರವೂ ಜ್ಞಾನಾನಂದಮಯ. ಕಣ್ಣುಗಳು ಎಲ್ಲಾ ಜ್ಞಾನೇಂದ್ರಿಯಗಳಿಗೆ ಉಪಲಕ್ಷಣ. ಕಾಲುಗಳು ಕರ್ಮೇಂದ್ರಿಯಗಳಿಗೆ. ಅವನಿಗೆ ಅನಂತ ಜ್ಞಾನೇಂದ್ರಿಯಗಳು; ಅನಂತ ಕರ್ಮೇಂದ್ರಿಯಗಳು. ಹೀಗೆ ಸರ್ವ ಜೀವಗಳ ಅನ್ನಮಯಕೋಶ ಮತ್ತು ಪ್ರಾಣಮಯಕೋಶದಲ್ಲಿ ತುಂಬಿರುವ ಭಗವಂತ "ಸಹಸ್ರಮೂರ್ಧಾ ವಿಶ್ವಾತ್ಮಾ ಸಹಸ್ರಾಕ್ಷಃ ಸಹಸ್ರಪಾತ್". ಈ ಮೇಲಿನ ಅರ್ಥದೊಂದಿಗೆ ಈ ಶ್ಲೋಕದಲ್ಲಿ ಬಂದಿರುವ ಭಗವಂತನ ನಾಲ್ಕು ನಾಮಗಳನ್ನು ಈ ಕೆಳಗಿನಂತೆ ಸಂಕ್ಷಿಪ್ತವಾಗಿ ತಿಳಿಯಬಹುದು.

೨೨೫) ಸಹಸ್ರಮೂರ್ಧಾ

ಸಾವಿರಾರು ತಲೆಯವನು; ಅಂದರೆ ಸರ್ವ ಜೀವ-ಜಂತುಗಳಲ್ಲಿ ಅಂತರ್ಯಾಮಿ.

೨೨೬) ವಿಶ್ವಾತ್ಮಾ

ಜಗದ ಅಂತರ್ಯಾಮಿ; ಎಲ್ಲೆಡೆ ವ್ಯಾಪಿಸಿರುವವನು; ಬ್ರಹ್ಮಾದಿ ಪ್ರಾಣದೇವರಿಗೂ ಅಂತರ್ಯಾಮಿ.

೨೨೭) ಸಹಸ್ರಾಕ್ಷಃ

ಸಾವಿರಾರು ಕಣ್ಣುಗಳುಳ್ಳವನು; ಅಂದರೆ ಅವನು ಕಾಣದ ಸಂಗತಿಯಿಲ್ಲ.

೨೨೮) ಸಹಸ್ರಪಾತ್

ಸಾವಿರಾರು ಕಾಲುಗಳುಳ್ಳವನು; ಅಂದರೆ ಅವನು ಹೋಗದ ಜಾಗವಿಲ್ಲ.

ಆವರ್ತನೋ ನಿವೃತ್ತಾತ್ಮಾ ಸಂವೃತಃ ಸಂಪ್ರಮರ್ದನಃ ।
ಅಹಃ ಸಂವರ್ತಕೋ ವಹ್ನಿರನಿಲೋ ಧರಣೀಧರಃ ॥೩೮॥

೨೨೯) ಆವರ್ತನಃ

ಆವರ್ತನ ಎಂದರೆ ಸೃಷ್ಟಿ ಚಕ್ರವನ್ನು ನಿರಂತರ ತಿರುಗಿಸುತ್ತಿರುವವನು ಎಂದರ್ಥ. ಈ ವಿಶ್ವ ಎಂದೋ ಒಮ್ಮೆ ಸೃಷ್ಟಿಯಾಯಿತು, ಇನ್ನು ಎಷ್ಟೋ ಕೋಟಿ ವರ್ಷಗಳ ನಂತರ ಪ್ರಳಯವಾಗಿ ನಾಶವಾಗುತ್ತದೆ. ಯಾವುದಕ್ಕೆ ಆದಿ ಇದೆಯೋ ಅದಕ್ಕೆ ಅಂತ್ಯ ಕೂಡಾ ಇದೆ. ೩೧,೧೦೪ ಸಾವಿರ ಕೋಟಿ ವರ್ಷಗಳಿಗೊಮ್ಮೆ ಮಹಾಪ್ರಳಯವಾಗುತ್ತದೆ. ಆಗ ಈ ಕಣ್ಣಿಗೆ ಕಾಣುವ ಸೃಷ್ಟಿ ನಾಶವಾಗುತ್ತದೆ. ಪುನಃ ೩೧,೧೦೪ ಸಾವಿರ ಕೋಟಿ ವರ್ಷಗಳ ನಂತರ ಮರು ಸೃಷ್ಟಿಯಾಗುತ್ತದೆ. ಈ ಸೃಷ್ಟಿ-ಪ್ರಳಯ ಎನ್ನುವ ಕ್ರಿಯೆ ನಿರಂತರ. ಈ ಮಹಾಪ್ರಳಯವಲ್ಲದೇ ೪೩೨ ಕೋಟಿ ವರ್ಷಕ್ಕೊಮ್ಮೆ ಮಧ್ಯಮ ಪ್ರಳಯ ಹಾಗೂ ಸುಮಾರು ೩೧ ಕೋಟಿ ವರ್ಷಕ್ಕೊಮ್ಮೆ ಚಿಕ್ಕ ಪ್ರಳಯ. ಈ ರೀತಿ ಸೃಷ್ಟಿ-ಪ್ರಳಯಗಳು ಆವರ್ತನಗೊಳ್ಳುತ್ತವೆ. ಸೃಷ್ಟಿ ಚಕ್ರವನ್ನು ನಿರಂತರ ತಿರುಗಿಸುವ ಭಗವಂತ ಆವರ್ತನಃ. ಈ ಕಾರಣಕ್ಕಾಗಿ ಭಗವಂತನನ್ನು "ಅನಂತ ಕೋಟಿ ಬ್ರಹ್ಮಾಂಡ ನಾಯಕ" ಎನ್ನುತ್ತಾರೆ. ಈ ಸೃಷ್ಟಿಯ ನಿಯಾಮಕ ಶಕ್ತಿಗಳು ನಿವೃತ್ತಿಯಾದ ಮೇಲೆ ನಿರಂತರವಾಗಿ ಅನಾದಿ ಅನಂತಕಾಲದವರೆಗೆ ಆವೃತ್ತಿಯಾಗುತ್ತಿರುತ್ತಾರೆ. ಪ್ರತಿಯೊಂದು ಶಕ್ತಿಯೊಳಗೆ ಭಗವಂತ ನಿಯಾಮಕನಾಗಿ ಆವರ್ತನಾಗುತ್ತಿರುತ್ತಾನೆ.

ಆವರ್ತ ಎಂದರೆ "ಸುಳಿ" ಎನ್ನುವ ಇನ್ನೊಂದು ಅರ್ಥವಿದೆ. ಬದುಕಿನಲ್ಲಿ ಆಗಾಗ ನಾವು ಆಪತ್ತಿನ ಸುಳಿಗೆ ಸಿಕ್ಕಿಹಾಕಿಕೊಂಡಾಗ, ಮುಂದಾಳಾಗಿ ನಮ್ಮನ್ನು ಪಾರುಮಾಡುವ ("ಆವರ್ತ-ನಯತಿ") ಭಗವಂತ ಆವರ್ತನಃ. ಪ್ರತಿಯೊಬ್ಬರಿಗೂ ಜೀವನದಲ್ಲಿ ಸಮಸ್ಯೆಯ ಸುಳಿ ಇದ್ದೇ ಇರುತ್ತದೆ. ದೇವಾದಿ ದೇವತೆಗಳಿಗೂ ಇದು ತಪ್ಪಿದ್ದಲ್ಲ. ಇದಕ್ಕೆ ಉತ್ತಮ ಉದಾಹರಣೆ ಯುಧಿಷ್ಠಿರ ಹಾಗೂ ದ್ರೌಪದಿ. ಸ್ವತಃ ಧರ್ಮರಾಯನ ಅವತಾರಿಯಾದ ಯುಧಿಷ್ಠಿರ, 'ಭಾರತಿ'ಯ ಅವತಾರಿಣಿ ದ್ರೌಪದಿ ಪಟ್ಟ ಕಷ್ಟ ನಮಗೆಲ್ಲಾ ಗೊತ್ತೇ ಇದೆ. ಭಗವಂತ ನಮ್ಮ ಜೀವಿತ ಕಾಲದಲ್ಲಿ ನಮಗೆ ಕೊಡುವ ಪಾತ್ರವನ್ನು ನಾವು ನಮ್ಮ ಕರ್ತವ್ಯವೆಂದು ನಿಭಾಯಿಸಬೇಕು. ಜೀವನದಲ್ಲಿ ಏನು ಬರುತ್ತದೋ ಅದನ್ನು ಆಸ್ವಾದಿಸಬೇಕು. ಅದನ್ನು ಹೊಂದಿಸಿಕೊಂಡು ನಡೆಯುವುದೇ ಜೀವನ. ಆವರ್ತನನಾದ ಭಗವಂತ ಸದಾ ನಮ್ಮ ರಕ್ಷಣೆ ಮಾಡುತ್ತಿರುತ್ತಾನೆ ಎನ್ನುವ ನಂಬಿಕೆಯೇ 'ಭಗವಂತನ ಶ್ರೀರಕ್ಷೆ'

೨೩೦) (ಅ)ನಿವೃತ್ತಾತ್ಮಾ

ಈ ನಾಮವನ್ನು ನಿವೃತ್ತಾತ್ಮಾ ಹಾಗೂ ಅನಿವೃತ್ತಾತ್ಮಾ ಎನ್ನುವ ಎರಡು ರೂಪದಲ್ಲಿ ಕಾಣಬಹುದು. ಯಾವ ನಂಟೂ ಇಲ್ಲದೆ ಯಾವುದಕ್ಕೂ ಅಂಟಿಕೊಳ್ಳದ ನಿಷ್ಪಕ್ಷಪಾತಿ ಭಗವಂತ ನಿವೃತ್ತಾತ್ಮಾ. ಯಾರಿಂದ ನಾವು ನಿವೃತ್ತಿ ಕಡೆ ತಿರುಗಬಹುದೋ ಅವನು ನಿವೃತ್ತಾತ್ಮಾ.

ಇನ್ನು ಅನಿವೃತ್ತಾತ್ಮಾ ಅನ್ನುವ ನಾಮದಲ್ಲಿ 'ಅನಿ' ಎಂದರೆ 'ಜೀವಿ'. ಸರ್ವ ಜೀವಿಗಳಲ್ಲಿ ಅಂತರ್ಯಾಮಿಯಾಗಿ ಕುಳಿತಿರುವ ಭಗವಂತ ಅನಿವೃತ್ತಾತ್ಮಾ. ಪ್ರಾಣದೇವರನ್ನು 'ಅನಿ' ಎಂದು ಕರೆಯುತ್ತಾರೆ. ಯಾವಾಗಲೂ ಪ್ರಾಣದೇವರನ್ನು ತನ್ನ ಅಂತರಂಗದ ಸಚಿವನಾಗಿರಿಸಿಕೊಂಡಿರುವ ಭಗವಂತ ಅನಿವೃತ್ತಾತ್ಮಾ.

೨೩೧) ಸಂವೃತಃ

ಹೃದಯಗುಹೆಯೊಳಗೆ ಅಡಗಿ ಕುಳಿತವನು; ಸಮೀಚೀನವಾದ ಸದ್ಗುಣಗಳ ಸಾಗರನಾದ ಭಗವಂತ ಸಂವೃತಃ.

೨೨೨) ಸಂಪ್ರಮರ್ದನಃ

ಸಂ+ಪ್ರ+ಮರ್ದನ-ಸಂಪ್ರಮರ್ದನ; ಏಕಾಕ್ಷರ ಕೋಶದಲ್ಲಿ ವಿಷ್ಣುವಾಚಕ ಹನ್ನೊಂದು ನಾಮಗಳಿವೆ; ಅವುಗಳೆಂದರೆ: ಅ,ಕಾ, ಯ, ಪ್ರ, ವಿ, ಸಂ, ಭೂ, ಮಾ, ಸ, ಕ ಮತ್ತು ಹ. ಈ ಪ್ರತಿಯೊಂದು ಪದಕ್ಕೂ ವಿಶಿಷ್ಟವಾದ ಅರ್ಥವಿದೆ. ಸಾಮಾನ್ಯವಾಗಿ ಉಪಸರ್ಗ ಧಾತುವಿನೊಂದಿಗೆ ಸೇರಿದಾಗ ಧಾತುವಿನಲ್ಲಿ ನಿಗೂಢವಾಗಿ ಅಡಗಿರುವ ಅರ್ಥ ವ್ಯಂಜನವಾಗುತ್ತದೆ. ಉದಾಹರಣೆಗೆ "ಹಾರ" ಇದಕ್ಕೆ 'ಸಂ' ಸೇರಿದರೆ ಸಂಹಾರ, 'ಪ್ರ' ಸೇರಿದರೆ ಪ್ರಹಾರ, ವಿ ಸೇರಿದರೆ ವಿಹಾರ. ಹೀಗೆ ಇಲ್ಲಿ 'ಸಂ' ಎಂದರೆ ಸಂಪೂರ್ಣವಾದ, ಸಮಾನವಾದ ಎನ್ನುವ ಅನೇಕ ಅರ್ಥವನ್ನು ಕೊಡುತ್ತದೆ. 'ಪ್ರ' ಎಂದರೆ ಪ್ರಕೃಷ್ಟವಾದ ಅರಿವು. ಆದ್ದರಿಂದ ಸಂಪ್ರಮರ್ದನಃ ಎಂದರೆ ನಮಗೆ ಯಾವುದೇ ತಾರತಮ್ಯವಿಲ್ಲದೆ, ಪರಿಪೂರ್ಣವಾದ ಅರಿವನ್ನು ಕೊಟ್ಟು, ತರಬೇತಿಗೊಳಿಸಿ ಕೊನೆಗೆ ಈ ಭೌತಿಕ ಶರೀರವನ್ನು "ಮರ್ದನ" ಮಾಡಿ ಮುಕ್ತಿಯನ್ನು ಕರುಣಿಸುವ ಭಗವಂತ.

೨೨೩) ಅಹಃಸಂವರ್ತಕಃ

ಅಹಃ ಎನ್ನುವುದನ್ನು 'ಅಹಹ' ಹಾಗೂ ಅಹಂ ಎಂದು ಎರಡು ರೂಪದಲ್ಲಿ ಅರ್ಥೈಸಬಹುದು. ಬೆಳಕು ಹಾಗೂ ಬೆಳಕಿಗೆ ಕಾರಣಕರ್ತ ಸೂರ್ಯ 'ಅಹಹ', ಹಾಗೂ ನಾವು ಯಾವುದನ್ನು ಬಿಟ್ಟು ಇರಲು ಅಸಾಧ್ಯವೋ ಅದು 'ಅಹಂ'. ಗೀತೆಯಲ್ಲಿ ಹೇಳುವಂತೆ:

ನ ತದಸ್ತಿ ವಿನಾ ಯತ್ ಸ್ಯಾನ್ಮಯಾ ಭೂತಂ ಚರಾಚರಮ್ (ಅ-೧೦, ಶ್ಲೋ-೩೯)

ಅಂದರೆ "ನನ್ನನ್ನು ಹೊರತುಪಡಿಸಿ ಈ ಚರಾಚರದಲ್ಲಿ ಯಾವುದೂ ತಾನೇ-ತಾನಾಗಿ ಇಲ್ಲ". ಹೀಗೆ ಪಿಂಡಾಂಡ ಹಾಗೂ ಬ್ರಹ್ಮಾಂಡದಲ್ಲಿರುವ ಪ್ರವರ್ತಕ ಭಗವಂತ ಅಹಃಸಂವರ್ತಕಃ.

೨೨೪) ವಹ್ನಿ

ವಹ್ನಿ ಎಂದರೆ ವಾಹನ ಅಥವಾ ಕೊಂಡೊಯ್ಯುವವ. ನಮ್ಮ ಪಾಪ ಪುಣ್ಯಕ್ಕನುಸಾರವಾಗಿ ನಾವು ಯಾವ ಎತ್ತರಕ್ಕೇರಬೇಕೋ ಅಲ್ಲಿಗೆ ಕೊಂಡೊಯ್ಯುವವ. ಮೋಕ್ಷಯೋಗ್ಯ ಜೀವರನ್ನು ಮೋಕ್ಷಕ್ಕೆ ಕೊಂಡೊಯ್ಯುವ ಹಾಗೂ ಸಮಸ್ತ ಬ್ರಹ್ಮಾದಿ ದೇವತೆಗಳ ನಿಯಾಮಕನಾದ ಭಗವಂತ ವಹ್ನಿ.

೨೨೫) ಅನಿಲಃ

ಅನಿಲ ಎಂದರೆ ಪಂಚಭೂತಗಳಲ್ಲಿ ಒಂದಾದ "ಗಾಳಿ" ಎನ್ನುವುದು ರೂಢಾರ್ಥ. ಆದರೆ ಇದರ ಶಬ್ದನಿಷ್ಪತ್ತಿ (Etymological meaning) ತೀರಾ ಭಿನ್ನವಾದ ಅರ್ಥವನ್ನು ಕೊಡುತ್ತದೆ. "ನಿಲ" ಎಂದರೆ "ನಿಲಯನ". ಅಂದರೆ ನೆಲೆ ಅಥವಾ ಆಶ್ರಯ. ಭಗವಂತ "ಅ-ನಿಲ", ಎಂದರೆ ಸರ್ವರಿಗೂ ನೆಲೆಯಾಗಿ ಕಾಪಾಡುವ ಭಗವಂತ ಸ್ವಯಂ ಇನ್ನೊಬ್ಬರ ಆಶ್ರಯದಲ್ಲಿರುವವನಲ್ಲ. ಆತ ಅನಿಲಃ.

೨೨೬) ಧರಣೀಧರಃ

ಧರಣೀಧರ ಎಂದರೆ ಭೂಮಿಯನ್ನು ಹೊತ್ತವನು. ಭಗವಂತ ವಾಮನಾವತಾರದಲ್ಲಿ ಕಕ್ಷೆ ತಪ್ಪಿದ್ದ ಭೂಮಿಯನ್ನು ಪುನಃ ಕಕ್ಷೆಯಲ್ಲಿಟ್ಟು ರಕ್ಷಿಸಿದ ಕರುಣಾಮಯಿ. ಸರ್ವ ಗ್ರಹ-ಗೋಲವನ್ನು ನಿರ್ದಿಷ್ಟವಾಗಿ ಹಿಡಿದಿಟ್ಟು ನಡೆಸುವ ಭಗವಂತ ಧರಣೀಧರಃ.

ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಧೃಗ್ವಿಶ್ವಭುಗ್ವಿಭುಃ ।
ಸತ್ಕರ್ತಾ ಸತ್ಕೃತಃ ಸಾಧುರ್ಜಹ್ನುರ್ನಾರಾಯಣೋ ನರಃ ॥೨೯॥

೧೩೭) ಸುಪ್ರಸಾದಃ

ಪ್ರಸಾದ ಎಂದರೆ ಒಳಮನಸ್ಸಿನ ಆನಂದ (Internal Bliss). ಪೂರ್ಣಪ್ರಮಾಣದ ಸ್ವರೂಪಾನಂದನಾದ ಭಗವಂತ ಸುಪ್ರಸಾದಃ. ಭಗವಂತನಿಗೆ ದುಃಖದ ಸ್ಪರ್ಶವೇ ಇಲ್ಲ. ಆತನನ್ನು ಸ್ವಚ್ಛ ಮನಸ್ಸಿನಿಂದ, ಫಲಾಪೇಕ್ಷೆ ಇಲ್ಲದೆ ಉಪಾಸನೆ ಮಾಡುವವರಿಗೆ ಆತ ಸದಾ ಆನಂದವನ್ನು ಕೊಡುತ್ತಾನೆ. 'ಸುಪ್ರ' ಎಂದರೆ ಪೂರ್ಣತೆ ಪಡೆದವರು ಅಥವಾ ಜ್ಞಾನಿಗಳು. ಇಂತಹ ಜ್ಞಾನಿಗಳನ್ನು ಸಂಸಾರಬಂಧನದಿಂದ ಪಾರು ಮಾಡುವವನು ಸುಪ್ರಸಾದಃ. ಸುಪ್ರ+ಸಾದಃ-ಅಂದರೆ ಆನಂದದಿಂದ ಸಂಹಾರ ಮಾಡುವವನು! ಭಗವಂತ ಸಂಹಾರ ಮಾಡುವುದು ಬೇಸರದಿಂದ ಹಾಗೂ ದ್ವೇಷದಿಂದಲ್ಲ. ಸಂಹಾರ ಆತನ ಕರುಣಾಮಯ ಕರ್ಮ ಹಾಗೂ ಆತ ಅದನ್ನು ಯಾವಾಗಲೂ ಆನಂದ ಸ್ವರೂಪನಾಗಿ ಮಾಡುತ್ತಾನೆ.

೧೩೮) ಪ್ರಸನ್ನಾತ್ಮಾ

ತಿಳಿಯಾದ ಬಗೆಯವನು ಹಾಗೂ ರೋಷ ರಹಿತನೂ ಆದ ಭಗವಂತ ಪ್ರಸನ್ನಾತ್ಮಾ .[ಇಂಗ್ಲೀಷಿನ " Pleasant" ಎನ್ನುವ ಪದದ ಮೂಲ ಪದ ಪ್ರಾಯಃ ಸಂಸ್ಕೃತದ 'ಪ್ರಸನ್ನ' ಎನ್ನುವ ಪದದಿಂದ ಬಂದಿರಬಹುದು]. ಭಗವಂತ ಭಕ್ತರಿಗೆ ಎಂದೂ ರೋಷಚಿತ್ತನಲ್ಲ. ಎಂದೆಂದೂ ಪ್ರಸನ್ನತೆಯ ಭಾವದಿಂದ ಸದಾ ಭಕ್ತರ ರಕ್ಷಣೆ ಮಾಡುವ ಭಗವಂತ ಪ್ರಸನ್ನಾತ್ಮಾ. ಭಗವಂತನ ಪ್ರಸನ್ನಚಿತ್ತ ರೂಪಕ್ಕೆ ಆತನ ಕೃಷ್ಣಾವತಾರವೇ ಸಾಕ್ಷಿ. ಕೃಷ್ಣಾವತಾರದಲ್ಲಿ ಭಗವಂತ ಯಾವಾಗಲೂ ನಗುನಗುತ್ತಾ ತನ್ನ ಪ್ರಸನ್ನತೆಯ ಸ್ವರೂಪವನ್ನು ತನ್ನ ಭಕ್ತಕೋಟಿಗೆ ತೋರಿಸಿಕೊಟ್ಟಿದ್ದಾನೆ.

೧೩೯) ವಿಶ್ವಧೃಕ್

ಈ ಹಿಂದೆ ವಿಶ್ಲೇಶಿಸಿದಂತೆ ಬ್ರಹ್ಮಾಂಡದ ಸೃಷ್ಟಿಕರ್ತನಾದ ಬ್ರಹ್ಮನನ್ನೂ 'ವಿಶ್ವ' ಎನ್ನುತ್ತಾರೆ. ಈ ಬ್ರಹ್ಮಾಂಡವೆಂಬ ಕಮಲವನ್ನು ತನ್ನ ನಾಭಿಯಲ್ಲಿ ಧರಿಸಿರುವ ಸರ್ವಧಾರಕ ಭಗವಂತ ವಿಶ್ವಧೃಕ್.

೧೪೦) ವಿಶ್ವಭುಕ್

ಪ್ರಳಯಕಾಲದಲ್ಲಿ ಈ ವಿಶ್ವವನ್ನು ಸಂಪೂರ್ಣವಾಗಿ ಸಂಹಾರಮಾಡಿ (ಭೋಕ್ತಾ) ತನ್ನ ಉದರದಲ್ಲಿ ಸಲಹುವವನು. ವಿಶ್ವವನ್ನು ಪಾಲಿಸಿ ನಂತರ ಕಬಳಿಸುವ ಭಗವಂತ ವಿಶ್ವಭುಕ್.

೧೪೧) ವಿಭುಃ

ವಿವಿಧ+ಭವತಿ- ವಿಭುಃ. ಅಂದರೆ ವಿವಿಧರೂಪಿ ಅಥವಾ ಅನಂತರೂಪಿ. ಸರ್ವಸಮರ್ಥನಾಗಿ ಪ್ರಪಂಚದಲ್ಲೆಲ್ಲಾ ತುಂಬಿರುವ ಭಗವಂತ ವಿಭುಃ.

೧೪೨) ಸತ್ಕರ್ತಾ

ಗುಣದಲ್ಲಿ, ಜ್ಞಾನದಲ್ಲಿ ಹಿರಿಯರಾದವರನ್ನು, ಮೇಲು-ಕೀಳು ಎನ್ನುವ ಭೇದವಿಲ್ಲದೆ ಗೌರವಿಸುವುದನ್ನು ಸತ್ಕಾರ ಎನ್ನುತ್ತಾರೆ. ಭಗವಂತನ ಪೂಜೆ ಸಹ ಸತ್ಕಾರ. ಜೀವನದಲ್ಲಿ ಸತ್ಕಾರ ಹೇಗಿರಬೇಕು ಎನ್ನುವುದನ್ನು ಭಗವಂತ ತನ್ನ ಅವತಾರ ರೂಪದಲ್ಲಿ ನಮಗೆ ತೋರಿಸಿಕೊಟ್ಟಿದ್ದಾನೆ. ನಿಜವಾಗಿ ಹಿರಿಯ ವ್ಯಕ್ತಿಗಳು ಅಹಂಕಾರ ರಹಿತರಾಗಿರುತ್ತಾರೆ. ತಾನು ದೊಡ್ಡವ ಎನ್ನುವ ಅಹಂಕಾರ ಅವರಲ್ಲಿರುವುದಿಲ್ಲ. ರಾಜಸೂಯ ಯಜ್ಞದಲ್ಲಿ ಯಾರಿಗೆ ಮೊದಲು ಪಾದಪೂಜೆ ಮಾಡಬೇಕು ಎಂದು ಚರ್ಚೆಯಾದಾಗ, ಭೀಷ್ಮಾಚಾರ್ಯರು ಶ್ರೀಕೃಷ್ಣನೊಬ್ಬನೇ ಅಗ್ರಪೂಜೆಗೆ ಅರ್ಹ ಎನ್ನುವ ಸಲಹೆಯನ್ನು ಮುಂದಿಡುತ್ತಾರೆ. ಆ ಸಮಯದಲ್ಲಿ ಕೃಷ್ಣನನ್ನು ಹುಡುಕಾಡಿದರೆ ಆತ ಬಂದ ಅತಿಥಿಗಳ ಕಾಲು ತೊಳೆಯಲು ನೀರು ಕೊಡುತ್ತಿದ್ದನಂತೆ! ನಿಜವಾದ ಜ್ಞಾನಿಗಳು ಎಂದೂ ಅಹಂಕಾರಿಗಳಾಗಿರುವುದಿಲ್ಲ. ಇನ್ನೊಬ್ಬರನ್ನು ಸತ್ಕಾರ ಮಾಡುವುದನ್ನು ಭಗವಂತ ತನ್ನ ರಾಮಾವತಾರದಲ್ಲಿ ತೋರಿಸಿ ಕೊಟ್ಟಿದ್ದಾನೆ. ಮೇಲು-ಕೀಳು ಬಡವ-ಬಲ್ಲಿದ ಎನ್ನುವ ಭೇದವಿಲ್ಲದೆ ಸ್ನೇಹಿತ ಸುಧಾಮನನ್ನು ಭಗವಂತ ಸತ್ಕರಿಸಿದ ಬಗೆ ಎಲ್ಲರಿಗೂ ತಿಳಿದಿದೆ. ದುರ್ವಾಸಮುನಿ

ದ್ವಾರಕೆ ನೋಡಲು ಬಂದಾಗ ಸ್ವತಃ ಶ್ರೀಕೃಷ್ಣ ಅವರನ್ನು ಗಾಡಿಯಲ್ಲಿ ಕುಳ್ಳಿರಿಸಿ ತಾನೇ ಎಳೆದುಕೊಂಡು ಹೋಗಿ ಇಡೀ ದ್ವಾರಕೆಯನ್ನು ದುರ್ವಾಸರಿಗೆ ತೋರಿಸಿ ಕಳುಹಿಸಿಕೊಡುತ್ತಾನೆ. ತನ್ನ ಪೂಜೆಯನ್ನು ನಮ್ಮೊಳಗಿದ್ದು ತಾನೇ ಮಾಡಿಕೊಳ್ಳುವವ, ಪೂಜಾ ಫಲವನ್ನು ಭಕ್ತಕೋಟಿಗೆ ಕರುಣಿಸುವವ, ಸತ್ಕಾರ ಮಾಡುವುದು ಹೇಗೆ ಎನ್ನುವುದನ್ನು ಅವತಾರಗಳ ಮೂಲಕ ನಮಗೆ ತೋರಿಸಿಕೊಡುವ ಭಗವಂತ ಸತ್ಕರ್ತಾ.

೧೪೩) ಸತ್ಕೃತಃ

ಈ ಜಗತ್ತಿನಲ್ಲಿ ಇರುವ ಸರ್ವ ವಸ್ತುಗಳ ಕರ್ತನಾದ ಭಗವಂತ ಸತ್ಕೃತಃ. ಜ್ಞಾನ, ದುಃಖ, ಅಜ್ಞಾನ, ಸಂಹಾರ, ಮೋಕ್ಷದ 'ಕರ್ತ' ಭಗವಂತ ಸತ್ಕೃತಃ. 'ಸತ್' ಎಂದರೆ ಕಣ್ಣಿಗೆ ಕಾಣುವ ವಸ್ತು. ಸೃಷ್ಟಿಯ ಆದಿಯಲ್ಲಿ ಭಗವಂತ ಪ್ರಾಣತತ್ವವನ್ನು ಸೃಷ್ಟಿ ಮಾಡಿದ. ಭಗವಂತ ಸೃಷ್ಟಿ ಮಾಡಿರುವ 'ಮಣ್ಣು, ನೀರು, ಮತ್ತು ಬೆಂಕಿ 'ಸತ್'. ಈ ಜಗತ್ತಿನಲ್ಲಿ ಕಣ್ಣಿಗೆ ಕಾಣುವ ಸರ್ವ ವಸ್ತುಗಳು ಈ ಮೂರು ಮೂಲ ವಸ್ತುಗಳ ಮಿಶ್ರಣ. ಸದಾ ಕೆಳಮುಖವಾಗಿ ಚಲಿಸುವ ಮಣ್ಣು ತಮೋಗುಣವನ್ನು, ತಗ್ಗಿದ್ದ ಕಡೆ ಹರಿಯುವ ನೀರು ರಜೋಗುಣವನ್ನು ಹಾಗೂ ಸದಾ ಮೇಲ್ಮುಖವಾಗಿ ಉರಿಯುವ ಬೆಂಕಿ ಸತ್ವಗುಣವನ್ನು ಪ್ರತಿಬಿಂಬಿಸುತ್ತದೆ. ಮಣ್ಣು-ನೀರು-ಬೆಂಕಿ ಇಡೀ ವಿಶ್ವದ ಮೂಲದ್ರವ್ಯ. ಗೊಬ್ಬರದಲ್ಲಿರುವುದೂ ಮಣ್ಣು-ನೀರು-ಬೆಂಕಿ ಹಾಗೂ ಅದರಿಂದ ಅರಳಿನಿಲ್ಲುವ ಸುಂದರವಾದ ಗುಲಾಬಿ ಹೂವಿನಲ್ಲಿರುವುದೂ ಕೂಡಾ ಮಣ್ಣು-ನೀರು-ಬೆಂಕಿ. [ಇಲ್ಲಿ ಬೆಂಕಿ ಎಂದರೆ ಶಾಖ. ಸೂರ್ಯನ ಬೆಳಕಿನಿಂದ ನಮಗೆ ಬೇಕಾದ ಶಾಖ ದೊರೆಯುತ್ತದೆ.] ಹೀಗೆ ಅನಂತ ಆಕಾಶ, ಮೂಲದ್ರವ್ಯವಾದ ಮಣ್ಣು-ನೀರು-ಬೆಂಕಿ, ಗಾಳಿ, ಚರ-ಅಚರ, ಜಡ-ಚೇತನ, ಎಲ್ಲವುದರ ಸೃಷ್ಟಿಕರ್ತ ಭಗವಂತ ಸತ್ಕೃತಃ. ಆತ ಮಾಡುವ ಯಾವ ಕರ್ಮವೂ ಕೆಟ್ಟ ಕೆಲಸವಾಗಿರುವುದಿಲ್ಲ. ಆದರೆ ತಿಳುವಳಿಕೆ ಇಲ್ಲದ ನಾವು ಕೆಟ್ಟದ್ದು-ಒಳ್ಳೆಯದು ಎಂದು ತಿಳಿದುಕೊಳ್ಳುತ್ತೇವೆ. ವೇದವ್ಯಾಸರು ಹೇಳಿದಂತೆ: ಈ ಜಗತ್ತಿನಲ್ಲಿ ಎಂದೂ ಆಗಬಾರದ್ದು ಆಗಿಲ್ಲ ಹಾಗೂ ಆಗುವುದೂ ಇಲ್ಲ!

೧೪೪) ಸಾಧುಃ

ಭಗವಂತ ಸದ್ಗುಣಮೂರ್ತಿ. ಯಾವ ಕಾಲದಲ್ಲೂ ಆತನಿಗೆ ಕೆಟ್ಟ ಗುಣದ ಲೇಪವಿಲ್ಲ. ಸದ್ಗುಣಗಳಿಂದ ಪರಿಪೂರ್ಣನಾದ, ಸಾತ್ವಿಕ ಮೂರ್ತಿ ಹಾಗೂ ಸಕಲ ಗುಣಪೂರ್ಣ ಭಗವಂತ ಸಾಧುಃ.

೧೪೫)ಜಹ್ನು

'ಜಹ್ನು' ಎಂದಾಗ ನಮಗೆ ನೆನಪಿಗೆ ಬರುವುದು ಋಷಿ ಜಹ್ನು. ಗಂಗೆಯು ಭಗೀರಥ ಪ್ರಯತ್ನದಿಂದ ಭೂಮಿಗಿಳಿದು ಬರುತ್ತಿದ್ದಾಗ, ರಭಸದಿಂದ ಬಂದು ಜಹ್ನು ಋಷಿಗಳ ತಪೋವನ ಪ್ರವೇಶಿಸುತ್ತಾಳೆ. ಕೋಪಗೊಂಡ ಜಹ್ನು ಋಷಿಗಳು ಇಡೀ ಗಂಗೆಯನ್ನು ಸ್ವೀಕರಿಸಿ ಹಿಡಿದಿಡುತ್ತಾರೆ. ನಂತರ ಋಷಿಮುನಿಗಳ ಪ್ರಾರ್ಥನೆಯಂತೆ ಮತ್ತು ದೇವಾನುದೇವತೆಗಳ ಅನುಜ್ಞೆಯಂತೆ ಗಂಗಾದೇವಿಯನ್ನು ಹರಿದು ಬಿಡುತ್ತಾರೆ. ಈ ಕಾರಣಕ್ಕಾಗಿ ಗಂಗೆಯನ್ನು ಜಾಹ್ನವಿ ಎನ್ನುತ್ತಾರೆ. ಆದರೆ ಭಗವಂತನನ್ನು 'ಜಹ್ನು' ಎನ್ನಲು ಕಾರಣವೇನು? ಯಾವುದೇ ಅರ್ಥವಿಲ್ಲದೆ ವ್ಯರ್ಥವಾದ ಪದವನ್ನು ಜಹ್ನುವಿನ ತಂದೆ ತನ್ನ ಮಗನಿಗೆ ನಾಮಕರಣ ಮಾಡಿದನೇ? ಅಲ್ಲ- ಜಹ್ನು ಭಗವಂತನ ಗುಣವಾಚಕ ನಾಮ. ಇಲ್ಲಿ 'ಜಃ' ಧಾತು 'ಬಿಟ್ಟವನು' ಎನ್ನುವ ಅರ್ಥವನ್ನು ಕೊಡುತ್ತದೆ. ಭಗವಂತ ಯಾವುದು ಬೇಡವೋ ಅದನ್ನು ಬಿಟ್ಟವನು.ಇಲ್ಲಿ ಬೇಡವಾದದ್ದು ಅಂದರೆ ಪ್ರಮುಖವಾಗಿ ಅಹಂಕಾರ ಮತ್ತು ಮಮಕಾರ. ಭಗವಂತನಿಗೆ ಅಹಂಕಾರ ಮತ್ತು ಮಮಕಾರದ ಸ್ಪರ್ಶವೇ ಇಲ್ಲ. ಆದ್ದರಿಂದ ಆತ ಜಹ್ನು. 'ಜ' ಎಂದರೆ 'ಜನನ', 'ಹಂತಿ' ಎಂದರೆ ಸಂಹಾರ. ಸೃಷ್ಟಿ-ಸ್ಥಿತಿ-ಸಂಹಾರಗಳ ಕರ್ತ ಭಗವಂತ ಜಹ್ನು.

೧೪೬) ನಾರಾಯಣಃ

ಸೃಷ್ಟಿಗೆ ಮೊದಲು ಭಗವಂತ ಸೂಕ್ಷ್ಮ ರೂಪದ ಪ್ರಕೃತಿಯನ್ನು ನಿರ್ಮಾಣ ಮಾಡಿದ. ಇದೇ ಸೃಷ್ಟಿಯ ಮೂಲ ದ್ರವ್ಯ ಹಾಗೂ ಇದನ್ನು 'ನಾರ' ಎನ್ನುತ್ತಾರೆ. ಸೃಷ್ಟಿಗೆ ಮೊದಲು ಇದ್ದವ ನಾರಾಯಣ. ಸೃಷ್ಟಿ ನಿರ್ಮಾಣದ ನಂತರ ನರರ ಸಮುದಾಯವೇ ಅವನ ಅಯನ. ನಾರಸ್ಯ ಅಯನಃ ನಾರಾಯಣಃ. ಅಂದರೆ ಜೀವ ಸಮುದಾಯಕ್ಕೆ ಆಶ್ರಯದಾತ. "ನಾರಂ ಅಯನಂ ಯಸ್ಯ ನಾರಾಯಣಃ. ಅಂದರೆ ಜೀವ ಸಮುದಾಯದ ಆಶ್ರಯದಾತ. ನಾರಾಣಾಂ ಅಯನಃ ನಾರಾಯಣಃ. ಅಂದರೆ ಜೀವರನ್ನು ನಿಯಂತ್ರಿಸುವ ಸರ್ವ ದೇವತೆಗಳ ಆಶ್ರಯದಾತ. "ಅರ" ಎಂದರೆ ದೋಷ. ದೋಷದ ಸ್ಪರ್ಶವೇ ಇಲ್ಲದ ಗುಣಪೂರ್ಣ-ನಾರಾಯಣ. ಹೀಗೆ ಸೃಷ್ಟಿಗೆ ಮೊದಲು ಇದ್ದವ, ಸೃಷ್ಟಿಯಲ್ಲಿ ನಮ್ಮ ಒಳಗೂ ಹೊರಗೂ ತುಂಬಿರುವವ, ದೋಷಗಳಿಲ್ಲದ ಗುಣಪೂರ್ಣ, ಸರ್ವ ನರರೂ ತಿಳಿಯಬೇಕಾದವ, ದೇವತೆಗಳ ಆಶ್ರಯದಾತ, ಮತ್ತು ಎಲ್ಲಾ ನರರು ಕೊನೆಯದಾಗಿ ಸೇರಬೇಕಾದ ತಾಣ ಭಗವಂತ ನಾರಾಯಣಃ

೨೪೭) ನರಃ

'ನರ' ಎಂದರೆ ನರರಲ್ಲಿ ಶೇಷಾಭೀಷ್ಟನಾದ ಭಗವಂತನ ಆವೇಶ. ಅರ್ಜುನನಲ್ಲಿ ನರನ ಆವೇಶವಿತ್ತು ಎನ್ನುವ ವಿಷಯವನ್ನು ನಾವು ಹಿಂದೆ ವಿಶ್ಲೇಷಿಸಿದ್ದೇವೆ. ಶೇಷ ನಮ್ಮ ದೇಹದಲ್ಲಿರುವ ಕುಂಡಲಿನಿ ಶಕ್ತಿಯ ಸಂಕೇತ. ದೇಹದಲ್ಲಿ ನಾಲ್ಕು "ಪುರುಷರಿದ್ದಾರೆ'. ಶರೀರಪುರುಷ, ಛಂದಃಪುರುಷ, ವೇದಪುರುಷ ಮತ್ತು ಸಂವತ್ಸರಪುರುಷ. ಈ ದೇಹ ನಿಂತು ನಡೆದಾಡಬೇಕಾದರೆ ದೇಹದಲ್ಲಿ ಶರೀರಪುರುಷನಾದ ಶಿವಶಕ್ತಿ ಬೇಕು. ಮನಸ್ಸಿನ ಯೋಚನೆ-ಸ್ಪಂದನ, ಪರಾಶರ, ಪಶ್ಯಂತಿ, ಮಧ್ಯಮ ಮತ್ತು ವೈಖರಿ ರೂಪದಲ್ಲಿ ವಾಕ್ ಶಕ್ತಿ ಯಾಗಿ ಹೊರಹೊಮ್ಮಲು ಛಂದಃಪುರುಷನಾದ ಶೇಷ ಕಾರಣ. ಶೇಷನಲ್ಲಿ ವಿಶೇಷವಾಗಿ ಅಭೀಷ್ಟನಾದ ಶೇಷಶಯನನಾಗಿರುವ ಭಗವಂತ, ನಮ್ಮಲ್ಲಿರುವ ವೇದಪುರುಷ (ಗರುಡ) ಜಾಗೃತನಾಗುವಂತೆ ಮಾಡಿ, ಅಪೂರ್ವವಾದ ವೈದಿಕ ವಾಙ್ಮಯ ಶಕ್ತಿ ಪ್ರಾಪ್ತವಾಗುವಂತೆ ಮಾಡುತ್ತಾನೆ. ಹೀಗೆ ಛಂದಃಪುರುಷನಲ್ಲಿ ಅಭೀಷ್ಟನಾಗಿರುವವ, ಎಲ್ಲವನ್ನೂ ತಿಳಿದವ, 'ಅರಿಗಳಿಗೆ' ನರನಾದ ಭಗವಂತ ನರಃ

ಅಸಂಖ್ಯೇಯೋಽಪ್ರಮೇಯಾತ್ಮಾ ವಿಶಿಷ್ಟಃ ಶಿಷ್ಟಕೃಚ್ಛುಚಿಃ ।
ಸಿದ್ಧಾರ್ಥಃ ಸಿದ್ಧಸಂಕಲ್ಪಃ ಸಿದ್ಧಿದಃ ಸಿದ್ಧಿಸಾಧನಃ ॥೪೦ ॥

೨೪೮) ಅಸಂಖ್ಯೇಯಃ

ಸಂಖ್ಯೆಗೆ ಒಳಪಡದವನು ಅಸಂಖ್ಯೇಯಃ. ಭಗವಂತನ ರೂಪ ಅನಂತ. ಅದು ನಮ್ಮ ಎಣಿಕೆಗೊಳಪಟ್ಟದ್ದಲ್ಲ. ಗಣಿತದಿಂದ ಅಳೆಯಲು ಅಸಾಧ್ಯವಾದ ಗುಣ ಕ್ರಿಯೆ ಮಹಿಮೆ ಭಗವಂತನದ್ದು. ವೇದದಲ್ಲಿ ಹೇಳುವಂತೆ: " ಈ ಭೂಮಿ ಎಷ್ಟು ಪರಮಾಣುಗಳಿಂದಾಗಿದೆ ಎಂದು ಲೆಕ್ಕ ಹಾಕಿದರೂ ಹಾಕಬಹುದು, ಆದರೆ ಭಗವಂತನನ್ನು, ಆತನ ಗುಣ, ರೂಪ, ಕ್ರಿಯೆ, ಯಾವುದನ್ನೂ ಲೆಕ್ಕ ಹಾಕುವುದು ಅಸಾಧ್ಯ. ಪ್ರತಿಯೊಂದು ಜೀವದಲ್ಲಿ, ಪಂಚ ಜ್ಞಾನೇದ್ರೀಯದಲ್ಲಿ, ಪಂಚಕರ್ಮೇಂದ್ರಿಯದಲ್ಲಿ, ಪಂಚಭೂತಗಳಲ್ಲಿ, ಪಂಚಕೋಶದಲ್ಲಿ, ಸಪ್ತ ಧಾತುವಿನಲ್ಲಿ, ಸರ್ವ ನರಕೋಶದಲ್ಲಿ, ಹೀಗೆ ಅನಂತ ರೂಪನಾಗಿ ನಮ್ಮೊಳಗೆ, ನಮ್ಮ ಹೊರಗೆ ಅನಂತ ಶಕ್ತಿಯಾಗಿ ಭಗವಂತನಿದ್ದಾನೆ. ಭಗವಂತನ ಸೃಷ್ಟಿ ಕೂಡಾ ಅನಂತ. ರಾತ್ರಿ ಹೊತ್ತು ಆಕಾಶದಲ್ಲಿ ಕಾಣುವ ಅನಂತ ನಕ್ಷತ್ರಮಂಡಲ ಭಗವಂತನ ಸೃಷ್ಟಿ. ವಿಜ್ಞಾನಕ್ಕೆ ತಿಳಿದಿರುವುದು ಕೇವಲ ಭೂಮಿಯ ಹತ್ತಿರದಲ್ಲಿರುವ ಗ್ರಹ ಗೋಲಗಳ ಪರಿಚಯ ಮಾತ್ರ. ಅದರಿಂದಾಚೆಗಿನ ಭಗವಂತನ ಸೃಷ್ಟಿ ಅನಂತ. ಹೀಗೆ ಭಗವಂತನ ಸೃಷ್ಟಿಯನ್ನೇ ತಿಳಿಯಲು ಅಸಾಧ್ಯವಾಗಿರುವಾಗ, ಆತನನ್ನು ಗಣಿತದ ಮಿತಿಯಲ್ಲಿ ಅಳೆಯುವುದು ಎಂದಿಗೂ ಸಾಧ್ಯವಿಲ್ಲ.

ಇನ್ನು ಸಂಸ್ಕೃತದಲ್ಲಿ 'ಸಂಖ್ಯಾ' ಎನ್ನುವ ಪದದ ಮೂಲಾರ್ಥ ಜ್ಞಾನಿ, ಪಂಡಿತ, ವಿದ್ವಾಂಸ ಇತ್ಯಾದಿ. ವೇದದಲ್ಲಿ ಹಾಗೂ ಗೀತೆಯಲ್ಲಿ ಹೆಚ್ಚಾಗಿ 'ಸಂಖ್ಯಾ' ಎನ್ನುವ ಪದವನ್ನು ಈ ಮೇಲಿನ ಅರ್ಥದಲ್ಲಿ ಬಳಸಲಾಗಿದೆ. 'ಅ' ಎನ್ನುವುದು 'ಅನಂತ',

'ಅಪಾರ' ಎನ್ನುವ ಅನೇಕ ಅರ್ಥವನ್ನು ಕೊಡುವ ಓಂಕಾರದ ಮೊದಲ ಅಕ್ಷರ. ಆದ್ದರಿಂದ ಅಸಂಖ್ಯೇಯಃ ಎಂದರೆ ಅನಂತಜ್ಞಾನ ಸಾಗರ. ಅಜ್ಞಾನಿ ಭಕ್ತರಿಗೆ ಜ್ಞಾನವನ್ನು, ಜ್ಞಾನಿಗಳಿಗೆ ಮೋಕ್ಷವನ್ನು ಕೊಡುವ ಭಗವಂತ ಅಸಂಖ್ಯೇಯಃ

೨೪೯) ಅಪ್ರಮೇಯಾತ್ಮಾ

ಅಪ್ರಮೇಯಾತ್ಮಾ ಎಂದರೆ ತಿಳಿಯಲಾಗದ ಅಥವಾ ಅಳೆಯಲಾಗದ ಸ್ವರೂಪ. ಭಗವಂತ ಸಂಪೂರ್ಣವಾಗಿ ನಮ್ಮ ತಿಳಿವಿಗೆ ಗೋಚರವಾಗುವ ವಸ್ತುವಲ್ಲ. ಆತನನ್ನು ಸಂಪೂರ್ಣ ತಿಳಿಯುವುದು ಅಸಾಧ್ಯ. ದೋಷರಹಿತನಾದ, ಪರಿಪೂರ್ಣ ಹಾಗೂ ಎಲ್ಲರೂ ತಿಳಿಯಬೇಕಾಗಿರುವ ಭಗವಂತ ಅಪ್ರಮೇಯಾತ್ಮಾ.

೨೫೦) ವಿಶಿಷ್ಟಃ

ವಿಶಿಷ್ಟ ಎಂದರೆ ಎಲ್ಲರಿಗಿಂತ ಮಿಗಿಲಾದವನು, ವಿಲಕ್ಷಣ ರೂಪವುಳ್ಳವನು("Something Unique and Extraordinary"). ಆತನ ವಿಶಿಷ್ಟತೆಯನ್ನು ಆತನ ಅವತಾರದ ಘಟನೆಗಳಲ್ಲಿ ನೋಡಬಹುದು. ಕಂಬವನ್ನೊಡೆದು ಬಂದ ನಾರಸಿಂಹ, ಗೋವರ್ಧನ ಬೆಟ್ಟವನ್ನೆತ್ತಿದ ಸಾಮಾನ್ಯ ಗೋಪಾಲ ರೂಪಿ ಭಗವಂತ, ಮತ್ಸ್ಯಾವತಾರದಲ್ಲಿ ಮನುವಿನ ಮೂಲಕ ಜೀವದ ಮರುಸೃಷ್ಟಿಮಾಡಿದ ಭಗವಂತ, ಹೀಗೆ ಆತನ ವಿಶಿಷ್ಟತೆಯನ್ನು ನಾವು ಲೆಕ್ಕ ಹಾಕಲು ಬರುವುದಿಲ್ಲ. ಎಲ್ಲರಿಗಿಂತ ವಿಶಿಷ್ಟವಾಗಿದ್ದು ಸದಾಚಾರದಲ್ಲಿರುವವರನ್ನು ರಕ್ಷಿಸಿ ಉದ್ಧರಿಸುವ ಭಗವಂತ ವಿಶಿಷ್ಟಃ

೨೫೧) ಶಿಷ್ಟಕೃತ್

'ಶಿಷ್ಟ' ಎಂದರೆ ಶಾಸ್ತ್ರದ ಮರ್ಮವನ್ನು ತಿಳಿದು ಅದನ್ನು ತಮ್ಮ ಜೀವನದಲ್ಲಿ ಅನುಷ್ಠಾನ ಮಾಡಿಕೊಂಡವರು. ಇಂತಹ 'ಶಿಷ್ಟರನ್ನು' ಪಾಲಿಸಿ ಉದ್ಧಾರ ಮಾಡುವ ಹಾಗೂ ವೇದಗಳ ಮೂಲಕ ಧರ್ಮ ಶಾಸನವನ್ನು ಮಾಡಿದ ಭಗವಂತ ಶಿಷ್ಟಕೃತ್.

೨೫೨) ಶುಚಿಃ

ಶುಚಿ ಎನ್ನುವ ಪದ ಶುದ್ಧ, ಪವಿತ್ರ, ಪ್ರಕಾಶ, ಬೆಳಕು, ನಿರ್ಮಲ ಇತ್ಯಾದಿ ಅರ್ಥವನ್ನು ಕೊಡುತ್ತದಾದರೂ ಕೂಡಾ, ಇದರ ಮೂಲ ಅರ್ಥ 'ಬೆಂಕಿ'. ಬೆಂಕಿ ಮೂಲಭೂತವಾಗಿ ಪವಿತ್ರ ಹಾಗೂ ನಿರ್ಮಲವಾಗಿದ್ದು ಬೆಳಕನ್ನು ಕೊಡುತ್ತದೆ. ಬೆಂಕಿ ಶುದ್ಧ ಹಾಗೂ ಬೆಂಕಿಗೆ ಹಾಕಿದ ಅಶುದ್ಧ ಕೂಡಾ ಶುದ್ಧವಾಗುತ್ತದೆ. ಬೆಂಕಿ ಯಾವಾಗಲೂ ಊರ್ಧ್ವಮುಖವಾಗಿ ಉರಿಯುತ್ತದೆ. ಆದ್ದರಿಂದ ಅಗ್ನಿ ಸತ್ವಗುಣದ ಸಂಕೇತ. ಭಗವಂತ ಹವಿಸ್ಸನ್ನು ನೇರವಾಗಿ ಸ್ವೀಕರಿಸುವುದು ಅಗ್ನಿ ಮುಖೇನ. ಅಗ್ನಿ ಪ್ರತೀಕದಲ್ಲಿ ಮಾಡುವ ಪೂಜೆ ಅತಿಶ್ರೇಷ್ಠ. ಅಗ್ನಿಯಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಶುಚಿಃ.

೨೫೩) ಸಿದ್ಧಾರ್ಥಃ

ಭಗವಂತ ಸಾಧಿಸಬೇಕಾದ ವಸ್ತುವಲ್ಲ-ಅವನು ಸಿದ್ಧ. ಎಲ್ಲಾ ವೇದಗಳು ಹೇಳುವುದು ಸಿದ್ಧನಾದ ಭಗವಂತನನ್ನು. ಈ ಹಿಂದೆ ಹೇಳಿದಂತೆ ಪ್ರತಿಯೊಂದು ನಾಮವೂ ಭಗವಂತನ ಅನ್ವರ್ಥ ನಾಮ. ಎಲ್ಲಾ ನಾಮಗಳ ಅರ್ಥಗಳು ಯಾರಲ್ಲಿ ಪರಿಪೂರ್ಣವಾಗಿ ಸಿದ್ಧವಾಗಿದೆಯೋ ಅವನು ಸಿದ್ಧಾರ್ಥಃ. ಜಗತ್ತಿನಲ್ಲಿರುವ ಪ್ರಸಿದ್ಧವಾದ, ಸರ್ವಶಾಸ್ತ್ರಗಳಿಂದ ಪ್ರಸಿದ್ಧನಾದ ಪರಮಪುರುಷಾರ್ಥರೂಪ ಹಾಗೂ ಸರ್ವವನ್ನು ತ್ಯಜಿಸಿದವರಿಗೂ ಬೇಕಾಗಿರುವ-ಅರ್ಥ(ವಸ್ತು) ಸಿದ್ಧಾರ್ಥಃ

೨೫೪) ಸಿದ್ಧಸಂಕಲ್ಪಃ

ನಾವು ಏನನ್ನಾದರು ನಿರ್ಮಾಣ ಮಾಡಬೇಕಾದರೆ ನಮಗೆ ಇಚ್ಛಾಶಕ್ತಿ, ಜ್ಞಾನಶಕ್ತಿ ಹಾಗೂ ಕ್ರಿಯಾಶಕ್ತಿ ಬೇಕು. ಆದರೆ ಭಗವಂತ ಕೇವಲ ತನ್ನ ಸಂಕಲ್ಪದಿಂದ ಏನನ್ನಾದರೂ ಸೃಷ್ಟಿ ಮಾಡಬಲ್ಲ. ನೀವು ಸಿದ್ಧ ಪುರುಷರ ಬಗ್ಗೆ ಕೇಳಿರಬಹುದು.

ಸಿದ್ಧಪುರುಷರು ಇಚ್ಛಿಸಿದಂತೆ ಅವರ ಸಂಕಲ್ಪ ನೆರವೇರುತ್ತದೆ. ಪ್ರತಿಯೊಬ್ಬರಲ್ಲೂ ಸಹ ಇಂತಹ ಅಪೂರ್ವ ಶಕ್ತಿ (Mind Power) ಇದೆ. ಆದರೆ ಅದು ಜಾಗೃತವಾಗಿರುವುದಿಲ್ಲ. ಯಾರು ಏಕಾಗ್ರತೆಯಿಂದ ಮನಸ್ಸಿನ ಶಕ್ತಿಯನ್ನು ಗುರುತಿಸಿಕೊಳ್ಳುತಾರೋ ಅವರು ಸಿದ್ಧರು. ಸಿದ್ಧರ ಸಂಕಲ್ಪ ಯಾರಿಂದ ಈಡೇರುತ್ತದೋ, ಯಾರ ಸಂಕಲ್ಪ ಮಾತ್ರದಿಂದ ಇಡೀ ವಿಶ್ವ ಸೃಷ್ಟಿಯಾಗಿದೆಯೋ ಅವನು ಸಿದ್ಧಸಂಕಲ್ಪಃ.

೨೫೫) ಸಿದ್ಧಿದಃ

ನಾವು ಸಿದ್ಧರಾಗಬೇಕಾದರೆ ಅದನ್ನು ಭಗವಂತ ನಮಗೆ ಕೊಡಬೇಕು. ಅವರವರ ಸ್ವಭಾವ ಹಾಗೂ ಕರ್ಮಕ್ಕೆ ತಕ್ಕಂತೆ ಸಿದ್ಧಿಯನ್ನು ಕೊಡುವ ಅಥವಾ ಕಸಿದುಕೊಳ್ಳುವ ಭಗವಂತ ಸಿದ್ಧಿದಃ.

೨೫೬) ಸಿದ್ಧಿಸಾಧನಃ

ಮೋಕ್ಷ ಒಂದು ಸಿದ್ಧಿ. ಇಂತಹ ಸಿದ್ಧಿಯನ್ನು ಪಡೆಯಬೇಕಾದರೆ ನಮಗಿರುವ ಏಕಮಾತ್ರ ಸಾಧನ ಭಗವಂತ. ಪರಮ ಪುರುಷಾರ್ಥಕವಾದ ಮೋಕ್ಷಕ್ಕೆ ಸಾಧನಾಭೂತನಾದವ ಭಗವಂತನೊಬ್ಬನೇ. ಭಗವಂತ ಎಲ್ಲಾ ಸಿದ್ಧಿಗಳ ಸ್ವರೂಪ. ಭಗವಂತನ ಉಪಾಸನೆಯಿಂದ ಮಾತ್ರ ನಾವು ಸಿದ್ಧಿಯನ್ನು ಆಂಶಿಕವಾಗಿ ಪಡೆಯಬಹುದು. ಸಿದ್ಧಿಗಳು ಅನೇಕ. ಅಷ್ಟ ಸಿದ್ಧಿಗಳ ಬಗ್ಗೆ ನೀವು ಕೇಳಿರಬಹುದು. ಅಣಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಶ್ಯ, ಈಶಿತ್ವ, ವಶಿತ್ವ, ಪ್ರಾಕಾಮ್ಯ ಇವು ಯೋಗಸಾಧನೆಯಿಂದ ಗಳಿಸಬಹುದಾದ ಎಂಟು ಐಶ್ವರ್ಯ ಸಿದ್ಧಿಗಳು. ಅಣಿಮಾ ಎಂದರೆ ಅತ್ಯಂತ ಸೂಕ್ಷ್ಮರೂಪ ಧಾರಣೆ ಮಾಡುವುದು. ಮಹಿಮಾ ಎಂದರೆ ನೆಲ ಮುಗಿಲನ್ನು ತುಂಬಿ ವ್ಯಾಪಿಸುವ ಶಕ್ತಿ; ಬೆಟ್ಟಕ್ಕಿಂತ ಭಾರವಾಗುವ ಶಕ್ತಿ. ಲಘಿಮಾ ಎಂದರೆ ಹುಲ್ಲಿಗಿಂತ, ಹತ್ತಿಗಿಂತ ಹಗುರವಾಗುವುದು. ಪ್ರಾಪ್ತಿ ಎಂದರೆ ಬಯಸಿದಾಗ ಬಯಸಿದಲ್ಲಿ ಹೋಗಬಲ್ಲ, ಯಾರ ಇಂದ್ರಿಯಗಳ ಮೂಲಕವೂ ವಿಷಯಗಳನ್ನು ಗ್ರಹಿಸಬಲ್ಲ ಶಕ್ತಿ. ಪ್ರಾಕಾಶ್ಯ ಎಂದರೆ ಎಲ್ಲವನ್ನೂ ಅರಿಯುವ ಸರ್ವಜ್ಞತ್ವ. ಈಶಿತ್ವ ಎಂದರೆ ಸಹಜಕ್ಕಿಂತ ಸಾವಿರಾರು ಪಟ್ಟು ಅಧಿಕ ಸಾಮರ್ಥ್ಯವನ್ನು ವ್ಯಕ್ತಪಡಿಸುವುದು. ವಶಿತ್ವ ಎಂದರೆ ಎಂತಹ ತಡೆಯನ್ನೂ ಮಣಿಸಿ ತನ್ನಂಕೆಯಲ್ಲಿಡುವ ಶಕ್ತಿ. ಪ್ರಾಕಾಮ್ಯ ಎಂದರೆ ಬಯಸಿದ ಆನಂದವನ್ನು ಪಡೆಯುವ ಶಕ್ತಿ. ಈ ಎಲ್ಲಾ ಸಿದ್ಧಿಗಳು ಭಗವಂತನ ಮೂಲಭೂತ ಗುಣಗಳು ಹಾಗೂ ಭಗವಂತನಲ್ಲಿ ಮಾತ್ರ ಇರತಕ್ಕಂತಹ ಶಕ್ತಿ. ಇದು ಭಗವಂತನ ಉಪಾಸನೆಯಿಂದ ಸಿದ್ಧಪುರುಷರಿಗೆ ಕಿಂಚಿತ್ ಬರುತ್ತದೆ ಅಷ್ಟೇ.

ಸಿದ್ಧಿಯ ಬಗ್ಗೆ ಹೇಳುವಾಗ ಮಧ್ವಾಚಾರ್ಯರ ಜೀವನದಲ್ಲಿ ನಡೆದ ಎರಡು ಘಟನೆಗಳನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ಒಮ್ಮೆ ಗೋವಾದಲ್ಲಿ ಆಚಾರ್ಯರು ತಂಗಿದ್ದಾಗ "ಸಂಗೀತದಿಂದ ಗಿಡ ಬಳ್ಳಿಗಳು ಚಿಗುರಬಲ್ಲವು" ಎಂದು ಜನರಿಗೆ ತೋರಿಸಿ ಕೊಟ್ಟರು. ಈ ವಿಷಯ ರಾಜನ ಬಳಿಗೆ ತಲುಪಿದಾಗ ಅಹಂಕಾರಿ ರಾಜ ಆಚಾರ್ಯರನ್ನು ಒಂದು ದಿನ ಸೈನಿಕರ ಪಹರೆ ಇರುವ ಒಂದು ಕೋಣೆಯಲ್ಲಿ ಇರಿಸಲು ಆಜ್ಞೆ ಕೊಡುತ್ತಾನೆ! ಹೀಗೆ ಆಚಾರ್ಯರನ್ನು ಒಂದು ಕೋಣೆಯಲ್ಲಿ ಕೂಡಿ ಹಾಕಲಾಗುತ್ತದೆ. ಸಿದ್ಧ ಪುರುಷರಾದ ಆಚಾರ್ಯರು ತಮ್ಮ "ಅಣಿಮಾ" ಸಿದ್ಧಿಯಿಂದ ಅಲ್ಲಿಂದ ಹೊರಬಂದು ತಮ್ಮ ಯಾತ್ರೆಯನ್ನು ಮುಂದುವರಿಸುತ್ತಾರೆ. ಇನ್ನೊಮ್ಮೆ ಕಾಂತಾವರದಲ್ಲಿ ಅಹಂಕಾರಿ ಜಟ್ಟಿಗಳನ್ನು ತಮ್ಮ ಸಿದ್ಧಿಯಿಂದ ಸೋಲಿಸಿದ್ದಲ್ಲದೆ, "ಲಘಿಮಾ" ಸಿದ್ಧಿಯಿಂದ ಒಬ್ಬ ಪುಟ್ಟ ಬಾಲಕನ ಹೆಗಲ ಮೇಲೆ ಕುಳಿತು ದೇವಸ್ಥಾನಕ್ಕೆ ಪ್ರದಕ್ಷಿಣೆ ಬಂದು ಜಟ್ಟಿಗಳ ಅಹಂಕಾರವನ್ನು ಮುರಿಯುತ್ತಾರೆ. ಭಗವಂತನೊಬ್ಬನೇ ಇಂತಹ ಸಿದ್ಧಿಗಳಿಗೆ ಸಾಧನ. ಭಗವಂತನನ್ನು ಸಂಪೂರ್ಣ ನಂಬಿದವರಿಗೆ ಆತ ಸಿದ್ಧಿಸಾಧನಃ.

**ವೃಷಾಹೀ ವೃಷಭೋ ವಿಷ್ಣುರ್ವೃಷಪರ್ವಾ ವೃಷೋದರಃ ।**
**ವರ್ಧನೋ ವರ್ಧಮಾನಶ್ಚ ವಿವಿಕ್ತಃ ಶ್ರುತಿಸಾಗರಃ ॥೪೧॥**

೨೫೭) ವೃಷಾಹೀ

ಧರ್ಮ ಸಾಧನವಾದ ಯಜ್ಞಗಳಿಂದ ಆರಾಧ್ಯನಾದವನು, ಯಜ್ಞವನ್ನು ಸ್ವೀಕರಿಸಿ ನಮ್ಮ ಅಭೀಷ್ಟವನ್ನು ಪೂರೈಸುವ ಭಗವಂತ ವೃಷಾಹೀ. ಈ ಹಿಂದೆ ಹೇಳಿದಂತೆ ಯಜ್ಞದಲ್ಲಿ ಮೂರು ವಿಧ. ಕಾಲ ಕುಂಡದಲ್ಲಿ ಮಾಡುವ ಯಜ್ಞ, ದೇಹ ಕುಂಡದಲ್ಲಿ ಮಾಡುವ ಯಜ್ಞ ಹಾಗೂ ಅಗ್ನಿ ಕುಂಡದಲ್ಲಿ ಮಾಡುವ ಯಜ್ಞ. ಈ ರೀತಿ ಮಾಡುವ ಭಗವಂತನ ಉಪಾಸನೆಯನ್ನು 'ವೃಷಾಹ' ಎನ್ನುತ್ತಾರೆ. ನಾವು ಮಾಡುವ ಸಮಸ್ತ ಕರ್ಮ ಹಾಗೂ ನಮ್ಮ ಬದುಕಿನ ಪ್ರತಿಯೊಂದು ಕ್ರಿಯೆ-ಯಜ್ಞವಾಗಬೇಕು. ಕೆಲವೊಮ್ಮೆ ಶಾಸ್ತ್ರ ಓದುವುದರಿಂದ ಅಜ್ಞಾನಿಗಳಾಗುವ ಹಾಗೂ ಯಜ್ಞ-ಯಾಗಾದಿಗಳನ್ನು ಮಾಡಿಯೂ ದುರ್ಬುದ್ಧಿ ಬೆಳೆಯುವ ಸಾಧ್ಯತೆ ಇದೆ! ಅದಕ್ಕಾಗಿ ಯಾವುದೇ ಶಾಸ್ತ್ರವನ್ನು ಓದುವ ಮೊದಲು "ಓಂ ಶಾಂತಿಃ ಶಾಂತಿಃ ಶಾಂತಿಃ" ಎಂದು ಶಾಂತಿ ಮಂತ್ರ ಪಠಿಸುತ್ತೇವೆ. ಜ್ಞಾನಾನಂದಗಳ ಪರಾಕಾಷ್ಠೆಯಾದ ಭಗವಂತನೇ, ನನ್ನನ್ನು ಜ್ಞಾನಾನಂದಗಳ(ಶಾ+ಅಂತಿ) ದಾರಿಯಲ್ಲಿ ನೆಡೆಸು ಎನ್ನುವುದು ಈ ಶಾಂತಿ ಮಂತ್ರದ ಅರ್ಥ. ಇದೇ ರೀತಿ ಪ್ರತೀ ಪೂಜೆಯ ಮೊದಲು ಗಣಪತಿ ಪ್ರಾರ್ಥನೆ ಮಾಡುತ್ತೇವೆ. ಏಕೆಂದರೆ ಗಣಪತಿ ಆಕಾಶದ ದೇವತೆ ಹಾಗೂ ಈ ಆಕಾಶ ಭಗವಂತನ ನಾಭಿಯಿಂದ ಸೃಷ್ಟಿಯಾಗಿದೆ. ಆದ್ದರಿಂದ ಗಣಪತಿ ನಮ್ಮ ನಾಭಿ ದೇವತೆ ಕೂಡಾ ಹೌದು.

ನಾಭ್ಯ ಆಸೀದಂತರಿಕ್ಷಂ ಶೀರ್ಷ್ಣೋರ್ಧ್ಯೋಃ ಸಮವರ್ತತಃ ।
ಪದ್ಭ್ಯಾಂ ಭೂಮೀರ್ ದಿಶ ಶ್ರೋತ್ರಾತ್ ತತಾ ಲೋಕಾ ಅಕಲ್ಪಯನ್ ॥

ನಮ್ಮ ನಾಭಿಯ ಸಮೀಪ ಇರುವ ಮೂರು ಚಕ್ರಗಳು ಮೂಲಾಧಾರ, ಸ್ವಾಧಿಷ್ಠಾನ ಹಾಗೂ ಮಣಿಪೂರ. ನಾಭಿಯಿಂದ ಮೇಲಕ್ಕೆ ಹೃತ್ಕಮಲದಲ್ಲಿ ನಿಜವಾದ ಸಾಧನೆಯ ಅನಾಹತ ಚಕ್ರವಿದೆ. ಮೂಲಾಧಾರ, ಸ್ವಾಧಿಷ್ಠಾನ ಹಾಗೂ ಮಣಿಪೂರ ಚಕ್ರಗಳನ್ನು ಮೀರಿ ಹೃದಯವನ್ನು ಪ್ರವೇಶಿಸಬೇಕಾದರೆ ನಾಭಿಯ ಬಾಗಿಲನ್ನು ಗಣಪತಿ ತೆರೆಯಬೇಕು. ಅದಕ್ಕಾಗಿ ನಾವು ಗಣಪತಿಯಲ್ಲಿ ಮೊತ್ತಮೊದಲಿಗೆ ಪ್ರಾರ್ಥನೆ ಮಾಡುತ್ತೇವೆ. ಪ್ರತೀ ಯಜ್ಞದ ಮೊದಲು ಗಣಪತಿ ಮಂಡಲ ಬರೆದು ಪೂಜಿಸಿ ಆನಂತರ ಯಜ್ಞ ಪ್ರಾರಂಭಿಸುತ್ತಾರೆ. ಗಣಪತಿ ನಾಭಿಯ ಬಾಗಿಲನ್ನು ತೆರೆದಾಗ ಹೃತ್ಕಮಲ ತಾನೇ-ತಾನಾಗಿ ತೆರೆದುಕೊಳ್ಳುತ್ತದೆ. ಈ ಸ್ಥಿತಿಯನ್ನು 'ವೃಷಾಹ' ಎನ್ನುತ್ತಾರೆ. ಭಗವಂತ ಈ ಸ್ಥಿತಿಯಲ್ಲಿ ನಮ್ಮ ಪೂಜೆಯನ್ನು ವೃಷಾಹೀಯಾಗಿ ಸ್ವೀಕರಿಸಿ ನಮ್ಮನ್ನು ಉದ್ಧಾರ ಮಾಡುತ್ತಾನೆ. ಇಂತಹ ಹೃತ್ಕಮಲ ಮಧ್ಯ ನಿವಾಸಿ ಭಗವಂತ ವೃಷಾಹೀ.

೨೫೮) ವೃಷಭಃ

ವೃಷಭ ಎಂದರೆ ಗೂಳಿ. ಇದು ಪೌರುಷದ ಸಂಕೇತ. ಯಾವುದಕ್ಕೂ ಬಗ್ಗದೆ ಎದೆ ಸೆಟೆದು ನಿಲ್ಲುವ, ತಮ್ಮ ಎದುರಾಳಿಯನ್ನು ಎದುರಿಸುವ ಕೆಚ್ಚಿನ ಸಂಕೇತ. ಇದು ಪ್ರಕೃತಿದತ್ತವಾಗಿ ಪುರುಷ ಸ್ವಭಾವ. [ಸಾಮಾನ್ಯವಾಗಿ ಈ ಗುಣ ಮಹಿಳೆಯರಿಗಿರುವುದಿಲ್ಲ. ಹೊಂದಿಕೆ, ಸಾಮರಸ್ಯ ಮತ್ತು ಅರ್ಪಣೆ ಸ್ತ್ರೀ ಲಕ್ಷಣ. ಸ್ತ್ರೀಗೆ ಬಾಲ್ಯದಲ್ಲಿ ತಂದೆ-ತಾಯಿ, ಯೌವನದಲ್ಲಿ ಗಂಡ ಹಾಗೂ ಮುಪ್ಪಿನಲ್ಲಿ ಮಕ್ಕಳ ಸಾಂಗತ್ಯ ಅತ್ಯಗತ್ಯ. ಆದ್ದರಿಂದ ಪೌರುಷದ ಸಂಕೇತವಾದ ಗೂಳಿ, ಸಿಂಹ ಹಾಗೂ ಹುಲಿಗಳನ್ನು ಕೇವಲ ಪುರುಷರಿಗೆ ಮಾತ್ರ ಹೋಲಿಸುತ್ತಾರೆ.] ಭಗವಂತ ಸರ್ವ ವೀರರ ವೀರ. ಅವನನ್ನು ಎದುರಿಸುವ ವೀರರು ಯಾರೂ ಇಲ್ಲ. ಎಂತಹ ಸಿದ್ಧಪುರುಷ ಕೂಡಾ ಒಮ್ಮೆ ಸಾವಿಗೆ ಶರಣಾಗಬೇಕು. ಆದರೆ ಭಗವಂತ ಎಲ್ಲವನ್ನೂ ಮೀರಿ ನಿಂತ ಸರ್ವಶಕ್ತ. ಜಗತ್ತಿನಲ್ಲಿ ಏನು ಕೇಳಿದರೂ ಕೊಡುವಂತಹ ಸಾಮರ್ಥ್ಯವಿರುವ ಭಗವಂತ ವೃಷಭಃ

೨೫೯) ವಿಷ್ಣುಃ

ಈ ನಾಮ ವಿಷ್ಣು ಸಹಸ್ರನಾಮದಲ್ಲಿ ಮೂರು ಬಾರಿ ಪುನರುಕ್ತಿಯಾಗಿದೆ. ಈ ಹಿಂದೆ ಹೇಳಿದಂತೆ ವಿಷತಿ ಇತಿ ವಿಷ್ಣುಃ. ಅಂದರೆ ಯಾರು ಎಲ್ಲರ ಒಳಗೆ ಪ್ರವೇಶಿಸಬಲ್ಲನೋ ಅವನು ವಿಷ್ಣು. ಭಗವಂತ ಸರ್ವಾಂತರ್ಯಾಮಿ. ವಿಷ್ಣು ಸೂಕ್ತದಲ್ಲಿ ಹೇಳಿರುವಂತೆ:

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ ಸಮೂ(ಳ)ಢಮಸ್ಯ ಪಾಗೇಂಸುರೇ

ಪ್ರಪಂಚದಲ್ಲಿ ಏನೇನು ವಸ್ತುಗಳಿವೆಯೋ ಅದರೊಳಗಿರುವ ಹಾಗೂ ನಮ್ಮೊಳಗಿರುವ ಭಗವಂತ ಒಬ್ಬನೇ. ಹಿಂದೂ-ಮುಸಲ್ಮಾನ್-ಕ್ರಿಸ್ತ ಎಲ್ಲರ ದೇವರೂ ಒಬ್ಬನೇ. ಭೇದಭಾವ ಮನುಷ್ಯನ ಸೃಷ್ಟಿ. ಸರ್ವಾಂತರ್ಯಾಮಿ, ಸರ್ವಗತ ಹಾಗೂ ಸರ್ವಸಮರ್ಥನಾದ ದೇವರು ಇಬ್ಬರಿರಲು ಸಾಧ್ಯವಿಲ್ಲ. ಸರ್ವಶಬ್ದ ವಾಚ್ಯನಾದ ಭಗವಂತನನ್ನು ಯಾವ ಹೆಸರಿನಿಂದ ಕೂಡಾ ಕರೆಯಬಹುದು. ಹೆಸರಿನ ಹಿಂದಿರುವ ಅರ್ಥ ತಿಳಿದಿರಬೇಕು ಅಷ್ಟೇ! ಮಧ್ವಾಚಾರ್ಯರ ಜೀವನ ಚರಿತ್ರೆಯಲ್ಲಿನ ಒಂದು ಘಟನೆ ಇದಕ್ಕೆ ಉತ್ತಮ ನಿದರ್ಶನ. ಒಮ್ಮೆ ಆಚಾರ್ಯರು ಉತ್ತರ ಭಾರತ ಪ್ರವಾಸದಲ್ಲಿದ್ದಾಗ ದಾರಿಯಲ್ಲಿ ಹಿಂದೂ ಸಂನ್ಯಾಸಿಗಳಿಗೆ ನಿಷಿದ್ಧವಿದ್ದ ಮುಸ್ಲಿಂ ರಾಜ್ಯವನ್ನು ಪ್ರವೇಶಿಸುತ್ತಾರೆ. ಅನುಮತಿ ಇಲ್ಲದೆ ಪ್ರವೇಶಿಸಿದ ತಪ್ಪಿಗಾಗಿ ಅವರನ್ನು ಸೈನಿಕರು ಬಂಧಿಸಿ ರಾಜನ ಮುಂದೆ ಪ್ರಸ್ತುತಪಡಿಸುತ್ತಾರೆ. ಪ್ರಶ್ನಿಸಿದ ರಾಜನಿಗೆ ಆಚಾರ್ಯರು ಈ ರೀತಿ ಉತ್ತರ ಕೊಡುತ್ತಾರೆ: "ನೀನು ಪೂಜಿಸುವ ಹಾಗೂ ನಾನು ಪೂಜಿಸುವ ದೇವರು ಒಬ್ಬನೇ, ಹೆಸರು ಮಾತ್ರ ಬೇರೆ ಬೇರೆ. ಒಂದೇ ದೇವರ ಮಕ್ಕಳಾದ ನಾವು ಸಹೋದರರಲ್ಲವೇ?" ಎಂದು. ಆಚಾರ್ಯರ ಈ ಮಾತಿನಿಂದ ವಿಸ್ಮಿತನಾದ ರಾಜ ಅವರನ್ನು ತನ್ನ ರಾಜ್ಯದಲ್ಲಿ ನೆಲೆಸುವಂತೆ ಕೇಳಿಕೊಳ್ಳುತ್ತಾನೆ. ಆದರೆ ಆಚಾರ್ಯರು ರಾಜನನ್ನು ಹರಸಿ ತಮ್ಮ ಯಾತ್ರೆಯನ್ನು ಮುಂದುವರಿಸುತ್ತಾರೆ. ಜಾತಿ-ಧರ್ಮ-ದೇವರು ಎಂದು ಕಚ್ಚಾಡುವ ನಮಗೆ ಭಗವಂತನ ಈ ನಾಮ ಮಹತ್ತಾದ ಸಂದೇಶವನ್ನು ಕೊಡುತ್ತದೆ.

ಸೂಕ್ತಗಳನ್ನು ಒಮ್ಮೆ ಕಣ್ಣಾಡಿಸಿ ನೋಡಿದರೆ ಅದರಲ್ಲಿ 'ಷ' ಮತ್ತು 'ಣ' ಇಲ್ಲದ ಸೂಕ್ತಗಳಿಲ್ಲ. ವಿ-ಷ-ಣು ಎಂದರೆ ವಿಶಿಷ್ಟನಾದ(ವಿ),ಸರ್ವಾಂತರ್ಯಾಮಿ(ಷ) ಹಾಗೂ ಸರ್ವಬಲಪೂರ್ಣನಾದ(ಣು) ಭಗವಂತ.

೨೬೦) ವೃಶಪರ್ವಾ

'ವೃಶ' ಎಂದರೆ ಬಯಸಿದ್ದನ್ನು ಕೊಡುವ ಶಕ್ತಿ. 'ಪರ್ವ' ಎಂದರೆ ನಮ್ಮ ಅಭೀಷ್ಟಗಳ ಸಾಧಕದ ನಾಲ್ಕು ಮಜಲುಗಳಾದ ಧರ್ಮ-ಅರ್ಥ-ಕಾಮ-ಮೋಕ್ಷ. ನಾವು ಧರ್ಮದ ಮೆಟ್ಟಲೇರಿದರೆ ಮಾತ್ರ ಭಗವಂತ ನಮ್ಮ ಸಕಲ ಅಭೀಷ್ಟವನ್ನು ಪೂರೈಸುತ್ತಾನೆ. ಅಧರ್ಮದ ಮಾರ್ಗ ಕ್ಷಣಿಕ. ವೇದವ್ಯಾಸರು ಹೇಳಿದಂತೆ: "ನಾನು ಕೈ ಎತ್ತಿ ಹೇಳುತ್ತಿದ್ದೇನೆ-ಧರ್ಮದ ಮಾರ್ಗವನ್ನು ಹಿಡಿದವರ ಹಿಂದೆ ಅರ್ಥ-ಕಾಮ-ಮೋಕ್ಷಗಳು ತಾನೇ ತಾನಾಗಿ ಹಿಂಬಾಲಿಸುತ್ತವೆ" . ಹೀಗೆ ಧರ್ಮಪರ್ವ, ಅರ್ಥಪರ್ವ, ಕಾಮಪರ್ವ ಹಾಗೂ ಮೋಕ್ಷಪರ್ವನಾಗಿ ನಮ್ಮ ಅಭೀಷ್ಟವನ್ನು ಪೂರೈಸುವ ಭಗವಂತ ವೃಶಪರ್ವಾ.

೨೬೧) ವೃಷೋದರಃ

ಇಳೆಗೆ ಮಳೆಯನ್ನು ಕೊಡುವ ಭಗವಂತ ವೃಷೋದರ. ನೆಲದಲ್ಲಿನ ನೀರನ್ನು ಆವಿಯನ್ನಾಗಿ ಮಾಡಿ, ಪುನಃ ಮೋಡದಿಂದ ಮಳೆ ಸುರಿಸುವ ಹಾಗೂ ಈ ಚಕ್ರವನ್ನು ನಿರಂತರ ತಿರುಗಿಸುವ, ದೋಷರಹಿತನಾದ ಅಭೀಷ್ಟಪ್ರದ ಭಗವಂತ ವೃಷೋದರಃ

೨೬೨) ವರ್ಧನಃ

ವೃದ್ಧಿ ಎಂದರೆ ಬೆಳೆಸುವವನು. ನಮ್ಮನ್ನು, ಈ ಸೃಷ್ಟಿಯನ್ನು ಭಗವಂತ ಪೋಷಿಸಿ ಬೆಳೆಸುತ್ತಾನೆ. ಬೆಳೆಯುವುದು ಅಂದರೆ ಸಾವಿಗೆ ಹತ್ತಿರವಾಗುವುದು. ಆದ್ದರಿಂದ ವರ್ಧನ ಎನ್ನುವ ಪದ ಸಂಹಾರ ಮಾಡುವವನು ಎನ್ನುವ

ಅರ್ಥವನ್ನೂ ಕೂಡಾ ಕೊಡುತ್ತದೆ. ಧಾನ್ಯ, ಭತ್ತ, ಬಾಳೆ, ಇತ್ಯಾದಿ ಗಿಡಗಳನ್ನು ನೋಡಿದರೆ-ತಮ್ಮ ಸಂತಾನವಾದಾಕ್ಷಣ ಅವುಗಳ ಜೀವನ ಅಂತ್ಯವಾಗುತ್ತದೆ. ಈ ಗಿಡಗಳ ಬೆಳವಣಿಗೆ ಸಾರ್ಥಕವಾಗುವುದು ಸಾವಿನಲ್ಲಿ. ಆದ್ದರಿಂದ ಸಾವು ಅಸಹಜವಲ್ಲ ಅದು ಒಂದು ಸಹಜ ಸ್ಥಿತಿ.

ವರ+ಧನ-ವರ್ಧನ. ಶ್ರೇಷ್ಠವಾದ ಸಂಪತ್ತನ್ನು ನಾವು ಯಾರಿಂದ ಪಡೆಯುತ್ತೇವೋ ಅವನು ವರ್ಧನ. ಇಲ್ಲಿ ಶ್ರೇಷ್ಠವಾದ ಸಂಪತ್ತು ಎಂದರೆ "ಹಂಚಿದಾಗ ಹೆಚ್ಚಾಗುವ ಸಂಪತ್ತು-ಅಂದರೆ ಜ್ಞಾನ". ಒಳ್ಳೆಯ ದಾರಿಯಲ್ಲಿ ಪಡೆಯಬಹುದಾದ ಶ್ರೇಷ್ಠವಾದ ಸಂಪತ್ತು ಮೋಕ್ಷ. ಹೀಗೆ ನಮ್ಮನ್ನು ಬೆಳೆಸುವವನು, ಸಂಹಾರ ಮಾಡುವವನು, ಜ್ಞಾನಪ್ರದ ಹಾಗೂ ಮೋಕ್ಷಪ್ರದನಾದ ಭಗವಂತ ವರ್ಧನಃ.

೧೬೩) ವರ್ಧಮಾನಃ

ವರ್ಧಮಾನ ಎಂದರೆ ಬೆಳೆಯುತ್ತಿರುವವನು. ಇಲ್ಲಿ ಭಗವಂತ ಬೆಳೆಯುತ್ತಿರುವವನಲ್ಲ. ಆತ ಎಲ್ಲಾ ಕಾಲದಲ್ಲೂ ಪೂರ್ಣತೆಯನ್ನು ಹೊಂದಿದವ. ತನ್ನ ಅವತಾರಗಳ ಮೂಲಕ ಬೆಳವಣಿಗೆಯ ವಿವಿಧ ಹಂತಗಳಲ್ಲಿ ನಾವು ಹೇಗಿರಬೇಕು ಎನ್ನುವುದನ್ನು ಆತ ತೋರಿಸಿ ಕೊಟ್ಟಿದ್ದಾನೆ.ಆತ ಯಾವುದೇ ಮಾನ ಹಾಗೂ ಮಾಪನಗಳ ಅಳತೆಗೆ ನಿಲುಕುವವನಲ್ಲ.

೧೬೪) ವಿವಿಕ್ತಃ

ವಿವಿಕ್ತ ಎಂದರೆ ಅತ್ಯಂತ ಪವಿತ್ರವಾದ ಹಾಗೂ ವಿಲಕ್ಷಣವಾದ ಎಂದರ್ಥ. ಭಗವಂತನ ವ್ಯಕ್ತಿತ್ವ ತೀರಾ ಭಿನ್ನ. ಸೃಷ್ಟಿ ಮಾಡುವ ಭಗವಂತ ಯಾವುದೇ ಲೇಪವೂ ಇಲ್ಲದೆ ನಿರ್ಲಿಪ್ತನಾಗಿ ಸಂಹಾರ ಕೂಡಾ ಮಾಡುತ್ತಾನೆ. ಈ ರೀತಿ ಪವಿತ್ರನೂ, ವಿಲಕ್ಷಣನೂ ಆಗಿರುವ ವಿಶಿಷ್ಟ ವ್ಯಕ್ತಿತ್ವವುಳ್ಳ ಭಗವಂತ ವಿವಿಕ್ತಃ.

೧೬೫) ಶ್ರುತಿಸಾಗರಃ

ಎಲ್ಲಾ ಶಾಸ್ತ್ರ, ಸಮಸ್ತ ವೇದ ಹರಿದು ಹೋಗಿ ಸೇರಬೇಕಾದ ಕಡಲು ಭಗವಂತ. ಈ ಪ್ರಪಂಚದಲ್ಲಿರುವ ಎಲ್ಲಾ ಭಾಷೆಗಳು ಹಾಗೂ ಎಲ್ಲಾ ಪದಗಳು ಭಗವಂತನನ್ನು ಹೇಳುತ್ತವೆ. ಶಬ್ದದ ಜೊತೆಗಿರುವ ನಾದ-ಶ್ರುತಿ. ನಾದದಲ್ಲಿ ಮೂಲಭೂತವಾಗಿ ನಾಲ್ಕು ವಿಧ. ಉದಾತ್ತ, ಅನುದಾತ್ತ, ಸ್ವರಿತ ಮತ್ತು ಪ್ರಚಯ. ಉದಾತ್ತ ಎಂದರೆ ಕಂಠದಿಂದ ಮೇಲಕ್ಕೆ ಎತ್ತಿ ಮಾತನಾಡುವುದು, ಅನುದಾತ್ತ ಎಂದರೆ ನಾದವನ್ನು ಕೆಳಗೆ ಒತ್ತಿ ಮಾತನಾಡುವುದು, ಸ್ವರಿತ ಎಂದರೆ ಉದಾತ್ತ ಮತ್ತು ಅನುದಾತ್ತದ ಸಮೀಕರಿಸಿದ ರೂಪ. ಪ್ರಚಯ ಎಂದರೆ ಉದಾತ್ತ ಮತ್ತು ಅನುದಾತ್ತವನ್ನು ಕಳಚಿ ಸಮಾನಾಂತರವಾಗಿ ಮೂಡುವ ನಾದ. ಸಪ್ತ ಸ್ವರಗಳೂ ಕೂಡಾ[ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ; ಸ, ರಿ, ಗ, ಮ, ಪ ಧ, ನಿ] ಈ ಮೇಲಿನ ನಾಲ್ಕು ಮೂಲಭೂತ ನಾದದಿಂದಾಗಿದೆ. ನಾದ ಬದಲಾದಂತೆ ಅರ್ಥ ಬದಲಾಗುತ್ತದೆ. ಭಾಷೆಗೆ ಅರ್ಥ ಕೊಡುವುದು ನಾದ. ಎಲ್ಲಾ ನಾದಗಳೂ ಭಗವಂತನನ್ನು ಹೇಳುವುದರಿಂದ ಆತ ಶ್ರುತಿಸಾಗರಃ.

ಸುಭುಜೋ ದುರ್ಧರೋ ವಾಗ್ಮೀ ಮಹೇಂದ್ರೋ ವಸುದೋ ವಸುಃ ।
ನೈಕರೂಪೋ ಬೃಹದ್ರೂಪಃ ಶಿಪಿವಿಷ್ಟಃ ಪ್ರಕಾಶನಃ ॥೪೧॥

೧೬೬) ಸುಭುಜಃ

ಸುಭುಜ ಎಂದರೆ ಸುಂದರವಾದ ತೋಳುಳ್ಳವನು ಎನ್ನುವುದು ಮೇಲ್ನೋಟಕ್ಕೆ ಕಾಣುವ ಅರ್ಥ. ವೇದವ್ಯಾಸರು ಹೇಳುವಂತೆ "ಭಗವಂತನ ತೋಳುಗಳಿಗೆ ಈ ಜಗತ್ತಿನ ರಕ್ಷಣೆಯಲ್ಲದೆ ಇನ್ನೇನೂ ಕೆಲಸವಿಲ್ಲ!" ನಿರಂತರ ಜಗತ್ತಿನ ರಕ್ಷಣೆಯ ಹೊಣೆ ಹೊತ್ತ ಭಗವಂತನನ್ನು ಸುಭುಜ ಎನ್ನುತ್ತಾರೆ. ನಮ್ಮ ತೋಳಿಗೂ ಹಾಗೂ ದೇಹಕ್ಕೂ ಸಂಬಂಧವಿದೆ. ವ್ಯಕ್ತಿಯ ಎರಡು ಕೈಗಳನ್ನು ಚಾಚಿದಾಗ ಅದರ ಒಟ್ಟು ಉದ್ದ ಒಂದು ಮಾರು. ಒಂದು ಮಾರು ಎಂದರೆ ನಾಲ್ಕು ಮೊಳ.

ಒಂದು ಮೊಳ ಎಂದರೆ ಇಪ್ಪತ್ನಾಲ್ಕು ಅಂಗುಲ.ವ್ಯಕ್ತಿಯ ಎತ್ತರ ಒಂದು ಮಾರು=ನಾಲ್ಕು ಮೊಳ=ತೊಂಬತ್ತಾರು ಅಂಗುಲ=ಹತ್ತು ಗೇಣು ಉದ್ದವಿದ್ದರೆ ಆತ ಸುಭುಜ. ಇಷ್ಟೇ ಅಲ್ಲದೆ ವ್ಯಕ್ತಿಯ ಪಾದ ಕೂಡಾ ದೇಹದ ಎತ್ತರದ ಏಳನೇ ಒಂದರಷ್ಟು ಉದ್ದವಿರುತ್ತದೆ. ಸಾಮಾನ್ಯವಾಗಿ ಈ ರೀತಿಯ ವ್ಯಕ್ತಿತ್ವವನ್ನು ಕೇವಲ ಭಗವಂತನ ಅವತಾರದಲ್ಲಿ ಮಾತ್ರ ನೋಡುತ್ತೇವೆ. ಸಾಮಾನ್ಯ ಮಾನವನಲ್ಲಿ ಈ ಮಾಪನ ನೂರಕ್ಕೆ ನೂರು ಸಮನಾಗಿರುವುದಿಲ್ಲ.

ಕ್ಷತ್ರಿಯರನ್ನು ಭೂಭುಜರು ಎನ್ನುತ್ತಾರೆ. ಸುಭುಜ ಎಂದರೆ ಜಗತ್ತಿನ ಪಾಲನೆ ಹಾಗೂ ಸಂಹಾರಕರ್ತ. ಎಂದೂ ಕೆಟ್ಟದ್ದನ್ನು ಬಯಸದ, ಸುಖವನ್ನು ಮಾತ್ರ ಭೋಗಿಸುವ ಭಗವಂತ ಸುಭುಜಃ.

೧೯೭) ದುರ್ಧರಃ

ಭಗವಂತನನ್ನು ನಮ್ಮ ಮನಸ್ಸಿನಲ್ಲಿ ಧಾರಣೆ ಮಾಡುವುದು ಸುಲಭದ ಕೆಲಸವಲ್ಲ. ಆತನನ್ನು ನಮ್ಮ ಒಳಗಣ್ಣಿನಿಂದ ನೋಡಬೇಕಾದರೆ ಬಹಳ ಕಷ್ಟ. ಇದಕ್ಕಾಗಿ ಹಠಬೇಕು. ಧ್ಯಾನ ಮಾಡದೆ ಆತ ಮನಸ್ಸಿಗೆ ಕಾಣಿಸಿಕೊಳ್ಳುವುದಿಲ್ಲ. ಸಾಮಾನ್ಯವಾಗಿ ನಾವು ಧ್ಯಾನಕ್ಕೆ ಕುಳಿತಾಗ ನಮಗೆ ಧ್ಯಾನಕ್ಕೆ ಬಾಧಕವಾದ ನೂರಾರು ಸಂಗತಿಗಳು**(Running thoughts)** ಕಾಣಿಸುತ್ತವೆ. ಇದಕ್ಕೆ ಕಾರಣವೇನೆಂದರೆ ನಾವು ನಮ್ಮೊಳಗೆ ಬೇಡವಾದ ನೂರಾರು ವಿಚಾರಗಳನ್ನು ತುಂಬಿಸಿ ಮನಸ್ಸನ್ನು ಬೇಡವಾದ ರೀತಿಯಲ್ಲಿ ತರಬೇತಿಗೊಳಿಸಿರುತ್ತೇವೆ. ಮನಸ್ಸು ನಮ್ಮ ತರಬೇತಿಗೆ ತಕ್ಕಂತೆ ಪಳಗಿರುತ್ತದೆ ಹಾಗೂ ಅದನ್ನು ಭಗವಂತನತ್ತ ಒಮ್ಮೆಗೇ ತಿರುಗಿಸುವುದು ಕಷ್ಟ. ಹಠ ಬಿಡದೇ ನಿರಂತರ ದೇವರ ಜ್ಞಾನ ನಮಗೆ ದೇವರ ದರ್ಶನ ಮಾಡಬಲ್ಲದು. ದ್ಯಾನಕ್ಕೆ ಕುಳಿತಾಗ ನಮಗೆ ಕೆಟ್ಟ ವಿಚಾರ ಬಂದರೆ ಅದಕ್ಕಾಗಿ ಚಿಂತೆ ಮಾಡುವ ಅಗತ್ಯವಿಲ್ಲ. ಒಳಗೆ ತುಂಬಿರುವ ಕೆಟ್ಟ ವಿಚಾರ ಹೊರ ಹೋಗುವಾಗ ಹೀಗಾಗುತ್ತದೆ. ಒಮ್ಮೆ ಒಳಗೆ ತುಂಬಿದ್ದ ಕೊಳೆ ಹೊರ ಹೋದ ಮೇಲೆ ಮನಸ್ಸು ನಿರ್ಮಲವಾಗುತ್ತದೆ ಹಾಗೂ ಈ ಸ್ಥಿತಿಯಲಿ ಧ್ಯಾನ ಸುಲಭ. ಮನಸ್ಸಿನ ಕೊಳೆಯನ್ನು ತೆಗೆಯುವ ಏಕೈಕ ಸಾಧನ ನಿರಂತರ ಭಗವದ್ ಚಿಂತನೆ. ಪ್ರತಿಯೊಂದು ಕರ್ಮದಲ್ಲಿ, ಪ್ರತಿಯೊಂದು ವಸ್ತುವಿನಲ್ಲಿ ಭಗವಂತನನ್ನು, ಆತನ ವಿಶಿಷ್ಟ ಸೃಷ್ಟಿಯನ್ನು ಕಾಣುವ ಪ್ರಯತ್ನಮಾಡಿದರೆ ಫಲ ನಿಶ್ಚಯ. ಭಗವಂತನನ್ನು ಕಾಣುವುದು ಒಂದು ಜನ್ಮದ ಸಾಧನೆಯಲ್ಲ. ಅದಕ್ಕಾಗಿ ಅನೇಕಾನೇಕ ಜನ್ಮದ ಸಾಧನೆ ಅಗತ್ಯ. ಇಲ್ಲಿ ಪ್ರತೀ ಜನ್ಮದ ಸಾಧನೆಯ ಒಂದು ಹೆಜ್ಜೆ ಕೂಡಾ ವ್ಯರ್ಥವಾಗುವುದಿಲ್ಲ. ಗೀತೆಯಲ್ಲಿ ಹೇಳುವಂತೆ:

ನೇಹಾಭಿಕ್ರ ಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ (ಅ-೨ ಶ್ಲೋ-೪೦)

ಅಂದರೆ ಇಲ್ಲಿ ತೊದಲು ಹೆಜ್ಜೆ ಕೂಡಾ ಹಾಳಾಗದು. ಇಲ್ಲಿ ತೊಡರುಗಳಿಲ್ಲ. ಈ ಧರ್ಮದ ತುಣುಕು ಕೂಡಾ ದೊಡ್ಡ ಆಘಾತ ಅಥವಾ ಭಯದಿಂದ ನಮ್ಮನ್ನು ಪಾರುಮಾಡಬಲ್ಲದು.

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ (ಅ-೦೭ ಶ್ಲೋ-೦೩)

ಅಂದರೆ ಸಾವಿರಾರು ಮಂದಿಯಲ್ಲಿ ಒಬ್ಬ ಸಿದ್ಧಿಗಾಗಿ ಪ್ರಯತ್ನಿಸುತ್ತಾನೆ. ಪ್ರಯತ್ನಿಸಿದವರಲ್ಲಿ, ಪ್ರಯತ್ನಿಸಿ ಗುರಿ ಮುಟ್ಟಿದವರಲ್ಲಿ ಯಾರೋ ಒಬ್ಬ ಭಗವಂತನನ್ನು ಸರಿಯಾಗಿ ಅರಿತುಕೊಳ್ಳುತ್ತಾನೆ. ಆದ್ದರಿಂದ ಭಗವಂತನನ್ನು ನೋಡುವುದು ದುರ್ಧರ. ಸರ್ವಾಂಗ ಸುಂದರನಾದ ಆತನನ್ನು ನೋಡಬೇಕಾದರೆ ಎಷ್ಟೋ ಜನ್ಮದ ಕರ್ಮಬೇಕು.

೧೯೮) ವಾಗ್ಮೀ

ವಾಗ್ಮೀ ಎಂದರೆ ಮಾತುಬಲ್ಲ ಮಾತುಗಾರ. ನಿಜವಾದ ವಾಗ್ಮಿ ಮಿತಭಾಷಿಯಾಗಿದ್ದು, ಹೆಚ್ಚು ಮಾತನಾಡುವುದಿಲ್ಲ. ಆದರೆ ಆಡುವ ಮಾತನ್ನು ಎಲ್ಲಿ ಹೇಗೆ ಎಷ್ಟು ಮಾತನಾಡಬೇಕೆಂದು ತಿಳಿದಿರುತ್ತಾರೆ. ಮಾತು ನಮಗೆ ಗೊತ್ತಿರುವ

ವಿಷಯವನ್ನು ಅಭಿವ್ಯಕ್ತ ಮಾಡುವ ಸಾಧನ. ಎಲ್ಲವನ್ನೂ ತಿಳಿದವ ಮಾತ್ರ ಎಲ್ಲಾ ವಿಷಯವನ್ನು ನಿರರ್ಗಳವಾಗಿ ಮಾತನಾಡಬಲ್ಲ. ಕೆಲವೊಮ್ಮೆ ವಿಷಯ ತಿಳಿದಿದ್ದರೂ ಮಾತನಾಡುವುದು ಕಷ್ಟ! ಭಗವಂತನೊಬ್ಬನೇ ಎಲ್ಲವನ್ನೂ ತಿಳಿದವ. ಎಲ್ಲರ ನಾಲಿಗೆಯಲ್ಲಿ ಕುಳಿತು ನುಡಿಸುವವನೂ ಅವನೇ. ಸಾಧಕನ ಅತಿ ದೊಡ್ಡ ಬಯಕೆ ದೇವರ ಜೊತೆ ಮಾತನಾಡಬೇಕು ಎನ್ನುವುದು. ಆದರೆ ಅದಕ್ಕಾಗಿ ಕಲ್ಪಗಳನ್ನೇ ಕಾಯಬೇಕಾಗಬಹುದು. ಸಮಸ್ತ ವೇದವನ್ನು ಬ್ರಹ್ಮನಿಗೆ ಮೊಟ್ಟಮೊದಲು ಉಪದೇಶ ಮಾಡಿದ ಭಗವಂತನ ಇನ್ನೊಂದು ಹೆಸರು 'ವಾಗೀಶ'-ಅಂದರೆ ಮಾತುಗಳ ಒಡೆಯ. ಎಲ್ಲಾ ವೇದಗಳನ್ನು ನೀಡಿದ, ಎಲ್ಲರೊಳಗಿದ್ದು ಎಲ್ಲಾ ನುಡಿಗಳನ್ನು ನುಡಿಸುವ ಮಾತುಗಾರ ಭಗವಂತ ವಾಗ್ಮೀ.

೨೬೯) ಮಹೇಂದ್ರಃ

ಸಂಸ್ಕೃತದಲ್ಲಿ 'ಇಂದ್ರ' ಎಂದರೆ ಸರ್ವಸಮರ್ಥ (Omnipotent). ಭಗವಂತ ಸರ್ವಸಮರ್ಥ ಪರಮೇಶ್ವರ. ದೇವತೆಗಳ ರಾಜ 'ಇಂದ್ರನಿಗೆ' ಆ ಪದವಿಯನ್ನು ಕೊಟ್ಟ, ಒಡೆಯರಿಗೂ ಒಡೆಯ, ಸಮರ್ಥರಿಗೂ ಸಮರ್ಥ ಭಗವಂತ ಮಹೇಂದ್ರಃ.

೨೭೦) ವಸುದಃ

ವಸುದ ಎಂದರೆ ಸಂಪತ್ತನ್ನು ಕೊಡುವವ. ಹಿಂದೆ ಹೇಳಿದಂತೆ ಸಂಪತ್ತಿನಲ್ಲಿ ಎರಡು ವಿಧ. ಒಂದು ಬಾಹ್ಯ ಸಂಪತ್ತು ಹಾಗೂ ಇನ್ನೊಂದು ಅಂತರಂಗದ ಸಂಪತ್ತು. ಜ್ಞಾನ ಅಂತರಂಗದ ಸಂಪತ್ತು. ನಮಗೆ ನಮ್ಮ ಕರ್ಮಕ್ಕನುಗುಣವಾಗಿ ಬಡತನ-ಶ್ರೀಮಂತಿಕೆ, ಜ್ಞಾನ-ಅಜ್ಞಾನ ಕೊಡುವ ಭಗವಂತ ವಸುದಃ. ಜ್ಞಾನ ಗಳಿಸಬೇಕಾದರೆ ನಮಗೆ ಇಚ್ಛಾಶಕ್ತಿ, ಗ್ರಹಣಶಕ್ತಿ ಹಾಗೂ ಧಾರಣಶಕ್ತಿ ಬೇಕು. ಈ ಎಲ್ಲವನ್ನೂ ಕೊಡುವ ಭಗವಂತ ವಸುದಃ. ಗೀತೆಯಲ್ಲಿ ಹೇಳುವಂತೆ:

ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ । (ಅ-೧೫ ಶ್ಲೋ-೧೫)

ಎಂದರೆ 'ನೆನಪು, ಅರಿವು, ಮರೆವು ಎಲ್ಲಾ ಭಗವಂತನ ಕೊಡುಗೆ'. ಅಷ್ಟೇ ಅಲ್ಲದೆ ಭಗವಂತನನ್ನು ನಂಬಿದ ಭಕ್ತರ ಯೋಗ-ಕ್ಷೇಮದ ಹೊಣೆ ಕೂಡಾ ಭಗವಂತನದ್ದು.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।

ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ (ಅ-೯, ಶ್ಲೋ-೨೨)

ಜ್ಞಾನದ ಬಾಗಿಲನ್ನು ತೆರೆದು ಮೋಕ್ಷವನ್ನು ಕರುಣಿಸುವ, ಭಕ್ತರ ಯೋಗ-ಕ್ಷೇಮದ ಹೊಣೆ ಹೊತ್ತಿರುವ ಭಗವಂತ ವಸುದಃ.

೨೭೧) ವಸುಃ

ದೇವತೆಗಳಲ್ಲಿ ವಸು ಎನ್ನುವ ಗಣವಿದೆ ಹಾಗೂ ಅವರನ್ನು ಅಷ್ಟವಸುಗಳೆನ್ನುತ್ತಾರೆ. [ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ(ವಿಭಾವಸು), ದೋಷ, ವಸ್ತು, ದ್ಯುವಸು]. ಇವರಲ್ಲಿ ಅಗ್ನಿ ಪ್ರಮುಖನಾದವನು. ಅಗ್ನಿಯಲ್ಲಿ ಭಗವಂತನ ಮುಖ್ಯ ಪ್ರತೀಕವಿದೆ. ಭೂಮಿಯಲ್ಲಿ ಭಗವಂತನ ಉಪಾಸನೆಯನ್ನು ಪ್ರಮುಖವಾಗಿ ಅಗ್ನಿಸ್ತರದಲ್ಲಿ ಮಾಡುತ್ತಾರೆ. ಅಗ್ನಿಗೆ ಈ ಸ್ಥಾನವನ್ನು ಕೊಟ್ಟ ಭಗವಂತ ವಸುಃ. ಭಕ್ತರಿಗೆ ಹಿರಿಯ ಸಂಪತ್ತಾದ ಹಾಗೂ ಆಕಾಶದಲ್ಲಿ ತುಂಬಿ ನಿಂತರುವ ಭಗವಂತ ವಸುಃ.

೨೭೨) ನೈಕರೂಪಃ

ನೈಕರೂಪ ಎಂದರೆ ಅನಂತ ರೂಪ. ಭಗವಂತ ಒಬ್ಬೊಬ್ಬರೊಳಗೆ ಬಿಂಬರೂಪನಾಗಿ ಇಡೀ ವಿಶ್ವದಲ್ಲಿ ತುಂಬಿದ್ದಾನೆ. ನಾರಾಯಣ ಸೂಕ್ತದಲ್ಲಿ ಹೇಳುವಂತೆ:

ಸಂತತಂ ಶಿಲಾಭಿಸ್ತು ಲಂಬತ್ಯಾ ಕೋಶಸನ್ನಿಭಂ ।

ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ ॥

ಅಂದರೆ ನಮ್ಮ ಹೃದಯ ಮಧ್ಯದಲ್ಲಿ ಸೂಜಿಮೊನೆಯಷ್ಟು ಸೂಕ್ಷ್ಮವಾದ ಅತ್ಯಂತ ಪವಿತ್ರವಾದ ಸ್ಥಾನದಲ್ಲಿ ಭಗವಂತನಿದ್ದಾನೆ. ಇಡೀ ಬ್ರಹ್ಮಾಂಡವನ್ನು ಯಾವ ಶಕ್ತಿ ನಿಯಂತ್ರಿಸುತ್ತದೋ ಅದೇ ಸರ್ವಸಮರ್ಥ ಶಕ್ತಿ ನಮ್ಮ ಹೃತ್ಕಮಲದಲ್ಲಡಗಿದೆ. ಇದೇ ಶಕ್ತಿ ಇಡೀ ವಿಶ್ವದಲ್ಲಿ ತುಂಬಿರುವ ಸಮಗ್ರಶಕ್ತಿ. ಹೀಗೆ ಬಿಂಬರೂಪಿಯಾಗಿ ಅನಂತರೂಪಿಯಾಗಿರುವ ಭಗವಂತ ನೈಕರೂಪಃ.

೨೭೩) ಬೃಹದ್ರೂಪಃ

ಬೃಹತ್ ಎಂದರೆ ನಮಗೆ ಕಾಣುವ ಬೆಳಕುಗಳಲ್ಲೆಲ್ಲಾ ಅತ್ಯಂತ ದೊಡ್ಡ ಬೆಳಕಾದ 'ಸೂರ್ಯ'. ಇಡೀ ಬ್ರಹ್ಮಾಂಡಕ್ಕೆ ಬೆಳಕು ನೀಡುವ ಸೂರ್ಯನೊಳಗಿರುವ ಭಗವಂತ ನಮ್ಮ ಹೃತ್ಕಮಲ ಮಧ್ಯ ನಿವಾಸಿ ಕೂಡಾ ಹೌದು. ಇದನ್ನೇ ಗಾಯತ್ರಿ ಉಪಾಸನೆಯಲ್ಲಿ ಹೀಗೆ ಹೇಳಿದ್ದಾರೆ:

ಓಂ ಭೂರ್ಭುವಃ ಸ್ವಃ । ತತ್ಸವಿತುರ್ವರೇಣ್ಯಂ ।
ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್ ॥

ಬ್ರಹ್ಮಾಂಡ ಹಾಗೂ ಪಿಂಡಾಂಡದ ಸಮನ್ವಯ ಗಾಯತ್ರಿಯಲ್ಲಿದೆ. ಯಾವ ಶಕ್ತಿ ಸೂರ್ಯಮಂಡಲದಲ್ಲಿ ಬೃಹತ್ ಆಗಿ ಇಡೀ ವಿಶ್ವಕ್ಕೆ ಜೀವದಾನ ಮಾಡುತ್ತಿದೆಯೋ, ಅದೇ ಶಕ್ತಿ ನನ್ನೊಳಗಿದ್ದು ಸದ್ಬುದ್ಧಿಯನ್ನು ಕೊಡಲಿ; ವಿಶ್ವಕ್ಕೆ ಬದುಕನ್ನು ನೀಡುವ ಶಕ್ತಿ ನನ್ನೊಳಗಿದ್ದು ನನ್ನ ಇಂದ್ರಿಯವನ್ನು ಒಳ್ಳೆಯ ವಿಷಯದತ್ತ ಪ್ರೇರೇಪಿಸಲಿ; ಒಳ್ಳೆಯದಕ್ಕೋಸ್ಕರ ಬದುಕುವಂತೆ ಮಾಡಲಿ ಎನ್ನುವುದೇ ಈ ಪ್ರಾರ್ಥನೆ.

ಒಬ್ಬೊಬ್ಬರಿಗೆ ಒಂದೊಂದು ರೂಪದಲ್ಲಿ ಅವತಾರಪುರುಷ ಭಗವಂತ ಕಾಣಿಸಿಕೊಂಡಿದ್ದಾನೆ. ವಾಮನ ರೂಪಿಯಾಗಿ ಬಂದು ಬೃಹದ್ರೂಪಿಯಾದ ನಾರಾಯಣ, ವೈವಸ್ವತ ಮನುವಿಗೆ ಚಿಕ್ಕ ಮೀನಿನ ರೂಪದಲ್ಲಿ ಕಾಣಿಸಿಕೊಂಡು ನಂತರ ಮಹಾ ಮತ್ಸ್ಯವಾಗಿ ದರ್ಶನಕೊಟ್ಟ ಭಗವಂತ, ಹಾಗೂ ಅರ್ಜುನನ ಸಾರಥಿಯಾಗಿ ತನ್ನ ವಿಶ್ವರೂಪವನ್ನು ತೋರಿದ ಕೃಷ್ಣ, ತಾಯಿಗೆ ತನ್ನ ಬಾಯಿಯಲ್ಲಿ ಬ್ರಹ್ಮಾಂಡವನ್ನು ತೋರಿದ ಭಗವಂತ ಬೃಹದ್ರೂಪಃ.

೨೭೪) ಶಿಪಿವಿಷ್ಟಃ

'ಶಿಪಿ' ಎನ್ನುವ ಪದ ಅರ್ವಾಚೀನ ಸಂಸ್ಕೃತ ಭಾಷೆಯಲ್ಲಿ ಪ್ರಚಲಿತದಲ್ಲಿಲ್ಲ. ಇದು ವೈದಿಕ ಪದ. ಶಿಪಿ ಎಂದರೆ ಪ್ರಾಣಿಗಳು. ಶಿಪಿವಿಷ್ಟಃ ಎಂದರೆ ಪ್ರಾಣಿಗಳಲ್ಲಿ ವಿಶಿಷ್ಟವಾಗಿ ಸನ್ನಿಹಿತನಾದ ಭಗವಂತ. ಇದೊಂದು ವಿಶಿಷ್ಟವಾದ ಯಾಜ್ಞಿಕ ಉಪಾಸನೆ. ವೇದದಲ್ಲಿ ವಿಶೇಷವಾಗಿ ಐದು ಪ್ರಾಣಿಗಳನ್ನು ಉಲ್ಲೇಖ ಮಾಡಿದ್ದಾರೆ. ಅವುಗಳೆಂದರೆ ಅಶ್ವ, ಗೋವು, ಕುರಿ, ಆಡು ಹಾಗೂ ಮನುಷ್ಯ. ಈ ಪಂಚ ಪ್ರಾಣಿಗಳಲ್ಲಿ ಪಂಚರೂಪದಲ್ಲಿ ಭಗವಂತ ಸನ್ನಿಹಿತನಾಗಿದ್ದಾನೆ. ಪುರುಷ ಸೂಕ್ತದಲ್ಲಿ ಕೂಡಾ ಈ ಪ್ರಾಣಿಗಳ ಉಲ್ಲೇಖವಿದೆ.

ತಸ್ಮಾದಶ್ವಾ ಅಜಾಯಂತ । ಯೇ ಕೇ ಚೋಭಯಾದತಃ।
ಗಾವೋ ಹ ಜಜ್ಞಿರೇ ತಸ್ಮಾತ್ । ತಸ್ಮಾಜ್ಜಾತಾ ಅಜಾವಯಃ ॥೧೦॥

ಈ ಐದು ಪ್ರಾಣಿಗಳಲ್ಲಿ ಭಗವಂತನ ಸೃಷ್ಟಿಯ ವೈಶಿಷ್ಟ್ಯ ಕಾಣಬಹುದು. ಅಶ್ವ ಹಾಗೂ ಎತ್ತು ಮನುಷ್ಯನ ಸಂಚಾರದ ಸಾಧನವಾಗಿದ್ದರೆ, ಹಸು ಯಜ್ಞದ ಮೂಲ ದ್ರವ್ಯವಾದ ಹಾಲು-ಮೊಸರು-ಬೆಣ್ಣೆ-ತುಪ್ಪವನ್ನು ಕೊಡುವ ಸಾಕು ಪ್ರಾಣಿ. ಅಶ್ವ ತನ್ನ ಜೀವದ ಪಣತೊಟ್ಟು ಯಜಮಾನನ ರಕ್ಷಣೆ ಮಾಡುವ ವಿಶಿಷ್ಟ ಪ್ರಾಣಿ. ಅಶ್ವದಲ್ಲಿ ಕಾಣುವ ಇನ್ನೊಂದು ವಿಶೇಷ ಲಕ್ಷಣವೆಂದರೆ ಅದು ಈ ಪ್ರಪಂಚದಂತೆ ನಿರಂತರ ಚಲನೆಯಲ್ಲಿರುತ್ತದೆ. ಅದು ಎಂದೂ ಚಲನೆ ರಹಿತವಾಗಿರುವುದಿಲ್ಲ. ಇದಕ್ಕಾಗಿ ಈ ಪ್ರಪಂಚವನ್ನು ಅಶ್ವತ್ಥ ಎಂದೂ ಕರೆಯುತ್ತಾರೆ. ಅಶ್ವತ್ಥಮರ ಕೂಡಾ ಎಂದೂ

ಚಲನೆ ರಹಿತವಾಗಿರುವುದಿಲ್ಲ. ಅಶ್ವ ನಿರಂತರ ಎಷ್ಟೇ ದೂರವಾದರೂ ಆಯಾಸವಿಲ್ಲದೆ ಚಲಿಸಬಲ್ಲದು. ಚಲನೆ ಅದರ ಸಹಜ ಕ್ರಿಯೆ. ಅಶ್ವ ಮನುಷ್ಯನ ಚಾಪಲ್ಯದ ಸಂಕೇತ ಕೂಡಾ ಹೌದು. ಅದಕ್ಕಾಗಿ ಹಿಂದೆ ಅಶ್ವಮೇಧಯಾಗ ಮಾಡಿ ಕುದುರೆಯನ್ನು ಬಲಿ ಕೊಡುತ್ತಿದ್ದರು ಹಾಗೂ ಆನಂತರ ತಮ್ಮ ಚಾಪಲ್ಯದಿಂದ ಮುಕ್ತಿಯನ್ನು ಪಡೆದು ರಾಜರ್ಷಿಯಾಗಿ ಬದುಕುತ್ತಿದ್ದರು. ಮಾಂಸಹಾರಿಗಳಾದ ಕ್ಷತ್ರಿಯರು ತಾವು ತಿನ್ನುವ ಆಹಾರವನ್ನು ದೇವರಿಗೆ ಅರ್ಪಿಸಿ ತಿನ್ನುವುದು ಸಾಮಾನ್ಯ ಹಾಗೂ ಶಾಸ್ತ್ರ ಸಮ್ಮತ[ಯಜ್ಞ ಎಂದರೆ ನಾವು ತಿನ್ನುವ ಆಹಾರವನ್ನು ನಮ್ಮ ದೇವರಿಗೆ ಸಮರ್ಪಿಸುವುದು].

ಆಡು ಸೋಮಯಾಗದಲ್ಲಿ ಪ್ರಮುಖ ದ್ರವ್ಯ. ಅಂದರೆ ಸೋಮಯಾಗವನ್ನು ಕೇವಲ ಮಾಂಸಾಹಾರಿಗಳು ಮಾತ್ರ ಮಾಡಬಹುದು. ಆಡಿನ ಹಾಲನ್ನು ಈಗಲೂ ಆಹಾರವಾಗಿ ಉಪಯೋಗಿಸುತ್ತಾರೆ. ಇನ್ನು ಕುರಿ ಪ್ರಮುಖವಾಗಿ ಮನುಷ್ಯನ ಬಟ್ಟೆಯ ಸಾಧನ. ವೈದಿಕ ಸಂಪ್ರದಾಯ ಬೆಳೆದುಬಂದಿದ್ದು ಹಿಮಾಲಯದಲ್ಲಿ. ಅದಕ್ಕಾಗಿ 'ಸಿಂಧೂ ಕಣಿವೆಯ ಸಂಸ್ಕೃತಿ' ಎನ್ನುವ ಹೆಸರು ಬಂದಿರುವುದು. ಈ ಸಿಂಧೂ ಎನ್ನುವ ಹೆಸರು ಪರ್ಷಿಯನ್ ಭಾಷೆಯಲ್ಲಿ 'ಹಿಂದೂ' ಆಗಿ ನಂತರ ಬ್ರಿಟೀಷರಿಂದ 'ಇಂದು' ಆಗಿ ಇದೀಗ 'ಇಂಡಿಯಾ' ಆಗಿದೆ! ಈ ಸಿಂಧೂ ಕಣಿವೆಯಲ್ಲಿ ಕೊರೆಯುವ ಚಳಿಗೆ ಮನುಷ್ಯನ ರಕ್ಷಣೆ 'ಕುರಿಯಿಂದ' ತಯಾರಾದ ಬಟ್ಟೆಯಿಂದಾಗುತ್ತಿತ್ತು. ಹೀಗೆ ಈ ಮೇಲಿನ ನಾಲ್ಕು ಪ್ರಾಣಿಗಳಲ್ಲಿ ವಿಶಿಷ್ಟವಾಗಿ ಸನ್ನಿಹಿತನಾದ ಭಗವಂತ ಶಿಪಿವಿಷ್ಟಃ.

೨೭೫) ಪ್ರಕಾಶನಃ

ಪ್ರಕಾಶನ ಎಂದರೆ ಎಲ್ಲವನ್ನೂ ಬೆಳಗುವವನು. ಗೀತೆಯಲ್ಲಿ ಹೇಳುವಂತೆ :

ಯದಾದಿತ್ಯಗತಂ ತೇಜೋ ಜಗದ್ ಭಾಸಯತೇ ಽ ಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್ ॥ (ಅ-೧೫ ಶ್ಲೋ-೧೨)

ಅಗ್ನಿ, ನಕ್ಷತ್ರ ಹಾಗೂ ಪ್ರಪಂಚದ ಸಮಸ್ತ ಬೆಳಕಿನ ಪುಂಜಗಳನ್ನು ಬೆಳಗಿಸುವ ಮೂಲ ಜ್ಯೋತಿ ಭಗವಂತ. ಈ ನಾಮವನ್ನು ಒಡೆದು ನೋಡಿದರೆ 'ಪ್ರಕಾ+ಅಶನ' ಎಂದರೆ ಸರ್ವೋತ್ಕೃಷ್ಟವಾದ ಆನಂದ ಸ್ವರೂಪ. ಪ್ರಕಾಶರು ಎಂದರೆ ಮುಕ್ತಿ ಯೋಗ್ಯ ಜ್ಞಾನಿಗಳು. ಅವರಿಗೆ 'ನಯತಿ' ಎಂದರೆ ಮೋಕ್ಷವನ್ನು ಕೊಡುವ ಭಗವಂತ ಪ್ರಕಾಶನಃ .

ಓಜಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ ।
ಋದ್ಧಃ ಸ್ಪಷ್ಟಾಕ್ಷರೋ ಮಂತ್ರಶ್ಚಂದ್ರಾಂಶುರ್ಭಾಸ್ಕರದ್ಯುತಿಃ ॥೪೩॥

೨೭೬) ಓಜಸ್ತೇಜೋದ್ಯುತಿಧರಃ

ಆತ್ಮಬಲ, ಪರಾಕ್ರಮ ಹಾಗೂ ಕಾಂತಿಗಳಿಗಾಸರೆಯಾದ ಭಗವಂತ ಓಜಸ್ತೇಜೋದ್ಯುತಿಧರಃ

೨೭೭) ಪ್ರಕಾಶಾತ್ಮಾ

ಭಗವಂತ ಪ್ರಕಾಶ ರೂಪ; ಪರಿಶುದ್ಧವಾದ ಜ್ಞಾನದ ಬೆಳಕು ನೀಡುವವ. ಗೀತೆಯಲ್ಲಿ ಹೇಳುವಂತೆ:

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ ಜ್ಞಾನಂ ಪ್ರಕಾಶಯತಿ ತತ್ ಪರಮ್ ॥ (ಅ-೫, ಶ್ಲೋ-೧೬)

ಅಂದರೆ ಭಗವಂತನ ಅರಿವಿನಿಂದ ಅವಿದ್ಯೆಯನ್ನು ಅಳಿಸಿಕೊಂಡವರ ಆ 'ಅರಿವು' ಸೂರ್ಯನಂತೆ ಪರತತ್ತ್ವವನ್ನು ಬೆಳಗಿಸುತ್ತದೆ. ಹೀಗೆ ಪ್ರಕಾಶ ಸ್ವರೂಪನಾದ ಭಗವಂತ ಪ್ರಕಾಶಾತ್ಮಾ.

೨೭೮) ಪ್ರತಾಪನಃ

ಶತ್ರುಗಳನ್ನು ಸದೆಬಡಿಯುವ ಪ್ರತಾಪಶಾಲಿ; ಬೆಂಕಿಯೊಳಗಿರುವವ, ಸೂರ್ಯನೊಳಗಿರುವ ಭಗವಂತ ಪ್ರತಾಪನಃ. ಅರ್ಜುನನಿಗೆ ವಿಶ್ವರೂಪ ದರ್ಶನದಲ್ಲಿ ಭಗವಂತ ಕಾಣಿಸಿದ್ದು ಹೀಗೆ:

ಲೇಲಿ ಹ್ಯಸೇ ಗ್ರಸಮಾನಃ ಸಮಂತಾತ್ ಲೋಕಾನ್ ಸಮಗ್ರಾನ್ ವದನೈರ್ಜ್ವಲದ್ಭಿಃ ।

ಜೋಭಿರಾಪೂರ್ಯ ಜಗತ್ ಸಮಗ್ರಂ ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ (ಅ-೧೧,ಶ್ಲೋ-೩೦)

ಎಲ್ಲೆಲ್ಲೂ ತುಂಬಿರುವ, ಬೆಂಕಿ ಕಾರುವ ಬಾಯಿಗಳಿಂದ ಎಲ್ಲಾ ಲೋಕಗಳನ್ನು ಎಲ್ಲೆಡೆಯು ನುಂಗಿ ನೊಣೆಯುತ್ತಿರುವ, ವಿಶ್ವವನ್ನು ಕೋರೈಸಿ ಸುಡುವ ಮೈಯ ಹೊಳಪುಳ್ಳ ಭಗವಂತ. ಇದು ಭಗವಂತನ ದುಷ್ಟ ನಿಗ್ರಹ ರೂಪದ ವರ್ಣನೆ. ಇಂತಹ ಭಗವಂತ ಪ್ರತಾಪನಃ.

೧೭೯) ಋದ್ಧಃ

ಋದ್ಧಃ ಎಂದರೆ ಪೂರ್ಣನಾದವನು. ಭಗವಂತನೊಬ್ಬನೇ ಎಂದೆಂದೂ ಪರಿಪೂರ್ಣ. ಅದಕ್ಕಾಗಿ ವೇದದಲ್ಲಿ ಬರುವ ಶಾಂತಿ ಮಂತ್ರಗಳಲ್ಲಿ ಹೀಗೆ ಹೇಳಿದ್ದಾರೆ:

ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।

ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಶ್ಯತೇ ॥ಈಶಾವಾಸ್ಯ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಅಂದರೆ ಅದೂ ಪೂರ್ಣ ಹಾಗೂ ಇದೂ ಪೂರ್ಣ. ಪೂರ್ಣದಿಂದ ಪೂರ್ಣಬರುತ್ತದೆ, ಪೂರ್ಣದಲ್ಲಿ ಪೂರ್ಣ ಸೇರಿ ಪೂರ್ಣವಾಗುತ್ತದೆ. ಇಂತಹ ಭಗವಂತ ಋದ್ಧಃ.

೧೮೦) ಸ್ಪಷ್ಟಾಕ್ಷರೋ ಮಂತ್ರಃ (ಸ್ಪಷ್ಟಾಕ್ಷರಃ+ಮಂತ್ರಃ)

ಸ್ಪಷ್ಟವಾಗಿ ಭಗವದ್ ವಾಚಕಗಳಾದ ಅಕ್ಷರಗಳುಳ್ಳ ಮಂತ್ರಗಳಿಂದ ವಾಚ್ಯನಾದವನು. ಉದಾಹರಣೆಗೆ ಮೂಲ ಮಂತ್ರವಾದ "ಓಂ ನಮೋ ನಾರಾಯಣಾಯ". ಈ ಅಷ್ಟಾಕ್ಷರಿ ಮಂತ್ರದಲ್ಲಿ ಓಂ, ನಮೋ, ನಾರಾಯಣಾಯ-ಎಲ್ಲವೂ ಭಗವಂತನ ನಾಮ. ಇಷ್ಟೇ ಅಲ್ಲದೆ ಪ್ರತಿಯೊಂದು ಅಕ್ಷರ ಕೂಡಾ ಭಗವಂತನ ನಾಮವನ್ನೇ ಹೇಳುತ್ತದೆ. ಇಂತಹ ಭಗವಂತ ಸ್ಪಷ್ಟಾಕ್ಷರೋ ಮಂತ್ರಃ.

೧೮೧) ಚಂದ್ರಾಂಶುಃ

'ಚಂದ್ರ' ಮತ್ತು 'ಚಂದ' ಎರಡೂ ಒಂದೇ ಅರ್ಥವನ್ನು ಕೊಡುವ 'ಚದಿ' ಧಾತುವಿನಿಂದ ಬಂದ ಪದ. 'ಚಡಿ' ಧಾತುವಿನಿಂದ ಇದು 'ಚಂಡಾ' ಆಗುತ್ತದೆ. ಚಂದ್ರ ಎಂದರೆ ಬಹಳ ತಂಪಾದ, ತುಂಬಾ ಖುಷಿಯನ್ನು ಕೊಡುವ, ಅಹ್ಲಾದಕರ ಎಂದರ್ಥ. ಚಂದ್ರ+ಅಂಶ ಎಂದರೆ ಜಗತ್ತಿಗೆಲ್ಲಾ ತಂಪನ್ನೀಯುವವ. ಭಗವಂತನನ್ನು ಧನ್ವಂತರಿಯಲ್ಲಿ ಹೀಗೆ ವರ್ಣಿಸಿದ್ದಾರೆ: "ಶೀತಾಂಶು ಮಂಡಲಗತಂ ಸ್ಮರತಾತ್ಮ ಸಂಸ್ತಂ"ಎಂದು. ಅಂದರೆ ಚಂದ್ರಮಂಡಲದಲ್ಲಿ ಕುಳಿತು ಚಂದ್ರನ ಕಿರಣಗಳ ಮೂಲಕ ಅಮೃತವನ್ನು ಕೆಳಕ್ಕೆ ಹರಿಸಿ ನಮಗೆ ಬದುಕಲು ಬೇಕಾದ ಚೈತನ್ಯ ಶಕ್ತಿ ಕೊಡುವವ. ನಮ್ಮ ಒಳಗೆ ಕತ್ತಲು ತುಂಬಿದೆ. ಆ ಕತ್ತಲನ್ನು ಹೋಗಲಾಡಿಸಲು ಚಂದ್ರಾಂಶುವಾದ ಭಗವಂತನ ಬೆಳದಿಂಗಳು ಅಗತ್ಯ.

೧೮೨) ಭಾಸ್ಕರದ್ಯುತಿಃ

ಯೋಗಿಗಳಿಗೆ ಭಗವಂತ ಒಳಗಣ್ಣಿನಲ್ಲಿ ಸಾವಿರ ಸೂರ್ಯರು ಏಕಕಾಲದಲ್ಲಿ ಉದಯಿಸಿದರೆ ಎಷ್ಟು ಪ್ರಖರವಾಗಿರುತ್ತದೋ ಅಷ್ಟು ಪ್ರಖರವಾಗಿ ಕಾಣಿಸುತ್ತಾನೆ. ಆದರೆ ಚಂದ್ರಾಂಶುವಾದ ಭಗವಂತ ಅಷ್ಟೇ ತಂಪು ಮತ್ತು ಅಹ್ಲಾದಮಯ. ಸೂರ್ಯನಂತೆ ಪ್ರಖರ ಆದರೆ ಚಂದ್ರನಂತೆ ತಂಪಾದ ಭಗವಂತ ಭಾಸ್ಕರದ್ಯುತಿಃ.

ಅಮೃತಾಂಶೂದ್ಭವೋ ಭಾನುಃ ಶಶಬಿಂದುಃ ಸುರೇಶ್ವರಃ ।
ಔಷಧಂ ಜಗತಃ ಸೇತುಃ ಸತ್ಯಧರ್ಮಪರಾಕ್ರಮಃ ॥೪೪॥

೧೮೩) ಅಮೃತಾಂಶೂದ್ಭವಃ

ಅಮೃತಾಂಶು ಎಂದರೆ ಅಮೃತದ ಕಿರಣಗಳುಳ್ಳ ಚಂದ್ರ. ಚಂದ್ರನನ್ನು ಸೃಷ್ಟಿ ಮಾಡಿದ ಶಕ್ತಿ ಅಮೃತಾಂಶೂದ್ಭವಃ. ಪೌರಾಣಿಕವಾಗಿ, ಸಪ್ತರ್ಷಿಗಳಲ್ಲಿ ಒಬ್ಬನಾದ ಅತ್ರಿಮುನಿ ಹಾಗೂ ಆತನ ಹೆಂಡತಿ ಅನುಸೂಯೆ ತಪಸ್ಸಿನಲ್ಲಿ ತಮಗೆ ತ್ರಿಮೂರ್ತಿಗಳೇ ಮಕ್ಕಳಾಗಬೇಕು ಎಂದು ಪ್ರಾರ್ಥಿಸಿದಾಗ, ನಾರಾಯಣ-ದತ್ತನಾಗಿ, ಶಿವ-ದುರ್ವಾಸನಾಗಿ ಅವತರಿಸುತ್ತಾರೆ. ಬ್ರಹ್ಮನಿಗೆ ಭೂಲೋಕದಲ್ಲಿ ಅವತಾರವಿಲ್ಲ. ಅದಕ್ಕಾಗಿ ಚಂದ್ರನಲ್ಲಿ ಸನ್ನಿಹಿತನಾಗಿ ಸೋಮನಾಗಿ ಅತ್ರಿಯಲ್ಲಿ ಜನಿಸುತ್ತಾನೆ. ದತ್ತಾತ್ರಯ ಎಂದರೆ ದತ್ತ, ದುರ್ವಾಸ ಹಾಗೂ ಸೋಮ.

ಇನ್ನೊಂದು ರೀತಿಯಲ್ಲಿ ನೋಡಿದಾಗ ಅಮೃತರು ಎಂದರೆ ಮೃತಿ ಇಲ್ಲದ ಮುಕ್ತರು. ಮುಕ್ತರನ್ನು ಹುಟ್ಟು-ಸಾವುಗಳ ಸಂಕೋಲೆಯಿಂದ ಬಿಡಿಸಿ ಮರು ಹುಟ್ಟು ಇಲ್ಲದ ಉನ್ನತ ಸ್ಥಿತಿ ಕೊಟ್ಟ ಭಗವಂತ ಅಮೃತಾಂಶೂದ್ಭವಃ.

೧೮೪) ಭಾನುಃ

'ಭಾ' ಎಂದರೆ ಜ್ಞಾನ, ಬೆಳಕು, ಆನಂದ, ಇತ್ಯಾದಿ. ಜಗತ್ತಿನಲ್ಲಿರುವ ಎಲ್ಲಾ ಜ್ಞಾನಾನಂದಗಳು ಯಾರಿಗೆ ಸೇರಿವೆಯೋ ಅವನು ಭಾನುಃ. ಜಗತ್ತನ್ನು ಬೆಳಗುವವನು, ಸೂರ್ಯನಲ್ಲಿ, ಸೂರ್ಯಕಿರಣದಲ್ಲಿ ಸನ್ನಿಹಿತನಾದ ಭಗವಂತ ಭಾನುಃ

೧೮೫) ಶಶಬಿಂದುಃ

ಮೇಲ್ನೋಟಕ್ಕೆ ಶಶಬಿಂದು ಎಂದರೆ 'ಮೊಲದ ಬಿಂದು'. ಇದು ಯಾವುದೇ ನಿರ್ದಿಷ್ಟ ಅರ್ಥವನ್ನು ಕೊಡುವುದಿಲ್ಲ. ಕಾಡಿನಲ್ಲಿದ್ದಾಗ ಶ್ರೀರಾಮಚಂದ್ರ ಮೊಲದ ಭೇಟೆಯಾಡುತ್ತಾನೆ. ಆಗ ಆ ಮೊಲದ ಒಂದು ಹನಿ ನೆತ್ತರು ಆತನ ಮೇಲೆ ಬೀಳುತ್ತದೆ. ಮೊಲದ ನೆತ್ತರಿನಿಂದ ತೊಯ್ದ ಶ್ರೀರಾಮನನ್ನು ಶಶಬಿಂದುಃ ಎಂದು ಕರೆದರು ಎನ್ನುವುದು ಮೇಲ್ನೋಟದ ಅರ್ಥ. ಆದರೆ ಈ ನಾಮದಲ್ಲಿ ಇನ್ನೂ ಅರ್ಥಪೂರ್ಣವಾದ ವಿಷಯವಿದೆ. 'ಶಶ' ಎಂದರೆ ಆನಂದದ-ಆನಂದ. ಅಂದರೆ ಮಹದಾನಂದ. 'ಬಿಂದು' ಎಂದರೆ ಅವಯವ. ಭಗವಂತನ ಸರ್ವ ಅವಯವಗಳೂ ಆನಂದಪೂರ್ಣ. ಸ್ವಯಂ ಆನಂದಪೂರ್ಣನಾಗಿದ್ದು ನಮ್ಮನ್ನು ಪರಮಾನಂದದ ಸ್ಥಿತಿಗೆ ಕೊಂಡೊಯ್ಯುವ ಭಗವಂತ ಶಶಬಿಂದುಃ.

೧೮೬) ಸುರೇಶ್ವರಃ

ನಮ್ಮಲ್ಲಿ ಸತ್ಕರ್ಮ ಮಾಡಿಸಿ ನಮ್ಮನ್ನು ಊರ್ಧ್ವಮುಖ ನಡೆಸಿ ಉದ್ಧಾರಮಾಡುವವರು ಸುರರು. ನಮ್ಮ ಇಂದ್ರಿಯಗಳನ್ನು ನಿಯಂತ್ರಿಸುವ ಎಲ್ಲಾ ದೇವತೆಗಳನ್ನು ನಿಯಂತ್ರಿಸುವ ಪರಮೇಶ್ವರನಾದ ಭಗವಂತ ಸುರೇಶ್ವರಃ. ಇಂದ್ರಾದಿ ದೇವತೆಗಳು ನಮಗೆ ಸುಖ ಕೊಡಬೇಕಾದರೆ ನಮ್ಮಲ್ಲಿ ಕರ್ಮಫಲ ಬೇಕು ಹಾಗೂ ಭಗವಂತನ ಅನುಗ್ರಹ ಬೇಕು. ನಮಗೆ ಯಾವ ಗ್ರಹ-ದೇವತೆಗಳೂ ತೊಂದರೆ ಕೊಡುವುದಿಲ್ಲ. ನಮ್ಮ ಕರ್ಮಕ್ಕನುಸಾರವಾಗಿ ನಮ್ಮ ಗ್ರಹಗತಿ ನಿರ್ಧಾರವಾಗುತ್ತದೆ. ಉದಾಹರಣೆಗೆ: ಕೆಲವರಿಗೆ 'ಶನಿಕಾಟ' ಎಂದು ಜೋತಿಷಿಗಳು ಹೇಳುತ್ತಾರೆ.ಆದರೆ ಗ್ರಹಗತಿ ಕೇವಲ ನಮ್ಮ ಪ್ರಾರಾಬ್ಧಕರ್ಮವನ್ನು ಹೇಳುತ್ತದೆ ಅಷ್ಟೇ. ನಮ್ಮನ್ನು ನಿಯಂತ್ರಿಸುವ ಸರ್ವ ದೇವತೆಗಳ ಈಶ್ವರ ಎಲ್ಲವುದರ ಸೂತ್ರಧಾರ. ನಮ್ಮ ಜೀವನ ಒಂದು ನಾಟಕ ಹಾಗೂ ಇಲ್ಲಿ ನಾವು 'ಪಾತ್ರಧಾರಿಗಳು'. ಈ ನಾಟಕ ಸೂತ್ರಧಾರನ ನಿಯಮದಂತೆ ನಡೆಯುತ್ತದೆ. ಸೂತ್ರಧಾರನ ನಿಯಮದ ಚೌಕಟ್ಟಿನಲ್ಲಿ ನಮಗೆ ಕೊಟ್ಟ ಪಾತ್ರವನ್ನು ನಿಭಾಯಿಸುವುದೊಂದೇ ನಮ್ಮ ಕರ್ತವ್ಯ. ಇಷ್ಟು ತಿಳಿದು ಬದುಕಿದರೆ ನಾವು ನಮ್ಮ ಜೀವನವನ್ನು ಸಂಪೂರ್ಣ ಆನಂದಿಸಬಹುದು.

ನಮ್ಮನ್ನು ನಿಯಂತ್ರಿಸುವವರು ಸುರರು. ಸುರರನ್ನು ನಿಯತ್ರಿಸುವವರು ಬ್ರಹ್ಮಾದಿಗಳು. ಈ ಬ್ರಹ್ಮಾದಿಗಳ ಒಡೆಯ ಭಗವಂತ. ನಾವು ಸುಖ ಪಡುವುದು, ದುಃಖಪಡುವುದು ಎಲ್ಲವೂ ಆತನಿಂದ ಹಾಗೂ ಇದು ಭಗವಂತನ ಶಿಕ್ಷಣ ಕ್ರಮ. ನಮ್ಮ ಎಲ್ಲಾ ಪೂಜೆಗಳನ್ನು ಸ್ವೀಕರಿಸುವವನು ಹಾಗೂ ನಡೆಸುವವನು ಆ 'ಸುರೇಶ್ವರ'. ಗೀತೆಯಲ್ಲಿ ಸ್ವಯಂ ಭಗವಂತನೇ ಈ ಮಾತನ್ನು ಹೇಳಿದ್ದಾನೆ:

"ಅಹಂ ಹಿ ಸರ್ವ ಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ" (ಅ-೯, ಶ್ಲೊ-೨೪)

ಹೀಗೆ ಸರ್ವ ಬ್ರಹ್ಮಾದಿ ದೇವತೆಗಳ ಒಡೆಯನಾಗಿದ್ದು ಎಲ್ಲರ ಸುಖದ ಈಶ್ವರನಾದ ಭಗವಂತ ಸುರೇಶ್ವರಃ.

೨೮೭) ಔಷಧಂ

ಇಡೀ ವಿಶ್ವದಲ್ಲಿ ಎಲ್ಲಾ ರೋಗಗಳಿಗೆ, ಮೂಲಭೂತವಾಗಿ ಸಂಸಾರ ಬಂಧನವೆಂಬ ರೋಗಕ್ಕೆ ಔಷಧ ಕೇವಲ ಭಗವಂತ. ಆತ ಭವರೋಗ ವೈದ್ಯ. ಅವನೇ ವೈದ್ಯ-ಅವನೇ ಔಷಧ!

ಈ ನಾಮವನ್ನು ಒಡೆದು ನೋಡಿದರೆ ಔಷ+ಧ. ಇಲ್ಲಿ ಔಷ ಎಂದರೆ ಉಷ. ಎಂದರೆ ಉಷ್ಣ ಅಥವಾ ಸುಡುವಂತಹದ್ದು ಎಂದರ್ಥ. ಔಷರು ಎಂದರೆ ಸಂಸಾರ ತಾಪತ್ರಯದಲ್ಲಿ ಸುಟ್ಟು ಹೋಗುತ್ತಿರುವವರು. 'ಧ' ಎಂದರೆ ರಕ್ಷಕ ಅಥವಾ ಗುಣಪಡಿಸುವವ. ಔಷಧಂ ಎಂದರೆ ಸಂಸಾರ ಸಾಗರದಲ್ಲಿ ಸಿಲುಕಿ ಬೆಂದು ಬಸವಳಿದ ಜೀವರ ರಕ್ಷಕನಾದ ವೈದ್ಯ ಹಾಗೂ ಸ್ವಯಂ ಔಷಧ. **[He is the Doctor and He is the Medicine!]**

೨೮೮) ಜಗತಃ ಸೇತುಃ

ಭಗವಂತ ಜಗತ್ತಿನಿಂದ ಮೋಕ್ಷದ ಕಡೆಗೆ ಬಿಗಿದ ಸೇತುವೆ. ಅವನೇ ಜಗತ್ತೆಂಬ ಕಡಲಿನ ಆಚೆಯ ದಡ. **[He is the Means and He is the End. He is the Bridge and He is the Destination!]** 'ಸೇತು' ಎಂದರೆ ಬಂಧನ ಶಕ್ತಿ. ನಮ್ಮನ್ನು ಈ ಸಂಸಾರವೆಂಬ ಬಂಧನದಲ್ಲಿ ಹಾಕಿದವನೂ ಅವನೇ, ಸಂಸಾರ ಸಾಗರವನ್ನು ದಾಟಲು ಸೇತುವೂ ಅವನೇ, ದಾಟಿದ ನಂತರ ಸೇರಬೇಕಾದ ಗಮ್ಯವೂ ಅವನೇ. ಇಂತಹ ಭಗವಂತ ಜಗತಃಸೇತುಃ

೨೮೯) ಸತ್ಯಧರ್ಮಪರಾಕ್ರಮಃ

ಭಗವಂತನಲ್ಲಿ ಎರಡು ಮುಖ್ಯವಾದ ಗುಣಗಳನ್ನು ಹೇಳುತ್ತಾರೆ. ಅವುಗಳೆಂದರೆ ಧರ್ಮ ಮತ್ತು ಪರಾಕ್ರಮ. ಇಲ್ಲಿ ಧರ್ಮ ಎಂದರೆ ಧಾರಣ ಶಕ್ತಿ. ದುಷ್ಟ ಶಕ್ತಿಯನ್ನು ನಿರ್ನಾಮ ಮಾಡುವುದು ಪರಾಕ್ರಮ. ಭಗವಂತನ ಮಹಿಮೆ ಯಥಾರ್ಥವಾದದ್ದು. ಆದ್ದರಿಂದ ಆತ ಸತ್ಯಧರ್ಮಪರಾಕ್ರಮಃ.

ಭಗವಂತ ಸತ್ಯ. ಅಂದರೆ ಸೃಷ್ಟಿ-ಸ್ಥಿತಿ-ಸಂಹಾರಕ್ಕೆ ಕಾರಣ ಕರ್ತ. ಆತ ನಮಗೆ ಜ್ಞಾನವನ್ನು ಕೊಡುವವ. ಭಾಗವತದಲ್ಲಿ ಹೇಳುವಂತೆ "ಸತ್ಯಂ ಜ್ಞಾನಂ ಅನಂತಮ್ ಬ್ರಹ್ಮ, ಸತ್ಯಂ ಪರಮ್ ಧೀಮಹಿ". ಸತ್ಯ ನಾಮಕನಾದ ಭಗವಂತನನ್ನು ತನ್ನ ಹೃದಯದಲ್ಲಿ ಹೊತ್ತ ಭಕ್ತರಿಗೆ ಜ್ಞಾನವೆಂಬ ಪರಾಕ್ರಮವನ್ನು ಕೊಡುವವ ಮತ್ತು  ಅನ್ಯಾಯದ ವಿರುದ್ಧ ಹೋರಾಡುವ ಪರಶಕ್ತಿಯಾದ ಭಗವಂತ ಸತ್ಯಧರ್ಮಪರಾಕ್ರಮಃ.

**ಭೂತಭವ್ಯಭವನ್ನಾಥಃ ಪವನಃ ಪಾವನೋಽನಲಃ ।**
**ಕಾಮಹಾ ಕಾಮಕೃತ್ ಕಾಂತಃ ಕಾಮಃ ಕಾಮಪ್ರದಃ ಪ್ರಭುಃ ॥೪೫॥**

೨೯೦) ಭೂತಭವ್ಯಭವನ್ನಾಥಃ

ಭಗವಂತನ ಈ ನಾಮ ಓಂಕಾರದ ಅರ್ಥವನ್ನೂ ಕೊಡುತ್ತದೆ. ಭೂತ+ಭವ್ಯ+ಭವತ್+ನಾಥ- ಅಂದರೆ ಪ್ರಪಂಚ ಸೃಷ್ಟಿಗೆ ಮೊದಲು, ಸೃಷ್ಟಿ ನಿರ್ಮಾಣವಾದಾಗ,  ವರ್ತಮಾನ-ಹೀಗೆ ಎಲ್ಲಾ ಕಾಲದಲ್ಲೂ ಇರುವಂತಹದ್ದು. ಭಗವಂತ ಭೂತ ಭವ್ಯ ಹಾಗೂ ಭವತಿಗಳ ನಾಥ (ನಿಯಾಮಕ ಶಕ್ತಿ). ಓಂಕಾರದಲ್ಲಿ 'ಅ' ಎಂದರೆ ಅತೀತ-ಅಂದರೆ ಭೂತಕಾಲ;

'ಉ' ಎಂದರೆ 'ಉತ್ಪನ್ನವಾದ ಕ್ಷಣ' ಹಾಗೂ 'ಮ್' ಎಂದರೆ ಇನ್ನು ನಿರ್ಮೇಯವಾಗುವ ಕಾಲ. 'ನಾಥ' ಎಂದರೆ ಒಡೆಯ. ನಾವು ಯಾರಿಂದ ಬೇಡಿ ಪಡೆಯಬೇಕೋ ಅವನು 'ನಾಥ'. ನಮ್ಮ ಸಮಸ್ಯೆಗಳಿಗೆ ಏಕೈಕ ಪರಿಹಾರ ಹಾಗೂ ಏನೇ ಕೇಳಿದರೂ ಕೊಡಬಲ್ಲ, ಎಲ್ಲಾ ಕಾಲದಲ್ಲೂ ಏಕರೂಪವಾಗಿರುವ ಭಗವಂತ ಭೂತಭವ್ಯಭವನ್ನಾಥಃ.

ಇನ್ನೊಂದು ವಿಧದಲ್ಲಿ ಈ ನಾಮವನ್ನು ಹೀಗೆ ಬಿಡಿಸಬಹುದು. ಭೂತ+ಭವಿ+ಅಭವತ್+ನಾಥ. ಭಗವಂತ ಎಲ್ಲರ ಒಡೆಯ. 'ಭೂತಿಗಳು' ಎಂದರೆ ಭಗವಂತನೆಡೆಗೆ ಚಲಿಸುವ ಸಾತ್ವಿಕರು; ಭವಿಗಳು ಎಂದರೆ ಭಗವಂತನಿಂದ ನಿರ್ದಿಷ್ಟ ದೂರದಲ್ಲಿದ್ದು ಅಲ್ಲೇ ಸುತ್ತುವ ನಿತ್ಯಸಂಸಾರಿಗಳು. 'ಅಭವತ್' ಎಂದರೆ ಭಗವಂತನ ವಿರುದ್ಧ ಕತ್ತಲಿನೆಡೆಗೆ ಚಲಿಸುವ ತಾಮಸರು. ಈ ಎಲ್ಲರ ಒಡೆಯ(ನಾಥ)ನಾದ ಭಗವಂತ ಭೂತಭವ್ಯಭವನ್ನಾಥಃ.

೨೯೧) ಪವನಃ

'ಪವನ' ಎನ್ನುವ ಪದದ ಪ್ರಸಿದ್ಧವಾದ ಅರ್ಥ 'ಗಾಳಿ' ಅಥವಾ ವಾಯುದೇವರು. ನಮ್ಮ ಜೀವವನ್ನು ನಿಯಂತ್ರಿಸುವ ವಾಯುದೇವರಲ್ಲಿ ಸನ್ನಿಹಿತನಾಗಿರುವ ಭಗವಂತ ಪವನಃ. ಈ ನಾಮದ ಇನ್ನೊಂದು ಅರ್ಥ 'ಚಲನೆ'. ಪವತೇ ಇತಿ ಪವನಃ. ಅಂದರೆ ನಿರಂತರ ಚಲಿಸುವಂತಹದ್ದು. ಎಲ್ಲರ ಒಳಗೂ ಅಂತರ್ಯಾಮಿಯಾಗಿರುವ ಭಗವಂತ ಆಯಾ ವಸ್ತುವಿನಲ್ಲಿ ಆಯಾ ರೂಪದಲ್ಲಿದ್ದು ನಿರಂತರ ಚಲನೆ ಕೊಡುತ್ತಿರುತ್ತಾನೆ. ನಮ್ಮ ದೇಹದಲ್ಲಿ ಆತನ ಚಲನೆ ನಿಂತಾಕ್ಷಣ ನಾವು 'ಶವ' ವಾಗುತ್ತೇವೆ. ಅವನು ಪ+ವನಃ; ಇಲ್ಲಿ 'ಪ' ಎಂದರೆ 'ಪಾಲನೆ'. ನಮ್ಮನ್ನು ಹಾಗೂ ಸಮಸ್ತ ಬ್ರಹ್ಮಾದಿ ದೇವತೆಗಳನ್ನು ಪಾಲಿಸುವ ಶಕ್ತಿ. ಉಪನಿಷತ್ತಿನಲ್ಲಿ ಭಗವಂತನನ್ನು ವನಃ ಎಂದಿದ್ದಾರೆ. ವನಃ ಎಂದರೆ ಎಲ್ಲರೂ ಭಜಿಸಬೇಕಾದ, ಪ್ರೀತಿಯಿಂದ ಉಪಾಸನೆ ಮಾಡತಕ್ಕಂತಹ, ಎಲ್ಲರೂ ಆಶ್ರೈಸಬೇಕಾದ ವಸ್ತು. ಸಹಸ್ರ ರೂಪನಾಗಿ ಸಹಸ್ರ ಜೀವರಲ್ಲಿ ನೆಲೆಸಿ, ನಿರಂತರ ಪಾಲಿಸುವ ಭಗವಂತ ಪವನಃ.

೨೯೨) ಪಾವನಃ

ಭಗವಂತನಿರುವ ಪ್ರತಿಯೊಂದು ವಸ್ತು ಪಾವನವಾಗಿರುತ್ತದೆ. ಆತ ಪ್ರಾಣದೇವರಲ್ಲಿ ಸನ್ನಿಹಿತನಾಗಿ ನಮ್ಮೊಳಗಿರುವ ತನಕ ನಮ್ಮ ದೇಹ ಪಾವನವಾಗಿರುತ್ತದೆ. ಆತ ಹೊರಟುಹೋದ ಮರುಕ್ಷಣದಲ್ಲಿ ನಮ್ಮ ಮೃತದೇಹ 'ಅಪವಿತ್ರವೆನಿಸುತ್ತದೆ'. ಭಗವಂತ ಪಾ+ವನಃ; ಇಲ್ಲಿ 'ಪಾ' ಎಂದರೆ 'ಪಾನ' ಹಾಗೂ ವನಃ ಎಂದರೆ ರಕ್ಷಕ. ಸೂರ್ಯನಲ್ಲಿ ಸನ್ನಿಹಿತನಾಗಿದ್ದು, ಸೂರ್ಯಕಿರಣ ರೂಪದಲ್ಲಿ ಭೂಮಿಯಿಂದ ನೀರನ್ನು ಪಾನ ಮಾಡಿ, ಮೋಡಗಳ ಮುಖೇನ ಮಳೆಸುರಿಸಿ, ನಿರಂತರವಾಗಿ ಋತುಗಳ ಮುಖೇನ ನಮ್ಮನ್ನು ರಕ್ಷಿಸುವ ಭಗವಂತ ಪಾವನಃ.

೨೯೩) ಅನಲಃ

'ಅನಲ' ಎನ್ನುವುದಕ್ಕೆ ಪ್ರಸಿದ್ಧವಾದ ಅರ್ಥ 'ಬೆಂಕಿ'. ಶಾಸ್ತ್ರೀಯ ನಿರ್ವಚನದಲ್ಲಿ ಇದಕ್ಕೆ ವಿಶಿಷ್ಟವಾದ ಅರ್ಥವಿದೆ. ಅನಲಃ ಎಂದರೆ ಎಷ್ಟು ಕೊಟ್ಟರೂ ಸಾಕು ಎನ್ನದವನು! ಅಗ್ನಿ ಭೂಮಿಯಲ್ಲಿ ಭಗವಂತನ ಆರಾಧನೆಯ ಮುಖ್ಯ ಪ್ರತೀಕ. ಅಗ್ನಿಹೋತ್ರ ಮುಖೇನ ಭಗವಂತನ ಆರಾಧನೆ ಅತ್ಯಂತ ಶ್ರೇಷ್ಠ. ಅಗ್ನಿಗೆ ನಾವು ಎಷ್ಟೇ ಹವಿಸ್ಸುಗಳನ್ನು ಹಾಕಿದರೂ ಅದು ಸ್ವೀಕರಿಸುತ್ತದೆ. ಅಗ್ನಿ ಮಣ್ಣು ಹಾಗೂ ನೀರಿಗಿಂತ ಶುದ್ಧ. ಇದಕ್ಕಾಗಿ ಶಾಸ್ತ್ರದಲ್ಲಿ ಅಗ್ನಿಗೆ ವಿಶೇಷ ಸ್ಥಾನವಿದೆ. ಋಗ್ವೇದದಲ್ಲಿ "ಅಗ್ನಿಮೀಳೇ ಪುರೋಹಿತಂ " ಎಂದಿದ್ದಾರೆ. ಅಗ್ನಿಯಲ್ಲಿ ಸನ್ನಿಹಿತನಾಗಿ ಆಹುತಿಯನ್ನು ಸ್ವೀಕರಿಸುವ ಜೋತಿರ್ಮಯನಾದ ಭಗವಂತ ಅನಲಃ. ಇನ್ನು ಅನಲಃ ಎನ್ನುವುದಕ್ಕೆ ತೃಪ್ತಿ ಇಲ್ಲದವನು ಎನ್ನುವ ಅರ್ಥವೂ ಇದೆ. ಭಗವಂತ ಭಕ್ತರ ಅಧೀನ; ಭಕ್ತರಿಗೆ ಎಷ್ಟು ಕೊಟ್ಟರೂ ಆತನಿಗೆ ತೃಪ್ತಿ ಇಲ್ಲ! ಆದ್ದರಿಂದ ಭಕ್ತರ ಪರಾಧೀನನಾದ ಭಗವಂತ ಅನಲಃ.

೨೯೪) ಕಾಮಹಾ

ಕಾ+ಅ+ಮ-ಕಾಮ; 'ಕಾ' ಎಂದರೆ ಕುತ್ಸಿತ, 'ಅ' ಎಂದರೆ ಅಜ್ಞಾನ ಹಾಗೂ 'ಮ' ಎಂದರೆ ಬಯಕೆ. 'ಹ' ಎಂದರೆ 'ಹಂತಿ ಅಥವಾ ನಾಶ'. ಆದ್ದರಿಂದ ಕಾಮಹಾ ಎಂದರೆ ಅಜ್ಞಾನದಿಂದ ಬರುವ ಕೆಟ್ಟ ಬಯಕೆಯನ್ನು ನಾಶ ಮಾಡುವವನು. ಕೆಟ್ಟ ಕಾಮನೆಗಳನ್ನು ಹೊತ್ತ ದುರ್ಜನರನ್ನು ನಾಶಮಾಡುವವನು ಕಾಮಹಾ. ಕೃಷ್ಣನಾಗಿ ಕಂಸ ಹಾಗೂ ಜರಾಸಂಧರನ್ನು, ರಾಮನಾಗಿ ರಾವಣ-ಕುಂಭಕರ್ಣರನ್ನು, ವರಾಹನಾಗಿ ಹಿರಣ್ಯಾಕ್ಷನನ್ನು, ನರಸಿಂಹನಾಗಿ ಹಿರಣ್ಯಕಷಿಪುವನ್ನು ಸಂಹಾರ ಮಾಡಿದ ಭಗವಂತ ದುಷ್ಟ ಕಾಮನೆಗಳನ್ನು ಎಂದೂ ನೆರವೇರಿಸಿಲ್ಲ. ಭಕ್ತರ ಅಭೀಷ್ಟವನ್ನು ಪೂರೈಸುವ ಆತನಲ್ಲಿ ನಾವು 'ನಮ್ಮನ್ನು ಕೆಟ್ಟ ಬಯಕೆಗಳಿಂದ ಪಾರುಮಾಡಿ ಮುಕ್ತಿ ಕರುಣಿಸೆಂದು' ಬೇಡಬೇಕು.

೧೯೫) ಕಾಮಕೃತ್

ಸದ್ಬಯಕೆಗಳ ತಂದೆ ಭಗವಂತ. ಆತ ಬಯಕೆಗಳ ಅಭಿಮಾನಿ ಕಾಮನನ್ನು ಹುಟ್ಟಿಸಿದವ. ಕೆಟ್ಟ ಕಾಮನೆಗಳ ಅಭಿಮಾನಿ 'ಕಾಲನೇಮಿ' ಕಂಸನನ್ನು ಸಂಹರಿಸಿದ ಭಗವಂತ ಕಾಮಕೃತ್.

೧೯೬) ಕಾಂತಃ

ಭಗವಂತ ಎಲ್ಲರೂ ಬಯಸುವ ಚಲುವ. ಮನ್ಮಥನಿಗೂ ಸೌಂದರ್ಯವನ್ನು ಕೊಟ್ಟ ಭಗವಂತ ಚಲುವರ ಚಲುವ. ಕಂ+ಅಂತಃ -ಕಾಂತಃ. ಇಲ್ಲಿ ಕಂ ಎಂದರೆ ತುದಿ. ಆದ್ದರಿಂದ ಕಾಂತಃ ಎಂದರೆ ಆನಂದದ ತುತ್ತ-ತುದಿ. ಭಗವಂತ ಆನಂದದ ಪರಾಕಾಷ್ಟೆ. ಜ್ಞಾನಿಗಳಿಗೆ ಆನಂದವನ್ನು ಕೊಡುವ ಭಗವಂತ ಪಾಪಿಗಳಿಗೆ ಅದರ ಅಂತ! ಪರಂಪರೆಯಲ್ಲಿ ಆನಂದವನ್ನು ಪಡೆದ ಅತಿ ದೊಡ್ಡ ಶಕ್ತಿಯಾದ ಶತಾನಂದನಿಗಿಂತಲೂ ಆಚೆಗಿನ ಶಕ್ತಿಯಾದ ಭಗವಂತ ಕಾಂತಃ.

೧೯೭) ಕಾಮಃ

ಭಗವಂತ ಎಲ್ಲರೂ ಬಯಸುವಂತವನು. ಅಳತೆ ಮಾಡಲು ಅಸಾಧ್ಯವಾದ ಜ್ಞಾನಾನಂದಗಳ ಪರಿಪೂರ್ಣ ಸ್ವರೂಪ ಭಗವಂತ ಕಾಮಃ.

೧೯೮) ಕಾಮಪ್ರದಃ

ಸದ್ಬಯಕೆಗಳನ್ನು ನಮ್ಮ ಕರ್ಮಫಲಕ್ಕನುಸಾರವಾಗಿ ಈಡೇರಿಸುವ, ಎಲ್ಲಾ ವಿವೇಕಿಗಳು ಬಯಸುವ ಅತ್ಯಂತ ಅಮೂಲ್ಯ ವಸ್ತು ಭಗವಂತ. ಭಕ್ತರ ಬಯಕೆಗಳನ್ನು ಈಡೇರಿಸುವಲ್ಲಿ ಭಗವಂತನಿಗೆ ತೃಪ್ತಿಯೇ ಇಲ್ಲ. ತನ್ನ ಸಹಸ್ರಾರು ತೋಳುಗಳಿಂದ ಭಕ್ತಕೋಟಿಯ ಅಭೀಷ್ಟವನ್ನು ಈಡೇರಿಸುವ ಭಗವಂತ ಕಾಮಪ್ರದಃ.

೧೯೯) ಪ್ರಭುಃ

ಭಕ್ತಕೋಟಿಯ ಸರ್ವಾಭೀಷ್ಟವನ್ನು ನೆರವೇರಿಸುವ ಭಗವಂತ ಸರ್ವಸಮರ್ಥ. ಯಾರಿಗೆ ಯಾವ ಕಾಲದಲ್ಲಿ ಏನನ್ನು ಕೊಡಬೇಕು, ಏನನ್ನು ಕೊಡಬಾರದು ಎನ್ನುವುದು ಅವನಿಗೆ ತಿಳಿದಿದೆ. ನಾವು ನಮ್ಮ ಮಕ್ಕಳು ಬಯಸಿದ್ದನ್ನೆಲ್ಲಾ ಕೊಡುವುದಿಲ್ಲ. ಏಕೆಂದರೆ ಮಕ್ಕಳಿಗೆ ಯಾವುದು ಒಳ್ಳೆಯದು ಹಾಗೂ ಯಾವುದು ಕೆಟ್ಟದ್ದು ಎನ್ನುವ ಅರಿವಿರುವುದಿಲ್ಲ. ಭಗವಂತ ಕೂಡಾ ಹಾಗೇ. ಆತ ತನ್ನ ಭಕ್ತರ ಅಭೀಷ್ಟವನ್ನು ಅವರ ಒಳಿತಿಗನುಗುಣವಾಗಿ ಕೊಟ್ಟು ಉದ್ಧರಿಸುವ ಪ್ರಭುಃ.

ಸಹಸ್ರನಾಮ ವಿವರಣೆ-೨೦೦

ಯುಗಾದಿಕೃದ್ಯುಗಾವರ್ತೋ ನೈಕಮಾಯೋ ಮಹಾಶನಃ ।
ಅದೃಶ್ಯೋ ವ್ಯಕ್ತರೂಪಶ್ಚ ಸಹಸ್ರಜಿದನಂತಜಿತ್ ॥೪೭॥

೨೦೦) ಯುಗಾದಿಕೃತ್

ಈ ಪ್ರಪಂಚ ಸೃಷ್ಟಿಯಾದಂದಿನಿಂದ ಒಂದು ಯುಗದ ಕಲ್ಪನೆಯಿದೆ. ಯುಗಗಳ ನಾಲ್ಕು ಗುಂಪು ಸೇರಿ ಒಂದು ಯುಗಚಕ್ರವಾಗುತ್ತದೆ. ಎಲ್ಲಕ್ಕಿಂತ ಚಿಕ್ಕ ಯುಗ ಕಲಿಯುಗ. ಇದರ ಅವಧಿ ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳು. ದ್ವಾಪರ ಯುಗದ ಅವಧಿ ಕಲಿಯುಗದ ಎರಡರಷ್ಟು. ಅಂದರೆ ಎಂಟು ಲಕ್ಷದ ಅರವತ್ನಾಲ್ಕು ಸಾವಿರ ವರ್ಷಗಳು. ಕಲಿಯುಗದ ಮೂರರಷ್ಟು ಅವಧಿ ತ್ರೇತಾಯುಗ. ಅಂದರೆ ಹನ್ನೆರಡು ಲಕ್ಷದ ತೊಂಬತ್ತಾರು ಸಾವಿರ ವರ್ಷಗಳು. ಯುಗದ ಆದಿ ಕೃತಯುಗ. ಇದರ ಅವಧಿ ಕಲಿಯುಗದ ನಾಲ್ಕುಪಟ್ಟು-ಅಂದರೆ ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳು. ಆದ್ದರಿಂದ ಒಂದು ಯುಗಚಕ್ರದಲ್ಲಿ ನಲವತ್ತೂರು ಲಕ್ಷದ ಇಪ್ಪತ್ತು ಸಾವಿರ ವರ್ಷಗಳಿರುತ್ತವೆ. ಇಂತಹ ಇಪ್ಪತ್ತೊಂದು ಯುಗಚಕ್ರಗಳಿಗೆ ಹದಿನೆಂಟು ಲಕ್ಷದ ಐವತ್ತು ಸಾವಿರ ವರ್ಷಗಳನ್ನು ಸೇರಿಸಿದರೆ ಒಂದು ಮನ್ವಂತರ(೩೦,೬೭,೨೦,೦೦೦+೧೮,೫೦,೦೦೦). ಇಂತಹ ಹದಿನಾಲ್ಕು ಮನ್ವಂತರಗಳು ಹಾಗೂ ಜೊತೆಗೆ ಮನ್ವಂತರಗಳ ನಡುವಿನ ಹದಿಮೂರು ಪ್ರಳಯಕಾಲದ ಇಪ್ಪತ್ತುಸಾವಿರ ವರ್ಷಗಳು. ಒಟ್ಟಿಗೆ ೪೩೨ ಕೋಟಿ (೩೦,೮೫,೭೦,೦೦೦x೧೪+೨೦,೦೦೦) ವರ್ಷಗಳು. ಇದು ಚತುರ್ಮುಖನ ಒಂದು ಹಗಲು. ಆದ್ದರಿಂದ ಚತುರ್ಮುಖನ ಒಂದು ದಿನ ಅಂದರೆ ೮೬೪ ಕೋಟಿ ವರ್ಷಗಳು. ಚತುರ್ಮುಖನ ಆಯುಸ್ಸು ೧೦೦ ವರ್ಷ. ಅಂದರೆ ೩೧ ಸಾವಿರದ ೧೦೪ ಸಾವಿರ ಕೋಟಿ ವರ್ಷ (೮೬೪,೦೦೦೦೦೦೦x೩೦x೧೨x೧೦೦= ೩೧,೧೦೪,೦೦೦೦೦೦೦೦೦೦) ಈ ರೀತಿ ಕಾಲ ಚಕ್ರ ತಿರುಗುತ್ತಿರುತ್ತದೆ. ಕಲಿಯುಗ ಕಲಹಗಳ ಯುಗ. ಆದರೆ ತ್ರೇತಾಯುಗದಲ್ಲೂ ಕೂಡಾ ರಾವಣನಂತಹ ದುಷ್ಟ ರಾಕ್ಷಸರಿದ್ದಿದ್ದರು ಎನ್ನುವುದನ್ನು ನಾವು ಮರೆಯಬಾರದು. ಆದ್ದರಿಂದ ಭಗವಂತನ ನಿರಂತರ ಉಪಾಸನೆ ನಮ್ಮ ಬದುಕನ್ನು ಕೃತಯುಗಕ್ಕೆ ಕೊಂಡೊಯ್ಯಬಲ್ಲುದೇ ಹೊರತು ಕಾಲವಲ್ಲ. ಕಲಿಯುಗದಲ್ಲಿದ್ದು ಕೃತಯುಗದ ಆನಂದವನ್ನು ಭಗವಂತನ ನಿರಂತರ ಉಪಾಸನೆಯಿಂದ ಪಡೆಯಬಹುದು. ಇದು ಭಗವಂತನ 'ಯುಗಾದಿಕೃತ್' ನಾಮ ಉಪಾಸನೆಯ ತಾತ್ಪರ್ಯ. ಯುಗದ ಆದಿಯಲ್ಲಿ ಬ್ರಹ್ಮ-ಸರಸ್ವತಿ ಹಾಗೂ ಪ್ರಾಣ-ಭಾರತಿಯರನ್ನು ಸೃಷ್ಟಿ ಮಾಡಿದ ಭಗವಂತ ಯುಗಾದಿಕೃತ್.

೩೦೧) ಯುಗಾವರ್ತಃ

ಮೇಲೆ ಹೇಳಿದಂತೆ ಯುಗದ ಆದಿಗೆ ಕಾರಣಕರ್ತನಾದ ಭಗವಂತ ಯುಗದ ಆವರ್ತನೆಗೂ ಕಾರಣಕರ್ತ. ಯುಗದ ನಂತರ ಯುಗ, ಚತುರ್ಯುಗದ ನಂತರ ಚತುರ್ಯುಗ, ಮನ್ವಂತರದ ನಂತರ ಮನ್ವಂತರ, ಹೀಗೆ ವಿಶ್ವದ ಆವರ್ತನೆಗೆ ಕಾರಣಕರ್ತನಾಗಿ, ಪ್ರತಿಯೊಂದು ಗಂಡು ಹೆಣ್ಣಿನಲ್ಲಿ ಕುಳಿತು ಸೃಷ್ಟಿಚಕ್ರವನ್ನು ತಿರುಗಿಸುವ ಭಗವಂತ ಯುಗಾವರ್ತಃ.

೩೦೨) ನೈಕಮಾಯಃ

ಭಗವಂತನ ಮಾಯೆ ಅನೇಕ. ವೈದಿಕ ಸಾಹಿತ್ಯದಲ್ಲಿ 'ಮಾಯ' ಎನ್ನುವ ಪದಕ್ಕೆ 'ಜ್ಞಾನ, ಇಚ್ಛೆ, ಮಹಿಮೆ ಇತ್ಯಾದಿ ಅರ್ಥವಿದೆ. "ಭಗವಂತನ ಮಾಯೆಯಿಂದ ಈ ಜಗತ್ತು ಸೃಷ್ಟಿಯಾಯಿತು" ಅಂದರೆ ಭಗವಂತನ ಅನಂತ ಜ್ಞಾನಶಕ್ತಿ ಹಾಗೂ ಇಚ್ಛಾ ಶಕ್ತಿಯಿಂದ ಈ ಜಗತ್ತು ಆವಿಷ್ಕಾರವಾಯಿತು ಎಂದರ್ಥ. ಭಗವಂತ ಅನಂತ ಮಹಿಮ. ಅವನ ಮಹಿಮೆಗೆ ಎಣೆಯಿಲ್ಲ, ಅದು ಅಪರಂಪಾರವಾದದ್ದು. ಇನ್ನು ಮಾಯೆ ಎಂದರೆ ಮೋಹಕ ಶಕ್ತಿ. ನೈಕಮಾಯ ಎಂದರೆ ನಮ್ಮನ್ನು ಎರಡು ಮೋಹಕ ಶಕ್ತಿಗಳಿಂದ ಕಟ್ಟಿಹಾಕಿದ ಭಗವಂತ. ಅವುಗಳೆಂದರೆ: (೧)ನಮಗೆ ನಮ್ಮ ಸ್ವರೂಪದ ಅರಿವೇ ಇಲ್ಲದಂತೆ ಮಾಡುವ ಮಾಯಾ ಪರದೆ ಹಾಗೂ (೨) ಭಗವಂತನ ಮತ್ತು ನಮ್ಮ ನಡುವೆ ಇರುವ ಪರದೆ. ಈ ಪರದೆಯನ್ನು ಭಕ್ತಿಪೂರ್ವಕ ಜ್ಞಾನದಿಂದ ಮಾತ್ರ ಸರಿಸಲು ಸಾಧ್ಯ. ಹೀಗೆ ಜ್ಞಾನಸ್ವರೂಪನಾಗಿದ್ದು, ಜ್ಞಾನಿಗಳಿಗೆ ತನ್ನ ಅರಿವನ್ನು ಕರುಣಿಸುವ ಭಗವಂತ ನೈಕಮಾಯಃ

೩೦೩) ಮಹಾಶನಃ

ಮಹಾ+ಅಶನ-ಅಂದರೆ ಇಡೀ ಜಗತ್ತನ್ನು ಕಬಳಿಸಿ ಯೋಗನಿದ್ರೆಯಲ್ಲಿ ಪವಡಿಸುವ ಭಗವಂತ. ಕಠೋಪನಿಷತ್ತಿನಲ್ಲಿ ಹೇಳುವಂತೆ: ಪ್ರಳಯ ಕಾಲದಲ್ಲಿ ಭಗವಂತನಿಗೆ ಬ್ರಹ್ಮ-ವಾಯು ಕೇವಲ ಒಂದು ತುತ್ತು ! ಪ್ರಳಯ ಕಾಲದಲ್ಲಿ ಸಮಸ್ತ ವಿಶ್ವವನ್ನು ಕಬಳಿಸಿ ತನ್ನ ಉದರದಲ್ಲಿ ಪೋಷಿಸುವ ಹಾಗೂ ಪುನಃ ತನ್ನ ನಾಭಿಯಿಂದ ಸೃಷ್ಟಿಯ ನಿರ್ಮಾಣ ಮಾಡುವ ಭಗವಂತ ಮಹಾಶನಃ. ಇನ್ನು ಈ ನಾಮವನ್ನು ಮಹಾ+ಶ+ನ ಎಂದು ಒಡೆದು ಅರ್ಥೈಸಬಹುದು. ಇಲ್ಲಿ 'ಶ' ಅಥವಾ 'ಶಂ' ಎಂದರೆ ಅಂತರಂಗದ ಆನಂದ. 'ನ' ಎಂದರೆ ನಯತಿ. ಜೀವರಿಗೆ ಅಂತರಂಗದ ಮಹದಾನಂದವನ್ನು ಕೊಡುವವ ಮಹಾಶನಃ. ಮಹತ್ತಾದ ಆಸೆ ಉಳ್ಳವರು ಮಹಾಶರು. ಇಲ್ಲಿ ಮಹತ್ತಾದ ಆಸೆ ಎಂದರೆ ಯಾವುದೇ ರಾಗ-ದ್ವೇಷವಿಲ್ಲದೆ ಇಡೀ ಜಗತ್ತಿನ ಕಲ್ಯಾಣ ಬಯಸುವುದು. ಜ್ಞಾನಿಗಳಿಗೆ ಇಂತಹ ಸ್ಥಿತಿಯನ್ನು ಕರುಣಿಸುವ ಭಗವಂತ ಮಹಾಶನಃ.

೩೦೪) ಅದೃಶ್ಯಃ

ಅದೃಶ್ಯಃ ಎಂದರೆ ಕಾಣಸಿಗದವನು. ಭಗವಂತ ನಮ್ಮ ಜೀವನ ನಾಟಕದ ಸೂತ್ರಧಾರ. ಆದರೆ ಆತ ಕಾಣಸಿಗುವುದಿಲ್ಲ. ಇದಕ್ಕೆ ವಿಶೇಷ ಕಾರಣವಿದೆ. ನಮ್ಮ ಕಣ್ಣಿಗೆ ಕಾಣುವುದು ಕೇವಲ ಮಣ್ಣು-ನೀರು-ಬೆಂಕಿಯಿಂದಾದ ವಸ್ತು ಮಾತ್ರ. ಭಗವಂತನ ಆಕಾರ ಮಣ್ಣು-ನೀರು-ಬೆಂಕಿಯಿಂದಾಗಿಲ್ಲ(ತ್ರೈಗುಣ್ಯವರ್ಜಿತ). ಇಂತಹ ಭಗವಂತ ಸ್ವಯಂ ಇಚ್ಛೆಯಿಂದ ಮಾತ್ರ ಕಾಣಿಸಿಕೊಳ್ಳಬಲ್ಲ.

೩೦೫) ವ್ಯಕ್ತರೂಪಃ (ಅವ್ಯಕ್ತರೂಪಃ)

ಭಗವಂತನ ರೂಪ ಜ್ಞಾನಾನಂದ ಸ್ವರೂಪ. ಆನಂದ, ದುಃಖ, ಸುಖ, ಜ್ಞಾನ, ಅಜ್ಞಾನ, ಇತ್ಯಾದಿ ಕಣ್ಣಿಗೆ ಕಾಣುವ ವಸ್ತುಗಳಲ್ಲ. ಭಗವಂತ ಜ್ಞಾನಾನಂದಮಯನಾದ್ದರಿಂದ ಆತ ಅವ್ಯಕ್ತ. ಆದರೆ ಆತ ಬಯಸಿದರೆ ವ್ಯಕ್ತನಾಗಬಲ್ಲ. ಆತ ಒಲಿದನೆಂದರೆ ತನ್ನ ರೂಪವನ್ನು ತೆರೆದು ತೋರಿಸುತ್ತಾನೆ. ಅವತಾರರೂಪನಾಗಿ ಬಂದಾಗ ಭಗವಂತ ಎಲ್ಲರಿಗೂ ಕಾಣಿಸಿಕೊಳ್ಳುತ್ತಾನೆ. ಸೂತ್ರಧಾರನಾದ ಭಗವಂತ ಸ್ವಯಂ ತನ್ನ ಪಾತ್ರವನ್ನು ನಿಭಾಯಿಸಲು ಅವತಾರ ರೂಪಿಯಾಗಿ ಭೂಮಿಗಿಳಿದು ಬರುತ್ತಾನೆ. ಹೊರಗಣ್ಣಿಗೆ ಕಾಣದ ಭಗವಂತ ಸಾಧಕರಿಗೆ ಧ್ಯಾನದಲ್ಲಿ ಕಾಣಿಸಿಕೊಳ್ಳುತ್ತಾನೆ. ಸಾಧಕ ಧ್ಯಾನದಲ್ಲಿ ಭಗವಂತನನ್ನು ಕಾಣಲು ತನ್ನ ಮನಸ್ಸನ್ನು ಅಣಿಗೊಳಿಸುತ್ತಾನೆ. ಆದರೆ ಇದು ಸುಲಭದ ಕೆಲಸವಲ್ಲ. ಮನಸ್ಸನ್ನು ನಿಯಂತ್ರಿಸಿ, ಬುದ್ಧಿಯನ್ನು ನಿಯಂತ್ರಣ ಮಾಡಿ, ಅದರಾಚೆಗಿನ ಅಹಂಕಾರ, ಚಿತ್ತ, ಚೇತನ ಎಲ್ಲವನ್ನೂ ನಿಯಂತ್ರಣ ಮಾಡಿ, ಒಂದು ಬಿಂದುವಿನಲ್ಲಿ ಏಕಾಗ್ರನಾದಾಗ- ಮನಸ್ಸು ಭಗವಂತನ ಪ್ರತೀಕವನ್ನು ಕಡೆಯುತ್ತದೆ. ಈ ರೀತಿ ಧ್ಯಾನದಲ್ಲಿ ಕಾಣುವ ಭಗವಂತನ ರೂಪ ಕೇವಲ ನಮ್ಮ ಸಂಸ್ಕಾರದ ಪ್ರತಿಮೆ. ಸಾಕ್ಷಾತ್ ಭಗವಂತನನ್ನು ಕಾಣಬೇಕಾದರೆ ನಾವು ನಮ್ಮ ಪಂಚಕೋಶಗಳಿಂದ ಈಚೆ ಬಂದು ಜ್ಞಾನಾನಂದಮಯರಾಗಬೇಕು. ಈ ಸ್ಥಿತಿಯಲ್ಲಿ ಮನಸ್ಸು ಕೆಲಸ ಮಾಡುವುದನ್ನು ನಿಲ್ಲಿಸಿ ಆತ್ಮವೇ ಯೋಚಿಸಲು ಆರಂಭಿಸುತ್ತದೆ. ಆಗ ಜ್ಞಾನಾನಂದರೂಪನಾದ ಭಗವಂತನನ್ನು ಸಾಕ್ಷಾತ್ ಕಾಣಬಹುದು. ಈ ಕಾರಣಕ್ಕಾಗಿ ಭಗವಂತನ ರೂಪ ವ್ಯಕ್ತ ಹಾಗೂ ಅವ್ಯಕ್ತ!

೩೦೬) ಸಹಸ್ರಜಿತ್

ಭಗವಂತ ಸಾವಿರ ರೂಪವನ್ನು ತೊಟ್ಟವ. ವ್ಯಕ್ತಿ ಒಂದೇ ಆದರೂ ಅವತಾರದಲ್ಲಿ ಅಭಿವ್ಯಕ್ತಿ ಬೇರೆ ಬೇರೆ. ವ್ಯಕ್ತಿ ಏಕ-ಅಭಿವ್ಯಕ್ತಿ ಅನಂತ. ಸೃಷ್ಟಿಯ ಆದಿಯಲ್ಲಿ ಭಗವಂತ ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ ಮತ್ತು ವಾಸುದೇವ ಎನ್ನುವ ನಾಲ್ಕು ರೂಪದಲ್ಲಿ ವ್ಯಕ್ತನಾದ. ನಂತರ ಪಂಚರೂಪ, ನಂತರ ಕೇಶವಾದಿ ದ್ವಾದಶರೂಪ, ನಂತರ ಸಂಕರ್ಷಣಾದಿ

ಇಪ್ಪತ್ನಾಲ್ಕು ರೂಪ ಆನಂತರ ನಾರಾಯಣಾದಿ ೧೦೮ ರೂಪ, ಆ ಮೇಲೆ ವಿಶ್ವಾದಿ ಸಹಸ್ರರೂಪ. ಹೀಗೆ ಭಗವಂತನ ರೂಪ ಅನಂತ. ವಿಷ್ಣು ಸಹಸ್ರನಾಮದಲ್ಲಿ ಬರುವ ಸಾವಿರ ನಾಮಗಳು ಭಗವಂತನ ಒಂದೊಂದು ರೂಪದ ಪ್ರತೀಕ. ಸಹಸ್ರಾರು ದೇವತೆಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವ ಭಗವಂತನಿಗೆ ಪ್ರಾಣತತ್ವ ಸದಾ ಜೊತೆಗಾರ. ಸಹಸ್ರಾರು ದುಷ್ಟ ರಾಕ್ಷಸರನ್ನು ಸಂಹಾರ ಮಾಡಿದ ಭಗವಂತ ಸಹಸ್ರಜಿತ್.

೩೦೭) ಅನಂತಜಿತ್

ಭಗವಂತ ಅನಂತವನ್ನು ಗೆದ್ದವನು ಹಾಗೂ ಅನಂತದ ಜೊತೆಗಿರುವವನು. ಗೀತೆಯಲ್ಲಿ ಹೇಳುವಂತೆ:

ಅನಂತಸ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।
ಪಿತೃಣಾಮರ್ಯಮಾ ಚಾಸ್ಮಿ ಯಮಃ ಸಂಯಮ ತಾಮಹಮ್ ॥ (ಅ-೧೦ ಶ್ಲೋ-೨೯)

ನಾಗರ ಹಾವುಗಳಲ್ಲಿ ಶೇಷ ನಾನು (ಅಳಿವಿರದ್ದರಿಂದ 'ಅನಂತ' ಎನ್ನಿಸಿ ಶೇಷನಲ್ಲಿದ್ದೇನೆ). ಜಲಚರಗಳ ಒಡೆಯ ವರುಣ ನಾನು, ಪಿತೃ ದೇವತೆಗಳಲ್ಲಿ ಆರ್ಯಮ ನಾನು, ದಂಡಿಸುವವರಲ್ಲಿ ಯಮ ನಾನು. ಹೀಗೆ ನಾಗರನಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಶೇಷಶಯನನಾದ ಅನಂತಜಿತ್.

**ಇಷ್ಟೋಽವಿಶಿಷ್ಟಃ ಶಿಷ್ಟೇಷ್ಟಃ ಶಿಖಂಡೀ ನಹುಷೋ ವೃಷಃ ।**
**ಕ್ರೋಧಹಾ ಕ್ರೋಧಕೃತ್ಕರ್ತಾ ವಿಶ್ವಬಾಹುರ್ಮಹೀಧರಃ ॥೪೭॥**

೩೦೮) ಇಷ್ಟಃ

ಯಾವುದೇ ಒಂದು ವಸ್ತುವನ್ನು ಗೌರವಿಸಿ ಆದರಿಸಬೇಕಾದರೆ ಅದು ನಮಗೆ ಇಷ್ಟವಾಗಬೇಕು. ಭಗವಂತನ ರೂಪಗಳು ಹಲವು; ಹಾಗೂ ಒಬ್ಬೊಬ್ಬರಿಗೆ ಒಂದೊಂದು ರೂಪ ಇಷ್ಟ. ಇಲ್ಲಿ ಇಷ್ಟ ಎಂದರೆ ನಮ್ಮ ಪ್ರೀತಿಗೆ ಪಾತ್ರವಾದ ವಸ್ತು. ಭಗವಂತ ಎಲ್ಲರೂ ಪ್ರೀತಿಸಬೇಕಾದ ವಸ್ತು. ಇನ್ನೊಂದು ಅರ್ಥದಲ್ಲಿ ಇಷ್ಟಃ ಎಂದರೆ ಎಲ್ಲಾ ಯಾಗಗಳಿಂದ ಆರಾಧಿಸಲ್ಪಡುವವನು. ಗೀತೆಯಲ್ಲಿ ಹೇಳುವಂತೆ:

ಅಹಂ ಹಿ ಸರ್ವ ಯಜ್ಞಾನಾಂ ಭೂಕ್ತಾ ಚ ಪ್ರಭುರೇವ ಚ ॥ಅ-೯-ಶ್ಲೋ-೨೪॥

ನಾವು ಯಾವುದೇ ದೇವತೆಯ ಕುರಿತು ಯಾಗ ಮಾಡಿದರೂ ಅದು ಕೊನೆಗೆ ತಲುಪುವುದು ಅಂತರ್ಯಾಮಿಯಾದ ಭಗವಂತನನ್ನೇ. ಹೀಗೆ ಎಲ್ಲಾ ಯಾಗಗಳಿಂದ ಆರಾಧಿಸಲ್ಪಡುವ, ಎಲ್ಲರಿಗೂ ಇಷ್ಟನಾದ 'ಇಷ್ಟದೇವ' ಭಗವಂತ ಇಷ್ಟಃ.

೩೦೯) ಅವಿಶಿಷ್ಟಃ (ವಿಶಿಷ್ಟಃ)

ಎಲ್ಲರೊಳಗೆ ಅಂತರ್ಯಾಮಿಯಾಗಿರುವ ಭಗವಂತ ಅವಿಶಿಷ್ಟಃ ; ಆತ ಎಲ್ಲರಿಗಿಂತ ಹೆಚ್ಚು ವಿಶೇಷತೆ ಉಳ್ಳವನು (Extraordinary). ಅಸಾಧಾರಣ ಗುಣವುಳ್ಳ ಸರ್ವೋತ್ಕೃಷ್ಟ ಭಗವಂತ ವಿಶಿಷ್ಟಃ. ಇಲ್ಲಿ ಶಿಷ್ಟ ಎಂದರೆ 'ಶೇಷ' ಎನ್ನುವ ಅರ್ಥವನ್ನೂ ಕೊಡುತ್ತದೆ. ಭಗವಂತ ಮಹಾ ಪ್ರಳಯದ ನಂತರ ಕೊನೆಗೆ ಉಳಿಯುವ ಏಕಮಾತ್ರ ಶಕ್ತಿ. ಪ್ರಪಂಚಕ್ಕೆ ಭಗವಂತನ ಅರಿವನ್ನು ಕೊಟ್ಟವರು ಜ್ಞಾನಿಗಳು. ಜ್ಞಾನಿಗಳ ಉಪದೇಶದಿಂದ ಯಾರನ್ನು ತಿಳಿಯಲು ಸಾಧ್ಯವೋ ಅವನು ವಿಶಿಷ್ಟಃ

೩೧೦) ಶಿಷ್ಟೇಷ್ಟಃ

ಶಿಷ್ಟರು ಎಂದರೆ ಸಂಪ್ರದಾಯದಿಂದ ಬಂದ ಸತ್ಯದ ಅರಿವನ್ನು ಪಡೆದವರು; ಗುರು ಉಪದೇಶದಂತೆ ಸತ್ಯದ ಮಾರ್ಗದಲ್ಲಿ ನಡೆಯುವವರು. ಬಲ್ಲವರಿಗೆ ಇಷ್ಟವಾದ ಹಾಗೂ ಬಲ್ಲವರಿಂದ ಪೂಜಿತನಾಗುವ ಭಗವಂತ ಶಿಷ್ಟೇಷ್ಟಃ.

೩೧೧) ಶಿಖಂಡೀ

ಸಾಮಾಜಿಕವಾಗಿ ಈ ಪದಕ್ಕೆ ತಪ್ಪಾದ ಅರ್ಥ ರೂಢಿಯಲ್ಲಿದೆ. ಆದರೆ ಶಿಖಂಡೀ ಎಂದರೆ ಮೂಲಭೂತವಾಗಿ ಶಿಖಂಡ ಉಳ್ಳವನು. ಶಿಖ+ಅಂಡ ಎನ್ನುವಲ್ಲಿ ಶಿಖ ಎಂದರೆ ತಲೆಗೂದಲು. ತಲೆ ಕೂದಲನ್ನು ಚನ್ನಾಗಿ ಬಾಚಿ ಹಿಂದೆ ಮೊಟ್ಟೆಯಂತೆ ಕಟ್ಟುವವರು ಶಿಖಂಡಿಗಳು. ಕೃಷ್ಣ ಬಾಲಕನಿದ್ದಾಗ ತಾಯಿ ಯಶೋದೆ ಆತನ ಕೂದಲನ್ನು ಈ ರೀತಿ ಕಟ್ಟುತ್ತಿದ್ದಳು. ಈ ಕಾರಣಕ್ಕಾಗಿ ಆತನನ್ನು ಶಿಖಂಡೀ ಎಂದು ಕರೆಯುತ್ತಿದ್ದರು. ನವಿಲು ಗರಿಯನ್ನು ತಲೆಯಲ್ಲಿ ಧರಿಸುವವರನ್ನೂ ಕೂಡಾ ಶಿಖಂಡೀ ಎಂದು ಕರೆಯುತ್ತಾರೆ. ಕೃಷ್ಣ ಬಾಲಕನಿದ್ದಾಗ ಇತರ ಗೋಪಾಲಕರ ಜೊತೆ ನವಿಲುಗರಿ ಧರಿಸುತ್ತಿದ್ದ. ಆ ಕಾರಣಕ್ಕಾಗಿ ಆತನನ್ನು ಶಿಖಂಡೀ ಎನ್ನುವುದು ವಾಡಿಕೆ.

ಈ ನಾಮವನ್ನು ಒಡೆದು ನೋಡಿದರೆ ಶಿ+ಖಂಡಿ; ಇಲ್ಲಿ ಶಿ ಎಂದರೆ ಸದಾ ಅಜ್ಞಾನದ ನಿದ್ದೆಯಲ್ಲಿರುವವರು. ಇಂತವರನ್ನು ಖಂಡಿಸುವ ಭಗವಂತ ಶಿಖಂಡೀ. ಶಂ ಎಂದರೆ ಸುಖ. ಸ್ವಯಂ ಆನಂದ ಸ್ವರೂಪನಾಗಿದ್ದು, ದುಃಖಮಯವಾದ ಸಂಸಾರವನ್ನು ಖಂಡಿಸಿ ಮುಕ್ತಿ ಕೊಡುವ ಭಗವಂತ, ಸುಖಕ್ಕೆ ಅಯೋಗ್ಯರಾದವರ ಸುಖವನ್ನು ಖಂಡಿಸುವ ಶಿಖಂಡೀ.

೨೧೨) ನಹುಷಃ

ನಮ್ಮನ್ನು ಸಂಸಾರ ಬಂಧನದಲ್ಲಿ ಸಿಲುಕಿಸುವ, ಕೊನೆಗೆ ಸಂಸಾರ ಬಂಧದಿಂದ ಬಿಡಿಸಿ ಮೋಕ್ಷ ಕರುಣಿಸುವ ಭಗವಂತ ನಹುಷಃ. ನಾವು ಅನೇಕ ಬಂಧನಗಳ ಸರಮಾಲೆಗಳಿಂದ ಬಂಧಿಸಲ್ಪಟ್ಟಿರುತ್ತೇವೆ. ಒಬ್ಬರು ಇನ್ನೊಬ್ಬರನ್ನು ಪ್ರೀತಿಸುವುದಕ್ಕೆ ಅವರೊಳಗಿರುವ ಯಾವುದೋ ಒಂದು ಶಕ್ತಿ ಕಾರಣವಾಗಿರುತ್ತದೆ. ಯಾವುದೇ ಸ್ವಾರ್ಥವಿಲ್ಲದೆ ಅಪರಿಚಿತರಾಗಿ ಬಂದು ಸ್ನೇಹದ ಬಂಧನದಲ್ಲಿ ಸಿಲುಕುವುದು; ಪತಿ-ಪತ್ನಿಯಾಗಿ ಪ್ರೀತಿಯ ಬಂಧನದಲ್ಲಿ ಬಂಧಿಸಲ್ಪಡುವುದು-ಎಲ್ಲವೂ ಭಗವಂತನ ನಿಯಮದಂತೆ. ಒಬ್ಬ ವ್ಯಕ್ತಿಯ ಸಹವಾಸದಲ್ಲಿ ನಮ್ಮ ಹೃದಯ ಅರಳುವಂತೆ ಮಾಡುವವ ಭಗವಂತ. ಇದರಿಂದ ಸ್ನೇಹ ಬೆಳೆಯುತ್ತದೆ. ಸ್ನೇಹ-ಪ್ರೇಮದ ನಂಟನ್ನು ಬೆಳೆಸುವವ, ಬೆಸೆಯುವವ ಹಾಗೂ ಬೇರ್ಪಡಿಸುವವ ಭಗವಂತ. ನಮ್ಮನ್ನು ಬಂಧನಕ್ಕೆ ಸಿಲುಕಿಸುವ ಭಗವಂತ ಯಾವಾಗ ಬೇರ್ಪಡಿಸುತ್ತಾನೆ ಎಂದು ತಿಳಿಯುವುದು ಕಷ್ಟ. ಪ್ರೀತಿಗಾಗಿ ಬೇರ್ಪಡುವ ಅಥವಾ ದ್ವೇಷದಿಂದ ಬೇರ್ಪಡುವ ಜನರನ್ನು ಸಾಮಾನ್ಯವಾಗಿ ನಾವು ಕಾಣುತ್ತೇವೆ. ಹೀಗೆ ಬಂಧನದಲ್ಲಿ ಸಿಲುಕಿಸುವ ಹಾಗೂ ಬಂಧನದಿಂದ ಬೇರ್ಪಡಿಸುವ ಭಗವಂತ ನಹುಷಃ. ಗ್ರಹ-ಗೋಲಗಳನ್ನು ಒಂದಕ್ಕೊಂದು ಸಂಕರ್ಷಣ ಶಕ್ತಿಯಿಂದ ಬಂಧಿಸಿಟ್ಟಿರುವ ಭಗವಂತ, ಪ್ರಳಯಕಾಲದಲ್ಲಿ ಎಲ್ಲವನ್ನೂ ಬೇರ್ಪಡಿಸುತ್ತಾನೆ. ಇದು ಆತನ ನಿಯಮ.

೨೧೩) ವೃಷಃ

ರೂಢಿಯಲ್ಲಿ ವೃಷಃ ಎಂದರೆ ಗೂಳಿ ಎನ್ನುವ ಅರ್ಥವಿದೆ. ಆದರೆ ವೈದಿಕವಾಗಿ ವೃಷಃ ಎಂದರೆ 'ಸುರಿಸುವುದು' ಎಂದರ್ಥ. ಭಕ್ತರ ಹಾಗೂ ಜ್ಞಾನಿಗಳ ಮೇಲೆ ಅಭೀಷ್ಟದ ಮಳೆ ಸುರಿಸುವ ಭಗವಂತ ವೃಷಃ. ಈ ನಾಮದ ಇನ್ನೊಂದು ಅರ್ಥ 'ಧರ್ಮ'. ಸಮಾಜವನ್ನು ಧಾರಣೆ ಮಾಡುವುದು ಧರ್ಮ. ಧರ್ಮ ಭಗವಂತನ ಪ್ರತೀಕ.

ವೃ+ಷಃ ಇಲ್ಲಿ 'ಷ' ಎಂದರೆ ಷಡ್ಗುಣಾಃ; ಭಗವಂತನ ಉಪಾಸನೆ ಮಾಡುವ ಆರು ಮೂಲ ಗುಣಗಳಾದ ಐಶ್ವರ್ಯ, ವೀರ್ಯ, ಯಶಸ್ಸು, ಸಂಪತ್ತು, ಜ್ಞಾನ ಹಾಗೂ ವೈರಾಗ್ಯ ಯಾರಲ್ಲಿ ಪೂರ್ಣವಾಗಿದೆಯೋ ಅವನು ವೃಷಃ. [ಇದು ಪೂರ್ಣವಾಗಿರುವುದು ಕೇವಲ ಭಗವಂತನಲ್ಲಿ ಮಾತ್ರ].

೨೧೪) ಕ್ರೋಧಹಾ

ಮನುಷ್ಯ ಕಾಮವನ್ನಾದರೂ ಗೆಲ್ಲಬಹುದು ಆದರೆ ಕ್ರೋಧವನ್ನು ಗೆಲ್ಲುವುದು ಅತೀ ಕಷ್ಟ. ಕ್ರೋಧ ನಮಗೆ ಇಷ್ಟವಿಲ್ಲದಿದ್ದರೂ ಕೂಡಾ ನಮ್ಮನ್ನು ಅಂಟಿಕೊಂಡಿರುತ್ತದೆ. ಈ ಸಮಸ್ಯೆ ಋಷಿ ಮುನಿಗಳನ್ನೂ ಬಿಟ್ಟಿಲ್ಲ. ಕಾಮವನ್ನು

ಗೆದ್ದ ವಿಶ್ವಾಮಿತ್ರರು ತನ್ನ ತಪಸ್ಸನ್ನು ಕೆಡಿಸಲು ಬಂದ ರಂಬೆಯ ಮೇಲೆ ಕೋಪಗೊಂಡು 'ಕಲ್ಲಾಗು' ಎಂದು ಶಾಪ ಕೊಟ್ಟು ಕ್ರೋಧದ ಬಲೆಗೆ ಬಿದ್ದ ಕಥೆ ನಮಗೆ ತಿಳಿದಿದೆ. ನಮ್ಮ ಕ್ರೋಧವನ್ನು ಭಗವಂತನೊಬ್ಬನೇ ಹರಣ ಮಾಡಬಲ್ಲ. ನಾವು ಕ್ರೋಧದಿಂದ ಮುಕ್ತಿ ಪಡೆಯಬೇಕಾದರೆ ಭಗವಂತನಲ್ಲಿ ಶರಣಾಗುವುದೊಂದೇ ನಮಗಿರುವ ಮಾರ್ಗ. ನಮ್ಮ ಕ್ರೋಧವನ್ನು ಕಳೆಯುವವ ಹಾಗೂ ಕ್ರೋಧದ ಪಡೆಯಾದ ರಾಕ್ಷಸರನ್ನು ಸಂಹಾರ ಮಾಡುವ ಭಗವಂತ ಕ್ರೋಧಹಾ.

೩೧೫) ಕ್ರೋಧಕೃತ್

ದುಷ್ಟ ಸಂಹಾರದಲ್ಲಿ ಭಗವಂತ ಸ್ವಯಂ ಕ್ರೋಧ ರೂಪಿ. ಭಗವಂತನ ನರಸಿಂಹ ಅವತಾರ ಆತನ ಕ್ರೋಧ ರೂಪದ ಒಂದು ಉದಾಹರಣೆ. ನಮಗೆ ಕೋಪವನ್ನು ಕೊಡುವವನು ಭಗವಂತನೇ! ಮಹಾತ್ಮರ ಕೋಪ ಮಹತ್ಕಾರ್ಯವಾಗಿ ಮಾರ್ಪಾಡಾಗುತ್ತದೆ. ಉದಾಹರಣೆಗೆ ಸನಕಾದಿಗಳು ಜಯ-ವಿಜಯರ ಮೇಲೆ ಕೋಪಗೊಂಡು ಶಾಪ ಕೊಟ್ಟ ಪರಿಣಾಮ ಭಗವಂತ ಭೂಮಿಯಲ್ಲಿ ಹಲವು ಅವತಾರವನ್ನು ತೊಟ್ಟು ಸಜ್ಜನರ ಉದ್ಧಾರ ಮಾಡುವಂತಾಯಿತು. ಹೀಗೆ ದುರ್ಜನರ ಮೇಲೆ ಕೋಪಗೊಳ್ಳುವ ಭಗವಂತ ಕ್ರೋಧಕೃತ್.

೩೧೬) ಕರ್ತಾ

ಕರ್ತಾ ಎಂದರೆ 'ಮಾಡುವವನು' ಅಥವಾ 'ಕತ್ತರಿಸುವವನು'. ಸೃಷ್ಟಿ ಕಾಲದಲ್ಲಿ ಎಲ್ಲವನ್ನೂ ಸೃಷ್ಟಿ 'ಮಾಡುವ' ಭಗವಂತ ಸಂಹಾರ ಕಾಲದಲ್ಲಿ ಎಲ್ಲವನ್ನೂ 'ಕತ್ತರಿಸುತ್ತಾನೆ'. ಹೀಗೆ ಯಾವ ಯಾವ ಕಾಲದಲ್ಲಿ ಏನೇನು ಆಗಬೇಕೋ ಅದನ್ನು 'ಮಾಡುವ' ಹಾಗೂ ಯಾವ ಕಾಲದಲ್ಲಿ ಯಾವುದು ಇರಬಾರದೋ ಅದನ್ನು 'ಕತ್ತರಿಸಿ' ತೆಗೆಯುವ ಭಗವಂತ ಕರ್ತಾ.

೩೧೭) ವಿಶ್ವಬಾಹುಃ

ಮೇಲ್ನೋಟಕ್ಕೆ ವಿಶ್ವಬಾಹು ಎನ್ನುವ ಪದ ಪರಿಪೂರ್ಣವಾದ ತೊಳು ಉಳ್ಳವನು ಎನ್ನುವ ಅರ್ಥವನ್ನು ಕೊಡುತ್ತದೆ. ಭಗವಂತ ಅನಂತ ಹಾಗೂ ಪರಿಪೂರ್ಣವಾದ ತೋಳುಗಳುಳ್ಳವನು. ಇಲ್ಲಿ ಅನಂತ ಎಂದರೆ ಪರಿಪೂರ್ಣವಾದ ಸ್ವರೂಪಭೂತವಾದ ತೋಳು. ಭಗವಂತ ಹಾಗೂ ಅವನ ತೋಳುಗಳು ಭಿನ್ನವಲ್ಲ. ಆತನಿಗೆ ಭೌತಿಕವಾದ ಅಂಗಾಂಗಗಳಿಲ್ಲ. ಆದರೆ ನಮಗೆ ಭೌತಿಕವಾದ ಎರಡು ಕೈಗಳಿವೆ; ನಮ್ಮೊಳಗಿರುವ ಸೂಕ್ಷ್ಮ ಶರೀರಕ್ಕೆ ಎರಡು ತೋಳುಗಳಿವೆ; ಅದರೊಳಗಿರುವ ಲಿಂಗ ಶರೀರಕ್ಕೆ ಕೂಡಾ ಎರಡು ತೋಳುಗಳು; ಲಿಂಗ ಶರೀರದೊಳಗಿರುವ ನಮ್ಮ ಜೀವ ಸ್ವರೂಪಕ್ಕೂ ಸಹ ಎರಡು ಭುಜಗಳು. ನಮ್ಮ ಭೌತಿಕ ಇಂದ್ರಿಯಗಳು ಶಾಶ್ವತವಲ್ಲ. ಆದರೆ ಸ್ವರೂಪಭೂತವಾದ ಇಂದ್ರಿಯ ಮೋಕ್ಷದಲ್ಲೂ ನಮ್ಮೊಂದಿಗಿರುತ್ತದೆ. ಭಗವಂತನ ಅನಂತ ಅವಯವಗಳು ಸ್ವರೂಪಭೂತವಾದದ್ದು ಹಾಗೂ ಪರಿಪೂರ್ಣವಾದದ್ದು. ಇಲ್ಲಿ ವಿಶ್ವಬಾಹು ಎಂದರೆ ಇಡೀ ವಿಶ್ವವನ್ನು ರಕ್ಷಣೆ ಮಾಡುವ ತೋಳು. ಪ್ರಾಣದೇವರ ಮುಖೇನ ಇಡೀ ವಿಶ್ವವನ್ನು ಧಾರಣೆ ಮಾಡಿದ ಭಗವಂತ ವಿಶ್ವಬಾಹುಃ.

೩೧೮) ಮಹೀಧರಃ

'ಮಹೀ' ಎಂದರೆ ಭೂಮಿ. ಭಗವಂತ ಇಡೀ ಜಗತ್ತನ್ನು ಧರಿಸಿರುವುದಷ್ಟೇ ಅಲ್ಲದೆ ಪ್ರತಿಯೊಂದು ವಸ್ತುವಿನೊಳಗಿದ್ದು ಅದನ್ನು ಪ್ರತ್ಯೇಕವಾಗಿ ಧರಿಸಿದ್ದಾನೆ. ಭೂಮಿಯೊಳಗಿದ್ದು ಭೂಮಿಯನ್ನು ಧರಿಸಿರುವ ಭಗವಂತ ಮಹೀಧರಃ. ಗಾಯತ್ರಿಯಲ್ಲಿ ನಾವು ಉಪಾಸನೆ ಮಾಡುವ ಭಗವಂತನ ಒಂದು ರೂಪ 'ಮಹೀರೂಪ'. ಸಮಸ್ತ ವಾಙ್ಮಯಗಳಿಗೆ ಕಾರಣನಾದ ವಾಕ್ ನಾಮಕ ಭಗವಂತನ ರೂಪ; ಪೃಥ್ವಿಯಲ್ಲಿರುವ ಪೃಥ್ವಿ ನಾಮಕ ಭಗವಂತನ ರೂಪ; ನಮ್ಮೊಳಗಿರುವ ಬಿಂಬರೂಪಿ ಭಗವಂತನ ರೂಪ; ಹಾಗೂ ಸೂರ್ಯಮಂಡಲದಲ್ಲಿ ಸನ್ನಿಹಿತನಾದ ಭಗವಂತನ

ರೂಪ- ಈ ಎಲ್ಲಾ ರೂಪವನ್ನು ಗಾಯತ್ರಿಯಲ್ಲಿ ಸ್ತ್ರೀ ಹಾಗೂ ಪುರುಷ ರೂಪದಲ್ಲಿ ಉಪಾಸನೆ ಮಾಡುತ್ತಾರೆ. ಹೀಗೆ ಗಾಯತ್ರಿ ಪ್ರತಿಪಾದ್ಯನಾದ, ತನ್ನ ಎದೆ ಹಾಗೂ ತೊಡೆಯಲ್ಲಿ ಲಕ್ಷ್ಮಿಯನ್ನು ಧರಿಸಿರುವ ಭಗವಂತ ಮಹೀಧರಃ

**ಅಚ್ಯುತಃ ಪ್ರಥಿತಃ ಪ್ರಾಣಃ ಪ್ರಾಣದೋ ವಾಸವಾನುಜಃ ।**
**ಅಪಾಂ ನಿಧಿರಧಿಷ್ಠಾನಮಪ್ರಮತ್ತಃ ಪ್ರತಿಷ್ಠಿತಃ ॥೪೮॥**

**೨೧೯) ಅಚ್ಯುತಃ**

ಭಗವಂತನ ಈ ನಾಮ ಸಹಸ್ರನಾಮದಲ್ಲಿ ಮೂರು ಬಾರಿ ಪುನರುಕ್ತಿಯಾಗಿದೆ (೧೦೦,೨೧೯ ಹಾಗೂ ೫೫೮). ನಮ್ಮಲ್ಲಿ ಯಾವುದೇ ಮಂತ್ರ-ಜಪ ಪಾರಾಯಣ ಮಾಡಿ ಮುಗಿಸಿದ ಮೇಲೆ ಸ್ವರ-ವರ್ಣದ ಲೋಪದ ಪ್ರಾಯಶ್ಚಿತಕ್ಕಾಗಿ ಹೇಳುವ ಪ್ರಾಯಶ್ಚಿತ ಮಂತ್ರದಲ್ಲಿನ ಮೂರು ನಾಮಗಳಲ್ಲಿ ಈ ನಾಮವೂ ಒಂದು. 'ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ ಅಚ್ಯುತಾನಂತ ಗೋವಿಂದೇಭ್ಯೋ ನಮಃ'. ಚ್ಯುತಿ ಇಲ್ಲದ ಅಚ್ಚುತ ನಾಮಕ ಭಗವಂತ ನಮ್ಮ ಸರ್ವಉಚ್ಚಾರ ದೋಷಹರ. ಇಷ್ಟೇ ಅಲ್ಲದೆ ಪುರಾಣದಲ್ಲಿ ವೇದವ್ಯಾಸರು ಹೇಳಿದಂತೆ :

"ಅಚ್ಯುತಾನಂತ ಗೋವಿಂದ ನಾಮೋಚ್ಚಾರಣ ಬೇಶಿತಾಃ ನಶ್ಯಂತಿ ಸಕಲಾಃ ರೋಗಾಃ ಸತ್ಯಂ-ಸತ್ಯಂವದಾಮ್ಯಹಂ" ಎಂದರೆ ಭಗವಂತನ ಈ ನಾಮೋಚ್ಚಾರಣೆಯಿಂದ ಸರ್ವ ರೋಗಗಳು ಹೆದರಿ ಬಿಟ್ಟೋಡುತ್ತವೆ-ಇದು ಸತ್ಯ. ಇದಕ್ಕಾಗಿ ನಮಗೆ ಭಗವಂತನಲ್ಲಿ ಅಗಾಧವಾದ ನಂಬಿಕೆ(Involvement) ಹಾಗೂ ಸ್ವೀಕರಿಸುವ ಸಾಮರ್ಥ್ಯ(Receiving Power) ಬೇಕು. ಪರಿಪೂರ್ಣನಾದ ಭಗವಂತ ಸರ್ವರೋಗಹರ. ಹೀಗೆ ಸ್ವಯಂ ಚ್ಯುತಿ ಇಲ್ಲದ, ಭಕ್ತರ ಚ್ಯುತಿಯನ್ನು ಹರಣ ಮಾಡುವ ಭಗವಂತ ಅಚ್ಯುತಃ

**೨೨೦) ಪ್ರಥಿತಃ**

ಪ್ರಥಿತಃ ಎಂದರೆ ವಿಖ್ಯಾತನಾದವನು. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಹೇಳುವಂತೆ:

**ಯಾಸ್ಮಾತ್ ಕ್ಷರಮತೀತೋऽऽಹಮಕ್ಷರಾದಪಿ ಚೋತ್ತಮಃ ।**
**ಅತೋऽऽಸ್ಮಿ ಲೊಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ (೮-೧೫ ಶ್ಲೋ-೧೮)**

ಅಂದರೆ "ನಾನು ಕ್ಷರವನ್ನು ಮೀರಿನಿಂತವನು. ಅಕ್ಷರಕ್ಕಿಂತಲೂ ಹಿರಿಯನು. ಅದಕ್ಕೆಂದೇ ಲೋಕದಲ್ಲೂ, ವೇದದಲ್ಲೂ 'ಪುರುಷೋತ್ತಮ' ಎಂದೇ ಹೆಸರಾಗಿದ್ದೇನೆ". ಹೀಗೆ ಸರ್ವ ಆತ್ಮಗಳಲ್ಲಿ ಶ್ರೇಷ್ಠ ಆತ್ಮ, ಸರ್ವ ವೇದವಾಚ್ಯ ಹಾಗೂ ಸರ್ವ ಶಬ್ದವಾಚ್ಯ ಭಗವಂತ ಪ್ರಥಿತಃ.

**೨೨೧) ಪ್ರಾಣಃ**

ಭಗವಂತ 'ಸರ್ವಪ್ರೇರಕ' ಶಕ್ತಿ. ಎಲ್ಲರ ಒಳಗಿದ್ದು ಎಲ್ಲರನ್ನೂ ಪ್ರೇರಣೆಮಾಡುವ, ಎಲ್ಲಾ ಚಲನೆಯನ್ನು ನಿಯಂತ್ರಿಸುವ ಶಕ್ತಿ. ಈ ಜಗತ್ತಿಗೆ ಮೊದಲು ಚಲನೆಯನ್ನು ಕೊಟ್ಟವ ಭಗವಂತ. ಈ ಹಿಂದೆ ಹೇಳಿದಂತೆ 'ಣ' ಬಲ ಹಾಗೂ ಆನಂದ ಎನ್ನುವ ಅರ್ಥವನ್ನು ಕೊಡುತ್ತದೆ. ಪರಿಪೂರ್ಣವಾದ ಆನಂದ ಹಾಗೂ ಬಲ ಸ್ವರೂಪ ಭಗವಂತ ಪ್ರಾಣಃ.

**೨೨೨) ಪ್ರಾಣದಃ**

ಪ್ರಾಣದಃ ಎಂದರೆ ಪ್ರಾಣವನ್ನು ಕೊಡುವವ. ಜಗತ್ತಿನ ನಿಯಾಮಕ ಶಕ್ತಿಯಾದ ಪ್ರಾಣನನ್ನು ನಮಗೆ ಕೊಟ್ಟವ. ಪ್ರಾಣನಿಗೆ ಉಪನಿಷತ್ತಿನಲ್ಲಿ 'ಪ್ರಾತಃ' ಎಂದಿದ್ದಾರೆ. ಅಂದರೆ ಭಗವಂತನ ಗುಣವನ್ನು ಬಿತ್ತರಿಸುವ ಶಕ್ತಿ. ಇಂತಹ ಜಗದ್ಗುರುವನ್ನು ಜಗತ್ತಿಗೆ ಕೊಟ್ಟ ಭಗವಂತ ಪ್ರಾಣದಃ.

**೨೨೩) ವಾಸವಾನುಜಃ**

ವಾಸವಾನುಜಃ ಎಂದರೆ ಇಂದ್ರನ ತಮ್ಮ ಎನ್ನುವುದು ಮೇಲ್ನೋಟಕ್ಕೆ ಕಾಣುವ ಅರ್ಥ. 'ವಾಸವ' ಎಂದರೆ ವಸುಗಳ ಸಮುದಾಯ. ಇಲ್ಲಿ ವಸುಗಳೆಂದರೆ ಅಷ್ಟವಸುಗಳಲ್ಲ-"ದೇವತೆಗಳ ಸಮುದಾಯ". ಬ್ರಹ್ಮಾಂಡದಲ್ಲಿದ್ದು ಬ್ರಹ್ಮಾಂಡವನ್ನು, ಪಿಂಡಾಂಡದಲ್ಲಿದ್ದು ಪಿಂಡಾಂಡವನ್ನು ನಿಯಂತ್ರಿಸುವ ತತ್ವಾಭಿಮಾನಿ ದೇವತೆಗಳ ನಿಯಾಮಕನಾದ ಭಗವಂತ ವಾಸವಃ. ಇಂತಹ ದೇವತೆಗಳು ಪ್ರಾರ್ಥನೆ ಮಾಡಿದಾಗ, ಪ್ರಾರ್ಥನೆಗನುಗುಣವಾಗಿ ಜ್ಞಾನಿಗಳ ಅನುಕೂಲಕ್ಕಾಗಿ ಭೂಮಿಯಲ್ಲಿ ಅವತರಿಸುವ ಭಗವಂತ ವಾಸವಾನುಜಃ

೩೨೪) ಅಪಾಂನಿಧಿಃ

ಅಪಾಂನಿಧಿಃ ಎಂದರೆ "ನೀರಿನ ನೆಲೆ". ನೀರಿನ ನೆಲೆಯಾದ ಕಡಲಿನಲ್ಲಿ, ಕಡಲಿನ ದೇವತೆಯಾದ ವರುಣನಲ್ಲಿ, ಸಮಸ್ತ ಜಲರಾಶಿಯಲ್ಲಿ ಸನ್ನಿಹಿತನಾದ ಭಗವಂತ ಅಪಾಂನಿಧಿಃ. 'ಆಪ್' ಎಂದರೆ ಪಾನ ಮಾಡುವ ವಸ್ತು. ನಾವು ಬದುಕುವುದಕ್ಕೋಸ್ಕರ ಪಾನ ಮಾಡುವ ವಸ್ತು 'ನೀರು'. ಜ್ಞಾನಿಗಳು ಸದಾ ಪಾನ(ಶ್ರವಣ) ಮಾಡುವ ವಸ್ತು ಭಗವಂತನ 'ಅನಂತ ಗುಣ'. ಅನಂತ ಗುಣಗಳ ನೆಲೆ ಭಗವಂತನೊಬ್ಬನೇ.

ನಾವು ಮಾಡುವ ಸತ್ಕರ್ಮ ಕೊನೆಗೆ ಸೇರುವುದು ಭಗವಂತನನ್ನು. ಇದಕ್ಕಾಗಿ ಪ್ರತೀ ಪೂಜೆಯ ಕೊನೆಗೆ "ಕೃಷ್ಣಾರ್ಪಣ ಮಸ್ತು" ಎನ್ನುತ್ತೇವೆ. ಆದ್ದರಿಂದ ಸರ್ವ ಸತ್ಕರ್ಮಗಳ ನೆಲೆ ಭಗವಂತ. ಹೀಗೆ ಕರ್ಮಗಳ, ಗುಣಗಳ, ದೇವತೆಗಳ ಹಾಗೂ ನೀರಿನ ನೆಲೆಯಾದ ಭಗವಂತ ಅಪಾಂನಿಧಿಃ.

೩೨೫) ಅಧಿಷ್ಠಾನಮ್

ಅಧಿಷ್ಠಾನಮ್ ಎಂದರೆ ಎಲ್ಲವುದಕ್ಕೂ ಆಧಾರ. ಪ್ರತಿಯೊಂದು ವಸ್ತುವಿನ ಮೂಲಾಧಾರ ಭಗವಂತ. ಭೂಮಿಯನ್ನು "ಶೇಷ" ಹೊತ್ತಿದ್ದಾನೆ. ಶೇಷನನ್ನು "ವಾಯು" ಹೊತ್ತಿದ್ದಾನೆ, ವಾಯುವಿಗೆ ಪೂರ್ಣಾಧಾರ ಭಗವಂತ. ಹೀಗೆ ವಿಶ್ವಕ್ಕೆ ಆಧಾರವಾದ, ಎಲ್ಲಕ್ಕೂ ಅಧಿಕವಾದ ಸ್ಥಾನದಲ್ಲಿರುವ ಭಗವಂತ ಅಧಿಷ್ಠಾನಮ್.

೩೨೬) ಅಪ್ರಮತ್ತಃ

ಅಪ್ರಮತ್ತಃ ಎಂದರೆ ಎಂದೂ ಎಚ್ಚರ ತಪ್ಪದವನು. ಭಗವಂತ ಎಂದೂ ಎಚ್ಚರ ತಪ್ಪುವುದಿಲ್ಲ, ಎಂದೂ ಪ್ರಮಾದ ಮಾಡುವುದಿಲ್ಲ. ಸದಾ ನಮ್ಮನ್ನು ಪ್ರಮಾದದಿಂದ ಪಾರುಮಾಡುವ ಭಗವಂತ ಗುಣಾತೀತ ಹಾಗೂ ಆನಂದಮಯ.

೩೨೭) ಪ್ರತಿಷ್ಠಿತಃ

ಭಗವಂತ ತನ್ನಲ್ಲೇ ತಾನು ನೆಲೆನಿಂತವನು; ಎಲ್ಲವೂ ಆತನಲ್ಲಿ ಪ್ರತಿಷ್ಠಿತ. ಪ್ರತಿಯೊಂದು ಜೀವರೊಳಗೂ ಭಗವಂತ ಬಿಂಬ ರೂಪದಲ್ಲಿ ಪ್ರತಿಷ್ಠಿತ. ನಮ್ಮೊಳಗೆ ನಮ್ಮ ಅಂತರ್ಯಾಮಿಯಾಗಿದ್ದು, ನಮ್ಮ ಸ್ವರೂಪದೊಳಗೆ ನಮ್ಮ ಬಿಂಬರೂಪನಾಗಿ ಅತ್ಯಂತ ಸಮೀಪದಲ್ಲಿರುವವನು ಆತ. ಹೀಗೆ ಪ್ರತಿಯೊಂದು ಜೀವರೊಳಗೆ ಅಂತರ್ಯಾಮಿಯಾಗಿ ಪ್ರತಿಷ್ಠಿತನಾಗಿರುವ ಭಗವಂತ ಪ್ರತಿಷ್ಠಿತಃ

**ಸ್ಕಂದಃ ಸ್ಕಂದಧರೋ ಧುರ್ಯೋ ವರದೋ ವಾಯುವಾಹನಃ ।**

**ವಾಸುದೇವೋ ಬೃಹದ್ಭಾನುರಾದಿದೇವಃ ಪುರಂದರಃ ॥೪೬॥**

೩೨೮) ಸ್ಕಂದಃ

ಶಿವ ಪುತ್ರನಾದ ಕಾರ್ತಿಕೇಯ, ಸುಬ್ರಹ್ಮಣ್ಯ ಅಥವಾ ಷಣ್ಮುಖನನ್ನು ಸ್ಕಂದ ಎಂದು ಕರೆಯುತ್ತಾರೆ. ಆದರೆ ಇದು ಈ ನಾಮದ ರೂಢಾರ್ಥ. ಸ್ಕಂದ ಎನ್ನುವ ಪದ ಚಲಿಸುವುದು, ಹೊರಹೊಮ್ಮುವುದು ಹಾಗೂ ಚಿಮ್ಮುವುದು ಎನ್ನುವ ಅನೇಕ ಅರ್ಥವನ್ನು ಕೊಡುತ್ತದೆ. ಯಾರ ನಾಭಿಯಿಂದ ಈ ಜಗತ್ತು ಹೊರಹೊಮ್ಮಿತೋ ಅವನು ಸ್ಕಂದಃ. ಈ ನಾಮವನ್ನು ಒಡೆದು ನೋಡಿದರೆ ಸ+ಕಂ+ದ; ಈ ಹಿಂದೆ ಹೇಳಿದಂತೆ 'ಸ' ಎಂದರೆ ಸಾರ ಅಥವಾ ಜ್ಞಾನ; 'ಕಂ'

ಎಂದರೆ ಆನಂದ; 'ದ' ಎಂದರೆ ಕೊಡುವವನು ಅಥವಾ ಕೊಡದೇ ಇರುವವನು. ಆದ್ದರಿಂದ ಸ್ಕಂದಃ ಎಂದರೆ ಸಾತ್ವಿಕರಿಗೆ ಸದಾ ಜ್ಞಾನಾನಂದವನ್ನು ಕೊಡುವವನು ಹಾಗೂ ದುಷ್ಟರನ್ನು ಜ್ಞಾನಾನಂದದಿಂದ ದೂರವಿರಿಸುವವನು.

೩೨೯) ಸ್ಕಂದಧರಃ

ಸ್ಕಂದಧರಃ ಎಂದರೆ ಸ್ಕಂದನನ್ನು ಧರಿಸಿದವನು. ಸ್ಕಂದ ಶಿವನಲ್ಲಿ 'ಷಣ್ಮುಖನಾಗಿ', ಚತುರ್ಮುಖನಲ್ಲಿ 'ಸನತ್ ಕುಮಾರನಾಗಿ', ಹಾಗೂ ವಿಷ್ಣುವಿನಲ್ಲಿ 'ಕಾಮನಾಗಿ' ಹುಟ್ಟಿದ. ಹೀಗೆ ಸ್ಕಂದನನ್ನು ಧರಿಸಿ ಆತನನ್ನು ಮಗನಾಗಿ ಪಡೆದ ಭಗವಂತ ಸ್ಕಂದಧರಃ. ಮೇಲೆ ಹೇಳಿದಂತೆ ಸ್ಕಂದ ಎಂದರೆ ಜ್ಞಾನಾನಂದವನ್ನು ಕೊಡುವವರು. ನಮಗೆ ಜ್ಞಾನಾನಂದದ ಅನುಭವವನ್ನು ಕೊಡುವವರು ನಮ್ಮ ಆತ್ಮಾಭಿಮಾನಿ ದೇವತೆಗಳಾದ ಚತುರ್ಮುಖ ಹಾಗೂ ಪ್ರಾಣ. ಈ ಜೀವಾಭಿಮಾನಿ ದೇವತೆಗಳನ್ನು ಧರಿಸಿದ ಭಗವಂತ ಸ್ಕಂದಧರಃ.

೩೩೦) ಧುರ್ಯಃ

ಧುರ್ಯ ಎಂದರೆ 'ಮುಂದಾಳು'. ಈ ಪ್ರಪಂಚದಲ್ಲಿನ ಪ್ರತಿಯೊಂದು ಪ್ರಾಣಿಸಂಕುಲದಲ್ಲಿ ಒಬ್ಬ ಮುಂದಾಳುವನ್ನು ಕಾಣುತ್ತೇವೆ. ಆನೆಗಳ ಗುಂಪಿನಲ್ಲಿ ಒಂದು ಆನೆ ಮುಂದಾಳಾಗಿರುತ್ತದೆ ಹಾಗೂ ಇತರ ಆನೆಗಳು ಅದನ್ನು ಅನುಸರಿಸುತ್ತವೆ. ಅದೇ ರೀತಿ ಮಂಗಗಳ ಗುಂಪನ್ನು ನೋಡಿದರೆ ಅಲ್ಲಿ ಒಂದು ಮುಂದಾಳು ಮಂಗ ತನ್ನ ತಂಡವನ್ನು ಮುನ್ನೆಡೆಸುವುದನ್ನು ಹಾಗೂ ಇತರೆ ಮಂಗಗಳು ಅದನ್ನು ಅನುಸರಿಸುವುದನ್ನು ಕಾಣುತ್ತೇವೆ. ವೈರಿಯನ್ನು ಸದೆಬಡಿಯುವಾಗ 'ಮುಂದಾಳು' ಎದೆಯೊಡ್ಡಿ ಹೋರಾಡಿದರೆ ಇತರರು ಆತನ ಅಪ್ಪಣೆಯಂತೆ ಹೋರಾಟ ಮಾಡುತ್ತಾರೆ. ಮಹಾಭಾರತ ಯುದ್ಧದಲ್ಲಿ ಭೀಮಾರ್ಜುನರು 'ಮುಂದಾಳಾಗಿದ್ದು' ಹೋರಾಟ ಮಾಡಿ ಧರ್ಮರಾಯನಿಗೆ ಜಯವನ್ನು ತಂದುಕೊಡುತ್ತಾರೆ; ಅರ್ಜುನನ ರಥದ 'ಧುರ್ಯ' ಸ್ವಯಂ ಶ್ರೀಕೃಷ್ಣನಾಗಿದ್ದ. ಹೀಗೆ ಭಗವಂತ ಪ್ರತಿಯೊಂದು ಮುಂದಾಳುವಿನಲ್ಲಿ 'ಧುರ್ಯ' ರೂಪನಾಗಿ ಸನ್ನಿಹಿತನಾಗಿರುತ್ತಾನೆ. ಪ್ರತಿಯೊಂದು ಮಹತ್ಕಾರ್ಯವನ್ನು ಮುಂದಾಳಾಗಿ ಮಾಡುವ ಹಾಗೂ ಮಾಡಿಸುವ ಭಗವಂತ ಧುರ್ಯಃ.

೩೩೧) ವರದಃ

ಭಗವಂತ ವರವನ್ನು ಕೊಡುವವನು ಹಾಗೂ ಅಯೋಗ್ಯರಿಗೆ ಸಿಕ್ಕ ವರವನ್ನು ನಾಶ ಮಾಡುವವನು. ಆತ ತನ್ನ ಯೋಗ್ಯ ಭಕ್ತರಿಗೆ ಅವರು ಬಯಸಿದ ವರವನ್ನು ಕೊಡುತ್ತಾನೆ, ಹಾಗೆಯೇ ಹಿರಣ್ಯಕಶಿಪುವಂತಹ ದುಷ್ಟರು ತಮಗೆ ಸಿಕ್ಕ ವರದ ದುರುಪಯೋಗ ಮಾಡಿದಾಗ ಅವರನ್ನು ನಾಶ ಮಾಡಿ ಭಕ್ತಕೋಟಿಯ ರಕ್ಷಣೆ ಮಾಡುತ್ತಾನೆ. ಹೀಗೆ ಭಕ್ತರು ಬಯಸಿದ್ದನ್ನೀಯುವ ಭಗವಂತ ವರದಃ.

೩೩೨) ವಾಯುವಾಹನಃ

ಪ್ರಾಣತತ್ವದ ತೇರನ್ನೇರಿದವನು ಹಾಗೂ ವಾಯುವಿನ ಸಾರಥ್ಯದಲ್ಲಿ ದೇಹದ ತೇರನ್ನೇರಿದ ಭಗವಂತ ವಾಯುವಾಹನಃ. ವಾಯುವನ್ನು ನಮ್ಮೊಳಗಿರಿಸಿ ನಮಗೆ ಬದುಕನ್ನು ಕೊಟ್ಟ ಭಗವಂತ ಸ್ವಯಂ ವಾಯುವಾಹನ. "ವಾಯು" ಎಂದರೆ ಇಡೀ ಜಗತ್ತನ್ನು ಹೆಣೆಯುವ ಶಕ್ತಿ. ಪಂಚಭೂತಗಳನ್ನು ನಿರ್ದಿಷ್ಟವಾಗಿ ಹೆಣೆದು ನಮಗೆ ಈ ದೇಹವನ್ನು ಭಗವಂತ ಕರುಣಿಸಿದ್ದಾನೆ. ಅದೇ ರೀತಿ ಈ ಬ್ರಹ್ಮಾಂಡವನ್ನು ನಿರ್ದಿಷ್ಟವಾಗಿ ಹೆಣೆದು ಜೋಡಿಸಿಟ್ಟಿದ್ದಾನೆ. ಜ್ಞಾನದಿಂದ ತುಂಬಿದ ಶಕ್ತಿಯಾಗಿ ಇಡೀ ಜಗತ್ತನ್ನು ಧರಿಸಿದ ಭಗವಂತನಿಗೆ ವಾಯುವಾಹನನೆಂಬುದು ಅನ್ವರ್ಥನಾಮ.

೩೩೩) ವಾಸುದೇವಃ

ಭಗವಂತನ ಈ ನಾಮ ವಿಷ್ಣು ಸಹಸ್ರನಾಮದಲ್ಲಿ ಮೂರು ಬಾರಿ ಪುನರುಕ್ತಿಯಾಗಿದೆ (೩೩೩, ೬೯೯ ಮತ್ತು ೭೧೩).

ಈ ನಾಮವನ್ನು ಈ ರೀತಿ ಒಡೆದು ಅರ್ಥೈಸಬಹುದು. ವ+ಅಸು+ದೇವ. ಹಿಂದೆ ಹೇಳಿದಂತೆ 'ವ' ಅಂದರೆ ಜ್ಞಾನ; 'ಅಸು' ಎಂದರೆ ಪ್ರೇರಕ; ದೇವ ಎಂದರೆ ಆಟ. ಜ್ಞಾನ ಸ್ವರೂಪನಾದ ಭಗವಂತನಿಗೆ ಇಡೀ ವಿಶ್ವವನ್ನು ನಿಯಂತ್ರಿಸುವುದು ಒಂದು ಕ್ರೀಡೆ!. ಇಡೀ ವಿಶ್ವದ ಸೃಷ್ಟಿ-ಸ್ಥಿತಿ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷ ಎಲ್ಲವೂ ಅವನಿಗೆ ಲೀಲಾಮಾತ್ರ. ಇದೇ ನಾಮವನ್ನು ಇನ್ನೊಂದು ರೀತಿಯಲ್ಲಿ ನೋಡಿದರೆ ವಾ+ಸು+ದೇ+ಅವ. ಇಲ್ಲಿ 'ವಾ' ಎಂದರೆ ಎಲ್ಲೆಡೆ ತುಂಬಿರುವವನು (ಸರ್ವಗತ-ಸರ್ವಜ್ಞ); 'ಸು' ಅಥವಾ 'ಸೂತೇ' ಎಂದರೆ ಎಲ್ಲವನ್ನೂ ಹೆತ್ತವನು (ಸರ್ವ ಸೃಷ್ಟಿಕರ್ತ); 'ದೇ' ಎಂದರೆ ಎಲ್ಲವನ್ನೂ ಕೊಡುವವನು(ಸರ್ವದಾತ); 'ಅವ' ಎಂದರೆ ಎಲ್ಲರ ರಕ್ಷಕ (ಸರ್ವರಕ್ಷಕ).

ವಸುದೇವ ಎಂದರೆ 'ಬೆಳಗುವ ಸಂಪತ್ತು', ಸಾತ್ವಿಕ ಮನಸ್ಸನ್ನು ಕೊಡುವ ಬೆಳಕು. ಕೇವಲ ಶುದ್ಧವಾದ ಸಾತ್ವಿಕ ಮನಸ್ಸಿಗೆ ಅಭಿವ್ಯಕ್ತವಾಗುವವ ವಾಸುದೇವ. ಅಷ್ಟವಸುಗಳಲ್ಲಿ ಪ್ರಧಾನನಾದ ಅಗ್ನಿ ಪ್ರತೀಕದಲ್ಲಿ ಉಪಾಸ್ಯನಾದವ ಹಾಗೂ ಎಲ್ಲೆಡೆ ನೆಲೆಸಿ ಎಲ್ಲವನ್ನೂ ಆವರಿಸಿ ವಿಹರಿಸುವ ಭಗವಂತ ವಾಸುದೇವಃ.

೨೨೪) ಬೃಹದ್ಭಾನುಃ

ಈ ಜಗತ್ತಿನಲ್ಲಿ ಇರುವ ಎಲ್ಲಾ ಬೃಹತ್ತಾದ ಬೆಳಕುಗಳನ್ನು ಬೆಳಗಿಸುವವ ಬೃಹದ್ಭಾನು. ಹೊರಪ್ರಪಂಚದಲ್ಲಿ ಹಾಗೂ ನಮ್ಮೊಳಗೆ ಐದು ಪ್ರಮುಖವಾದ ಬೆಳಕುಗಳಿವೆ. (೧) ಮನುಷ್ಯನ ಕಣ್ಣಿಗೆ ಗೋಚರವಾಗುವ ಅತಿದೊಡ್ಡ ಬೆಳಕು ಸೂರ್ಯ. ಆತನೇ ನಮ್ಮ ಕಣ್ಣಿನ ಅಭಿಮಾನಿ ದೇವತೆ. (೨) ತಂಪಾದ ಆಹ್ಲಾದಕರ ಬೆಳದಿಂಗಳನ್ನೀಯುವ ಹಾಗೂ ನಮ್ಮ ಕಿವಿಯ ಅಭಿಮಾನಿ ದೇವತೆ ಚಂದ್ರ. (೩) ಭೂಮಿಯಲ್ಲಿರುವ ಅತ್ಯಂತ ಮಹತ್ತಾದ ಬೆಳಕು ಹಾಗೂ ನಮ್ಮ ಬಾಯಿಯ ಅಭಿಮಾನಿ ದೇವತೆ ಬೆಂಕಿ. (೪) ಚಂದ್ರನ ಸುತ್ತಲೂ ಇರುವ ನಕ್ಷತ್ರಗಳು.

ನಾವು ನಮ್ಮ ಕಣ್ಣಿನಿಂದ ನೋಡುವುದರಿಂದ, ಕಿವಿಯಿಂದ ಕೇಳುವುದರಿಂದ ಹಾಗೂ ಬಾಯಿಯಿಂದ ಜ್ಞಾನವನ್ನು ಇನ್ನೊಬ್ಬರಿಗೆ ಹೇಳುವುದರಿಂದ ನಮ್ಮೊಳಗೆ ತಿಳುವಳಿಕೆಯ ನಕ್ಷತ್ರಗಳು ಬೆಳಗುತ್ತವೆ. ಹೀಗೆ ಜ್ಞಾನ ವೃದ್ಧಿಯಾಗಿ ನಮ್ಮಲ್ಲಿ ಅತ್ಯಂತ ಪ್ರಮುಖವಾದ ಐದನೇ ಬೆಳಕು ಚಿಮ್ಮುತ್ತದೆ. (೫) ಈ ಐದನೇ ಅತ್ಯಂತ ಪ್ರಮುಖ ಬೆಳಕು 'ಮಿಂಚು'. ಅದೇ ನಮ್ಮೊಳಗಿನ ಸತ್ಯದ ಸ್ಫುರಣ. ಹೀಗೆ ನಮ್ಮಲ್ಲಿನ ಕಣ್ಣು, ಕಿವಿ, ಬಾಯಿ, ಮನೋವೃತ್ತಿ ಮತ್ತು ಅಂತಃಸ್ಫುರಣ ಹಾಗೂ ಹೊರಗಿನ ಸೂರ್ಯ, ಚಂದ್ರ, ಅಗ್ನಿ, ನಕ್ಷತ್ರ ಮತ್ತು ಮಿಂಚನ್ನು ಬೆಳಗುವ ಭಗವಂತ ಬೃಹದ್ಭಾನುಃ.

೨೨೫) ಆದಿದೇವಃ

ಸೃಷ್ಟಿಯ ಪೂರ್ವದಲ್ಲಿದ್ದವ, ಆದಿತ್ಯನೊಳಗೆ ಅಂತರ್ಯಾಮಿಯಾಗಿದ್ದು ಬೆಳಗುವ ಹಾಗೂ ಎಲ್ಲಕ್ಕೂ ಮೂಲಕಾರಣನಾದ ಭಗವಂತ ಆದಿದೇವಃ.

೨೨೬) ಪುರಂದರಃ

ಚತುರ್ಮುಖನ ಪುರ ಈ ಬ್ರಹ್ಮಾಂಡವಾದರೆ ನಮ್ಮ ಪುರ ಈ ನಮ್ಮ ದೇಹ. ಪ್ರಳಯ ಕಾಲದಲ್ಲಿ ಈ ಬ್ರಹ್ಮಾಂಡವನ್ನು ಭೇದಿಸುವವನು; ನಮ್ಮ ಗತಿಗನುಗುಣವಾಗಿ ನಮ್ಮ ಶರೀರವೆಂಬ ಪುರವನ್ನು ಭೇದಿಸುವವನು; ಮೋಕ್ಷ ಯೋಗ್ಯರ ಸೂಕ್ಷ್ಮ ಶರೀರವನ್ನೂ ಭೇದಿಸಿ ನಮ್ಮ ಸ್ವರೂಪ ರೂಪಿ ಆತ್ಮವನ್ನು ಧಾರಣೆ ಮಾಡುವವನು; ಶತ್ರುಗಳ ಪುರವನ್ನು ಪುಡಿಗಟ್ಟುವ ಭಗವಂತ ಪುರಂದರಃ.

**ಅಶೋಕಸ್ತಾರಣಸ್ತಾರಃ ಶೂರಃ ಶೌರಿರ್ಜನೇಶ್ವರಃ ।**
**ಅನುಕೂಲಃ ಶತಾವರ್ತಃ ಪದ್ಮೀ ಪದ್ಮನಿಭೇಕ್ಷಣಃ ॥೫೦ ॥**

೨೨೭) ಅಶೋಕಃ

ಅ+ಶೋಕ; ಅಂದರೆ ದುಃಖವಿಲ್ಲದವನು ಹಾಗೂ ದುಃಖವಿಲ್ಲದಂತೆ ಮಾಡುವವನು. ಭಗವಂತನಿಗೆ ಸೃಷ್ಟಿಯಲ್ಲಾಗಲೀ-ಸಂಹಾರದಲ್ಲಾಗಲೀ, ಹುಟ್ಟಿನಲ್ಲಾಗಲೀ-ಸಾವಿನಲ್ಲಾಗಲೀ ಯಾವುದೇ ರೀತಿಯ ಮೋಹವಿಲ್ಲ. ಆತ ಎಲ್ಲಾ ಮೋಹ ಪಾಶಗಳಿಂದ ಮುಕ್ತನಾದ ವಿರಕ್ತ. ರೈತ ಗಿಡಗಳನ್ನು ನೆಟ್ಟು ಪೋಷಿಸಿ ಬೆಳೆಸಿ ಕೊನೆಗೆ ಹೇಗೆ ಕತ್ತರಿಸುತ್ತಾನೋ ಅದೇ ರೀತಿ ಭಗವಂತನ ಸೃಷ್ಟಿ ಹಾಗೂ ಸಂಹಾರ ಕ್ರಿಯೆ. ಇಲ್ಲಿ ದುಃಖಕ್ಕೆ ಎಡೆಯಿಲ್ಲ. ಒಂದು ಪುಟ್ಟ ಮಗು ಹುಟ್ಟು ಹಾಗೂ ಸಾವನ್ನು ಹೇಗೆ ಸಮನಾಗಿ ಕಾಣುತ್ತದೋ ಹಾಗೆ. ಈ ರೀತಿ ಶೋಕ ರಹಿತನಾದ ಭಗವಂತ ಅಶೋಕಃ.

೩೩೮) ತಾರಣಃ

ಭಗವಂತ ಈ ಸಂಸಾರದ ಬಂಧನದ ಕಡಲೆಂಬ ತಾಪತ್ರಯಗಳಿಂದ ನಮ್ಮನ್ನು ಪಾರುಮಾಡುವ ತಾರಣಃ.

೩೩೯) ತಾರಃ

ಸರ್ವ ತಾರಕವಾದ; ಬ್ರಹ್ಮಾದಿ ದೇವತೆಗಳು ತಮ್ಮ ಉದ್ಧಾರಕ್ಕೋಸ್ಕರ ಜಪಿಸುವ 'ಓಂಕಾರ' ಪ್ರತಿಪಾದ್ಯನಾದ ಭಗವಂತ ತಾರಃ.

೩೪೦) ಶೂರಃ

ಈ ಜಗತ್ತಿನಲ್ಲಿ ಯಾರಲ್ಲಿ ಏನೇನು ಪರಾಕ್ರಮವಿದೆ, ಪೌರುಷವಿದೆ, ಅದೆಲ್ಲವೂ ಭಗವಂತನ ಕೊಡುಗೆ. ನಿಜವಾದ ಶೂರ ಭಗವಂತ. ಒಂದು ಶಕ್ತಿಯಾಗಿ ಭಗವಂತ ನಮ್ಮೊಳಗೆ ತುಂಬಿದರೆ ಮಾತ್ರ ಶತ್ರುಗಳನ್ನು ಗೆದೆಯುವ ಸಾಮರ್ಥ್ಯ ನಮಗೆ ಬರುತ್ತದೆ. 'ಶೂ' ಎಂದರೆ ಆನಂದವುಳ್ಳವರು ಅಥವಾ ಮುಕ್ತರು. ಮುಕ್ತರನ್ನು ಸ್ವೀಕರಿಸಿ ತನ್ನ ಬಳಿಯಲ್ಲಿರಿಕೊಂಡು ನಿತ್ಯಾನಂದವನ್ನು ಕೊಡುವ ಭಗವಂತ ಶೂರಃ.

೩೪೧) ಶೌರಿಃ

ವಸುದೇವನ ತಂದೆ ಶೂರಸೇನ; ಭಗವಂತ ತನ್ನ ಕೃಷ್ಣಾವತಾರದಲ್ಲಿ ಈ ವಂಶದಲ್ಲಿ ಅವತರಿಸಿದ್ದರಿಂದ ಆತನನ್ನು ಶೌರಿ ಎನ್ನುತ್ತಾರೆ. ಆದರೆ ಇದು ಮೇಲ್ನೋಟದ ಅರ್ಥ. ಶೌರಿ ಎಂದರೆ ಶೂರರಲ್ಲಿ ಇರುವವನು. ಗೀತೆಯಲ್ಲಿ ಹೇಳುವಂತೆ:

ಯದ್ಯದ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।

ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ (ಅ-೧೦, ಶ್ಲೋ-೪೧)

"ಎಲ್ಲಿ ಯಾರಲ್ಲಿ ವಿಶಿಷ್ಟ ಶಕ್ತಿಯಿದೆ, ಆ ಶಕ್ತಿಯಲ್ಲಿ ನಾನೇ ಅಡಗಿದ್ದೇನೆ; ನನ್ನ ತೇಜಸ್ಸಿನ ಕಿಡಿ ಆತನ ಶೌರ್ಯವಾಗಿ ಮೂಡಿಬರುತ್ತದೆ" ಎಂಬ ಕೃಷ್ಣನ ಈ ನುಡಿ ಆತನ ಈ ನಾಮವನ್ನು ನೆನಪಿಸುತ್ತದೆ. ಪುರಾಣದಲ್ಲಿ ಕಾಣುವ ಪ್ರತಿಯೊಬ್ಬ ಶೂರರ ಶೌರ್ಯಕ್ಕೆ ಅವರೊಳಗೆ ಕುಳಿತ 'ಶೌರಿ' ನಾಮಕ ಭಗವಂತನ ವಿಭೂತಿ ಮೂಲ ಕಾರಣ.

೩೪೨) ಜನೇಶ್ವರಃ

ಭಗವಂತ ಬರೀ ಶೂರರಲ್ಲಿ ಮಾತ್ರವಲ್ಲ, ಈ ಜಗತ್ತಿನಲ್ಲಿ ಜನಿಸುವ ಎಲ್ಲಾ ಜೀವಜಾತದೊಳಗೆ ತುಂಬಿರುವ ಈಶ್ವರ(ನಿಯಾಮಕ ಶಕ್ತಿ). ಈ ಭೂಮಿಯಲ್ಲಿ ಜನಿಸುವ ಪ್ರತಿಯೊಂದು ವಸ್ತುವಿನೊಳಗೆ ಭಗವಂತ ನಿಯಾಮಕ ಶಕ್ತಿಯಾಗಿ ತುಂಬಿದ್ದಾನೆ. ಈ ಜಗತ್ತಿನಲ್ಲಿ ಹುಟ್ಟುವ ಒಂದು ಹುಲ್ಲುಕಡ್ಡಿ ಕೂಡಾ ವ್ಯರ್ಥವಲ್ಲ, ಅದರಲ್ಲಿ ಭಗವಂತನ ವಿಶಿಷ್ಟ ಶಕ್ತಿ ವಿಭೂತಿಯಾಗಿ ಅಡಗಿರುತ್ತದೆ.

ಉದಾಹರಣೆಗೆ :

(೧)ದರ್ಬೆ: ಮೇಲ್ನೋಟಕ್ಕೆ ವ್ಯರ್ಥವಾಗಿ ಬೆಳೆಯುವ ಹುಲ್ಲು; ಆದರೆ ವಾತಾವರಣದಲ್ಲಿರುವ ದುಷ್ಟಶಕ್ತಿಯನ್ನು ನಿಯಂತ್ರಿಸುವ ಅಮೋಘ ಶಕ್ತಿ ದರ್ಬೆಗಿದೆ. ಅದಕ್ಕಾಗಿ ಯಜ್ಞ-ಯಾಗದಿಗಳಲ್ಲಿ ದರ್ಬೆಯನ್ನು ಉಂಗುರವಾಗಿ ಧರಿಸುತ್ತಾರೆ ಹಾಗೂ ದುಷ್ಟ ಶಕ್ತಿ ನಿಯಂತ್ರಕವಾಗಿ ಯಜ್ಞಕುಂಡದ ಸುತ್ತಲೂ ಇಡುತ್ತಾರೆ.

(೨)ಅಶ್ವತ್ಥಮರ: ಮರಗಳಲ್ಲಿ ಅತ್ಯಂತ ಹೆಚ್ಚು ಆಮ್ಲಜನಕ(Oxygen) ಕೊಡುವ ವೃಕ್ಷ ಅಶ್ವತ್ಥ. [ಇದಕ್ಕಾಗಿ ಈ ಮರವನ್ನು ಸುತ್ತುವುದರಿಂದ ಸ್ತ್ರೀಯರ ಗರ್ಭಕೋಶ ಸ್ವಚ್ಚವಾಗಿ ತಾಯ್ತನದ ಭಾಗ್ಯ ಬರುತ್ತದೆ ಎನ್ನುವ ನಂಬಿಕೆ ಜನರಲ್ಲಿದೆ-ಇಂದು ಇದನ್ನು ವಿಜ್ಞಾನ ಕೂಡಾ ಒಪ್ಪಿದೆ].

(೩)ಮುಟ್ಟಿದರೆ ಮುನಿ ಗಿಡ (Touch me not):- ಯಾರಿಗೂ ಬೇಡವಾಗಿ ಬೆಳೆಯುವ ಈ ಗಿಡದಲ್ಲಿ ಅಮೋಘವಾದ ಔಷಧೀಯ ಗುಣವಿದೆ. ಈ ಗಿಡವನ್ನು (ಹೂ ರಹಿತ) ಜಜ್ಜಿ ಬಟ್ಟೆಯಲ್ಲಿ ಕಟ್ಟಿ ಗಂಜಿಯೊಂದಿಗೆ ಬೇಯಿಸಿ ತಿಂದರೆ ಅಥವಾ ಕಷಾಯಮಾಡಿ ಕುಡಿದರೆ, ಯಾವುದೇ ಶಸ್ತ್ರಚಿಕಿತ್ಸೆ ಇಲ್ಲದೆ ಮೂಲವ್ಯಾದಿ(Piles) ಗುಣಮುಖವಾಗುತ್ತದೆ.

ಹೀಗೆ ಈ ಪ್ರಪಂಚದಲ್ಲಿ ಏನೇನು ಹುಟ್ಟಿದೆಯೋ ಅದರೊಳಗೆ ವಿಶಿಷ್ಟ ಶಕ್ತಿಯಾಗಿ ತುಂಬಿರುವ ನಿಯಾಮಕ ಶಕ್ತಿ ಭಗವಂತ ಜನೇಶ್ವರಃ.

೩೪೩) ಅನುಕೂಲಃ

ಭಗವಂತ ಎಂದೂ ಯಾರಿಗೂ ಪ್ರತಿಕೂಲ ಅಲ್ಲ. ನಾವು ಕೆಲವೊಮ್ಮೆ ಹೇಳುವುದಿದೆ: "ಜೀವನದಲ್ಲಿ ನಾನು ಎಂದೂ ಯಾರಿಗೂ ಕೆಟ್ಟದ್ದನ್ನು ಮಾಡಿಲ್ಲ, ಆದರೆ ಭಗವಂತ ನನಗೆ ಇಂತಹ ಕಷ್ಟ ಕೊಟ್ಟ; ಅವನು ಅನುಗ್ರಹಿಸಲಿಲ್ಲ; ಆತನನ್ನು ಪೂಜಿಸುವುದು ವ್ಯರ್ಥ.." ಇತ್ಯಾದಿ. ಆದರೆ ನಮಗೆ ಪ್ರತಿಕೂಲ ದೇವರಲ್ಲ. ಎಲ್ಲವುದಕ್ಕೂ ಮೂಲ ಕಾರಣ ನಾವು ನಮ್ಮ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮ!

ವೇದದಲ್ಲಿ ಭಗವಂತನನ್ನು "ಅಗ್ನಿಮೀಳೇ ಪುರೋಹಿತಂ" ಎನ್ನುತ್ತಾರೆ. ಇಲ್ಲಿ ಪುರೋಹಿತಂ ಎಂದರೆ ಮೊದಲೇ ನಮ್ಮ ಹಿತದ ದಾರಿಯನ್ನು ತಿಳಿದು, ಅದಕ್ಕೆ ತಕ್ಕಂತೆ ನಮ್ಮನ್ನು ನಡೆಸುವ ಶಕ್ತಿ. ಭಗವಂತನಿಗೆ ಯಾರ ಮೇಲೂ ದ್ವೇಷವಿಲ್ಲ. ಆತ ಅವರವರ ಜೀವಸ್ವರೂಪಕ್ಕೆ ಸಂಬಂಧಪಟ್ಟ ಯೋಗ್ಯತೆ ಏನಿದೆ ಅದಕ್ಕೆ ತಕ್ಕಂತೆ ಕ್ರಿಯೆ ಏನಾಗುತ್ತದೋ ಅದನ್ನು ಮಾಡಿಸುತ್ತಾನೆ. ಎಷ್ಟೋ ಸಲ ನಮಗೆ ಜೀವನದಲ್ಲಿ ಕಷ್ಟಬಂದಾಗ, ಅಥವಾ ನಾವು ಹಿಡಿದ ಕಾರ್ಯ ವಿಫಲವಾದಾಗ, "ಭಗವಂತ ನಮಗೆ ಕೆಟ್ಟದ್ದನ್ನು ಮಾಡಿದ" ಎಂದುಕೊಳ್ಳುತ್ತೇವೆ. ಆದರೆ ನಮ್ಮ ಕಷ್ಟದ ಹಿಂದೆ ನಮ್ಮ ಉದ್ಧಾರದ ಬೀಜವಿರುತ್ತದೆ ಎನ್ನುವ ವಿಷಯ ನಮಗೆ ತಿಳಿದಿರುವುದಿಲ್ಲ. ಶಾಲೆಯಲ್ಲಿ ಅಧ್ಯಾಪಕರು ವಿದ್ಯಾರ್ಥಿಗೆ ಕೊಡುವ ಶಿಕ್ಷೆ, ತಂದೆ-ತಾಯಿ ಮಗುವಿಗೆ ಕೊಡುವ ಶಿಕ್ಷೆ- ಮಗುವಿನ ಉದ್ಧಾರಕ್ಕಾಗಿಯೇ ಹೊರತು ಇನ್ಯಾವುದೋ ದ್ವೇಷದಿಂದಲ್ಲ. ಭಗವಂತ ಕೊಡುವ ಕಷ್ಟದಲ್ಲಿ ನಮ್ಮನ್ನು ತಿದ್ದುವ ಕಾರುಣ್ಯವಿದೆ ಹಾಗೂ ನಮ್ಮ ಉದ್ಧಾರದ ರಹಸ್ಯ ಅಡಗಿದೆ. ಸಜ್ಜನರಿಗೆ ಆತ ಎಂದೂ ಪ್ರತಿಕೂಲ ಅಲ್ಲ. ಆತ ಎಂದೆಂದೂ ಎಲ್ಲರಿಗೂ ಅನುಕೂಲ.

೩೪೪) ಶತಾವರ್ತಃ

ಇಲ್ಲಿ ಆವರ್ತ ಎಂದರೆ ಅವತರಣ. ಭಗವಂತ ಶತಾವರ್ತ. ಅಂದರೆ ನೂರಾರು ಬಾರಿ ನಮಗಾಗಿ ಭೂಮಿಯಲ್ಲಿ ಇಳಿದು ಬಂದವ. ರಾಮನಾಗಿ, ಕೃಷ್ಣನಾಗಿ, ಬುದ್ಧನಾಗಿ, ಪರಶುರಾಮನಾಗಿ, ವಾಮನನಾಗಿ, ನರಸಿಂಹನಾಗಿ, ವರಾಹನಾಗಿ, ಮತ್ಸ್ಯನಾಗಿ, ಕೂರ್ಮನಾಗಿ, ಕಪಿಲನಾಗಿ, ದತ್ತಾತ್ರಯನಾಗಿ, ವ್ಯಾಸನಾಗಿ, ಹೀಗೆ ನೂರಾರು ಅವತಾರ ರೂಪದಲ್ಲಿ ಭಗವಂತ ಭೂಮಿಗೆ ಇಳಿದು ಬಂದಿದ್ದಾನೆ. ಕೇವಲ ರಾವಣನನ್ನು ಕೊಲ್ಲಲು ಭಗವಂತ ಅವತಾರವೆತ್ತಬೇಕಿರಲಿಲ್ಲ. ಆತನ ಅವತಾರದ ಹಿಂದೆ ಅನೇಕ ರಹಸ್ಯವಡಗಿದೆ. ನಾವು ಆತನನ್ನು ನೋಡುವಷ್ಟು ಎತ್ತರಕ್ಕೆ ಏರಲು ಆಗದಿದ್ದಾಗ ಆತ ಸ್ವಯಂ ಭೂಮಿ ಮೇಲೆ ಅವತಾರವೆತ್ತುತ್ತಾನೆ ಅಥವಾ ಸಿದ್ಧ ಜ್ಞಾನಿಗಳನ್ನು ನಮ್ಮ ಉದ್ಧಾರಕ್ಕಾಗಿ

ಕಳುಹಿಸುತ್ತಾನೆ. ಇಂತಹ ಭಗವಂತನ ವರ್ತನೆ ಅನೇಕ ಹಾಗೂ ತಿಳಿದುಕೊಳ್ಳುವುದು ಕಷ್ಟ. ಭಗವಂತನ ವರ್ತನೆಯನ್ನು ಸಾಮಾನ್ಯ ಮನುಷ್ಯನೊಂದಿಗೆ ಹೋಲಿಸಲಾಗದು. ಆತನ ವರ್ತನೆಯ ಹಿಂದೆ ಒಂದು ಮಹತ್ತಾದ ಸಂದೇಶವಿರುತ್ತದೆ. ಹೀಗೆ ನೂರಾರು ಬಾರಿ ಅವತರಿಸುವ, ವಿಶಿಷ್ಟವಾದ ವರ್ತನೆಯುಳ್ಳ ಹಾಗೂ ಸಂಸಾರದಲ್ಲಿರುವ ಲೆಕ್ಕವಿಲ್ಲದಷ್ಟು ಸುಳಿಯನ್ನು ನಿಯಂತ್ರಿಸುವ ಭಗವಂತ ಶತಾವರ್ತಃ

೩೪೫) ಪದ್ಮೀ

ಪದ್ಮೀ ಎಂದರೆ ತಾವರೆಯನ್ನು ಕೈಯಲ್ಲಿ ಹಿಡಿದವನು. ನಾವು ಸಹಸ್ರಬಾಹು ಭಗವಂತನನ್ನು ನಾಲ್ಕು ಕೈಗಳ ಮೂರ್ತಿಯಾಗಿ ಉಪಾಸನೆ ಮಾಡುತ್ತೇವೆ. ಈ ನಾಲ್ಕು ಕೈಗಳು ನಾಲ್ಕು ಪುರುಷಾರ್ಥಕದ ಸಂಕೇತ. ನಾಲ್ಕು ಕೈಗಳಲ್ಲಿ ಹಿಡಿದಿರುವ ಚಕ್ರ, ಶಂಖ, ಗದಾ ಹಾಗೂ ಪದ್ಮ ಕ್ರಮವಾಗಿ ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷದ ಸಂಕೇತ. ಈ ಕಾರಣಕ್ಕಾಗಿ ಮೋಕ್ಷಪ್ರದನಾದ ಭಗವಂತನನ್ನು ಪದ್ಮೀ ಎಂದು ಸಂಬೋಧಿಸುತ್ತಾರೆ. ಇಷ್ಟೇ ಅಲ್ಲದೆ ಜಗತ್ತಿನ ಮೂಲ ಪ್ರಕೃತಿಯಾದ ಲಕ್ಷ್ಮಿಯನ್ನು ಪದ್ಮಾ ಎಂದೂ ಹಾಗೂ ಚತುರ್ಮುಖ ಬ್ರಹ್ಮನನ್ನು ಕೂಡಾ ಪದ್ಮಾ ಎಂದು ಕರೆಯುತ್ತಾರೆ. ಲಕ್ಷ್ಮೀಪತಿಯಾದ ಭಗವಂತ ಪದ್ಮೀ; ಜಗತ್ತಿನ ಮೂಲಸೃಷ್ಟನಾದ ಚತುರ್ಮುಖನ ತಂದೆ ಪದ್ಮೀ. ಈ ರೀತಿ ಮೋಕ್ಷಪ್ರದನಾಗಿ ಕೈಯಲ್ಲಿ ತಾವರೆ ಹಿಡಿದಿರುವ, ಜಗತ್ತಿನ ಮೂಲಶಕ್ತಿಯಾದ ಪ್ರಕೃತಿಯ ಸ್ವಾಮಿ ಹಾಗೂ ಚತುರ್ಮುಖನ ತಂದೆ ಭಗವಂತ ಪದ್ಮೀ.

೩೪೬) ಪದ್ಮನಿಭೇಕ್ಷಣಃ

ಪದ್ಮನಿಭೇಕ್ಷಣ ಎಂದರೆ ತಾವರೆಯ ಎಸಳಿನಂತೆ ಕಣ್ಣುಳ್ಳವ. ಇಲ್ಲಿ ತಾವರೆಯ ಎಸಳು 'ಅನುಗ್ರಹವನ್ನು' ಸಂಕೇತಿಸುವ ಉಪಮಾನ. 'ದೇವರು ಕಣ್ಣುಬಿಟ್ಟ' ಎಂದರೆ ಭಗವಂತ ಅನುಗ್ರಹಿಸಿದ ಎಂದರ್ಥ. ತಾವರೆಯ ಎಸಳು ಏನನ್ನೂ ಅಂಟಿಸಿಕೊಳ್ಳುವುದಿಲ್ಲ. ಅದೇ ರೀತಿ ಏನನ್ನೂ ಅಂಟಿಸಿಕೊಳ್ಳದ ನಿರ್ಲಿಪ್ತ ಹಾಗೂ ಕಾರುಣ್ಯದ ಅರಳುಗಣ್ಣಿನ ಭಗವಂತ ಪದ್ಮನಿಭೇಕ್ಷಣಃ

ಪದ್ಮನಾಭೋರವಿಂದಾಕ್ಷಃ ಪದ್ಮಗರ್ಭಃ ಶರೀರಭೃತ್ ।
ಮಹರ್ದ್ಧಿರೃದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ ॥೫೧॥

೩೪೭) ಪದ್ಮನಾಭಃ

ಸೃಷ್ಟಿಯ ಮೊದಲು ಪ್ರಳಯ ಕಾಲದಲ್ಲಿ ಈ ಬ್ರಹ್ಮಾಂಡ ಸಂಪೂರ್ಣವಾಗಿ ಭಗವಂತನೊಳಗೆ ಸೇರಿರುತ್ತದೆ. ಸೃಷ್ಟಿಕಾಲದಲ್ಲಿ ಅದು ಭಗವಂತನ ನಾಭಿಯಿಂದ ಕಮಲರೂಪದಲ್ಲಿ ಹೊರಬರುತ್ತದೆ. ಈ ಬ್ರಹ್ಮಾಂಡ ಅಂಡ ರೂಪದಲ್ಲಿ ಅಥವಾ ಕಮಲದ ಮೊಗ್ಗಿನ ರೂಪದಲ್ಲಿ ಸೃಷ್ಟಿಯಾಗುತ್ತದೆ. ಈ ಕಮಲ ರೂಪಿ ಬ್ರಹ್ಮಾಂಡದಲ್ಲಿ ಹದಿನಾಲ್ಕು ಎಸಳುಗಳಿರುತ್ತವೆ-ಅವೇ ಹದಿನಾಲ್ಕು ಲೋಕಗಳು. ಹೀಗೆ ತನ್ನ ನಾಭಿಯಿಂದ ಕಮಲರೂಪಿ ಬ್ರಹ್ಮಾಂಡ ಸೃಷ್ಟಿ ಮಾಡುವ ಭಗವಂತ ಪದ್ಮನಾಭಃ.

೩೪೮) ಅರವಿಂದಾಕ್ಷಃ

ಅರವಿಂದ ಎಂದರೆ ದಳಗಳು. ಮೇಲೆ ಹೇಳಿದಂತೆ ಭಗವಂತ ಕಮಲದ ಮೊಗ್ಗಿನಂತಹ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದ; ಆ ಕಮಲ ಅರಳಿದಾಗ ಹದಿನಾಲ್ಕು ಲೋಕವಾಯಿತು; ಆ ನಂತರ ಈ ಅರಳಿನಿಂತ ಬ್ರಹ್ಮಾಂಡದೊಳಗೆ ಭಗವಂತ ಸ್ವಯಂ ತುಂಬಿದ. ಈ ರೀತಿ ಬ್ರಹ್ಮಾಂಡ ಸೃಷ್ಟಿಮಾಡಿ ಬ್ರಹ್ಮಾಂಡದೊಳಗೆ ತುಂಬಿನಿಂತಿರುವ ಭಗವಂತ ಅರವಿಂದಾಕ್ಷಃ.

'ರವಿ' ಎಂದರೆ ಸೂರ್ಯ; 'ಅರವಿ' ಎಂದರೆ ಕತ್ತಲು; 'ದಾ' ಎಂದರೆ 'ಧ್ಯತಿ ಅಥವಾ 'ನಾಶ'; ಅಕ್ಷ ಎಂದರೆ ಕಣ್ಣು. ಆದ್ದರಿಂದ ಅರವಿಂದಾಕ್ಷಃ ಎಂದರೆ ಕತ್ತಲನ್ನು ನಾಶಮಾಡುವ ಸೂರ್ಯ ಹಾಗೂ ಚಂದ್ರರೆಂಬ ಎರಡು ಕಣ್ಣುಗಳನ್ನು ಈ ಜಗತ್ತಿಗೆ ಕೊಟ್ಟವನು. ಹೀಗೆ ನಮ್ಮ ಒಳಗೆ ಹಾಗೂ ಹೊರಗಿರುವ ಕತ್ತಲನ್ನು ನಿವಾರಿಸುವ ಭಗವಂತ ಅರವಿಂದಾಕ್ಷಃ.

೩೪೯) ಪದ್ಮಗರ್ಭಃ

ಸೃಷ್ಟಿಗೆ ಮೊದಲು ಸಂಪೂರ್ಣ ಬ್ರಹ್ಮಾಂಡ ಹಾಗೂ ಜೀವ ಜಂತುಗಳು ಸೂಕ್ಷ್ಮರೂಪದಲ್ಲಿ ಭಗವಂತನ ಉದರದಲ್ಲಿದ್ದು, ಸೃಷ್ಟಿ ಕಾಲದಲ್ಲಿ ಎಲ್ಲವೂ ಆತನ ನಾಭಿಯಿಂದ ಪದ್ಮ ರೂಪದಲ್ಲಿ ಹೊರ ಚಿಮ್ಮುತ್ತದೆ. ಹೀಗೆ ಇಡೀ ಬ್ರಹ್ಮಾಂಡವನ್ನು ತನ್ನ ಉದರದಲ್ಲಿ ಧರಿಸಿದ ಭಗವಂತ ಪದ್ಮಗರ್ಭಃ. ಚತುರ್ಮುಖನ ಗರ್ಭದೊಳಗೆ ನಿಂತು ಈ ಸೃಷ್ಟಿಯನ್ನು ನಡೆಸುವ ಭಗವಂತ ಪದ್ಮಗರ್ಭಃ

೩೫೦) ಶರೀರಭೃತ್

ಶರೀರಭೃತ್ ಎಂದರೆ ಶರೀರವನ್ನು ಧಾರಣೆ ಮಾಡುವವನು. ಭಗವಂತ ನಮ್ಮೊಳಗೆ ಪ್ರಾಣದೇವರೊಂದಿಗೆ ಪ್ರವೇಶಿಸುವುದು 'ಹುಟ್ಟು' ಹಾಗೂ ನಮ್ಮ ಶರೀರದಿಂದ ನಿರ್ಗಮಿಸುವುದು 'ಸಾವು'. ಭಗವಂತ ನಮ್ಮ ಶರೀರದಿಂದ ಹೊರಟನೆಂದರೆ ನಮ್ಮ ಪ್ರಾಣ ಪಕ್ಷಿ ಹಾರಿಹೋಗುತ್ತದೆ; ಈ ಶರೀರ ಶವವಾಗುತ್ತದೆ. ಶರೀರ ಎನ್ನುವುದಕ್ಕೆ ಇನ್ನೊಂದು ಅರ್ಥ ಬ್ರಹ್ಮಾಂಡ. ನಮ್ಮ ಶರೀರವನ್ನು ಹಾಗೂ ಸಂಪೂರ್ಣ ಬ್ರಹ್ಮಾಂಡವನ್ನು ಧಾರಣೆ ಮಾಡಿದ ಭಗವಂತ, ಅನಾದಿನಿತ್ಯವಾದ ಜೀವರನ್ನು ಸದಾ ಧಾರಣೆ ಮಾಡಿರುವ ಶರೀರಭೃತ್.

೩೫೧) ಮಹರ್ಧಿಃ

ಮಹರ್ಧಿ ಎಂದರೆ ಪೂರ್ಣತೆಯ ಪರಾಕಾಷ್ಠೆ. ಪೂರ್ಣತೆಯಲ್ಲಿ ಎರಡು ವಿಧ: ಒಂದು ಸಾಪೇಕ್ಷವಾದ ಪೂರ್ಣತೆ ಹಾಗೂ ಇನ್ನೊಂದು ನಿರಪೇಕ್ಷವಾದ ಅಥವಾ ಅನಂತವಾದ ಪೂರ್ಣತೆ. ಬಿಂದಿಗೆಯಲ್ಲಿ ನೀರನ್ನು ತುಂಬಿಸಿದರೆ ಅದು ಪೂರ್ಣ ಆದರೆ ಭಗವಂತನ ಪೂರ್ಣತೆ ಸಮುದ್ರದಂತೆ (ಇಲ್ಲಿ ಸಮುದ್ರ ಎನ್ನುವುದು ಕೇವಲ ದೃಷ್ಟಾಂತ, ಅನಂತನಾದ ಭಗವಂತನನ್ನು ತ್ರಿಗುಣಾತ್ಮಕವಾದ ಯಾವ ವಸ್ತುವಿನೊಂದಿಗೂ ಹೋಲಿಸಲು ಸಾಧ್ಯವಿಲ್ಲ); ಅನಂತವಾದ ಪೂರ್ಣತೆಯುಳ್ಳ ಭಗವಂತ ಮಹರ್ಧಿಃ.

೩೫೨) ಋದ್ಧಃ

ಎಲ್ಲಾ ಸಮೃದ್ಧಿಗಳಿಂದ ಪೂರ್ಣನಾದವನು ಋದ್ಧ. ಒಂದು ಅಮೂಲ್ಯವಾದ ಗಿಡಮೂಲಿಕೆಯನ್ನೂ ಕೂಡಾ ಋದ್ಧ ಎನ್ನುತ್ತಾರೆ; ಕುಟ್ಟಿ ಮಾಡಿದ ತೌಡು ಮಿಶ್ರಿತ ಪೋಷಕಾಂಶಗಳಿಂದ ಕೂಡಿದ ಅಕ್ಕಿ ಕೂಡಾ ಋದ್ಧ. ಗಿಡಮೂಲಿಕೆಯಲ್ಲಿ, ಕುಟ್ಟಣದ ಅಕ್ಕಿಯಲ್ಲಿ ಕೂಡಾ ಭಗವಂತನ ವಿಶೇಷವಾದ ವಿಭೂತಿ ಅಡಗಿದೆ. ಪರಿಪೂರ್ಣನಾದ ಭಗವಂತ ಋದ್ಧಃ.

೩೫೩) ವೃದ್ಧಾತ್ಮಾ

ಭಗವಂತ ಇಂದ್ರಿಯಗಳಿಗೆ ಎಟುಕದವನು. ಆತನ ದೇಹ ಎಲ್ಲಾ ಕಡೆ ಆಕಾಶದಂತೆ ತುಂಬಿದೆ. ಆಕಾಶಕ್ಕೂ ಭಗವಂತನಿಗೂ ಇರುವ ಒಂದು ವ್ಯತ್ಯಾಸ ಎಂದರೆ ಆಕಾಶಕ್ಕೆ ಆತ್ಮವಿಲ್ಲ-ಭಗವಂತನಿಗೆ ಇದೆ. ಭಗವಂತನ ದೇಹ ಪಂಚಭೂತಗಳಿಂದಾದದ್ದಲ್ಲ. ಅದು ಜ್ಞಾನಾನಂದಗಳಿಂದಾದ ಶರೀರ. ಮನುಷ್ಯ ತನ್ನ ಸಾಧನೆ ಮುಖೇನ ತನ್ನ ಸ್ವರೂಪವನ್ನು ತಿಳಿದಾಗ ಮಾತ್ರ ಈ ಸಂಗತಿ ಅರ್ಥವಾಗುತ್ತದೆ. ಭಗವಂತನ ಬಣ್ಣ ಆಕಾರ ಎಲ್ಲವೂ ಜ್ಞಾನಾನಂದಮಯವಾದದ್ದು. ಆತ ಎಲ್ಲೆಡೆ ತುಂಬಿರುವ ಅನಾದಿಮೂರ್ತಿ. ಹೀಗೆ ಜ್ಞಾನಾನಂದಮಯವಾದ ಶರೀರ ಮತ್ತು ಆತ್ಮದಿಂದ ಎಲ್ಲೆಡೆ ವ್ಯಾಪ್ತನಾಗಿರುವ ಭಗವಂತ ವೃದ್ಧಾತ್ಮಾ.

ವೃದ್ಧರು ಎಂದರೆ ತಲೆ ಹಣ್ಣಾದವರು. ಇಲ್ಲಿ ತಲೆ ಎಂದರೆ ಒಳಗಿನ ತಲೆ. ಹಣ್ಣಾಗುವುದು ಎಂದರೆ ಜ್ಞಾನದ ಉತ್ತುಂಗಕ್ಕೇರುವುದು. ಆದ್ದರಿಂದ ವೃದ್ಧಾ ಎಂದರೆ ಜ್ಞಾನಿ. ಹೀಗೆ ಸ್ವಯಂ ಪೂರ್ಣಜ್ಞಾನಿ ಹಾಗೂ ಯಾರಲ್ಲಿ ಜ್ಞಾನವಿದೆಯೋ ಅವರನ್ನು ಪ್ರೀತಿಸುವ ಭಗವಂತ ವೃದ್ಧಾತ್ಮಾ.

೩೫೪) ಮಹಾಕ್ಷಃ

ಸರ್ವಗತವಾದ ಕಣ್ಣುಳ್ಳ ಮತ್ತು ಎಲ್ಲೆಡೆಯೂ ಕಣ್ಣಿಟ್ಟ ಭಗವಂತ-ಮಹಾಕ್ಷಃ. ಭಗವಂತನಿಗೆ ತಿಳಿಯದಂತೆ ಯಾವುದೇ ಕ್ರಿಯೆ ನಡೆಯಲು ಅಸಾಧ್ಯ. ಭಗವಂತ ಸರ್ವಗತವಾದ ಇಂದ್ರಿಯಗಳುಳ್ಳವನು.

೩೫೫) ಗರುಡಧ್ವಜಃ

ಗರುಡನ ಮೇಲೇರಿ ವಿಹರಿಸುವ ಭಗವಂತ ಗರುಡಧ್ವಜಃ. ಗರುಡಾರೂಢ ಭಗವಂತನ ಅನೇಕ ರೂಪದ ಉಪಾಸನೆ ನಮ್ಮಲ್ಲಿ ರೂಢಿಯಲ್ಲಿದೆ. ಉದಾಹರಣೆಗೆ “ಶ್ರೀಕರರೂಪ”. ಎರಡು ಕೈಗಳಿಂದ ಸು-ವರ್ಣವನ್ನೀಯುವ ಗರುಡಾರೂಢ ಭಗವಂತನ ಮೂರ್ತಿ. ಇಲ್ಲಿ "ಸು-ವರ್ಣ" ಎಂದರೆ ಅಕ್ಷರಗಳ ಮೂಲಕ ಅಕ್ಷರನಾದ ಭಗವಂತನನ್ನು ತಿಳಿಯುವ ಜ್ಞಾನ. ಇಂತಹ ಭಗವಂತನ ಅರಿವನ್ನು ಕೊಡತಕ್ಕ ರೂಪ ‘ಗರುಡಾರೂಢ ಸಂಸ್ಥಿತಿ’.

ನಮ್ಮ ದೇಹವನ್ನು ನಿಯಂತ್ರಿಸುವ ಅನೇಕ ಶಕ್ತಿಗಳನ್ನು ಪ್ರಾಚೀನರು ಗುರುತಿಸಿದರು. ಮುಖ್ಯವಾಗಿ ನಾಲ್ಕು ಪುರುಷರು ನಮ್ಮ ದೇಹವನ್ನು ನಿಯಂತ್ರಿಸುತ್ತಾರೆ. ಶರೀರಪುರುಷ, ಛಂದಃಪುರುಷ, ವೇದಪುರುಷ ಮತ್ತು ಸಂವತ್ಸರಪುರುಷ. ಶರೀರ ನಿಯಂತ್ರಿಸುವ ಶರೀರಪುರುಷ-ಶಿವ; ಪ್ರಾಣಮಯ ಕೋಶವನ್ನು ನಿಯಂತ್ರಿಸಿ ನಮ್ಮ ಮಾತನ್ನು ನಿಯಂತ್ರಿಸುವ ಛಂದಪುರುಷ-ಶೇಷ; ನಮ್ಮ ಮನೋಮಯ ಕೋಶವನ್ನು ನಿಯಂತ್ರಿಸುವ ವೇದಪುರುಷ-ಗರುಡ. ಆದ್ದರಿಂದ ಗರುಡ "ವೇದ-ಜ್ಞಾನದ" ಸಂಕೇತ. ಗರುಡಧ್ವಜ ಎಂದರೆ ಸಾಕ್ಷಾತ್ ವೇದಗಳ ಮೇಲೆ ಸವಾರಿ ಮಾಡಿಕೊಂಡು ಬರುವವ. ಇಂತಹ ಭಗವಂತನನ್ನು ತಿಳಿಯಬೇಕಾದರೆ ವೇದದ ಅರಿವೊಂದೇ ನಮಗಿರುವ ಮಾರ್ಗ.

**ಅತುಲಃ ಶರಭೋ ಭೀಮಃ ಸಮಯಜ್ಞೋ ಹವಿರ್ಹರಿಃ ।**
**ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ ॥೫೧॥**

೩೫೬) ಅತುಲಃ

ಭಗವಂತ ಯಾವುದೇ ತುಲನೆಗೆ ನಿಲುಕುವವನಲ್ಲ. ಆತನನ್ನು ಇನ್ನೊಂದು ವಸ್ತುವಿನೊಂದಿಗೆ ತುಲನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಭಗವಂತ ನಮಗೆ ತಿಳಿದ ಯಾವುದೇ ವಸ್ತುವಿನಂತಿಲ್ಲ. ಭಗವಂತನನ್ನು ತಿಳಿಸುವ ಅತಿದೊಡ್ಡ ಬೀಜಾಕ್ಷರ ಓಂಕಾರದಲ್ಲಿನ(ಅ+ಉ+ಮ) ಮೊದಲ ಅಕ್ಷರ-‘ಅ’. ‘ಅ’ 'ಅಲ್ಲ' ಎನ್ನುವ ಅರ್ಥವನ್ನು ಕೊಡುತ್ತದೆ. ಅಂದರೆ ಭಗವಂತ ನಿನಗೆ ತಿಳಿದ ಯಾವುದೇ ವಸ್ತುವಲ್ಲ ಹಾಗೂ ಆತನನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ ಎಂದರ್ಥ. ಭಗವಂತನಿಗೆ ಸದೃಶವಾದ ಯಾವುದೇ ವಸ್ತುವಿಲ್ಲ. ಹೀಗೆ ಸರಿಸಾಟಿಯಿಲ್ಲದ, ಎಲ್ಲಾ ಪ್ರಶ್ನೆಗಳಿಗೂ ಪ್ರಶ್ನೆಯಾಗಿ ಉಳಿಯುವ ಭಗವಂತ ಅತುಲಃ.

೩೫೭) ಶರಭಃ

ಇಲ್ಲಿ ಶರ ಎಂದರೆ ಒಂದು ದಿನ ಬಿದ್ದು ಹೋಗುವ ಶರೀರ. ಶರಭ ಎಂದರೆ ನಮ್ಮ ಶರೀರದೊಳಗೆ ಬೆಳಗುವ ಶಕ್ತಿ. ಹೊರಗಣ್ಣನ್ನು ಮುಚ್ಚಿ ಒಳಗಣ್ಣಿನಿಂದ ನೋಡಿದಾಗ ಮಾತ್ರ ಶರೀರದೊಳಗಿನ ಪ್ರಕಾಶಮಾನವಾಗಿರುವ ಭಗವಂತನನ್ನು ಕಾಣಬಹುದು. ಇಡೀ ಪ್ರಪಂಚದಲ್ಲಿ ತುಂಬಿರುವ; ಪ್ರಳಯ ಕಾಲದಲ್ಲಿ ಇಡೀ ಪ್ರಪಂಚವನ್ನು ಸಂಹಾರ ಮಾಡುವ ಶಕ್ತಿ ಭಗವಂತ, ಅಣುವಿನೊಳಗೆ ಅಣುವಾಗಿ ಎಲ್ಲರಲ್ಲೂ ತುಂಬಿದ್ದಾನೆ. ಇಂತಹ ಭಗವಂತನನ್ನು

ತಿಳಿಯಬೇಕಾದರೆ ನಮ್ಮ ಮನಸ್ಸನ್ನು ಶರ(ಬಾಣ)ವಾಗಿಸಿ ಆತನೆಡೆಗೆ ಗುರಿಯಿಟ್ಟು ಸಾಗಬೇಕು.(ಇಲ್ಲಿ ಬಾಣ ಎಂದರೆ ಏಕಾಗ್ರತೆ). ಮನಸ್ಸು ಮತ್ತು ಆತ್ಮ ಬಾಣವಾಗಿ ಭಗವಂತನ ಪಾದವನ್ನು ಸೇರಿದಾಗ ಆತ ನಮಗೆ ತಿಳಿಯುತ್ತಾನೆ.

ಪುರಾಣಗಳಲ್ಲಿ ಶರಭ ಎನ್ನುವ ಪ್ರಾಣಿಯ ಉಲ್ಲೇಖವಿದೆ. ಈ ಪ್ರಾಣಿ ಎಂಟು ಕಾಲುಗಳುಳ್ಳ ಅತ್ಯಂತ ಬಲಿಷ್ಠ ಪ್ರಾಣಿಯಾಗಿತ್ತಂತೆ. ಆದರೆ ಈ ಪ್ರಾಣಿಯ ಯಾವುದೇ ಕುರುಹು ನಮಗೆ ದೊರೆತಿಲ್ಲ. ಇಂತಹ ವಿಶಿಷ್ಟ ಪ್ರಾಣಿಯಲ್ಲಿ ಸನ್ನಿಹಿತನಾಗಿರುವ ಭಗವಂತನಿಗೆ ಶರಭಃ ಎನ್ನುವುದು ಅನ್ವರ್ಥ ನಾಮ.

**೩೫೮) ಭೀಮಃ (ಅಭೀಮಃ)**

ಯಾರು ಒಳಗಿನ ಪ್ರಪಂಚವನ್ನು ಮರೆತು ಹೊರಪ್ರಪಂಚದಲ್ಲಿ ಬದುಕುತ್ತಾರೋ ಅವರಿಗೆ ಭಗವಂತ ಭಯಂಕರ(ಭೀಮಃ). ಯಾರು ಒಳಪ್ರಪಂಚದ ಅರಿವಿನಿಂದ ಬದುಕುತ್ತಾರೋ ಅವರಿಗೆ ಭಗವಂತ ಅಭಯ(ಅಭೀಮಃ). ಅವನು ಭಯಂಕರನೂ ಹೌದು; ಅಭಯಂಕರನೂ ಹೌದು. ಹಿರಣ್ಯಕಶಿಪುವಿಗೆ ನರಸಿಂಹ ಅವತಾರದಲ್ಲಿ ಭಯಂಕರನಾದ ಭಗವಂತ, ಪ್ರದ್ಯುಮ್ನನಿಗೆ ಅದೇ ರೂಪದಲ್ಲಿ ಅಭಯಂಕರನಾದ. ಇಂತಹ ಭಗವಂತ ಭೀಮಃ ಅಥವಾ ಅಭೀಮಃ.

**೩೫೯) ಸಮಯಜ್ಞಃ**

ಈ ನಾಮವನ್ನು ಸಮಯ+ಜ್ಞಾ ಮತ್ತು ಸಮ+ಜ್ಞಾ ಎಂದು ಎರಡು ಬಗೆಯಲ್ಲಿ ಅರ್ಥೈಸಬಹುದು. ಭಗವಂತ ಸಮಯ ಅಥವಾ ಹೊತ್ತು ತಿಳಿದವನು. ಸೃಷ್ಟಿಯಿಂದ ಸಂಹಾರ ತನಕದ ಸ್ಥಿತಿ ಕಾಲದಲ್ಲಿ ನಿರಂತರ ಹುಟ್ಟು-ಸಾವು ನಡೆಯುತ್ತಿರುತ್ತದೆ. ಯಾವುದು ಯಾವಾಗ ನಡೆಯುತ್ತದೆ ಎನ್ನುವ ಅರಿವು ನಮಗಿರುವುದಿಲ್ಲ. ಯಾವುದು ನಮಗೆ ತಿಳಿದಿಲ್ಲವೋ ಅದನ್ನು ನಾವು ಆಕಸ್ಮಿಕ ಎನ್ನುತ್ತೇವೆ. ಆದರೆ ಭಗವಂತನಿಗೆ ಯಾವುದೂ ಆಕಸ್ಮಿಕವಲ್ಲ. ಆತ ಸರ್ವಜ್ಞ. ಯಾವ ಕಾಲದಲ್ಲಿ ಏನು ನಡೆಯುತ್ತದೆ ಎನ್ನುವ ಸಂಪೂರ್ಣ ಅರಿವು ಇರುವುದು ಭಗವಂತನಿಗೊಬ್ಬನಿಗೆ. ಈ ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಘಟನೆ ಹಿಂದೆ ಒಂದು ಕಾರಣವಿರುತ್ತದೆ. ಇಂತಹ ಕಾಲಜ್ಞಾನಿ ಭಗವಂತ ಸಮಯ-ಜ್ಞ.

ಸಮಯ ಎನ್ನುವುದಕ್ಕೆ ಇನ್ನೊಂದು ಅರ್ಥ "ವೇದಾದಿ ಶಾಸ್ತ್ರಗಳು". ಯಾವುದರಿಂದ ನಮಗೆ ಸಮೀಚೀನವಾದ ಜ್ಞಾನ ಬರುತ್ತದೋ ಅದು ಸಮಯ. ಸಮಗ್ರ ವೇದದ, ಶಾಸ್ತ್ರದ ಅಂತರಂಗದ ರಹಸ್ಯ ತಿಳಿದವನು ಭಗವಂತನೊಬ್ಬನೇ. ಗೀತೆಯಲ್ಲಿ ಕೃಷ್ಣ ಹೇಳುವಂತೆ:

> ಸರ್ವಸ್ಯ ಚಾಹಂ ಹೃದಿ ಸನ್ನಿ ವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।
> ವೇದೈಸ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ ವೇದವಿದೇವ ಚಾಹಮ್ ॥ (ಅ-೧೫, ಶ್ಲೋ-೧೫)

"ಎಲ್ಲರ ಹೃದಯದಲ್ಲಿ ನಾನು ನೆಲೆಸಿರುವೆ, ನೆನಪು, ಅರಿವು, ಮರೆವು ಎಲ್ಲವೂ ನನ್ನ ಕೊಡುಗೆ. ಎಲ್ಲಾ ವೇದಗಳಿಂದ ಅರಿಯಬೇಕಾದವನು ನಾನೇ. ವೇದಾಂತಸೂತ್ರಗಳನೊರೆದವನು, ವೇದಗಳ ಮರ್ಮವನ್ನರಿತವನು ನಾನೇ".

ಭಗವಂತ ಸಮ-ಯಜ್ಞ. ಯಜ್ಞ ಎಂದರೆ ಪೂಜೆ; ಒಳ್ಳೆಯ ಕಾರ್ಯಕ್ಕಾಗಿ ಒಟ್ಟಿಗೆ ಸೇರುವುದು; ದಾನ ಮಾಡುವುದು ಇತ್ಯಾದಿ . ನಮ್ಮಲ್ಲೇನಿದೆಯೋ ಅದನ್ನು ಇಲ್ಲದವರಿಗೆ ಕೊಡುವುದು ಒಂದು ಯಜ್ಞ. ಭಗವಂತನನ್ನು ಅಂತರಂಗದ ಸಮದೃಷ್ಟಿಯಿಂದ ಪೂಜಿಸಬೇಕು. ಸಮಾಜದಲ್ಲಿ ಎಲ್ಲರನ್ನೂ ಅವರ ಯೋಗ್ಯತೆಗೆ ತಕ್ಕಂತೆ ದ್ವೇಷವಿಲ್ಲದೇ, ಅವರೊಳಗಿರುವ ಭಗವಂತನನ್ನು ಹಾಗೂ ಅವನ ಅಭಿವ್ಯಕ್ತವನ್ನು ತಿಳಿದು ಗೌರವಿಸಬೇಕು. ಎಲ್ಲರ ಒಳಗಿರುವ ಭಗವಂತ ಒಬ್ಬನೇ. ಕೇವಲ ಅವನ ಅಭಿವ್ಯಕ್ತ ಮಾತ್ರ ಬೇರೆ ಬೇರೆ. ಈ ಸಮಭಾವಕ್ಕೆ ಯೋಗವೆಂದು ಹೆಸರು. **(ಸಮತ್ವಂ ಯೋಗ ಉಚ್ಯತೇ -ಭಗವದ್ಗೀತೆ ಅ-೨, ಶ್ಲೋ-೪೮)**

ಕೃಷ್ಣ ಭಗವದ್ಗೀತೆಯಲ್ಲಿ ಹೇಳುವಂತೆ:

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ (ಅ-೫, ಶ್ಲೋ-೧೮)

"ಪಾಂಡಿತ್ಯ-ಸೌಜನ್ಯಗಳ ನೆಲೆಯಾದ ಬ್ರಹ್ಮಜ್ಞಾನಿ- ಆಕಳು, ಆನೆ, ನಾಯಿ, ಹೊಲಗೇಡಿಯಾದ ಹೀನ ಮಾನವನಲ್ಲಿ ಕೂಡಾ ಏಕರೂಪದ ಭಗವಂತನನ್ನು ಕಾಣಬಲ್ಲ".

ಭಗವಂತ ಯಾರಿಗೂ ತಾರತಮ್ಯ ಮಾಡುವುದಿಲ್ಲ. ಜೀವಸ್ವರೂಪದ ಯೋಗ್ಯತೆಗನುಗುಣವಾಗಿ ಸಮದೃಷ್ಟಿಯಿಂದ ನೋಡುತ್ತಾನೆ. ಇಲ್ಲಿ ಸಮದೃಷ್ಟಿ ಎಂದರೆ ಎಲ್ಲರನ್ನೂ ಏಕ ರೂಪದಲ್ಲಿ ನೋಡುವುದು ಎಂದರ್ಥವಲ್ಲ, ಯೋಗ್ಯತೆಗನುಗುಣವಾದ ಸಮದೃಷ್ಟಿ. ಒಂದು ಶಾಲೆಯಲ್ಲಿ ಚನ್ನಾಗಿ ಓದಿ ಬರೆದ ವಿದ್ಯಾರ್ಥಿ ಹಾಗೂ ಓದದೆ ಪೋಲಿಯಾಗಿರುವ ಇನ್ನೊಬ್ಬ ವಿದ್ಯಾರ್ಥಿಗೆ ಸಮನಾದ ಅಂಕವನ್ನು ಕೊಡುವುದು ಸಮಾನತೆ ಅಲ್ಲ. ಯಾವುದೇ ದ್ವೇಷವಿಲ್ಲದೆ, ಶತ್ರು, ಮಿತ್ರ, ಸ್ಥಳೀಯ, ಪರಕೀಯ ಎನ್ನುವ ಭೇದವಿಲ್ಲದೆ ಅವರವರ ಯೋಗ್ಯತೆಗೆ ತಕ್ಕಂತೆ ಅಂಕ ವಿತರಣೆ ಮಾಡುವುದು ಸಮಾನತೆ. ಹೀಗೆ ಸಮದೃಷ್ಟಿಯಿಂದ ಮಾಡುವ ಕ್ರಿಯೆ ಮಹಾನ್ ಯಜ್ಞ, ಹಾಗೂ ಭಗವಂತನಿಗೆ ಅತ್ಯಂತ ಪ್ರಿಯವಾದದ್ದು. ಸಮದೃಷ್ಟಿಯ ಯಜ್ಞಪ್ರಿಯ ಭಗವಂತ ಸಮಯಜ್ಞಃ

೩೬೦) ಹವಿರ್ಹರಿಃ

ಹವಿಸ್ಸು ಎಂದರೆ ಭಗವಂತನಿಗೆ ಅರ್ಪಿಸುವ ಹೋಮ ದ್ರವ್ಯ. ನಾವು ಅರ್ಪಿಸುವ ಹವಿಸ್ಸು ಎಂದೂ ವ್ಯರ್ಥವಲ್ಲ. ಅಗ್ನಿಗೆ ಅರ್ಪಿಸಿದ ಹವಿಸ್ಸು ಅಗ್ನಿಯಿಂದ ಹೊರ ಹೊಮ್ಮುವ ಏಳು ಬಣ್ಣಗಳ ಮುಖೇನ ವಾತಾವರಣದಲ್ಲಿನ ಸೂರ್ಯ ಕಿರಣದೊಂದಿಗೆ ಸೇರಿ ಸಮಾಜಕ್ಕೆ ಫಲವನ್ನು ಕೊಡುತ್ತದೆ. ಹವಿರ್ಭಾಗವನ್ನು ಸ್ವೀಕರಿಸುವ ಭಗವಂತ ಹವಿರ್ಹರಿಃ . ನಾವು ಯಾವುದೇ ನಾಮವನ್ನುಚ್ಚರಿಸಿ ಹವಿಸ್ಸನ್ನು ಅರ್ಪಿಸಿದರೂ ಅದು ಸೇರುವುದು ಸರ್ವಶಬ್ದ ವಾಚ್ಯನಾದ ಭಗವಂತನನ್ನು. "ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ". ಭಗವಂತ ಎಲ್ಲಾ ಶಬ್ದಗಳಿಂದ ವಾಚ್ಯನಾದವನು. ಆದ್ದರಿಂದ ಯಾವ ಶಬ್ದವನ್ನು ಹೇಳಿದರೂ ಅದು ಸೇರುವುದು ಅವನನ್ನೇ. ಹೀಗೆ ಹವಿಸ್ಸನ್ನು ಸ್ವೀಕರಿಸಿ ಭಕ್ತರ ಪಾಪವನ್ನು ಪರಿಹರಿಸುವ ಭಗವಂತ ಹವಿರ್ಹರಿಃ. ಭಗವಂತನನ್ನು ಗಾಢವಾದ ಭಕ್ತಿಯಿಂದ ಪೂಜಿಸಿದಾಗ ಆತ ನಮ್ಮ ಒಳಗಣ್ಣಿಗೆ ಕಾಣಿಸುತ್ತಾನೆ. ಜ್ಞಾನದಲ್ಲಿ ಕಾಣುವ ಭಗವಂತನ ಪ್ರಭೆ ನೀಲ ವರ್ಣ. ಇಲ್ಲಿ ನೀಲ ಜ್ಞಾನದ ಸಂಕೇತ. ಇದು ದೇಹದ ಬಣ್ಣವಲ್ಲ, ದೇಹದ ಸುತ್ತಲಿನ ಪ್ರಭೆ. ನೀಲವರ್ಣನಾಗಿ ಜ್ಞಾನದಲ್ಲಿ ಕಾಣಿಸುವ ಭಗವಂತ ಹವಿರ್ಹರಿಃ .

೩೬೧) ಸರ್ವಲಕ್ಷಣಲಕ್ಷಣ್ಯಃ

ಭಗವಂತನ ರೂಪ ನಮ್ಮ ಕಲ್ಪನೆಗೆ ಮಿಗಿಲು. ಒಂದು ದೇಹದ ಸೌಂದರ್ಯದ ಲಕ್ಷಣಗಳು ಎಂದು ನಾವು ಏನನ್ನು ಕಲ್ಪನೆ ಮಾಡಬಹುದೋ ಅದರ ಪರಾಕಾಷ್ಠೆ ಆತನ ರೂಪ. ಜಗತ್ತಿನ ಎಲ್ಲಾ ಬಣ್ಣ ಅವನ ಬಣ್ಣ. ಆತ ವಿಶ್ವವರ್ಣ. ಅಸಾಧಾರಣ ಗುಣಗಳಿಂದ ತುಂಬಿದ ಸರ್ವ ಲಕ್ಷಣಗಳ ನೆಲೆಯಾದ, ಸೌಂದರ್ಯದ ಪರಾಕಾಷ್ಠೆಯ ಸ್ವರೂಪ ಹಾಗೂ ಸರ್ವಸೌಂದರ್ಯದ ಸಾರನಾದ ಭಗವಂತ ಸರ್ವಲಕ್ಷಣಲಕ್ಷಣ್ಯಃ.

೩೬೨) ಲಕ್ಷ್ಮೀವಾನ್

ಭಗವಂತ ಪ್ರಕೃತಿಮಾತೆ ಶ್ರೀಲಕ್ಷ್ಮಿಯನ್ನು ಸದಾ ತನ್ನ ಎದೆಯಲ್ಲಿ ಧರಿಸಿರುತ್ತಾನೆ. ಲಕ್ಷ್ಮಿ ರಹಿತ ನಾರಾಯಣನನ್ನು ನಾವು ಎಂದೂ ನೋಡುವುದಿಲ್ಲ. ಈ ಸೃಷ್ಟಿಯನ್ನು ಭಗವಂತ ಲಕ್ಷ್ಮಿ ಸಮೇತನಾಗಿ ನಿರ್ಮಿಸಿದ. ಇಂತಹ ಭಗವಂತನಿಗೆ ಲಕ್ಷ್ಮೀವಾನ್ ಅನ್ವರ್ಥ ನಾಮ.

೩೬೩) ಸಮಿತಿಂಜಯಃ

"ಸಮಿತಿ" ಎಂದರೆ ಯುದ್ಧ. ಭಗವಂತ ಅಸುರರನ್ನು ಯದ್ದದಲ್ಲಿ ಗೆಲಿದವನು. ನಮ್ಮ ದೈನಂದಿನ ಸಂಸಾರಿಕ ಯುದ್ಧದಲ್ಲಿ ನಮಗೆ ಜಯವನ್ನು ತಂದುಕೊಟ್ಟು ನಮ್ಮನ್ನು ಸಂಸಾರ ಸಾಗರದಿಂದ ಮುಕ್ತ ಮಾಡುವವನು. ನಮ್ಮ ನೋವನ್ನು ನಾಶಮಾಡುವ ಭಗವಂತ ಸಮಿತಿಂಜಯಃ.

**ವಿಕ್ಷರೋ ರೋಹಿತೋ ಮಾರ್ಗೋ ಹೇತುರ್ದಾಮೋದರಸ್ಸಹಃ ।**

**ಮಹೀಧರೋ ಮಹಾಭಾಗೋ ವೇಗವಾನಮಿತಾಶನಃ ॥೫೩॥**

**೩೬೪) ವಿಕ್ಷರಃ**

'ಕ್ಷರ' ಎನ್ನುವ ಪದದ ಒಂದು ಅರ್ಥ "ನಿರಂತರವಾಗಿ ಕೊಡುವುದು" ಹಾಗೂ ಇನ್ನೊಂದು ಅರ್ಥ "ನಾಶವಾಗುವುದು". ವಿಕ್ಷರ ಎಂದರೆ ವಿವಿಧ ಫಲವನ್ನೀಯುವವನು ಹಾಗೂ ನಾಶವಿಲ್ಲದವನು ಎಂದರ್ಥ. ಭಗವಂತ ನಿರಂತರವಾಗಿ ಬಯಸಿದ್ದನ್ನು ಕೊಡುವ ನಾಶವಿಲ್ಲದ ಶಕ್ತಿ. "ಕೇಳಿದರೆ ಕೇಳಬೇಕು-ಭಗವಂತನನ್ನು ಕೇಳಬೇಕು". ಇನ್ನೊಬ್ಬರನ್ನು ಕೇಳಿದರೆ ಅವರೆಷ್ಟು ಕೊಟ್ಟಾರು? ನಿರಂತರವಾಗಿ ಭಕ್ತರು ಕೇಳಿದ್ದನ್ನು ಕೊಡುವ ಭಗವಂತ ವಿಕ್ಷರಃ. ನಾವು ಭಗವಂತನಲ್ಲಿ ಕೇಳುವಾಗ "ನನಗೆ ಇದು ಬೇಕು, ನನಗೆ ಅದು ಬೇಕು ಎಂದು ಕೇಳದೆ, "ಓ ಭಗವಂತ ನನಗೆ ಏನು ಬೇಕು ಎನ್ನುವುದು ನನಗೆ ಗೊತ್ತಿಲ್ಲ, ನನಗೇನು ಬೇಕೋ ಅದನ್ನು ಕೊಡು ಎಂದು ಕೇಳಬೇಕು". ಹೀಗೆ ಅನಂತ ಕಾಲದಲ್ಲಿ ನಿರಂತರವಾಗಿ ಕೊಡುವ ಭಗವಂತ, ಕೊಟ್ಟ ಫಲವನ್ನು ದುರುಪಯೋಗ ಮಾಡಿಕೊಂಡರೆ ಅದನ್ನು ಕಸಿದುಕೊಳ್ಳುತ್ತಾನೆ ಎನ್ನುವ ಎಚ್ಚರ ನಮ್ಮಲ್ಲಿರಬೇಕು.

**೩೬೫) ರೋಹಿತಃ**

ಭಗವಂತ ಕೆಂಪು ಬಣ್ಣದವನು ಎನ್ನುವುದು ಈ ನಾಮದ ಮೇಲ್ನೋಟದ ಅರ್ಥ. ಉಪನಿಷತ್ತಿನಲ್ಲಿ ಹೇಳುವಂತೆ: "ಅಜಂ ಏಕಮ್ ಲೋಹಿತ-ಶುಕ್ಲ-ಕೃಷ್ಣಂ". ಅಂದರೆ ಒಂದು ಅಜ ಅದಕ್ಕೆ ಮೂರು ಬಣ್ಣಗಳು! ಇಲ್ಲಿ ಅಜ ಎಂದರೆ 'ಆಡು' ಅಲ್ಲ. ಅಜ ಎಂದರೆ 'ಹುಟ್ಟಿಲ್ಲದ ಆದಿ ತತ್ವ'. ಮೂರು ಬಣ್ಣಗಳಾದ ಕೆಂಪು-ಬಿಳಿ-ಕಪ್ಪು ಕ್ರಮವಾಗಿ ಸೃಷ್ಟಿ-ಸ್ಥಿತಿ-ಸಂಹಾರವನ್ನು ಸೂಚಿಸುತ್ತವೆ. ಸೃಷ್ಟಿಗೆ ಕಾರಣನಾದ ಭಗವಂತನ ಬಣ್ಣ ಕೆಂಪು, ಆದ್ದರಿಂದ ಆತ ರೋಹಿತಃ.

**೩೬೬) ಮಾರ್ಗಃ**

ಭಗವಂತ ಜ್ಞಾನಿಗಳು ಹುಡುಕುವ ತತ್ವ; ಮುಕ್ತಿಗೆ ಹೆದ್ದಾರಿ. ಎಲ್ಲರೂ ಕೊನೆಗೆ ಕಂಡು ಹುಡುಕಬೇಕಾದ ಶಕ್ತಿ. ಸಂಸಾರ ಸಾಗರವನ್ನು ದಾಟಿಸುವ ದೋಣಿಯೂ ಅವನೇ, ಹೋಗಿ ಸೇರಬೇಕಾದ ದಡವೂ ಅವನೇ. ಅವನನ್ನು ಸೇರುವ ಒಂದೇ ಒಂದು ಮಾರ್ಗ ಶರಣಾಗತಿ. ತನ್ನಲ್ಲಿ ಶರಣಾದ ಭಕ್ತರಿಗೆ ಭಗವಂತ ಮುಕ್ತಿಯ ದಾರಿ ತೋರುತ್ತಾನೆ. ಭಗವಂತನನ್ನು ಸೇರುವ ದಾರಿ ನಮ್ಮ ಹೊರ ಪ್ರಪಂಚದಲ್ಲಿ ಹುಡುಕಿದರೆ ಸಿಗುವುದಿಲ್ಲ. ನಾವು ನಮ್ಮ ಹೊರಪ್ರಪಂಚವನ್ನು ಬಿಟ್ಟು ನಮ್ಮೊಳಗಿರುವ ಭಗವಂತನನ್ನು ನೋಡುವ ಪ್ರಯತ್ನ ಮಾಡಿದಾಗ ಮಾತ್ರ ಅದು ನಮ್ಮನ್ನು ಭಗವಂತನತ್ತ ಕೊಂಡೊಯ್ಯಬಲ್ಲುದು.

**೩೬೭) ಹೇತುಃ**

ಹೇತುಃ ಎಂದರೆ ಎಲ್ಲಕ್ಕೂ ಕಾರಣಕರ್ತ. ಇಡೀ ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷ-ಎಲ್ಲಕ್ಕೂ ಕಾರಣಕರ್ತ ಭಗವಂತ ಹೇತುಃ.

**೩೬೮) ದಾಮೋದರಃ**

ಮೇಲ್ನೋಟಕ್ಕೆ ದಾಮೋದರ ಎಂದರೆ ತಾಯಿಯಿಂದ ಹೊಟ್ಟೆಗೆ ಹಗ್ಗ ಬಿಗಿಸಿಕೊಂಡವನು ಎಂದರ್ಥ. ಇದು ಭಗವಂತನ ಕೃಷ್ಣಾವತಾರದ ಬಾಲ್ಯಕ್ಕೆ ಸಂಬಂಧಪಟ್ಟ ಕಾಲಬದ್ಧ ಘಟನೆಗನುಗುಣವಾದ ಅರ್ಥ. ಆದರೆ ಭಗವಂತ

ಮೂಲತಃ ದಾಮೋದರ. ಆದ್ದರಿಂದ ಈ ನಾಮಕ್ಕೆ ವಿಶಿಷ್ಟವಾದ ಅರ್ಥವಿದೆ. ಆತ ದಾಮ+ಉದರ; ಇಲ್ಲಿ ದಾಮ ಎಂದರೆ 'ದಮ' ಉಳ್ಳವರಿಗೆ ಒಲಿಯುವವನು. ದಮ ಎಂದರೆ 'ಮದ' ಎನ್ನುವ ಪದದ ವಿರುದ್ಧ ಪದ. 'ಮದ' ಇಲ್ಲದಿರುವುದು 'ದಮ'. ಅಂದರೆ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದು. ಉದರ ಎಂದರೆ ಉತ್+ಅರ; 'ಅರ' ಎಂದರೆ ದೋಷ, ಉದರ ಎಂದರೆ ಸರ್ವ ದೋಷಗಳನ್ನು ದಾಟಿನಿಂತ ಪರಿಪೂರ್ಣವಾದ ವಸ್ತು. ಆದ್ದರಿಂದ ದಾಮೋದರ ಎಂದರೆ ಇಂದ್ರಿಯ ನಿಗ್ರಹ ಉಳ್ಳವರು ತಿಳಿಯಬಹುದಾದ, ಅಳತೆಗೆ ಸಿಗದ, ಎಂದೂ ನಾಶವಿಲ್ಲದ, ಎಲ್ಲಕ್ಕಿಂತ ಮಿಗಿಲಾದ ಅಮಿತವನ್ನು ಕೊಡಬಲ್ಲ, ದೋಷರಹಿತವಾದ ತತ್ವ.

೩೮೯) ಸಹಃ

ಭಗವಂತ ಎಂದೂ ತಾಳ್ಮೆಗೆಡುವುದಿಲ್ಲ. ಆತ ಸಹನೆಯ ಮೂರ್ತಿ. ದುಷ್ಟ ಶಕ್ತಿಯನ್ನು ಗೆದೆಯುವ, ಭಕ್ತರ ಅಪರಾಧವನ್ನು ಕ್ಷಮಿಸುವ ಕರುಣಾಳು ಭಗವಂತ "ಸಹಃ"

೩೯೦) ಮಹೀಧರಃ

ನಿಘಂಟಿನಲ್ಲಿ ಮಹೀಧರ ಪದದ ಅರ್ಥವನ್ನು ಹುಡುಕಿದರೆ ಭೂಮಿಯನ್ನು ಹೊತ್ತ ಬೆಟ್ಟಗಳು ಎನ್ನುವ ಅರ್ಥವನ್ನು ಕಾಣಬಹುದು. ಬೆಟ್ಟಗಳು ಭೂಮಿಯ ಮೇಲಿದ್ದರೂ ಸಹ ಇವು ಭೂಮಿ ಸ್ಥಿರವಾಗಿರಲು ಸಹಾಯಕ. ಆದರೆ ಇದು ಮಹೀಧರಃ ಪದದ ಲೌಕಿಕ ಅರ್ಥ. ನಿಜವಾಗಿ ಈ ಭೂಮಿಯನ್ನು ಹೊತ್ತವನು, ಭೂಮಿ ಸ್ಥಿರವಾಗಿರುವಂತೆ ಹಿಡಿದು ಕಾಪಾಡುವವನು ಭಗವಂತ. ಭೂಮಿ ಆಕಾಶದಲ್ಲಿ ಸಂಕರ್ಷಣ ಶಕ್ತಿಯಿಂದ ನಿಂತಿದೆ. ಈ ಸಂಕರ್ಷಣ ಶಕ್ತಿ (ಶೇಷ ಶಕ್ತಿ) ವಾತಾವರಣದಲ್ಲಿ ವಾಯು ಶಕ್ತಿಯಿಂದ ನಿಂತಿದೆ. ಇವೆಲ್ಲವನ್ನೂ ಭಗವಂತ ಹೊತ್ತಿದ್ದಾನೆ. ಹೀಗೆ ಭೂಮಿಯನ್ನು, ಈ ಸಂಪೂರ್ಣ ಜಗತ್ತನ್ನು ಧರಿಸಿರುವ ಭಗವಂತ ಮಹೀಧರಃ. "ನಾನು" ,"ನನ್ನಿಂದ" ಎನ್ನುವ ಅಹಂಕಾರವನ್ನು ಬಿಟ್ಟು, ನಮ್ಮೆಲ್ಲರನ್ನೂ, ಈ ಪ್ರಕೃತಿಯನ್ನು ಹೊತ್ತ ಸರ್ವಸಮರ್ಥ ಶಕ್ತಿ ಭಗವಂತ ಎಂದು ತಿಳಿದಾಗ ಮಾತ್ರ ನಮಗೆ ಸತ್ಯದ ಸಾಕ್ಷಾತ್ಕಾರವಾಗುತ್ತದೆ.

೩೯೧) ಮಹಾಭಾಗಃ

ನಾವು ಪೂಜೆಯಲ್ಲಿ ಅರ್ಪಿಸುವ ಪೂಜಾ ದ್ರವ್ಯಗಳ ಮುಖ್ಯ ಭಾಗ ಸೇರುವುದು ಭಗವಂತನನ್ನು. ಗೀತೆಯಲ್ಲಿ ಕೃಷ್ಣ ಹೇಳುವಂತೆ:

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನತು ಮಾಮಭಿಜಾನಂತಿ ತತ್ವೇನಾತಸ್ಚ್ಯವಂತಿ ತೇ ॥ (ಅ-೯ ಶ್ಲೋ ೨೪)

ಇಲ್ಲಿ "ಸರ್ವ ಯಜ್ಞಗಳ ಭೋಕ್ತಾರ ನಾನು" ಎಂದಿದ್ದಾನೆ ಕೃಷ್ಣ. ನಾವು ಪೂಜೆ ಮಾಡುವಾಗ ನಮಗೆ ಈ ಎಚ್ಚರಬೇಕು. ತಿಳಿದು ಮಾಡಿದಷ್ಟೂ ಉತ್ತಮ. ಯಾವ ದೇವತೆಗಳೂ ಭಗವಂತನಿಗೆ ಅರ್ಪಿಸದ ಹವಿಸ್ಸನ್ನು ನೇರವಾಗಿ ಸ್ವೀಕರಿಸುವುದಿಲ್ಲ.

ಭಗವಂತ ಮಹಾ ಭಾಗ್ಯ ಕೂಡಾ ಹೌದು. ಇಲ್ಲಿ ಭಾಗ್ಯ ಎಂದರೆ ಜ್ಞಾನ, ಶಕ್ತಿ, ಬಲ, ಐಶ್ವರ್ಯ,ವೀರ್ಯ ಮತ್ತು ತೇಜಸ್ಸು. ಈ ಷಡ್ಗುಣಗಳಿಂದ ಪೂರ್ಣನಾಗಿ ಜಗತ್ತನ್ನು ನಿಯಂತ್ರಿಸುವ ಭಗವಂತ ಮಹಾಭಾಗಃ.

೩೯೨) ವೇಗವಾನ್

ಭಗವಂತನ ವೇಗ ನಮ್ಮ ಮನಸ್ಸಿನ ವೇಗಕ್ಕಿಂತ ಮಿಗಿಲು. ಆತನನ್ನು ಹೊರ ಪ್ರಪಂಚದಲ್ಲಿ ಬೆನ್ನಟ್ಟುವುದು ಅಸಾಧ್ಯ. ಇಂತಹ ಭಗವಂತ ನಮ್ಮ ಅಂತರಂಗದಲ್ಲೇ ಇರುತ್ತಾನೆ. ಆದ್ದರಿಂದ ಆತನನ್ನು ಹೊರ ಪ್ರಪಂಚದಲ್ಲಿ ಹುಡುಕಾಡದೇ ನಮ್ಮೊಳಗೇ ಹುಡುಕಬೇಕು.

೩೭೩) ಅಮಿತಾಶನಃ

ಅಮಿತ+ಅಶನ- ಅಂದರೆ ತುಂಬಾ ತಿನ್ನುವವ! ಭಗವಂತ ಎಲ್ಲವನ್ನೂ ತಿನ್ನುತ್ತಾನೆ, ಆದರೆ ಏನನ್ನೂ ತಿನ್ನುವುದಿಲ್ಲ! ನಾವು ಭಗವಂತನಿಗೆ ಅರ್ಪಿಸುವ ವಸ್ತುವನ್ನು ಆತ ಸ್ವೀಕರಿಸುತ್ತಾನೆ-ಆದರೆ ಅದು ನಮಗೆ ತಿಳಿಯುವುದಿಲ್ಲ.

ಭಗವಂತ ಅಮಿತ+ಆಶಾ+ನ; ಅಮಿತವಾದ ಆಸೆಯಲ್ಲಿ ಬದುಕುವ ನಮ್ಮ ಆಸೆಯನ್ನು ಪೂರೈಸುವವ ಹಾಗೂ ನಮಗೆ ಬಯಕೆಗಳೇ ಇಲ್ಲದಂತೆ ಮಾಡಿ ಮೋಕ್ಷವನ್ನು ಕರುಣಿಸುವವ.

ಉದ್ಭವಃ, ಕ್ಷೋಭಣೋ ದೇವಃ ಶ್ರೀಗರ್ಭಃ ಪರಮೇಶ್ವರಃ ।
ಕರಣಂ ಕಾರಣಂ ಕರ್ತಾ ವಿಕರ್ತಾ ಗಹನೋ ಗುಹಃ ॥೫೪॥

೩೭೪) ಉದ್ಭವಃ

ಇಡೀ ವಿಶ್ವ ಪ್ರಳಯಕಾಲದಲ್ಲಿ ಸೂಕ್ಷ್ಮ ರೂಪದಲ್ಲಿ ಭಗವಂತನೊಳಗಿರುತ್ತದೆ. ಸೃಷ್ಟಿ ಕಾಲದಲ್ಲಿ ಸ್ಫೋಟವಾಗಿ ಈ ಬ್ರಹ್ಮಾಂಡ ಭಗವಂತನ ನಾಭಿಯಿಂದ ಉದ್ಭವವಾಗುತ್ತದೆ. ಹೀಗೆ ನಾಮ ರೂಪಾತ್ಮಕವಾದ ಈ ಪ್ರಪಂಚವನ್ನು ಸೃಷ್ಟಿಸುವ ಭಗವಂತ ಉದ್ಭವಃ.

೩೭೫) ಕ್ಷೋಭಣಃ

ದುಷ್ಟರನ್ನು ಕ್ಷೋಭೆಗೊಳಿಸುವ ಭಗವಂತ ಕ್ಷೋಭಣಃ.

೩೭೬) ದೇವಃ

ಈ ನಾಮ ಎಲ್ಲರಿಗೂ ಚಿರಪರಿಚಿತ. ಜಾತಿ ಧರ್ಮ ಭೇದವಿಲ್ಲದೆ ಎಲ್ಲರೂ ಭಗವಂತನನ್ನು 'ದೇವ' ಎಂದು ಸಂಬೋಧಿಸುತ್ತಾರೆ. ವಿಶೇಷವೆಂದರೆ ಚಿರಪರಿಚಿತವಾದ ಈ ನಾಮದ ಹಿಂದಿನ ಅರ್ಥ ಮಾತ್ರ ಎಲ್ಲರಿಗೂ ಅಪರಿಚಿತ! ದೇವಃ ಎನ್ನುವ ಪದ ಮೂಲತಃ 'ದಿವು' ಎನ್ನುವ ಧಾತುವಿನಿಂದ ಹುಟ್ಟಿದ ಶಬ್ದ. ಪ್ರಾಚೀನ ಧಾತು ಪಾಠದಲ್ಲಿ ಈ ಧಾತುವಿಗೆ ಏಳು ಅರ್ಥವನ್ನು ನೋಡಬಹುದು. ಅವುಗಳೆಂದರೆ: ೧) ಧ್ಯುತಿ ೨) ವಿಜಿಗೀಶ ೩) ಕಾಂತಿ ೪) ಸ್ತುತಿ ೫) ವ್ಯವಹಾರ ೬) ಕ್ರೀಡಾ ೭) ಗತಿಶು.

ಇತ್ತೀಚೆಗೆ ಮೋದ, ಮದ ಮತ್ತು ಸ್ವಪ್ನ ಎನ್ನುವ ಇನ್ನೂ ಮೂರು ಅರ್ಥವನ್ನು ಸೇರಿಸಿದ್ದಾರೆ. ಆದರೆ ಇದು ಪ್ರಾಚೀನ ಧಾತುಪಾಠದಲ್ಲಿ ಇಲ್ಲ. ಈಗ ಸಂಕ್ಷಿಪ್ತವಾಗಿ ಮೇಲಿನ ಏಳು ಅರ್ಥಗಳನ್ನು ನೋಡೋಣ.

೧) ಧ್ಯುತಿ: ಧ್ಯುತಿ ಅಂದರೆ ಬೆಳಕಿನ ಸ್ವರೂಪ. ಬೆಳಕಿನ ಪುಂಜವಾದ ಸೂರ್ಯ ಚಂದ್ರಾದಿಗಳಿಗೆ ಬೆಳಕನ್ನೀಯುವ ಭಗವಂತ ನಮ್ಮೊಳಗೆ ಜ್ಞಾನದ ಬೆಳಕನ್ನು ತುಂಬುತ್ತಾನೆ.

೨) ವಿಜಿಗೀಶ: ಭಗವಂತ ಎಲ್ಲರಿಗಿಂತ ಎತ್ತರದಲ್ಲಿರುವವನು ಹಾಗೂ ಗೆಲುವಿನ ಸ್ವರೂಪ.

೩) ಕಾಂತಿ: ಕೇವಲ ಇಚ್ಛೆಯಿಂದ ಸೃಷ್ಟಿ ಮಾಡಬಲ್ಲವ. ನಮಗೆ ಇಚ್ಛೆಯನ್ನು ಕೊಟ್ಟವ ಹಾಗೂ ಅದನ್ನು ಅವರವರ ಯೋಗ್ಯತೆಗೆ ತಕ್ಕಂತೆ ಪೂರೈಸುವವ.

೪) ಸ್ತುತಿ: ಎಲ್ಲರಿಂದ ಸ್ತುತನಾದವನು; ಎಲ್ಲರೂ ಯಾರನ್ನು ಸ್ತುತಿಸುತ್ತಾರೋ ಅವನು ಸರ್ವಶಬ್ದ ವಾಚ್ಯನಾದ ಭಗವಂತ.

೫) ವ್ಯವಹಾರ: ಜಗತ್ತಿನ ಸಮಸ್ತ ವ್ಯವಹಾರವನ್ನು ನಿರ್ವಹಿಸುವವ.

೬) ಕ್ರೀಡಾ: ಸೃಷ್ಟಿ-ಸ್ಥಿತಿ-ಸಂಹಾರ ಇದು ಭಗವಂತನಿಗೊಂದು ಕ್ರೀಡೆ. ಹುಟ್ಟು-ಸಾವು, ಸರ್ವ ವ್ಯವಹಾರಗಳು ಆತನಿಗೊಂದು ಕ್ರೀಡೆ.

೭) ಗತಿಶು: ಚಲನೆ ಮತ್ತು ಜ್ಞಾನ ಕೊಟ್ಟವ. ಯಾರು ಎಲ್ಲಾ ಕಡೆ ಗತನಾಗಿದ್ದಾನೋ; ಎಲ್ಲವನ್ನೂ ತಿಳಿದಿದ್ದಾನೋ; ಎಲ್ಲರೊಳಗೆ ಬಿಂಬ ರೂಪದಲ್ಲಿ ನೆಲೆಸಿದ್ದಾನೋ ಅವನು 'ದೇವ'

ಹೀಗೆ ಅನೇಕ ಅರ್ಥಗಳನ್ನು 'ದೇವ' ಎನ್ನುವ ನಾಮದಲ್ಲಿ ಕಂಡುಕೊಳ್ಳಬಹುದು. "ಓ ದೇವರೇ" ಎನ್ನುವಾಗ ಮೇಲಿನ ಅರ್ಥವನ್ನು ಒಮ್ಮೆ ನೆನೆದರೆ ಅದರಿಂದಾಗುವ ಆನಂದ ಅಪರಿಮಿತ. ಭಗವಂತನ ನಾಮದಲ್ಲಿ ಅಷ್ಟೊಂದು ಬಲವಿದೆ. ಅದಕ್ಕಾಗಿ ಪುರಂದರ ದಾಸರು 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲ ಒಂದಿದ್ದರೆ ಸಾಕೋ" ಎಂದು ಭಗವಂತನನ್ನು ವಿನೋದ ಮಾಡಿದ್ದಾರೆ.

೩೭೭) ಶ್ರೀಗರ್ಭಃ

'ಶ್ರೀ' ಎಂದರೆ ಸಂಪತ್ತು. ಎಲ್ಲಾ ಸಂಪತ್ತು ಭಗವಂತನ ಒಡಲಿನಿಂದ ಉದ್ಭವವಾದದ್ದು. ಸಮಸ್ತ ವೇದಗಳು ಯಾರ ಗರ್ಭದಿಂದ ಉದ್ಭವವಾಯಿತೋ ಅವನು ಶ್ರೀಗರ್ಭಃ. ಸಮಸ್ತ ವೇದದ, ಸರ್ವ ಸಂಪತ್ತಿನ ಅಭಿಮಾನಿಯಾದ ಲಕ್ಷ್ಮಿಗೆ ನೆಲೆಯಾಗಿರುವ ಭಗವಂತ ಶ್ರೀಗರ್ಭಃ

೩೭೮) ಪರಮೇಶ್ವರಃ

ಈಶ, ಈಶ್ವರ, ಪರಮೇಶ ಹಾಗೂ ಪರಮೇಶ್ವರ ಎಲ್ಲವೂ ಸುಮಾರಾಗಿ ಒಂದೇ ಅರ್ಥವನ್ನು ಕೊಡುವ ಪದಗಳು. ಈಶ ಎಂದರೆ ಸಮರ್ಥ. ನಮ್ಮನ್ನು ನಿಯಂತ್ರಿಸುವ ದೇವತೆಗಳು ಈಶರು. ಅವರನ್ನು ನಿಯಂತ್ರಿಸುವವರು ಅಂತಃಕರಣ ಹಾಗೂ ಜೀವಕಲಾಭಿಮಾನಿ ದೇವತೆಗಳಾದ ಗರುಡ, ಶೇಷ, ರುದ್ರ ಹಾಗೂ ಬ್ರಹ್ಮ-ವಾಯು. ಈ ತತ್ವಾಭಿಮಾನಿ ದೇವತೆಗಳ ನಿಯಮಕನಾದ, ಎಲ್ಲಕ್ಕಿಂತ ಎತ್ತರದಲ್ಲಿರುವ, ಎಲ್ಲರ ಒಡೆಯ ಭಗವಂತ ಪರಮೇಶ್ವರಃ.

೩೭೯) ಕರಣಂ

ಎಲ್ಲಕ್ಕೂ ಮುಖ್ಯ ಕಾರಣನಾದ ಭಗವಂತ ಕರಣ. ಕರಣ ಅಂದರೆ ಅಸಾಧಾರಣವಾದದ್ದು. ಉದಾಹರಣೆಗೆ ರೂಪವನ್ನು ನೋಡಲು ಕಣ್ಣು 'ಕರಣ'; ಕೇಳುವುದಕ್ಕೆ ಕಿವಿ 'ಕರಣ'. ಈ ನಾಮವನ್ನು ಒಡೆದು ನೋಡಿದರೆ ಕ+ರ+ಣ. ಇಲ್ಲಿ 'ಕ'ಎಂದರೆ ಆನಂದ, 'ರ' ಎಂದರೆ ಕ್ರೀಡೆ, 'ಣ' ಎಂದರೆ ಬಲ. ಆದ್ದರಿಂದ ಕರಣಂ ಎಂದರೆ ಆನಂದ ಸ್ವರೂಪ, ಬಲ ಸ್ವರೂಪ ಹಾಗೂ ಕ್ರೀಡಾ ಸ್ವರೂಪ ಭಗವಂತ.

೩೮೦) ಕಾರಣಂ

ಎಲ್ಲಕ್ಕೂ ನಿಮಿತ್ತಕಾರಣನಾದ ಭಗವಂತ ಕಾರಣಂ. ಕ+ಅರ+ಣ. ಇಲ್ಲಿ 'ಅರ' ಎಂದರೆ 'ನಾಶವಿಲ್ಲದ್ದು'. ಭಗವಂತ ಎಂದೂ ನಾಶವಿಲ್ಲದ ಆನಂದ ಸ್ವರೂಪ. ಆತನ ಕ್ರೀಡೆಯೇ ಈ ಜಗತ್ತಿನ ನಿಯಮನ. ಕ+ಆ+ರಣ- ಇಲ್ಲಿ 'ರಣ' ಎಂದರೆ ಘೋಷಣೆ. ಭಗವಂತ ಆನಂದ ಸ್ವರೂಪ ಎಂದು ವೇದಗಳಿಂದ ಘೋಷಿಸಲ್ಪಟ್ಟ ಅಸಾಧಾರಣ ಶಕ್ತಿ.

೩೮೧) ಕರ್ತಾ

ಎಲ್ಲವನ್ನೂ ಇನ್ನೊಬ್ಬರ ಸಹಾಯವಿಲ್ಲದೆ ಸ್ವತಂತ್ರವಾಗಿ ಮಾಡಬಲ್ಲವ ಕರ್ತಾ. ನಾವು ಭಗವಂತನ ಮುಂದೆ ಕೇವಲ ಸೂತ್ರದ ಗೊಂಬೆಗಳಂತೆ. ನಮಗೆ ಸ್ವಾತಂತ್ರ್ಯವಿಲ್ಲ, ಸೂತ್ರದಾರ ಆಡಿಸುವಂತೆ ಆಡುತ್ತೇವೆ. ಮನಸ್ಸಿಗೆ ಸ್ಫುರಣ ಕೊಡುವ ನಿಜವಾದ ಕರ್ತಾ ಭಗವಂತ.

೩೮೨) ವಿಕರ್ತಾ

ವಿವಿಧವಾದ ಸೃಷ್ಟಿಯನ್ನು ಮಾಡುವವನು ವಿಕರ್ತಾ. ಭಗವಂತನ ಸೃಷ್ಟಿ ವಿಸ್ಮಯ ಹಾಗೂ ವೈವಿಧ್ಯಪೂರ್ಣ. ಈ ಪ್ರಪಂಚದಲ್ಲಿ ಒಂದು ವಸ್ತುವಿನಂತೆ ಇನ್ನೊಂದು ವಸ್ತುವಿಲ್ಲ. ಮರದ ಒಂದು ಎಲೆಯಂತೆ ಇನ್ನೊಂದು ಎಲೆ

ಇರುವುದಿಲ್ಲ. ಒಬ್ಬ ಮನುಷ್ಯನಂತೆ ಇನ್ನೊಬ್ಬನಿರುವುದಿಲ್ಲ. ಒಬ್ಬ ವ್ಯಕ್ತಿಯ ಬೆರಳಚ್ಚು(Fingerprint) ಇನ್ನೊಬ್ಬನಿಗಿಂತ ಬಿನ್ನ. ಹೀಗೆ ವೈವಿಧ್ಯಪೂರ್ಣ ಸೃಷ್ಟಿಯನ್ನು ನಿರ್ಮಿಸಿದ ಭಗವಂತ ವಿಕರ್ತಾ.

೩೮೩) ಗಹನಃ

ಅತ್ಯಂತ ನಿಗೂಢನಾದ ಭಗವಂತ ಗಹನಃ. ಆತ ಮಾಡಿದ ಸೃಷ್ಟಿ ಮಾತ್ರ ನಮಗೆ ಕಾಣುತ್ತದೆ, ಆದರೆ ಆತ ಕಾಣಿಸುವುದಿಲ್ಲ. ಆತನನ್ನು ತಿಳಿಯಬೇಕಾದರೆ ಶಾಸ್ತ್ರದ ಒಳಹೊಕ್ಕು ಪ್ರಯತ್ನಿಸಬೇಕು.

೩೮೪) ಗುಹಃ

ಹೃದಯ ಗುಹೆಯಲ್ಲಿ ಅವಿತವನು, ಹೃತ್ಕಮಲ ಮಧ್ಯ ನಿವಾಸಿ ಭಗವಂತ ಗುಹಃ. ಆತ ಎಂದೂ ಬಿಚ್ಚಿಕೊಳ್ಳುವುದಿಲ್ಲ. ಜೀವದ ಸಾಧನೆ ಪೂರ್ತಿಯಾಗುವ ತನಕ ಆತ ಕಾಣಿಸಿಕೊಳ್ಳುವುದಿಲ್ಲ. ಆತ್ಮಸಾಕ್ಷಾತ್ಕಾರವಾದ ಮೇಲೆ ಜೀವಸ್ವರೂಪದಿಂದ ಆತನನ್ನು ನೋಡಲು ಸಾಧ್ಯ.

ವ್ಯವಸಾಯೋ ವ್ಯವಸ್ಥಾನಃ ಸಂಸ್ಥಾನಃ ಸ್ಥಾನದೋ ಧ್ರುವಃ ।
ಪರರ್ದ್ಧಿಃ ಪರಮಸ್ಪಷ್ಟಸ್ತುಷ್ಟಃ ಪುಷ್ಟಃ ಶುಭೇಕ್ಷಣಃ ॥೪೪॥

೩೮೫) ವ್ಯವಸಾಯಃ

ವ್ಯವಸಾಯ ಎಂದರೆ 'ನಿಶ್ಚಯ ಜ್ಞಾನಸ್ವರೂಪ'. ಭಗವಂತನನ್ನು ಬಿಟ್ಟರೆ ಬೇರೆ ಯಾರಿಗೂ ನಿಶ್ಚಯ ಜ್ಞಾನವಿಲ್ಲ. ಒಂದು ವಸ್ತುವನ್ನು ನಿಖರವಾಗಿ ತಿಳಿಯಲು ಇಡೀ ವಿಶ್ವ ರಚನೆಯ ಗಣಿತ ತಿಳಿದಿರಬೇಕು. ಎಲ್ಲವನ್ನೂ ಕರಾರುವಕ್ಕಾಗಿ ತಿಳಿದಿರುವ ಭಗವಂತ ವ್ಯವಸಾಯಃ.

೩೮೬) ವ್ಯವಸ್ಥಾನಃ

ವಿವಿಧ ರೂಪಗಳಿಂದ ಪಿಂಡಾಂಡ ಬ್ರಹ್ಮಾಂಡಗಳಲ್ಲಿ ತುಂಬಿದವನು- ವ್ಯವಸ್ಥಾನಃ. ಬೇರೆ ಬೇರೆ ದೇವತೆಗಳಿಗೆ ಈ ಪಿಂಡಾಂಡ ಮತ್ತು ಬ್ರಹ್ಮಾಂಡದಲ್ಲಿ ಬೇರೆ ಬೇರೆ ವ್ಯವಸ್ಥೆಯಿದೆ. ದೇವತೆಗಳಿಗಲ್ಲದೆ ಪ್ರತಿಯೊಬ್ಬ ಮನುಷ್ಯನಿಗೂ ಸಹ ನಿಯಾಮಕ ವ್ಯವಸ್ಥೆ ಭಗವಂತ ಮಾಡುತ್ತಾನೆ. ಅವರವರ ಜೀವಸ್ವರೂಪಕ್ಕನುಗುಣವಾಗಿ, ಕರ್ಮಕ್ಕನುಗುಣವಾಗಿ ಯಾರು ಎಲ್ಲಿ ಹುಟ್ಟಬೇಕು, ಏನು ಕೆಲಸ ಮಾಡಬೇಕು ಎನ್ನುವ ವ್ಯವಸ್ಥೆ ಮಾಡಿ ನಮ್ಮನ್ನು ಭೂಲೋಕಕ್ಕೆ ಕಳುಹಿಸುವ ಭಗವಂತ ವ್ಯವಸ್ಥಾನಃ.

೩೮೭) ಸಂಸ್ಥಾನಃ

ಜ್ಞಾನಿಗಳ ಹೃದಯದಲ್ಲಿ ಚೆನ್ನಾಗಿ ನೆಲೆಸಿದವನು; ಸರ್ವ ದೇವತೆಗಳೊಳಗಿದ್ದು, ಅವರು ನಿರ್ವಹಿಸಬೇಕಾದ ಕಾರ್ಯವನ್ನು ಮಾಡಿಸುವ ಭಗವಂತ ಸಂಸ್ಥಾನಃ.

೩೮೮) ಸ್ಥಾನದಃ

ಅವರವರ ಯೋಗ್ಯತೆಗೆ ತಕ್ಕಂತೆ ಅವರವರಿಗೆ ತಾಣವನ್ನು ಕೊಟ್ಟು ಸಲಹುವ ಭಗವಂತ ಸ್ಥಾನದಃ.

೩೮೯) ಧ್ರುವಃ

ಸ್ಥಿರನಾದವನು. ಭಗವಂತನೊಬ್ಬನೇ ಶಾಶ್ವತ, ಇನ್ಯಾರೂ ಶಾಶ್ವತವಲ್ಲ. ದೇವತೆಗಳ ಅವಧಿ ಕೇವಲ ಒಂದು ಕಲ್ಪ. ಆದರೆ ಭಗವಂತನ ಸ್ಥಾನಕ್ಕೆ ಆದಿ ಅಂತ್ಯವಿಲ್ಲ. ಜ್ಞಾನಿಗಳನ್ನು ಧ್ರುವ ಲೋಕಕ್ಕೆ ಕಳುಹಿಸುವ ಭಗವಂತ ಧ್ರುವಃ .

೩೯೦) ಪರರ್ದ್ಧಿಃ

ಸಂಸ್ಕೃತದಲ್ಲಿ 'ರಧ್ಧಿ' ಎಂದರೆ ಸಮೃದ್ಧಿ ಅಥವಾ ಪೂರ್ಣತೆ. ಭಗವಂತ ಸಮೃದ್ಧಿಯ ತುತ್ತತುದಿ ಹಾಗೂ ಅದು ಅನಂತ. ನಮಗೆ ಸಮೃದ್ಧಿಯನ್ನು (ಜ್ಞಾನ, ಬಲ, ಐಶ್ವರ್ಯ, ಸಜ್ಜನಿಕೆ,ಇತ್ಯಾದಿ) ಕೊಡುವ ಪರಿಪೂರ್ಣ ಸ್ವರೂಪ ಭಗವಂತ ಪರರ್ಧಿಃ.

೩೯೧) ಪರಮಸ್ಪಷ್ಟಃ

ಭಗವಂತ ಸ್ಪಷ್ಟ ಹಾಗೂ ಯಾರಿಗೂ ತಿಳಿಯದ್ದನ್ನು ನೋಡಿ ತಿಳಿದವನು. ಜ್ಞಾನಿ ಅಜ್ಞಾತನಾದ ಭಗವಂತನನ್ನು ಕೊನೆಗೊಮ್ಮೆ ನಿಚ್ಚಳವಾಗಿ ಕಾಣುತ್ತಾನೆ. ಭಗವಂತ ನಾವು ಹೊರಗಿನಿಂದ ಕಾಣುವ ವಸ್ತುವಿನಂತಲ್ಲ. ಆತನಿಗೆ ಇಂತದ್ದೇ ಎನ್ನುವ ರೂಪವೊಂದಿಲ್ಲ. ಆತ ಆಕಾಶದಂತೆ. ಆತ ಕಾಣಿಸಿಕೊಂಡರೆ ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಾನೆ. ಹಾಗೆ ಕಾಣಿಸಿಕೊಂಡಾಗ ನಮಗೆ ಕಾಣುವ ಇತರ ಎಲ್ಲಾ ವಸ್ತುಗಳು ಅಸ್ಪಷ್ಟವಾಗುತ್ತವೆ. ಕಾಣದವರ ಸಂಶಯಕ್ಕೆ ಆತ ಕಾಣಿಸುವ ತನಕ ಪರಿಹಾರವಿಲ್ಲ, ಕಂಡವರಿಗೆ ಕಂಡ ಮೇಲೆ ಸಂಶಯ ಬರುವ ಸಂಭವವಿಲ್ಲ. 'ಯಸ್ಮಿನ್ ವಿಜ್ಞಾತೇ ಸರ್ವವಿದಂ ವಿಜ್ಞಾತಂ' ಭಗವಂತನನ್ನು ತಿಳಿದವನಿಗೆ ಯಾವ ವಿಧದ ಪ್ರಶ್ನೆಯೂ ಇಲ್ಲ. ಅಷ್ಟು ಸ್ಪಷ್ಟವಾಗಿ ವಿಶ್ವದ ರಹಸ್ಯವನ್ನು ತೆರೆದು ಬಿಡುತ್ತಾನೆ ಭಗವಂತ. ಹೀಗೆ ಜ್ಞಾನಿಗಳಿಗೆ ನಿಚ್ಚಳವಾಗಿ ಗೋಚರಿಸುವ ಭಗವಂತ ಪರಮಸ್ಪಷ್ಟಃ.

೩೯೨) ಸ್ತುಷ್ಟಃ

ಭಗವಂತ ನಿತ್ಯತೃಪ್ತ. ಮಾನವರಾದ ನಮಗೆ ಯಾವುದೂ ಸಾಕು ಅನ್ನಿಸುವುದಿಲ್ಲ. ಒಂದು ವೇಳೆ ಅನ್ನಿಸಿದರೂ ಅದು ತಾತ್ಕಾಲಿಕ. ಬಯಕೆ ನಮ್ಮ ಬೆನ್ನನ್ನು ಬಿಡುವುದಿಲ್ಲ. ಆದರೆ ಭಗವಂತ ಎಲ್ಲವುದರಲ್ಲೂ ನಿತ್ಯತೃಪ್ತ. ಯಾವುದನ್ನೂ ಬಯಸದ ಅಸಾಧಾರಣ ಸ್ವರೂಪನಾದ ಭಗವಂತ ಸ್ತುಷ್ಟಃ.

೩೯೩) ಪುಷ್ಟಃ

ಎಲ್ಲಾ ಗುಣಗಳಿಂದ ತುಂಬಿದ ಭಗವಂತ ಎಲ್ಲವುದರಿಂದ ಪೂರ್ಣ. ಸ್ವಯಂ ಪರಿಪೂರ್ಣನಾದ ಭಗವಂತ ಪುಷ್ಟಃ

೩೯೪) ಶುಭೇಕ್ಷಣಃ

ಶುಭೇಕ್ಷಣ ಎಂದರೆ ಮಂಗಳಕರವಾದ ಕಣ್ಣು ಅಥವಾ ನೋಟವುಳ್ಳವನು. ಭಗವಂತನ ನೋಟ ಪರಮಾನುಗ್ರಹ ಮಾಡತಕ್ಕಂತಹ ನೋಟ. ಆತನ ಮಾಂಗಲಿಕ ನೋಟ ಯಾರ ಮೇಲೆ ಬಿತ್ತೋ ಆತ ಭಗವಂತನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಭಗವಂತ ಎಲ್ಲೆಲ್ಲೂ ಶುಭವನ್ನು ಕಾಣುತ್ತಾನೆ, ಆತ ಎಂದೂ ಕೆಟ್ಟದ್ದನ್ನು ಕಾಣುವುದಿಲ್ಲ. ಸಾಮಾನ್ಯರಾದ ನಮಗೆ ಹುಟ್ಟು ಮಾಂಗಲಿಕ ಹಾಗೂ ಸಾವು ಅಶುಭ. ಆದರೆ ಭಗವಂತನಿಗೆ ಹುಟ್ಟು ಎಷ್ಟು ಸಹಜ ಘಟನೆಯೋ, ಸಾವೂ ಕೂಡಾ ಅಷ್ಟೇ ಸಹಜ ಘಟನೆ. ಯಾದವರು ಹೊಡೆದಾಡಿ ಸಾಯುತ್ತಿರುವಾಗ ಕೃಷ್ಣ ನಗುತ್ತಾ ನಿಂತಿದ್ದನಂತೆ. ಏಕೆಂದರೆ ಭಗವಂತನಿಗೆ ಯಾವುದೂ ಅಶುಭವಲ್ಲ. ವೇದವ್ಯಾಸರು ಹೇಳುವಂತೆ: "ಈ ಸೃಷ್ಟಿಯಲ್ಲಿ ಈ ತನಕ ಯಾವುದೂ ಆಗಬಾರದ್ದು ಆಗಿಲ್ಲ ಹಾಗೂ ಇನ್ನು ಆಗುವುದೂ ಇಲ್ಲ". ಯಾವ ಘಟನೆ ಏಕೆ ಸಂಭವಿಸುತ್ತದೆ ಎನ್ನುವ ಪರಿಜ್ಞಾನ ಮಾತ್ರ ನಮಗಿಲ್ಲ ಅಷ್ಟೇ.

ಈ ನಾಮವನ್ನು ಒಡೆದರೆ ಶುಭ+ಈಕ್ಷ+ಣ. ಇಲ್ಲಿ ಶುಭ ಎಂದರೆ ಭಗವಂತ. ಏಕೆಂದರೆ ಆತನಿಗಿಂತ ಶುಭ ಇನ್ನೊಂದಿರಲು ಸಾಧ್ಯವಿಲ್ಲ. 'ಶುಭೇಕ್ಷರು' ಎಂದರೆ ಭಗವಂತನನ್ನು ತಿಳಿದವರು, ತಿಳಿದು ಕಂಡವರು. 'ಣ' ಎಂದರೆ 'ಬಲ'. ಆದ್ದರಿಂದ ಶುಭೇಕ್ಷಣಃ ಎಂದರೆ ಜ್ಞಾನಿಗಳಿಗೆ ಪರಮಾನಂದದ ನಿತ್ಯ ಪದವಿಯನ್ನು ಕೊಡುವವ; ಜ್ಞಾನಿಗಳಿಗೆ ಬೆಂಬಲವನ್ನೀಯುವವ; ಬರಿಯ ಕಣ್ಣ ನೋಟದಿಂದ ಸಕಲ ಪುರುಷಾರ್ಥವನ್ನೀಯುವ ಭಗವಂತ.

ರಾಮೋ ವಿರಾಮೋ ವಿರಜೋ ಮಾರ್ಗೋ ನೇಯೋ ನಯೋನಯಃ ।
ವೀರಃ ಶಕ್ತಿಮತಾಂ ಶ್ರೇಷ್ಠೋ ಧರ್ಮೋ ಧರ್ಮವಿದುತ್ತಮಃ ॥೫೭॥

೩೯೫) ರಾಮಃ

ರಾಮ ಎನ್ನುವ ನಾಮಕ್ಕೆ ಶಾಸ್ತ್ರದಲ್ಲಿ ಅನೇಕ ಅರ್ಥಗಳನ್ನು ಕಾಣಬಹುದು. 'ರಾ+ಅಮಃ', ಎಂದರೆ ಅಪರಿಮಿತವಾದ ಆನಂದ ಸ್ವರೂಪ ಹಾಗೂ ಎಲ್ಲರಿಗೂ ಆನಂದವನ್ನು ಹಂಚುವವನು. ಭಗವಂತನ ಈ ಗುಣ ರಾಮಾವತಾರದಲ್ಲಿ ಸ್ಪಷ್ಟವಾಗಿ ಕಾಣಸಿಗುತ್ತದೆ. ರಾಮಾವತಾರದಲ್ಲಿ ಭಗವಂತ ಎಲ್ಲಿಯೂ ಇನ್ನೊಬ್ಬರಿಗೆ ನೋವಾಗುವಂತೆ ನಡೆದುಕೊಂಡಿಲ್ಲ. ತನ್ನನ್ನು ಕಾಡಿಗೆ ಕಳುಹಿಸಲು ಕಾರಣಕರ್ತೆಯಾದ ಕೈಕೇಯಿಯ ಮೇಲೆ ಎಲ್ಲರೂ ಕೋಪಗೊಂಡಾಗಲೂ ಸಹ ರಾಮಚಂದ್ರ ಒಮ್ಮೆಯೂ ಕೂಡಾ ಕೆಟ್ಟ ಮಾತನ್ನು ಆಡಲಿಲ್ಲ, ಬದಲಿಗೆ "ಸಲಿಗೆಯಿಂದ ನನ್ನಿಂದೇನಾದರೂ ಅಪರಾಧವಾಗಿದ್ದರೆ ಕ್ಷಮಿಸು" ಎಂದು ಹೇಳಿ ಕಾಡಿಗೆ ಹೊರಟು ಹೋದ. ಹೀಗೆ ಇನ್ನೊಬ್ಬರ ಸಂತೋಷಕ್ಕಾಗಿ ತ್ಯಾಗಮಾಡಿ ತೋರಿಸಿದ ಅಪೂರ್ವ ಅವತಾರ ರಾಮಾವತಾರ. ರಮೆಯ ಅರಸಾದ ಸೀತಾಪತಿ ಭಗವಂತ ಈ ಅವತಾರದಲ್ಲಿ ಗಂಡು-ಹೆಣ್ಣಿನ ನಡುವೆ ದಾಂಪತ್ಯ ಜೀವನ ಹೇಗಿರಬೇಕು, ಅಣ್ಣ-ತಮ್ಮಂದಿರ ಪ್ರೀತಿ ಹೇಗಿರಬೇಕು, ತಂದೆ-ತಾಯಿ-ಮಕ್ಕಳ ಬಾಂಧವ್ಯ ಹೇಗಿರಬೇಕು ಎನ್ನುವುದನ್ನು ಸ್ವಯಂ ತೋರಿಸಿಕೊಟ್ಟಿದ್ದಾನೆ.

ರಂ+ಅಮ=ರಾಮ. ಇಲ್ಲಿ ರಂ 'ಅಗ್ನಿಬೀಜ', 'ಅಮ' ಎಂದರೆ ಅಜ್ಞಾನ. ಹಾಗಾಗಿ ರಾಮ ಎಂದರೆ ಅಜ್ಞಾನವನ್ನು ಸುಟ್ಟುಬಿಡುವ ಶಕ್ತಿ. ಆದ್ದರಿಂದ ನಿರಂತರ ರಾಮ ಜಪದಿಂದ ನಮ್ಮ ಅಜ್ಞಾನ ಹಾಗೂ ದುರ್ಗುಣಗಳು ಸುಟ್ಟು ಹೋಗುತ್ತವೆ.

೩೯೬) ವಿರಾಮಃ

ಒಬ್ಬೊಬ್ಬರಲ್ಲಿ ಒಂದೊಂದು ರೀತಿ ವಿಹರಿಸುವ, ಒಂದೊಂದು ಅವತಾರದಲ್ಲಿ ಒಂದೊಂದು ರೀತಿ ನಡೆದುಕೊಳ್ಳುವ, ವೈವಿಧ್ಯವಾಗಿ ಆನಂದವನ್ನು ಹಂಚುವ ಶಕ್ತಿ ವಿರಾಮಃ. ವಿರ+ಆಮಃ; ಇಲ್ಲಿ 'ವಿರರು' ಎಂದರೆ ಮುಕ್ತಿ ಯೋಗ್ಯರು; 'ಆಮ' ಎಂದರೆ ಜ್ಞಾನ. ಮುಕ್ತಿಯೋಗ್ಯರಿಗೆ ಪೂರ್ಣ ಜ್ಞಾನವನ್ನು ಕರುಣಿಸಿ ಉದ್ಧಾರ ಮಾಡುವ ಭಗವಂತ ವಿರಾಮಃ.

೩೯೭) ವಿರಜಃ

'ರಜ' ಎಂದರೆ ಕೊಳೆ. ವಿರಜಃ ಎಂದರೆ ಯಾವ ಕೊಳೆಯ ಸ್ಪರ್ಶವೂ ಇಲ್ಲದ ನಿತ್ಯ ಪವಿತ್ರವಾದ ಪರಿಶುದ್ಧ ವಸ್ತು. ಇದಕ್ಕೆ ಉತ್ತಮ ಉದಾಹರಣೆ 'ಬೆಂಕಿ'. ಬೆಂಕಿ ಎಂದೆಂದೂ ಪರಮಪವಿತ್ರ ಹಾಗೂ ಬೆಂಕಿಗೆ ಯಾವ ವಸ್ತುವನ್ನು ಹಾಕಿದರೂ ಅದು ಪವಿತ್ರವಾಗುತ್ತದೆ. ಭಗವಂತನಿಂದ ಸೃಷ್ಟಿಯಾದ 'ಬೆಂಕಿಗೆ' ಇಂತಹ ಗುಣವಿರಬೇಕಾದರೆ ಇನ್ನು ಭಗವಂತ ಎಷ್ಟು ಪವಿತ್ರವಿರಬಹುದು? ಇದು ನಮ್ಮ ಊಹೆಗೆ ಮೀರಿದ ವಿಚಾರ. ಹೀಗೆ ಎಂದೂ ಅಪವಿತ್ರವಾಗದ, ನಿತ್ಯ ಶುದ್ಧ ಸ್ವರೂಪ ಭಗವಂತ ವಿರಜಃ.

೩೯೮) ಮಾರ್ಗಃ

ಇಲ್ಲಿ ಮಾರ್ಗಃ ಎಂದರೆ 'ಅನ್ವೇಷಣ'; ಎಲ್ಲರೂ ಹುಡುಕುತ್ತಿರುವ ವಸ್ತು. ವೇದಗಳಿಗೆ ಪೂರ್ತಿ ಎಟುಕದ, ವೇದಾಭಿಮಾನಿ ದೇವತಗಳಿಗೆ ಇನ್ನೂ ಪೂರ್ತಿ ತಿಳಿಯಲಾಗದ, ಎಷ್ಟು ಹುಡುಕಿದರೂ ಮತ್ತೆ ಹುಡುಕಲು ಬಾಕಿ ಉಳಿಯುವ ಭಗವಂತ ಮಾರ್ಗಃ.

೩೯೯) ನೇಯಃ

ಎಷ್ಟು ಹುಡುಕಿದರೂ ಸಿಗದ ಭಗವಂತ ತನ್ನ ಭಕ್ತರು ಭಕ್ತಿಯಿಂದ ಕರೆದಾಗ ಕರೆದಲ್ಲಿಗೆ ಬಂದು ಸಲಹುತ್ತಾನೆ. ಇಂತಹ ಹೃತ್ಕಮಲ ಮಧ್ಯ ನಿವಾಸಿಯಾಗಿರುವ ಭಗವಂತ ನೇಯಃ.

ಸಹಸ್ರನಾಮ ವಿವರಣೆ-೪೦೦

೪೦೦) ನಯಃ

ಎಲ್ಲರನ್ನೂ ಪ್ರೇರೇಪಿಸುವ, ಎಲ್ಲಾ ನೀತಿ-ನಿಯಮಗಳನ್ನು ಮಾಡುವ ಸ್ವರೂಪ ಭಗವಂತ ನಯಃ.

೪೦೧) ಅನಯಃ

ಎಲ್ಲರನ್ನೂ ನಿಯಂತ್ರಿಸುವ, ಅಜ್ಞಾನಿಗಳ ಅರಿವಿಗೆ ಬರದ, ಜ್ಞಾನಿಗಳ ಬಳಿ ಸದಾ ಮಗುವಿನಂತಿರುವ, ಯಾರ ನೀತಿ-ನಿಯಮಗಳ ಕಟ್ಟುಪಾಡಿಗೂ ಸಿಲುಕದ, ತನ್ನ ನೀತಿಗೆ ತಾನು ಬದ್ಧನಾಗಿರುವ ಭಗವಂತ ಅನಯಃ.

೪೦೨) ವೀರಃ

ಇಡೀ ಜಗತ್ತನ್ನು ತನ್ನ ಪರಾಕ್ರಮದಿಂದ ಮಣಿಸಬಲ್ಲ ಶೌರ್ಯ ಉಳ್ಳವನು ವೀರಃ. ಈ ನಾಮವನ್ನು ಬಿಡಿಸಿ ನೋಡಿದಾಗ ವೀ+ಈರ ಎಂದಾಗುತ್ತದೆ. ವೀ ಎಂದರೆ ವಿಶಿಷ್ಟ. ಆದ್ದರಿಂದ ವೀರಃ ಎಂದರೆ ವಿಶಿಷ್ಟ ಜ್ಞಾನವನ್ನು ಪಡೆದ ಅಪರೋಕ್ಷ ಜ್ಞಾನಿಗಳನ್ನು ಪ್ರೇರೇಪಿಸುವ ಭಗವಂತ. 'ಈರ' ಎಂದರೆ ಅಪರೋಕ್ಷ ಜ್ಞಾನಿಗಳಲ್ಲಿ ಅತೀ ಎತ್ತರದಲ್ಲಿರುವ ಪ್ರಾಣ ದೇವರು. ಇಂತಹ ಪ್ರಾಣದೇವರಿಗೆ ಜ್ಞಾನದ ವಿಶಿಷ್ಟ ಸ್ಥಾನವನ್ನು ಕೊಟ್ಟ ಭಗವಂತ ವೀರಃ. ಸಮಸ್ತ ವೇದಗಳ ಅಭಿಮಾನಿ ದೇವತೆಯಾದ ಗರುಡನನ್ನು 'ವೀ' (ಹಕ್ಕಿ) ಎನ್ನುತ್ತಾರೆ. ಗರುಡ ವಾಹನನಾಗಿ ಬರುವ ವೇದವೇದ್ಯನಾದ ಭಗವಂತನನ್ನು ತಿಳಿಯಬೇಕಾದರೆ ಮೊದಲು ವೇದವನ್ನು ತಿಳಿಯಬೇಕು. ವೇದದಿಂದ ತಿಳಿಯಲ್ಪಡುವ ಭಗವಂತ ವೀರಃ.

೪೦೩) ಶಕ್ತಿಮತಾಂ ಶ್ರೇಷ್ಠಃ

ಜಗತ್ತಿನಲ್ಲಿರುವ ಸರ್ವಶಕ್ತಿಗಳ ಮೂಲ ಭಗವಂತ. ಆರ್ಥಿಕಶಕ್ತಿ, ದೈಹಿಕಶಕ್ತಿ, ಭೌತಿಕಶಕ್ತಿ, ಜನಶಕ್ತಿ, ಹೀಗೆ ಯಾವುದೇ ರೂಪದ ಶಕ್ತಿಯಿರಲೀ, ಅದನ್ನು ನಮಗೆ ಕೊಟ್ಟವ ಭಗವಂತ. ಭಗವಂತನ ಶಕ್ತಿ ನಮ್ಮಂತೆ ಬಾಹ್ಯವಲ್ಲ. ಆತ ಸ್ವರೂಪಭೂತವಾದ, ಶಾಶ್ವತವಾದ, ಅನಂತವಾದ, ಸ್ಥಿರವಾದ ಶಕ್ತಿ. ನಾವು ಭಗವಂತ ನಮಗೆ ಕೊಟ್ಟ ಶಕ್ತಿಯ ಅಹಂಕಾರದಲ್ಲಿ ಬದುಕುತ್ತೇವೆ. ಆದರೆ ನಮ್ಮ ಯಾವ ಶಕ್ತಿಯೂ ಸ್ಥಿರವಲ್ಲ. ಇಡೀ ಜಗತ್ತನ್ನು ಗೆದ್ದವ ಕೂಡಾ ಒಂದು ದಿನ ಸಾವಿಗೆ ಸೋಲಬೇಕು. ಭಗವಂತನ ಕಾಲಚಕ್ರ ಬ್ರಹ್ಮಾದಿ ದೇವತೆಗಳನ್ನೂ ಬಿಡುವುದಿಲ್ಲ. ಆದ್ದರಿಂದ ನಮ್ಮ ಶಕ್ತಿ ಕ್ಷಣಿಕ. ಹೀಗೆ ಶಕ್ತಿವಂತರಿಗೆಲ್ಲಾ ಹಿರಿಯ ಶಕ್ತಿ, ಮೂಲ ಶಕ್ತಿಸ್ವರೂಪ ಭಗವಂತ ಶಕ್ತಿಮತಾಂ ಶ್ರೇಷ್ಠಃ.

೪೦೪) ಧರ್ಮಃ

ಯಾವುದು ನಮ್ಮ ಬದುಕಿಗೆ ಆಧಾರವಾಗಿದೆಯೋ ಅದು ಧರ್ಮ. ಆದ್ದರಿಂದ ನಿಜವಾದ ಧರ್ಮ ಭಗವಂತ. ಭಗವಂತ ಒಂದು ವಸ್ತುವಿನ ಸ್ವರೂಪಭೂತವಾದ ಗುಣವನ್ನು ಅಭಿವ್ಯಕ್ತ ಮಾಡಿಸುತ್ತಾನೆಯೇ ಹೊರತು ಅಲ್ಲಿ ಇಲ್ಲದ ಗುಣವನ್ನಲ್ಲ. ವೈವಿಧ್ಯತೆ ಪ್ರಪಂಚ ಸೃಷ್ಟಿಯ ಸಹಜ ಕ್ರಿಯೆ. ವಸ್ತುವಿನ ಸಹಜ ಗುಣಕ್ಕನುಗುಣವಾಗಿ ಪ್ರಪಂಚ ಸೃಷ್ಟಿ ಮಾಡಿದ ಭಗವಂತ ಧರ್ಮಃ.

೪೦೫) ಧರ್ಮವಿದುತ್ತಮಃ

ನಿಜವಾದ ಧರ್ಮಜ್ಞ ಭಗವಂತನೊಬ್ಬನೇ. ಏಕೆಂದರೆ ಧರ್ಮ ಕಾಲಬಾದಿತ. ಒಂದು ಕಾಲದ ಧರ್ಮ ಇನ್ನೊಂದು ಕಾಲದಲ್ಲಿ ಅಧರ್ಮವಾಗಬಹುದು; ಒಂದು ವ್ಯಕ್ತಿಗೆ ಧರ್ಮವಾಗಿರುವ ವಿಷಯ ಇನ್ನೊಬ್ಬನಿಗೆ ಅಧರ್ಮವಾಗಬಹುದು; ಒಂದು ದೇಶದ ಧರ್ಮ ಇನ್ನೊಂದು ದೇಶಕ್ಕೆ ಅಧರ್ಮವಾಗಬಹುದು. ಆದ್ದರಿಂದ ಧರ್ಮ ಯಾವುದು ಎಂದು ಸಮಷ್ಠಿಯಾಗಿ ಹೇಳಲಾಗದು. ಧರ್ಮಕ್ಕೆ ಯಾವುದೇ ಮಾನದಂಡವಿಲ್ಲ. ಧರ್ಮ ಯಾವುದು ಎನ್ನುವುದು ಹೊರನೋಟದಿಂದ ಹೇಳಲಾಗದು. ಯಾವ ಕ್ರಿಯೆಯಿಂದ ನಮ್ಮ ಮನಸ್ಸು ಭಗವಂತನೆಡೆಗೆ ಒಲಿಯುತ್ತದೋ ಅದು ಧರ್ಮ.

ಯಾವುದರಿಂದ ನಾವು ಭಗವಂತನನ್ನು ಮರೆಯುತ್ತೇವೋ ಅದು ಅಧರ್ಮ. ಮಹಾಭಾರತದಲ್ಲಿ ಶ್ರೀಕೃಷ್ಣ ಧರ್ಮವನ್ನು ವಿಶಿಷ್ಟವಾಗಿ ಎಲ್ಲರಿಗೂ ತಿಳಿಹೇಳಿದ್ದನ್ನು ನಾವು ಕಾಣುತ್ತೇವೆ. ಇನ್ನೊಬ್ಬರ ಒಳಿತಿಗಾಗಿ ನಾವು ಸುಳ್ಳು ಹೇಳಿದರೆ ಅದು ಅಧರ್ಮವಲ್ಲ-ಧರ್ಮ ಎನ್ನುವ ವಿಷಯ ಕೃಷ್ಣ ಹೇಳುವ ತನಕ ಇನ್ಯಾರಿಗೂ ತಿಳಿದಿರಲಿಲ್ಲ. ಧರ್ಮವನ್ನು ತಿಳಿದವರಲ್ಲಿ ಉತ್ತಮನು ಭಗವಂತ. ಈ ಕಾರಣದಿಂದ ಧರ್ಮವಿದುತ್ತಮಃ ಎನ್ನುವುದು ಭಗವಂತನಿಗೆ ಅನ್ವರ್ಥ ನಾಮ.

ವೈಕುಂಠಃ ಪುರುಷಃ ಪ್ರಾಣಃ ಪ್ರಾಣದಃ ಪ್ರಣವಃ ಪೃಥುಃ ।
ಹಿರಣ್ಯಗರ್ಭಃ ಶತ್ರುಘ್ನೋ ವ್ಯಾಪ್ತೋ ವಾಯುರಧೋಕ್ಷಜಃ ॥೫೭॥

೪೦೬) ವೈಕುಂಠಃ

ಮುಕ್ತರಿಗೆ ಆನಂದಪ್ರದನಾದ ಭಗವಂತ ವೈಕುಂಠಪತಿ. ನಮಗೆ ತಿಳಿದಿರುವಂತೆ 'ಕುಂಠ' ಎಂದರೆ ಅಸಾಮರ್ಥ್ಯ, 'ವಿಕುಂಠ' ಎಂದರೆ ಬದುಕಿನ ನಡೆಯಲ್ಲಿ ಎಂದೂ ಜಾರದವರು-ಅಂದರೆ ಭಗವಂತನ ಸಾಕ್ಷಾತ್ಕಾರವಾದ ಮುಕ್ತರು. 'ಆಗಾಮಿ' ಹಾಗೂ 'ಸಂಚಿತ' ಕರ್ಮವಿಲ್ಲದ ಅಪರೋಕ್ಷ ಜ್ಞಾನಿಗಳನ್ನೂ ಕೂಡಾ 'ಪ್ರಾರಾಬ್ಧ ಕರ್ಮ' ಬಿಡುವುದಿಲ್ಲ. ಪ್ರಾರಾಬ್ಧ ಕರ್ಮ- ಬಿಟ್ಟ ಬಾಣದಂತೆ. ಆದರೆ ಮುಕ್ತಿಗೆ ಹೋದವರಿಗೆ ಯಾವ ಕರ್ಮದ ಲೇಪವೂ ಇಲ್ಲ. ಇಂತಹ ಮುಕ್ತಲೋಕದ ಪತಿಯಾದ ಭಗವಂತ ವೈಕುಂಠಃ. 'ನಡೆಯುವವರಿಗೂ ಭೂಮಿ ಆಸರೆ, ಜಾರಿ ಬೀಳುವವರಿಗೂ ಭೂಮಿ ಆಸರೆ' ಎನ್ನುವಂತೆ 'ವಿಕುಂಠರಿಗೆ' ಆಸರೆಯಾದ ಭಗವಂತ 'ವಿವಿಧ ಕುಂಠರಿಗೂ' ಆಶ್ರಯದಾತ. ಪಂಚಭೂತಗಳಿಂದಾದ ಈ ಪ್ರಪಂಚವನ್ನು 'ವಿಕುಂಠ' ಎನ್ನುತ್ತಾರೆ. ಮೂಲ ದ್ರವ್ಯಗಳಾದ ಮಣ್ಣು-ನೀರು-ಬೆಂಕಿಗಳಿಂದ ನಾನಾ ಪದಾರ್ಥಗಳನ್ನು ಸೃಷ್ಟಿ ಮಾಡಿದ ಭಗವಂತ ವೈಕುಂಠಃ

೪೦೭) ಪುರುಷಃ

ಪುರದಲ್ಲಿ ವಾಸಿಸುವವನು "ಪುರುಷಃ". ಸಮಸ್ತ ವೇದಗಳ ಸಾರಭೂತವಾದ ಸೂಕ್ತಗಳ ರಾಜ ಪುರುಷ ಸೂಕ್ತ ಭಗವಂತನನ್ನು 'ಸಹಸ್ರ ಶೀರ್ಷಾ ಪುರುಷಃ' ಎಂದು ಕರೆದಿದೆ. ಭಗವಂತನೊಬ್ಬನೇ ನಿಜವಾದ ಪುರುಷ. ಸೃಷ್ಟಿ ಕಾಲದಲ್ಲಿ ಏನೂ ಇಲ್ಲದಾಗಲೂ ಇದ್ದು, ಈ ಸೃಷ್ಟಿಯನ್ನು ನಿರ್ಮಾಣ ಮಾಡಿದ ಭಗವಂತ ಪುರಾ+ಷಃ. ಪ್ರಳಯ ಕಾಲದಲ್ಲಿ ಎಲ್ಲವನ್ನೂ ಸುಟ್ಟ ಭಗವಂತ ಪುರ-ಉಷ. ಪ್ರಪಂಚದಲ್ಲಿ ಅನಂತವಾಗಿ, ಅನಂತ ಕಾಲ, ಅನಂತ ಸಾಮರ್ಥ್ಯ, ಅನಂತ ಗುಣಗಳಿಂದ ತುಂಬಿರುವ ಭಗವಂತ ಪುರ-ಸಹ.

ಪ್ರಳಯ ಕಾಲದಲ್ಲಿ ಏನೂ ಇಲ್ಲದಾಗ ಇದ್ದು, ಸೃಷ್ಟಿ ಕಾಲದಲ್ಲಿ ತನ್ನ ನಾಭಿಯಿಂದ ಒಂದೊಂದನ್ನು ಸೃಷ್ಟಿ ಮಾಡಿದ ಭಗವಂತ ಮೊದಲು "ಮಹತತ್ವವನ್ನು" ಸೃಷ್ಟಿ ಮಾಡಿದ. ಮಹತತ್ವ ಎಂದರೆ ಇಡೀ ಪ್ರಪಂಚದ ಭೂತಪ್ರಜ್ಞೆ ಜಾಗೃತಿ. ಹಿಂದೆ ಇದ್ದ ಸಮಸ್ತ ಸೃಷ್ಟಿಯ ಸ್ಮರಣೆಯನ್ನು ಚಿತ್ತಾಭಿಮಾನಿ ಬ್ರಹ್ಮ-ವಾಯುವಿಗೆ ಕೊಟ್ಟು, ಸೂಕ್ಷ್ಮರೂಪದ ಪ್ರಪಂಚ ನಿರ್ಮಾಣ. ನಂತರ ದೇವತೆಗಳು, ಪಂಚಭೂತಗಳ ನಿರ್ಮಾಣ. ಹೀಗೆ ನಿರ್ಮಾಣವಾದ ಸ್ಥೂಲ ಬ್ರಹ್ಮಾಂಡದೊಳಗೆ ಭಗವಂತ ತುಂಬಿಕೊಂಡ. ಒಂದೊಂದು ಪಿಂಡಾಂಡದೊಳಗೆ ಒಂದೊಂದು ರೂಪದಲ್ಲಿ ಬಿಂಬ ರೂಪನಾಗಿ ತುಂಬಿ ಆ ಪಿಂಡಾಂಡದಿಂದ ಮಾಡಿಸಬೇಕಾದ ಕಾರ್ಯವನ್ನು ಮಾಡಿಸಿ ಮೋಕ್ಷವನ್ನು ಕರುಣಿಸುವ ಭಗವಂತ ಪುರುಷಃ. ಹೀಗೆ ಸೃಷ್ಟಿಯ ಮೊದಲು, ಸೃಷ್ಟಿಯ ಕಾಲದಲ್ಲಿ, ಸೃಷ್ಟವಾದ ವಸ್ತುವಿನೊಳಗೆ, ಸೃಷ್ಟಿಯ ಸಾಧನೆಯಲ್ಲಿ, ಸಾಧನೆಯಿಂದ ಮುಕ್ತಿಯ ತನಕ ಇರುವ ಹೃತ್ಕಮಲ ಮಧ್ಯ ನಿವಾಸಿ ಭಗವಂತ ಪೂರ್ಣವಾದ ಷಡ್ಗುಣಗಳಿಂದ ತುಂಬಿರುವ ಜ್ಞಾನಾನಂದ ಸ್ವರೂಪ.

ಪು+ರು+ಷಃ=ಪುರುಷಃ; ಇಲ್ಲಿ 'ಪು' ಎಂದರೆ ನಮ್ಮನ್ನು ಪಾವನಗೊಳಿಸುವ ಪರಮಪವಿತ್ರವಾದವ. 'ರು' ಎಂದರೆ 'ರುವಂತಿ'-ಪ್ರಪಂಚದ ಎಲ್ಲಾ ಶಬ್ದಗಳಿಂದ ವಾಚ್ಯನಾದವನು. 'ಷಃ' ಅಥವಾ 'ಸಹ' ಎಂದರೆ ಎಲ್ಲಾ ವಸ್ತುಗಳೊಳಗೆ

ತುಂಬಿರುವ ಸರ್ವಾಂತರ್ಯಾಮಿ ತತ್ವ. ಹೀಗೆ ಪುರುಷಃ ಎನ್ನುವ ಭಗವಂತನ ನಾಮ ಅನೇಕ ವಿಧದಲ್ಲಿ ತೆರೆದುಕೊಳ್ಳುತ್ತದೆ.

೪೦೮) ಪ್ರಾಣಃ

ಎಲ್ಲರ ಒಳಗಿದ್ದು ಸಮಸ್ತ ಚೇಷ್ಟೆಗಳನ್ನು ಮಾಡುವ ಭಗವಂತ ಪ್ರಾಣಃ. ಈ ಎಲ್ಲಾ ಚೇಷ್ಟೆಗಳು ಆತನ ಆನಂದದ ಅಭಿವ್ಯಕ್ತವೇ ಹೊರತು ಇನ್ನೇನನ್ನೋ ಪಡೆಯುವುದಕ್ಕೋಸ್ಕರ ಅಲ್ಲ. ಹೀಗೆ ಪೂರ್ಣವಾದ ಆನಂದದ ಸೆಲೆಯಾದ ಭಗವಂತ ಪ್ರಾಣಃ.

೪೦೯) ಪ್ರಾಣದಃ

ಪ್ರಾಣ+ದಃ- ಪ್ರಾಣದಃ. ಇಲ್ಲಿ 'ದ' ಎಂದರೆ ದ್ಯತಿ. ನಮ್ಮೊಳಗಿದ್ದು ಸಮಸ್ತ ಚೇಷ್ಟೆಗಳನ್ನು ಮಾಡುವ ಭಗವಂತ ಒಂದು ದಿನ ಪ್ರಾಣನೊಂದಿಗೆ ನಮ್ಮ ದೇಹವನ್ನು ತ್ಯಜಿಸುತ್ತಾನೆ. ಇಲ್ಲಿ ಯಾವುದೂ ನಮ್ಮ ಕೈಯಲ್ಲಿಲ್ಲ. ನಾವು ಭಗವಂತ ನಡೆಸಿದಷ್ಟು ಕಾಲ ಮಾತ್ರ ನಡೆಯಬಹುದು. ವ್ಯರ್ಥವಾಗಿ ಅಹಂಕಾರದ ಮೊರೆ ಹೋಗುವ ದುಷ್ಟರ ಆನಂದವನ್ನು ಸಂಹಾರ ಮಾಡುವ ಭಗವಂತ ಪ್ರಾಣದಃ.

೪೧೦) ಪ್ರಣವಃ

ಎಲ್ಲರಿಂದ ಸ್ತುತನಾದ ಓಂಕಾರ ಪ್ರತಿಪಾದ್ಯ ಭಗವಂತ ಪ್ರಣವಃ. ಭಗವಂತನ ಹಿರಿಮೆಯನ್ನರಿತವರು ಆತನತ್ತ ಮುಖ ಹಾಕುತ್ತಾರೆ. ತಮ್ಮ ಅಹಂಕಾರವನ್ನು ಕಳಚಿಕೊಂಡು ಆತನ ಹತ್ತಿರ ಹೋಗುತ್ತಾರೆ. ಭಗವಂತನ ಸ್ತುತಿಯಿಂದ ಭಗವಂತನಿಗೇನೂ ಲಾಭವಿಲ್ಲ. ಆತನನ್ನು ತಿಳಿದಾಗ ನಮ್ಮ ರಾಗ-ದ್ವೇಷ ಹೊರಟು ಹೋಗಿ ಆತನ ಸ್ತೋತ್ರದತ್ತ ಮನಸ್ಸು ಹರಿಯುತ್ತದೆ. ಹೀಗೆ ಜ್ಞಾನಿಗಳಿಂದ ಸ್ತುತನಾದ, ಮೂರು ಕಾಲದಲ್ಲೂ ಇರುವ ಅವಿನಾಶಿ ತತ್ವ ಭಗವಂತ ಪ್ರಣವಃ.

೪೧೧) ಪೃಥುಃ

ಭೂಮಿ (ಪೃಥ್ವಿ) ಹೇಗೆ ಎಲ್ಲವನ್ನೂ ಹೊತ್ತು ಸಲಹುತ್ತದೋ-ಅದೇ ರೀತಿ ಭಗವಂತ ಇಡೀ ವಿಶ್ವವನ್ನು ಹೊತ್ತು ಸಲಹುತ್ತಾನೆ. ಎಲ್ಲವನ್ನೂ ಹೊರುವ ವೈಶಾಲ್ಯವುಳ್ಳ ಭಗವಂತ ಸರ್ವ ವ್ಯಾಪ್ತನಾದವನು. ಇಂತಹ ವಿಶಾಲವಾದ ಸರ್ವವ್ಯಾಪಿ ಭಗವಂತ ಪೃಥುಃ.

೪೧೨) ಹಿರಣ್ಯಗರ್ಭಃ

ಒಡಲಲ್ಲಿ ವಿಶ್ವವೆಂಬ ಬಂಗಾರ ತುಂಬಿರುವ ಭಗವಂತ ಹಿರಣ್ಯಗರ್ಭಃ. ಇಲ್ಲಿ ಹಿರಣ್ಯ ಎಂದರೆ ಬಾಹ್ಯ ಪ್ರಪಂಚದ ಅಪೇಕ್ಷೆ ಇಲ್ಲದೆ ಅಂತರಂಗದಿಂದ ಚಿಮ್ಮುವ ಆನಂದ. ನಮ್ಮೊಳಗಿರುವ ಜ್ಞಾನಾನಂದವೇ ನಿಜವಾದ ಚಿನ್ನ. ಇದನ್ನು ಬಿಟ್ಟು ಹೊರಗಿನ ಚಿನ್ನದ ಬೆನ್ನು ಹತ್ತುವವರಿಗೆ ಭಗವಂತ ಎಂದೂ ದಕ್ಕುವುದಿಲ್ಲ. ಬಂಗಾರದ ಮೊಟ್ಟೆಯಾದ ಈ ಬ್ರಹ್ಮಾಂಡವನ್ನು ಸೃಷ್ಟಿಸಿದ ಚತುರ್ಮುಖನ ಅಂತರ್ಯಾಮಿ ಭಗವಂತ ಹಿರಣ್ಯಗರ್ಭಃ.

೪೧೩) ಶತ್ರುಘ್ನಃ

ಶ್ರೀರಾಮಚಂದ್ರನಿಗೆ ಶತ್ರುಘ್ನನೆಂಬ ತಮ್ಮನಿದ್ದ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ಎಂಬ ಭಗವಂತನ ರೂಪವೇ ರಾಮ, ಲಕ್ಷ್ಮಣ, ಭರತ ಮತ್ತು ಶತ್ರುಘ್ನ ಎಂದು ಅವತಾರದಲ್ಲಿ ನಮಗೆ ಕಾಣಿಸಿಕೊಂಡ ರೂಪ. ಶಂಖಾಭಿಮಾನಿ ಅನಿರುದ್ಧ ನಾಮಕ ಭಗವಂತ ಶತ್ರುಘ್ನನಲ್ಲಿ ಸನ್ನಿಹಿತನಾಗಿದ್ದ. ಶತ್ರುನಾಶಕ ಭಗವಂತನನ್ನು ಶತ್ರುಘ್ನ ಎನ್ನುತ್ತಾರೆ. ಇಲ್ಲಿ ಭಗವಂತನಿಗೆ ಶತ್ರುಗಳು ಯಾರು ಎನ್ನುವ ಪ್ರಶ್ನೆ ನಮ್ಮಲ್ಲಿ ಹುಟ್ಟಬಹುದು. ಭಗವಂತ ದ್ವೇಷ ಮಾಡುವ ವಸ್ತುಗಳೆಂದರೆ: ಅಜ್ಞಾನ, ವಿಪರೀತ ಜ್ಞಾನ, ಅತಿಕಾಮ, ಕ್ರೋಧ, ಇತ್ಯಾದಿ. ಸಾಧಕನ ಸಾಧನೆಗೆ

ಅಂತರಂಗದ ಶತ್ರುಗಳು ದುರ್ಗುಣಗಳು. ನಮ್ಮ ಅಂತರಂಗದ ಶತ್ರುಗಳು ತುಂಬಾ ಅಪಾಯಕಾರಿ. ಇದಕ್ಕೆ ನಿದರ್ಶನ ಮಹಾಭಾರತದ ಧೃತರಾಷ್ಟ್ರ. ಧೃತರಾಷ್ಟ್ರನ ಒಳಗಿದ್ದ 'ಪುತ್ರಮೋಹ' ಎನ್ನುವ ಶತ್ರು ಆತನನ್ನು ಅಧಃಪಾತಕ್ಕೆ ಕೊಂಡೊಯ್ದ ವಿಷಯ ನಮಗೆಲ್ಲಾ ತಿಳಿದೇ ಇದೆ. ನಾವು ಭಗವಂತನ ಬಗ್ಗೆ ಚಿಂತನೆ ಮಾಡಬೇಕಿದ್ದರೆ-ಮೊದಲು ನಮ್ಮ ಮನಸ್ಸು ದುರ್ಗುಣಗಳಿಂದ ಈಚೆ ಬರಬೇಕು. ನಾವು ಚಿಂತನೆ ಮಾಡಬೇಕೆಂದುಕೊಂಡಾಗ ಮನಸ್ಸು ನಿಂತ ಕಡೆ ನಿಲ್ಲುವುದಿಲ್ಲ. ಮಗು ತಾಯಿಯೇ ಬೇಕು ಎಂದು ಹಂಬಲಿಸಿ ಹೇಗೆ ಹಠ ಮಾಡಿ ತಾಯಿಯನ್ನು ಸೇರುತ್ತದೋ, ಅದೇ ರೀತಿ ನಾವು ಹಠ ಬಿಡದೆ ಭಗವಂತನನ್ನು ನೆನೆದರೆ ಆತ ಶತ್ರುಘ್ನನಾಗಿ ಬಂದು ನಮ್ಮ ಅಂತರಂಗದ ಶತ್ರುಗಳನ್ನು ನಾಶ ಮಾಡಿ, ಸಾಧನೆಯ ಹಾದಿಯಲ್ಲಿ ನಮ್ಮನ್ನು ಮುಂದೆ ನಡೆಸುತ್ತಾನೆ. ಹೀಗೆ ಜ್ಞಾನ ಮಾರ್ಗದ ಅರಿಗಳನ್ನು ತರಿಯುವವನು ಶತ್ರುಘ್ನ.

೪೧೪) ವ್ಯಾಪ್ತಃ

ಭಗವಂತ ಪರಮ ಆಪ್ತನಾದವನು. ಆತ ಜ್ಞಾನಿಗಳ ಆಪ್ತಗೆಳೆಯ ಹಾಗೂ ಅಭಯ. ಹೀಗೆ ಜ್ಞಾನಿಗಳ ಮಿತ್ರನಾಗಿ ಎಲ್ಲೆಡೆ ತುಂಬಿರುವ ಭಗವಂತ ವ್ಯಾಪ್ತಃ.

೪೧೫) ವಾಯುಃ

ಪ್ರತಿಯೊಂದು ಜೀವಜಾತದ ಒಳಗೂ ಹೊರಗೂ ತುಂಬಿರುವ; ಜಗವನ್ನು ಬೆಸೆದವ; ಜ್ಞಾನ ಸ್ವರೂಪ ಹಾಗೂ ನಮಗೆ ಉಸಿರನ್ನಿತ್ತ ಭಗವಂತ ವಾಯುಃ.

೪೧೬) ಅಧೋಕ್ಷಜಃ

ಎಂದೂ ಕೆಳಕ್ಕೆ ಕುಸಿಯದವನು ಮತ್ತು ಪ್ರತ್ಯಕ್ಷಕ್ಕೆ ಗೋಚರವಾಗದ ಭಗವಂತ ಅಧೋಕ್ಷಜಃ. ಭಾರತದಲ್ಲಿ ಹೇಳುವಂತೆ "ಅದೋ ನಕ್ಷೀಯತೆ ಜಾತು ಯಸ್ಮಾತ್ ತಸ್ಮಾಃ ಅಧೋಕ್ಷಜಃ". ಅಂದರೆ ಭಗವಂತ ಎಂದೂ ತನ್ನ ಎತ್ತರದ ಸ್ಥಿತಿಯಿಂದ ಕೆಳಕ್ಕಿಳಿಯುವುದಿಲ್ಲ. ಆ ಎತ್ತರ ಆತನ ಸ್ವರೂಪ ಧರ್ಮ. ಹೀಗೆ ಎಂದೆಂದೂ ಶ್ರೇಷ್ಠನಾಗಿರುವ, ಪ್ರತ್ಯಕ್ಷ ಗೋಚರವಾಗದ ಭಗವಂತ ಅಧೋಕ್ಷಜಃ.

ಋತುಃ ಸುದರ್ಶನಃ ಕಾಲಃ ಪರಮೇಷ್ಠೀ ಪರಿಗ್ರಹಃ ।
ಉಗ್ರಃ ಸಂವತ್ಸರೋ ದಕ್ಷೋ ವಿಶ್ರಾಮೋ ವಿಶ್ವದಕ್ಷಿಣಃ ॥೫೮॥

೪೧೭) ಋತುಃ

ಕಾಲಚಕ್ರಕ್ಕೆ ಋತು ಎನ್ನುತ್ತೇವೆ. ನಾವು ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ ಹಾಗೂ ಶಿಶಿರ ಎನ್ನುವ ಆರು ಋತುಗಳನ್ನು ಕಾಣುತ್ತೇವೆ. ವಸ್ತುತಃ ಋತುಗಳು ಐದೇ. ಹಿಮವನ್ನು ಕೊಡುವ ಹೇಮಂತ ಋತು ಹಾಗೂ ಚಳಿಯನ್ನು ಕೊಡುವ ಶಿಶಿರ ಋತು ಎರಡೂ ಒಂದೇ. ಋತುಗಳು ಕಾಲಚಕ್ರದ ಅರೆಗಳು(spokes). ಈ ಋತು ಚಕ್ರವನ್ನು ತಿರುಗಿಸಿ, ಕಾಲಕಾಲಕ್ಕೆ ಪರಿವರ್ತನೆಯನ್ನು ಮಾಡತಕ್ಕ ಭಗವಂತ ಋತುಃ. ಋತುವಾಗಿ ಬೇರೆಬೇರೆ ಕಾಲ ಧರ್ಮಗಳಿಂದ ಮನುಷ್ಯನಿಗೆ ಉಷ್ಣ, ಮಳೆ, ಚಳಿ, ಬೆಳೆ, ಚಿಗುರು, ಹೂ, ಹಣ್ಣನ್ನು ಕೊಟ್ಟು ಪ್ರಪಂಚಕ್ಕೆ ವೈವಿಧ್ಯವನ್ನು ಕೊಡುವ ಭಗವಂತ ಋತುಃ.

ಹೆಣ್ಣಿನಲ್ಲಿ ಋತುವಾಗಿ ಕೂತು ಹೊಸ ಜೀವ ಚಿಗುರಲು ಕಾರಣಕರ್ತನಾಗುವ ಭಗವಂತ ಋತುಃ. ಸಮಸ್ತ ವೇದಗಳಿಂದ ಜ್ಞಾನಿಗಳು ಅರಿಯುವ 'ಬದಲಾಗದ ಸತ್ಯ' ಭಗವಂತ ಋತುಃ.

೪೧೮) ಸುದರ್ಶನಃ

ಸುದರ್ಶನವನ್ನು ಕೈಯಲ್ಲಿ ಆಯುಧವಾಗಿ ತೊಟ್ಟ; ಸಮೀಚೀನವಾದ ಸುಂದರ ದರ್ಶನವನ್ನು ಕೊಡುವ; ಜ್ಞಾನಿಗಳ ರೂಪದಲ್ಲಿ ಸಮಸ್ತ ವೇದಗಳ ದರ್ಶನವನ್ನು ಕೊಡುವ; ಚಲುನೋಟದ ಭಗವಂತ "ಸು-ದರ್ಶನಃ"

೪೧೯) ಕಾಲಃ

ಕಾಲ ಎನ್ನುವುದು 'ಕಲ' ಎನ್ನುವ ಧಾತುವಿನಿಂದ ಬಂದ ಪದ. ಈ ಧಾತು ಅನೇಕ ಅರ್ಥವನ್ನು ಕೊಡುತ್ತದೆ. ಎಲ್ಲಾ ಗುಣಗಳನ್ನು, ಎಲ್ಲಾ ಸಾಮರ್ಥ್ಯವನ್ನು ತನ್ನೊಳಗೆ 'ಕಲೆ' ಹಾಕಿದವನು ಕಾಲಃ. ಭಗವಂತ ಸಮಸ್ತ ಸದ್ಗುಣಗಳಿಂದ ಪರಿಪೂರ್ಣವಾದ ತತ್ವ. ಈ ತತ್ವವನ್ನು ನಾವು ಅರಿಯದೇ ಅಹಂಕಾರಿಗಳಾದಾಗ, ಅದೇ ತತ್ವ 'ಕಾಲ ಪುರುಷನಾಗಿ' ನಮ್ಮ ಸಂಹಾರಕ್ಕೆ ಕಾರಣವಾಗುತ್ತದೆ. ಕೆಲವೊಮ್ಮೆ ನಮ್ಮ 'ಬದುಕಿನಲ್ಲಿ' ಉದ್ಧಾರವಿರುತ್ತದೆ, ಕೆಲವೊಮ್ಮೆ ನಮ್ಮ 'ಸಾವಿನಲ್ಲಿ' ನಮ್ಮ ಉದ್ಧಾರವಿರುತ್ತದೆ. ಕೆಲವೊಮ್ಮೆ ನಮ್ಮ 'ಮಾನದಲ್ಲಿ', ಇನ್ನು ಕೆಲವೊಮ್ಮೆ ನಮ್ಮ 'ಅವಮಾನದಲ್ಲಿ'; ಕೆಲವೊಮ್ಮೆ ನಮ್ಮ 'ಜ್ಞಾನದಲ್ಲಿ', ಇನ್ನು ಕೆಲವೊಮ್ಮೆ ನಮ್ಮ 'ಅಜ್ಞಾನದಲ್ಲಿ' ನಮ್ಮ ಉದ್ಧಾರವಿರುತ್ತದೆ. ಆದರೆ ನಮ್ಮ 'ಅಹಂಕಾರದಲ್ಲಿ' ಎಂದೆಂದೂ ಉದ್ಧಾರವಿಲ್ಲ. ಜಗತ್ತಿನಲ್ಲಿ ಅಹಂಕಾರ ಭರಿತ ಅಜ್ಞಾನ ತುಂಬಿದಾಗ ಭಗವಂತ 'ಕಾಲಪುರುಷನಾಗಿ' ಬೆಳೆದು ನಿಲ್ಲುತ್ತಾನೆ. ಇದನ್ನೇ ಗೀತೆಯಲ್ಲಿ ಕೃಷ್ಣ ಹೀಗೆ ಹೇಳಿದ್ದಾನೆ:

ಕಾಲೋऽಸ್ಮಿ ಲೋಕಕ್ಷಯಕೃತ್ ಪ್ರವೃದ್ಧೋ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ । (ಅ-೧೧ ಶ್ಲೋ-೩೨)

ಅಂದರೆ "ಲೋಕಗಳನ್ನು ಕಬಳಿಸಲು ಬೆಳೆದು ನಿಂತಿರುವ ಕಾಲಪುರುಷ ನಾನು" ಎಂದರ್ಥ. ಕಾಲ ಎನ್ನುವುದಕ್ಕೆ ಇನ್ನೊಂದು ಅರ್ಥ -'ಸಮಯ'. ಪ್ರತಿಯೊಂದು ಕ್ರಿಯೆಯ ಹಿಂದೆ 'ಕಾಲ' ಸರ್ವ ಕಾರಣವಾಗಿರುತ್ತದೆ. ಕಾಲ ನಿಯಾಮಕ ಭಗವಂತ ಕಾಲಃ.

ಜ್ಞಾನಕಾರಕವಾದ ಅವತಾರಗಳಿಂದ(ವ್ಯಾಸ, ಕಪಿಲ, ದತ್ತಾತ್ರಯ, ನರ-ನಾರಾಯಣ, ಇತ್ಯಾದಿ) ಅಜ್ಞಾನಕ್ಕೆ 'ಕಾಲವಾದ' ಭಗವಂತ, ಬಲಕಾರಕ ಅವತಾರಗಳಿಂದ(ನರಸಿಂಹ, ವರಾಹ, ರಾಮ, ಪರಶುರಾಮ, ಇತ್ಯಾದಿ) ಅಹಂಕಾರಕ್ಕೆ 'ಕಾಲನಾದ'. ಹೀಗೆ ಸರ್ವಗುಣಪೂರ್ಣ, ಸರ್ವಸಂಹಾರಕ ಹಾಗೂ ಕಾಲನಿಯಾಮಕ ಭಗವಂತ ಕಾಲಃ.

೪೨೦) ಪರಮೇಷ್ಠೀ

ಪರಮದಲ್ಲಿ ಸ್ಥಿತನಾದವನು. ಪರಮಾಕಾಶವೆಂಬ ಹೃತ್ಕಮಲ ಮಧ್ಯ ನಿವಾಸಿ ಭಗವಂತ ಪರಮೇಷ್ಠೀ. ಇಡೀ ವಿಶ್ವದ ಅನಂತ ಶಕ್ತಿ ಪ್ರತಿಯೊಬ್ಬ ಮನುಷ್ಯನ ಹೃತ್ಕಮಲದಲ್ಲಿ ಪೂರ್ಣ ಪ್ರಮಾಣದಲ್ಲಿ ಅಡಗಿದೆ. ನಮ್ಮ ಹೃದಯದ ಸ್ವಲ್ಪ ಮೇಲ್ಭಾಗದಲ್ಲಿನ ಅನಾಹತ ನಿರ್ನಾಳಗ್ರಂಥಿಯ **(Thymus gland)** ಒಳಗೆ ಕಮಲರೂಪದಲ್ಲಿ ಒಂದು ಸೂಜಿಯ ಮೊನೆಯಷ್ಟು ಸೂಕ್ಷ್ಮ ರೂಪದಲ್ಲಿ ಈ ಶಕ್ತಿಯ ಕೇಂದ್ರ ಅಡಗಿದೆ. ಇಂತಹ ಅದ್ಭುತ ಶಕ್ತಿ, ಎಲ್ಲಕ್ಕಿಂತ ಉತ್ಕೃಷ್ಟವಾದ ನಿತ್ಯಲೋಕ ವೈಕುಂಠ ನಿವಾಸಿ ಭಗವಂತ ಪರಮೇಷ್ಠೀ.

೪೨೧) ಪರಿಗ್ರಹಃ

ಪರಿಗ್ರಹ ಎಂದರೆ 'ಪರಿವಾರ' ಎನ್ನುವುದು ಒಂದು ಅರ್ಥ. ಎಲ್ಲಕ್ಕೂ ಮೂಲ ಸ್ವಾಮಿಯಾದ ಭಗವಂತನಿಗೆ ಸರ್ವರೂ ಪರಿಗ್ರಹವಾದರೆ, ಸ್ವಯಂ ಭಗವಂತ ಭಕ್ತರ, ಜ್ಞಾನಿಗಳ ಪರಿಗ್ರಹ. "ಹೂವ ತರುವವರ ಮನೆಗೆ ಹುಲ್ಲತರುವ" ಎನ್ನುವಂತೆ, ಭಕ್ತಿಯಿಂದ ಭಗವಂತನಿಗೆ ನಾವು ಹೂವನ್ನು ಅರ್ಪಿಸಿದರೆ ಆತ ನಮ್ಮ ಪರಿವಾರದವರಲೊಬ್ಬನಾಗಿ ಭಕ್ತರ ಸೇವೆ ಮಾಡುತ್ತಾನೆ.

ಪರಿತಃ+ಗ್ರಹ್ಯತಿ-ಅಂದರೆ ಎಲ್ಲಾ ಕಡೆ ಜ್ಞಾನಿಗಳ, ಭಕ್ತರ ಉಪಾಸ್ಯ ಮೂರ್ತಿಯಾಗಿ, ಪೂಜೆಯನ್ನು ಸ್ವೀಕರಿಸುವ ಭಗವಂತ. ನಾವು ಯಾವ ದೇವತೆಯನ್ನು ಶ್ರದ್ಧೆಯಿಂದ ಪೂಜಿಸಿದರೂ ಅದು ತಲುಪುವುದು ಭಗವಂತನನ್ನೇ. ಗೀತೆಯಲ್ಲಿ ಹೇಳುವಂತೆ:

ಯೇऽಪ್ಯನ್ಯ ದೇವತಾಭಕ್ತಾ ಯಜಂತೇ ಶ್ರದ್ಧಯಾऽನ್ವಿತಾಃ ।

ತೇऽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ (ಅ-೯, ಶ್ಲೋ-೨೩)

"ಕೌಂತೇಯ- ಯಾರು ಬೇರೆ ದೇವತೆಗಳ ಭಕ್ತರಾಗಿ ಶ್ರದ್ಧೆಯಿಂದ ಅವರನ್ನು ಆರಾಧಿಸುತ್ತಾರೋ-ಅಂತವರೂ ಕೂಡಾ ತಪ್ಪು ದಾರಿಯಿಂದ ನನ್ನನ್ನೇ ಪೂಜಿಸುತ್ತಾರೆ".

ಭಕ್ತರು ಪ್ರೀತಿಯಿಂದ, ಭಕ್ತಿಯಿಂದ ನೀಡುವ ಎಲ್ಲವನ್ನೂ ಎಲ್ಲೆಡೆ ಸ್ವೀಕರಿಸಿ ಉದ್ಧಾರ ಮಾಡುವ ಭಗವಂತ ಪರಿಗ್ರಹಃ.

೪೨೧) ಉಗ್ರಃ

ಮೇಲೆ ಹೇಳಿದಂತೆ ಎಲ್ಲರನ್ನೂ ಪ್ರೀತಿಸುವ ಭಗವಂತ ಅಂತಃಕರಣ ಶುದ್ಧಿ ಇಲ್ಲದೆ ಬಾಹ್ಯ ಪ್ರಪಂಚದಲ್ಲಿ ಸೋಗು ಹಾಕಿಕೊಂಡು ಬದುಕುವವರಿಗೆ ಉಗ್ರ! ಕರ್ತವ್ಯ ಚ್ಯುತನಾದರೆ ಭಗವಂತನ ರಾಜ್ಯದಲ್ಲಿ ಕ್ಷಮೆ ಇಲ್ಲ. ಭಗವಂತ ನಮ್ಮಲ್ಲಿ ಬಯಸುವುದು ಚಿನ್ನದ ಆಭರಣವನ್ನಲ್ಲ-ನಮ್ಮ ಕರ್ತವ್ಯ ನಿಷ್ಠೆಯನ್ನು. ಕರ್ತವ್ಯ ಭ್ರಷ್ಟನಾಗಿ ವೈಭವದ ಪೂಜೆ ಮಾಡಿದರೆ ಆತ ಎಂದೂ ಒಲಿಯುವುದಿಲ್ಲ. ಆತನ ರಾಜ್ಯದಲ್ಲಿ ಎಂದೂ ತಪ್ಪಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ತಪ್ಪು ಮಾಡಿದವನು ತಪ್ಪಿನ ಫಲ ಉಣ್ಣಲೇಬೇಕು. ಇದೇ "ಕರ್ಮಫಲ". ನಮಗೆ ಬರುವ ಅತಿಯಾದ ಕಷ್ಟ, ನಮ್ಮ ಮುಂದೆ ನಡೆಯುವ ದುರ್ಘಟನೆ, ಎಲ್ಲವೂ ನಮ್ಮ ಪೂರ್ವ ಪಾಪದ ಪ್ರತಿಫಲನ. "ಪುಣ್ಯ ಫಲವಿರಲಿ, ಪಾಪ ಫಲ ಬೇಡ" ಎಂದರೆ ಅದು ಸಾಧ್ಯವಿಲ್ಲ. ಅದನ್ನು ಅನುಭವಿಸಿಯೇ ತೀರಬೇಕು ! ಈ ವಿಷಯದಲ್ಲಿ ದಾಕ್ಷಣ್ಯವೇ ಇಲ್ಲ. ತಪ್ಪು ಮಾಡಿದವರಿಗೆ ನಿರ್ದಯವಾಗಿ ಶಿಕ್ಷೆ ಕೊಡುವ ಭಗವಂತ ಎಲ್ಲಿ ಅಪ್ರಮಾಣಿಕತೆ ಅಹಂಕಾರವಿದೆಯೋ ಅಲ್ಲಿ ಉಗ್ರನಾಗಿದ್ದು ನಮಗೆ ಶಿಕ್ಷಣವನ್ನು ಕೊಡುತ್ತಾನೆ!

೪೨೨) ಸಂವತ್ಸರಃ

ಈ ಹಿಂದೆ ಹೇಳಿದಂತೆ ಈ ನಮ್ಮ ದೇಹದಲ್ಲಿ ನಾಲ್ಕು ವಿಧದ "ಪುರುಷರಿದ್ದಾರೆ'. ಶರೀರಪುರುಷ, ಛಂದಃಪುರುಷ, ವೇದಪುರುಷ ಮತ್ತು ಸಂವತ್ಸರ ಪುರುಷ. ಈ ದೇಹ ನಿಂತು ನಡೆದಾಡಬೇಕಾದರೆ ದೇಹದಲ್ಲಿ ಶರೀರಪುರುಷನಾದ ಶಿವಶಕ್ತಿ ಬೇಕು. ಮನಸ್ಸು ಯೋಚಿಸಿದ್ದನ್ನು ಸ್ಪಂದನ, ಪರಾಶರ, ಪಶ್ಯಂತಿ, ಮಧ್ಯಮ ಮತ್ತು ವೈಖರಿ ರೂಪದಲ್ಲಿ ವಾಕ್ ಶಕ್ತಿಯಾಗಿ ಹೊರಹೊಮ್ಮುವಂತೆ ಮಾಡಲು ಛಂದಃಪುರುಷನಾದ ಶೇಷ ಶಕ್ತಿ ಅಗತ್ಯ. ವೇದದ ಅರ್ಥವನ್ನು ಮನನ ಮಾಡಿ ತಿಳಿಯುವ ಶಕ್ತಿ "ಗರುಡ ಶಕ್ತಿ". ಅದೇ "ವೇದಪುರುಷ". ಇದರಿಂದಾಚೆಗೆ ಚಿತ್ತವನ್ನು ಒಳಗಿನಿಂದ ಜಾಗೃತಗೊಳಿಸುವ ವಿಜ್ಞಾನಮಯ ಕೋಶದ ಅಭಿಮಾನಿ "ಬ್ರಹ್ಮ-ವಾಯು". ಇದುವೇ "ಸಂವತ್ಸರ ಪುರುಷ". ಈ ಸಂವತ್ಸರ ಪುರುಷರಲ್ಲಿ ನಿಯಾಮಕನಾಗಿ ಕುಳಿತ ಭಗವಂತ "ಪರಮ ಪುರುಷ". ಇದಕ್ಕಾಗಿ ಆತ ಸಂವತ್ಸರಃ.

ಸಂ+ವಸತ್+ರ-ಇಲ್ಲಿ "ಸಂ" ಎಂದರೆ ಸಂಪೂರ್ಣವಾದ ವಸ್ತು-ಭಗವಂತ, ವಸತ್ ಎಂದರೆ ನೆಲೆಸಿರುವುದು, 'ರ' ಎಂದರೆ ರಮಯತಿ. ಆದ್ದರಿಂದ ಸಂವತ್ಸರಃ ಎಂದರೆ "ಭಗವಂತನಲ್ಲಿ ತಮ್ಮ ಮನಸ್ಸನ್ನು ನೆಲೆಗೊಳಿಸಿದವರಿಗೆ ಪೂರ್ಣಾನಂದವನ್ನು ಕೊಡುವವ.

'ಸಂ' ಎಂದರೆ 'ಸಮ್ಯಕ್' ಎನ್ನುವ ಅರ್ಥವನ್ನೂ ಕೊಡುತ್ತದೆ. ಆದ್ದರಿಂದ ಸಂವತ್ಸರಃ ಎಂದರೆ ತನ್ನ ಪರಿಸರದೊಂದಿಗೆ ಚೆನ್ನಾಗಿ ಬದುಕುವವರಿಗೆ ಆನಂದವನ್ನು ಕೊಡುವವ ಎಂದರ್ಥ. ಇಲ್ಲಿ ಪರಿಸರದೊಂದಿಗೆ ಚನ್ನಾಗಿ ಬದುಕುವುದು ಎಂದರೆ- 'ಇನ್ನೊಬ್ಬರ ಖುಷಿಯನ್ನು ಕಂಡು ತಾನೂ ಖುಷಿ ಪಡುವುದು, ಇನ್ನೊಬ್ಬರ ಕಷ್ಟಕ್ಕೆ ಕರಗುವುದು, ಒಳ್ಳೆಯತನವನ್ನು ಪ್ರೀತಿಸುವುದು, ಕೆಟ್ಟತನದಿಂದ ದೂರ ನಿಲ್ಲುವುದು'. ಇದನ್ನು 'ಸಂ-ವಾಸ' ಎನ್ನುತ್ತಾರೆ. ಇಷ್ಟೇ ಅಲ್ಲದೆ 'ನನಗೆ ಯಾವುದು ಕಷ್ಟ ಕೊಡುತ್ತದೋ ಅದು ಇನ್ನೊಬ್ಬರಿಗೂ ಕಷ್ಟ ಕೊಡುತ್ತದೆ', 'ಇನ್ನೊಬ್ಬರಿಗೆ ಸುಖ-ದುಃಖದ

ಸ್ಪಂದನವಿದೆ' ಎಂದು ತಿಳಿದು ಬದುಕುವುದು; ಇನ್ನೊಬ್ಬರ ಸುಖಕ್ಕೋಸ್ಕರ ತಾನು ಕಷ್ಟ ಪಡುವುದು, ಇತ್ಯಾದಿ. ಭಗವಂತನ ಕಡೆ ಮುಖ ಹಾಕಿ ಸಾಗುವವರಿಗೆ ಆನಂದವನ್ನು ಕೊಡುವ ಭಗವಂತ ಸಂವತ್ಸರಃ.

೪೨೪) ದಕ್ಷಃ

ದಕ್ಷ ಎಂದರೆ ಸಮರ್ಥ. ಭಗವಂತ ಸರ್ವಸಮರ್ಥ **(Omnipotent).** ಆತ ಇಡೀ ವಿಶ್ವದ ಪ್ರತಿಯೊಂದು ವಸ್ತುವಿನ ಭೂತ-ಭವಿಷ್ಯತ್ ಹಾಗೂ ವರ್ತಮಾನವನ್ನು ಸಂಪೂರ್ಣ ತಿಳಿದಿದ್ದಾನೆ. ಭಗವಂತ ಸರ್ವವನ್ನೂ ಕಾಣಬಲ್ಲ ಶಕ್ತಿ. ನಮ್ಮಲ್ಲಿರುವ ಕಿಂಚಿತ್ ದಕ್ಷತೆ ಭಗವಂತನ ಪ್ರಸಾದ. ಎಲ್ಲಾ ದಕ್ಷರಿಗೂ ದಕ್ಷತೆಯನ್ನು ಕೊಡುವ ಪೂರ್ಣದಕ್ಷ ಭಗವಂತನೊಬ್ಬನೇ. ಆತನ ದಕ್ಷತೆಯನ್ನು ವರ್ಣಿಸುವುದು ಅಸಾಧ್ಯ. ಆತನೊಬ್ಬ ವೈಶಿಷ್ಟ್ಯಪೂರ್ಣ ವಿನ್ಯಾಸಕಾರ. ಈ ಜಗತ್ತಿಗೆ ವೈಶಿಷ್ಟವನ್ನು ಕೊಟ್ಟು, ನಿರ್ಮಿಸಿ ಸಲಹುವ ಕಾರ್ಯಸಮರ್ಥ ಭಗವಂತ ದಕ್ಷಃ

೪೨೫) ವಿಶ್ರಾಮಃ

ಭಗವಂತ ಸಂಹಾರ ಕರ್ತ ಎಂದಾಗ ನಮಗೆ ಆಶ್ಚರ್ಯವಾಗುತ್ತದೆ. ಯಾರೂ ತನ್ನ ಕೈಯಾರೆ ತನ್ನ ಮಕ್ಕಳನ್ನು ಸಂಹಾರ ಮಾಡುವುದಿಲ್ಲ. ಆದರೆ ಭಗವಂತ ಪ್ರಳಯಕಾಲದಲ್ಲಿ ತನ್ನ ಅದ್ಭುತ ಸೃಷ್ಟಿಯನ್ನು ತಾನೇ ಸಂಹಾರ ಮಾಡುತ್ತಾನೆ! ಭಗವಂತನ ಸಂಹಾರ ನಾಶವಲ್ಲ-ಅದು ವಿಶ್ರಾಂತಿ. ಜೀವನ ಚಕ್ರದಲ್ಲಿ ಬಳಲಿ ಬೆಂಡಾದ ಜೀವಕ್ಕೆ ವಿಶ್ರಾಂತಿ ಕೊಡುವ ಕಾಲ 'ಪ್ರಳಯ ಕಾಲ'. ಅನೇಕ ಜನ್ಮಗಳಲ್ಲಿ ದೇಹ ಬದಲಾವಣೆ ಮಾಡುತ್ತಾ ಸಾಧನೆಯಲ್ಲಿ ಮುಂದೆ ಸಾಗಿ, ಕೊನೆಯ ದೇಹವೂ ಕಳಚಿ ಬಿದ್ದ ಮೇಲೆ, ಪೂರ್ತಿಯಾಗಿ ವಿಶ್ರಾಂತಿ ಕೊಟ್ಟು ಮೋಕ್ಷ ಸುಖ ಕೊಡುವ ಭಗವಂತ ವಿಶ್ರಾಮಃ.

೪೨೬)ವಿಶ್ವದಕ್ಷಿಣಃ

'ದಕ್ಷಿಣ' ಎಂದರೆ 'ನಿಷ್ಪಕ್ಷಪಾತಿ'. ಭಗವಂತ ಇಡೀ ವಿಶ್ವವನ್ನು ಸೃಷ್ಟಿಮಾಡಿ ಸಲಹುವಾಗ ಎಂದೂ ಎಲ್ಲಿಯೂ ಪಕ್ಷಪಾತ ಮಾಡಿಲ್ಲ. ಇಡೀ ವಿಶ್ವವನ್ನು ನಿಷ್ಪಕ್ಷಪಾತವಾಗಿ ದಕ್ಷತೆಯಿಂದ ನಿರ್ವಹಿಸುವ, ಸರ್ವಸ್ವವನ್ನೀಯುವ ಮಹಾ ಉದಾರಿ ಭಗವಂತ ವಿಶ್ವದಕ್ಷಿಣಃ.

**ವಿಸ್ತಾರಃ ಸ್ಥಾವರಸ್ಥಾಣುಃ ಪ್ರಮಾಣಂ ಬೀಜಮವ್ಯಯಮ್ ।**
**ಅರ್ಥೋಽನರ್ಥೋ ಮಹಾಕೋಶೋ ಮಹಾಭೋಗೋ ಮಹಾಧನಃ ॥೪೯॥**

೪೨೭) ವಿಸ್ತಾರಃ

ಇದು ಸೃಷ್ಟಿಯ ರಹಸ್ಯವನ್ನು ಹೇಳುವ ಒಂದು ಸುಂದರವಾದ ನಾಮ. ಪ್ರಳಯಕಾಲದಲ್ಲಿ ಸ್ಥೂಲವಾದ ಈ ಪ್ರಪಂಚ ಸೂಕ್ಷ್ಮ ರೂಪದಲ್ಲಿ ಉಳಿಯುತ್ತದೆ. ಸೃಷ್ಟಿ ಕಾಲದಲ್ಲಿ ಸೂಕ್ಷ್ಮವಾಗಿರುವ ಪ್ರಪಂಚವನ್ನು ಭಗವಂತ ವಿಸ್ತಾರಗೊಳಿಸಿ ಸ್ಥೂಲ ಪ್ರಪಂಚ ನಿರ್ಮಾಣ ಮಾಡುತ್ತಾನೆ. ಮಹತತ್ವ-ಅಹಂಕಾರ ತತ್ವ-ಆಕಾಶ-ಗಾಳಿ-ಬೆಂಕಿ-ನೀರು-ಭೂಮಿ ಹೀಗೆ ಸೃಷ್ಟಿ ಸೂಕ್ಷ್ಮರೂಪದಿಂದ ಸ್ಥೂಲ ಪ್ರಪಂಚವಾಗಿ ವಿಸ್ತಾರಗೊಳ್ಳುತ್ತದೆ. ಇಲ್ಲಿ ಸೃಷ್ಟಿ ಎಂದರೆ ಇಲ್ಲದ ಸೃಷ್ಟಿ ಅಲ್ಲ. ಇದ್ದದ್ದನ್ನು ಸ್ಥೂಲರೂಪಗೊಳಿಸಿ, ಕಾಣುವ ರೂಪ ಕೊಡುವುದು. ನಾಮಾತ್ಮಕ ಪ್ರಪಂಚದಿಂದ ನಾದ, ನಾದದಿಂದ ತರಂಗ, ನಾದ ಮತ್ತು ತರಂಗದಿಂದ ರೂಪ. ಈ ರೂಪ ಬೆಳೆದು ವಿಸ್ತಾರವಾಗಿ ಅಖಂಡ ಬ್ರಹ್ಮಾಂಡ ನಿರ್ಮಾಣ. ಪ್ರಪಂಚವನ್ನು ಸೂಕ್ಷ್ಮ ರೂಪದಿಂದ ಸ್ಥೂಲ ರೂಪವನ್ನಾಗಿ ವಿಸ್ತರಿಸಿ ಪ್ರತಿಯೊಂದು ವಸ್ತುವಿನಲ್ಲೂ ಆಯಾ ರೂಪದಲ್ಲಿ ಭಗವಂತ ತುಂಬಿಕೊಂಡ. ಇದು ಒಂದು ಹಣತೆಯಿಂದ ಸಹಸ್ರಾರು ಹಣತೆಗಳನ್ನು ಹಚ್ಚಿದಂತೆ. ಒಂದು ದೀಪದಿಂದ ಇನ್ನೊಂದು ದೀಪ ಹಚ್ಚಿದಾಗ ಮೂಲ ದೀಪ ತನ್ನ ಪ್ರಕಾಶವನ್ನು ಕಳೆದುಕೊಳ್ಳುವುದಿಲ್ಲ. ಇದೇ ರೀತಿ ಭಗವಂತ ಸಮಸ್ತ ಬ್ರಹ್ಮಾಂಡದಲ್ಲಿ ಸಮಸ್ತ ಚರಾಚರಗಳಲ್ಲಿ ಬೆಳಕಾಗಿ ತುಂಬಿದ. ಪ್ರತಿಯೊಂದು ಜೀವರಲ್ಲಿ ಸಂತಾನ ವಿಸ್ತಾರ

ಅಥವಾ ಜ್ಞಾನ ವಿಸ್ತಾರದ ಬಯಕೆಯ ಬೀಜವನ್ನು ಬಿತ್ತಿ ಈ ಪ್ರಪಂಚದ ವಿಸ್ತಾರಕ್ಕೆ ಕಾರಣನಾದ. ಹೀಗೆ ಪ್ರಪಂಚ ಸೃಷ್ಟಿ ಹಾಗೂ ಅದರ ವಿಸ್ತಾರದ ಮೂಲನಾದ ಭಗವಂತ ವಿಸ್ತಾರಃ.

೪೧೮) ಸ್ಥಾವರಃ

ಸ್ಥಾ+ಅವ+ರ-ಸ್ಥಾವರ. 'ಸ್ಥಾ' ಎಂದರೆ ಪ್ರತಿಯೊಂದು ವಸ್ತುವಿನಲ್ಲಿ ಸನ್ನಿಹಿತನಾದ, ನಮ್ಮ ಹಿತಕ್ಕೋಸ್ಕರ, ನಮ್ಮ ರಕ್ಷಣೆಗೋಸ್ಕರ ಸ್ಥಿತನಾದ ಭಗವಂತ. 'ಅವ' ಎಂದರೆ ನಮ್ಮ ಆಗು ಹೋಗುಗಳನ್ನು, ನಾವು ಮಾಡಲಾಗದ್ದನ್ನು ನಮ್ಮೊಳಗೆ ಕುಳಿತು ಮಾಡಿಸುವ ಭಗವಂತ. 'ರ' ಎಂದರೆ ರಮಿಸುವುದು. ಇಡೀ ವಿಶ್ವವನ್ನು ಸೃಷ್ಟಿ ಮಾಡುವುದು, ಸೃಷ್ಟಿ ಮಾಡಿ ಅದರೊಳಗೆ ಪ್ರವೇಶ ಮಾಡುವುದು, ಪ್ರವೇಶಿಸಿ ಎಲ್ಲರನ್ನೂ ರಕ್ಷಿಸಿ ನೆಡೆಸಿ ಕೊನೆಗೆ ಸಂಹಾರ ಮಾಡುವುದು ಭಗವಂತನ ಆನಂದದ ಲೀಲೆ. ಇಂತಹ ಭಗವಂತನಿಗೆ 'ಸ್ಥಾವರಃ' ಅನ್ವರ್ಥ ನಾಮ.

೪೧೯) ಸ್ಥಾಣುಃ

ಎಂದೂ ಸ್ಥಿರತೆಯನ್ನು ಕಳೆದುಕೊಳ್ಳದ ವಸ್ತು, ಜೀವ ಸ್ವರೂಪದೊಳಗೆ ಅಣುವಿಗಿಂತ ಅಣುವಾಗಿ ಕುಳಿತ ಹೃತ್ಕಮಲ ಮಧ್ಯ ನಿವಾಸಿ ಭಗವಂತ ಸ್ಥಾಣುಃ. ನಮ್ಮೊಳಗಿರುವ ವಿಶ್ವರೂಪಿ ಭಗವಂತ ಎಷ್ಟು ಸೂಕ್ಷ್ಮ ಎಂದರೆ ಅದನ್ನು ನಾವು ಊಹಿಸುವುದು ಅಸಾಧ್ಯ. ಕುದುರೆಯ ಬಾಲದ ಕೂದಲಿನ ತುದಿ ಭಾಗವನ್ನು ಸುಮಾರು ಹತ್ತು ಸಾವಿರ ಭಾಗವನ್ನಾಗಿ ಮಾಡಿದರೆ ಅದರ ಒಂದು ಭಾಗ ಎಷ್ಟು ಗಾತ್ರದಲ್ಲಿರಬಹುದೋ ಅಷ್ಟು ಸೂಕ್ಷ್ಮಾತಿ ಸೂಕ್ಷ್ಮ ರೂಪದಲ್ಲಿರುವ ನಮ್ಮ ಸ್ವರೂಪಭೂತ ಜೀವದೊಳಗೆ ಭಗವಂತ ಸ್ಥಿತನಾಗಿದ್ದಾನೆ. ಹೀಗೆ ಅಚಲನಾದ, ಯಾವ ಶಕ್ತಿಗೂ ಅಭೇಧ್ಯನಾದ, ನಿರ್ವಿಕಾರ ಭಗವಂತ ಸ್ಥಾಣುಃ.

೪೨೦) ಪ್ರಮಾಣಮ್

ಎಲ್ಲಕ್ಕೂ ಕೊನೇಯ ಪ್ರಮಾಣ ಭಗವಂತ. ಯಾವುದು ಸರಿ, ಯಾವುದು ತಪ್ಪು, ಯಾವುದು ಧರ್ಮ, ಯಾವುದು ಅಧರ್ಮ ಎನ್ನುವುದಕ್ಕೆ ಭಗವಂತನೊಬ್ಬನೇ ಕೊನೇಯ ಪ್ರಮಾಣ. ಜಗತ್ತಿನ ಎಲ್ಲಾ ಪ್ರಮಾಣಗಳು(ಎಲ್ಲಾ ವೇದ ಶಾಸ್ತ್ರಗಳು) ಯಾರನ್ನು ಹೇಳುತ್ತವೋ ಅವನು ಪ್ರಮಾಣಃ.

'ಪ್ರಮಾ' ಎಂದರೆ 'ಯಥಾರ್ಥ ಜ್ಞಾನ', 'ಅಣಯತಿ' ಎಂದರೆ ನಮ್ಮೊಳಗಿದ್ದು ದಯಪಾಲಿಸುವುದು. ಭಗವಂತನನ್ನು ಬರಿದೆ ವೇದಗಳನ್ನೋದುವುದರಿಂದ ಕಾಣಲು ಸಾಧ್ಯವಿಲ್ಲ. ತಪಸ್ಸಿನಿಂದ, ದಾನದಿಂದ, ಯಜ್ಞದಿಂದ ಕಾಣಲು ಸಾಧ್ಯವಿಲ್ಲ. ಆತನನ್ನು ಕಾಣಲು ಆತನ ಬಗ್ಗೆ ಯಥಾರ್ಥ ಜ್ಞಾನ ಬೇಕು. ನಮ್ಮೊಳಗಿದ್ದು ನಮಗೆ ಇಂತಹ ಜ್ಞಾನವನ್ನು ಕೊಡುವ ಭಗವಂತ ಪ್ರಮಾಣಮ್. ಆತನನ್ನು ಕಾಣಲು ಕೇವಲ ಭಕ್ತಿಯಿಂದ ಮಾತ್ರ ಸಾಧ್ಯ. ಇದನ್ನೇ ಶ್ರೀಕೃಷ್ಣ ಗೀತೆಯಲ್ಲಿ ಹೀಗೆ ಹೇಳಿದ್ದಾನೆ:

ನಾಹಂ ವೇದೈರ್ನ ತಪಸಾ ನ ದಾನೇನ ನಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥(ಅ-೧೧, ಶ್ಲೋ -೫೩)
ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ॥ (ಅ-೧೧, ಶ್ಲೋ ೫೪)

"ನನ್ನನ್ನು ಕಾಣಲು ಬರಿದೆ ವೇದಗಳನ್ನೋದುವುದರಿಂದ ಸಾಧ್ಯವಿಲ್ಲ. ಇಲ್ಲ ತಪಸ್ಸಿನಿಂದ, ಇಲ್ಲ ದಾನದಿಂದ, ಇಲ್ಲ ಯಜ್ಞದಿಂದಲೂ. ನನ್ನನ್ನು ಈ ಪರಿ ಸರಿಯಾಗಿ ಅರಿಯಲು, ಅರಿತು ಕಾಣಲು, ಕಂಡು ಸೇರಲು ನನ್ನಲ್ಲೇ ನೆಲೆಗೊಂಡ ಭಕ್ತಿಯಿಂದ ಮಾತ್ರವೇ ಸಾಧ್ಯ".

೪೨೧) ಬೀಜಮವ್ಯಯಮ್

ಭಗವಂತ ಎಂದೂ ವಿಕಾರಗೊಳ್ಳದ, ನಾಶವಾಗದ ಬೀಜ. ಈ ಜಗತ್ತು ಭಗವಂತನೆಂಬ ಬೀಜದಿಂದಲೇ ಹುಟ್ಟಿ ಬಂತು. ಆದರೆ ಆ ಬೀಜ ಜಗತ್ತಾಗಿ ವಿಕಾರಗೊಂಡ ಬೀಜವಲ್ಲ. ಭಗವಂತನಿಂದ ಈ ಪ್ರಪಂಚ ಅಭಿವ್ಯಕ್ತವಾಯಿತೇ ಹೊರತು ಭಗವಂತ ಪ್ರಪಂಚವಾಗಿ ರೂಪಾಂತರಗೊಂಡಿದ್ದಲ್ಲ. ಈ ಪ್ರಪಂಚ ಆತನ ಶರೀರವಲ್ಲ. ಜ್ಞಾನಾನಂದಮಯನಾದ ಭಗವಂತ ಈ ಪ್ರಪಂಚದ ಮೂಲ ಕಾರಣ ಹಾಗೂ ಧಾರಕಶಕ್ತಿ. ಹೀಗೆ ಅಳಿವಿರದ, ವಿಕಾರಗೊಳ್ಳದ ಜಗದ ಮೂಲಕಾರಣ ಭಗವಂತ ಬೀಜಮವ್ಯಯಮ್.

೪೩೧) ಅರ್ಥಃ

ಅರ್ಥಃ ಎಂದರೆ ಎಲ್ಲರೂ ಬಯಸುವಂತವನು. ಮನುಷ್ಯನು ಬಯಸುವ ಬಯಕೆಗಳಲ್ಲಿ ಶ್ರೇಷ್ಠವಾದ ಬಯಕೆ ಭಗವಂತನ ಬಯಕೆ. ಬಯಕೆಗಳ ಬಗ್ಗೆ ಹೇಳುವಾಗ ಮಹಾಭಾರತದ ಒಂದು ಘಟನೆ ಇಲ್ಲಿ ನೆನಪಿಗೆ ಬರುತ್ತದೆ. ಒಮ್ಮೆ ಧರ್ಮರಾಯನ ಸಮ್ಮುಖದಲ್ಲಿ ಧರ್ಮ, ಅರ್ಥ ಮತ್ತು ಕಾಮ ಈ ಮೂರು ಪುರುಷಾರ್ಥಗಳಲ್ಲಿ ಶ್ರೇಷ್ಠವಾದ ಪುರುಷಾರ್ಥ ಯಾವುದು ಎನ್ನುವ ವಿಷಯದ ಬಗ್ಗೆ ಚರ್ಚೆಯಾಗುತ್ತದೆ. ಆಗ ಸಭೆಯಲ್ಲಿದ್ದ ಪ್ರಮುಖರು 'ಧರ್ಮವೇ' ಶ್ರೇಷ್ಠವಾದ ಪುರುಷಾರ್ಥ ಎಂದು ಹೇಳುತ್ತಾರೆ. ಇದಕ್ಕೆ ವಿರೋಧಿಸಿದ ಅರ್ಜುನ ಧರ್ಮಕ್ಕಿಂತ ಅರ್ಥವೇ ಮೇಲು, ಏಕೆಂದರೆ ಬಡವನನ್ನು ಈ ಪ್ರಪಂಚದಲ್ಲಿ ಯಾರೂ ಗುರುತಿಸಲಾರರು, ಧರ್ಮವನ್ನು ಪಾಲಿಸಲು 'ಅರ್ಥ' ಮುಖ್ಯ ಎಂದು ವಾದಿಸುತ್ತಾನೆ. ಕೊನೆಯದಾಗಿ ಭೀಮಸೇನ ಎಲ್ಲರ ವಾದವನ್ನು ಬದಿಗಿರಿಸಿ, ಸರ್ವಶ್ರೇಷ್ಠ ಪುರುಷಾರ್ಥ 'ಕಾಮ' ಎನ್ನುತ್ತಾನೆ! ಎಲ್ಲರಿಗೂ ಈ ಬಗ್ಗೆ ಆಶ್ಚರ್ಯವಾಗುತ್ತದೆ. ನಾವು 'ಕಾಮ' ಎಂದಾಗ ಅದರ ಅತ್ಯಂತ ಸೀಮಿತ ಅರ್ಥವನ್ನು ಮಾತ್ರ ನೋಡುತ್ತೇವೆ. 'ಕಾಮ' ಎಂದರೆ ಬಯಕೆ **(desire)**. ನಮಗೆ ಬಯಕೆಗಳೇ ಇಲ್ಲದಿದ್ದರೆ ಧರ್ಮವೂ ಇಲ್ಲ, ಅರ್ಥವೂ ಇಲ್ಲ! ಧರ್ಮ ಮಾರ್ಗದಲ್ಲಿ ನಡೆಯಬೇಕು ಎನ್ನುವ ಬಯಕೆ ಇಲ್ಲದಿದ್ದರೆ ಧರ್ಮ ಅಸಾಧ್ಯ! ಜ್ಞಾನಿಗಳಿಗೆ ಇರುವ ಅತ್ಯಂತ ಮಹಾನ್ ಬಯಕೆ ದೇವರನ್ನು ಕಾಣಬೇಕು ಎನ್ನುವುದು. ಹೀಗೆ ಎಲ್ಲರೂ ಬಯಸುವ ಭಗವಂತ ಅರ್ಥಃ.

ಸಮಸ್ತ ವೇದಗಳ ಮುಖ್ಯಾರ್ಥ ಭಗವಂತನೊಬ್ಬನೆ. ಮೇಲ್ನೋಟಕ್ಕೆ ವೇದ- 'ಕರ್ಮ', 'ವ್ಯವಹಾರ', 'ಪ್ರಪಂಚವನ್ನು' ಹೇಳುವಂತೆ ಕಾಣಿಸಿದರೂ, ವೇದದ ಮುಖ್ಯಾರ್ಥ ಭಗವಂತ. ಹೀಗೆ ಸರ್ವವೇದಗಳಿಂದ, ಸರ್ವಶಬ್ದಗಳಿಂದ ವಾಚ್ಯನಾದ, ಎಲ್ಲರೂ ಬಯಸುವ ಭಗವಂತ ಅರ್ಥಃ

೪೩೩) ಅನರ್ಥಃ

ಸೃಷ್ಟ್ಯಾದಿಗಳಿಂದ ತನಗೆ ಯಾವ ಪ್ರಯೋಜನವೂ ಇರದವನು ಅನರ್ಥಃ. ಈ ಪ್ರಪಂಚವನ್ನು ಯಾವುದೇ ಸ್ವಪ್ರಯೋಜನಕ್ಕಲ್ಲದೆ, ನಮಗಾಗಿ ನಿರ್ಮಿಸಿರುವ ಭಗವಂತ, ತನ್ನ ನಿಯಮವನ್ನು ತಾನೂ ಪಾಲಿಸುತ್ತಾನೆ. ಪ್ರಕೃತಿಯ ನಿಯಮವನ್ನು ಮೀರಿ ನಡೆಯುವವರಿಗೆ ಆತ ಅನರ್ಥ. ವೇದಗಳನ್ನು ನಾಶಮಾಡಲು ಹೊರಟ ಹಯಗ್ರೀವನಿಗೆ ಮತ್ಸ್ಯಾವತಾರಿ ಭಗವಂತ 'ಅನರ್ಥಕಾರಿಯಾದ'; ಭೂಮಿಯ ಆಕರ್ಷಣ ಶಕ್ತಿಯನ್ನು ಕಳಚಲು ಹೋದ ಹಿರಣ್ಯಾಕ್ಷನಿಗೆ ವರಾಹರೂಪಿ ಭಗವಂತ ಅನರ್ಥಕಾರಿಯಾದ; ಧರ್ಮ ಕಾರ್ಯ ನಡೆಯಬಾರದು, ಯಾರ ಬಾಯಲ್ಲೂ ದೇವರ ಹೆಸರು ಬರಬಾರದು, ನಾನೇ ದೇವರು ಎಂದ ಹಿರಣ್ಯಕಶಿಪುವಿಗೆ 'ನರಸಿಂಹನಾಗಿ' ಭಗವಂತ ಅನರ್ಥಕಾರಿಯಾದ. ರಾಮನಾಗಿ ರಾವಣ ಕುಂಭಕರ್ಣರಿಗೆ; ಕೃಷ್ಣನಾಗಿ ಶಿಶುಪಾಲ ದಂತವಕ್ರರಿಗೆ ಅನರ್ಥನಾಗಿ, ಶಸ್ತ್ರವನ್ನೇ ಹಿಡಿಯದೆ ಹದಿನೆಂಟು ಅಕ್ಷೋಹಿಣಿ ಸೈನ್ಯಕ್ಕೆ ಅನರ್ಥಕಾರಿಯಾದ ಭಗವಂತ ಅನರ್ಥಃ.

೪೩೪) ಮಹಾಕೋಶಃ

ವೇದವೆಂಬ ಹಿರಿಯ ಅರಿವಿನ ಕೋಶದಲ್ಲಿ ತುಂಬಿದ ಭಗವಂತ, ಬ್ರಹ್ಮಾಂಡವೆಂಬ ಮಹಾಕೋಶದೊಳಗೆ ಅಂತರ್ಯಾಮಿಯಾಗಿ ತುಂಬಿರುವ ಮಹಾನ್ ಶಕ್ತಿ. ನಮ್ಮಲ್ಲಿರುವ ಪಂಚಕೋಶ (ಅನ್ನಮಯಕೋಶ, ಪ್ರಾಣಮಯಕೋಶ, ಮನೋಮಯಕೋಶ, ವಿಜ್ಞಾನಮಯಕೋಶ ಹಾಗೂ ಆನಂದಮಯಕೋಶ)ದ ಒಳಗೆ ಅಡಗಿರುವ ಭಗವಂತ ಮಹಾಕೋಶಃ.

೪೩೫) ಮಹಾಭೋಗಃ

ಈ ಪ್ರಪಂಚದಲ್ಲಿ ಯಾರ್ಯಾರು ಏನೇನು ಭೋಗಿಸುತ್ತಾರೋ ಅವೆಲ್ಲವನ್ನೂ ಮೂಲತಃ ಭೋಗಿಸುವವನು ಭಗವಂತ. ಪ್ರಳಯ ಕಾಲದಲ್ಲಿ ಜಗತ್ತನ್ನೇ ಕಬಳಿಸುವ ಹಿರಿಯ ಪೂರ್ಣಾನಂದ ಭೋಗಿ ಭಗವಂತ ಮಹಾಭೋಗಃ.

೪೩೬) ಮಹಾಧನಃ

ಈ ಜಗತ್ತಿನಲ್ಲಿರುವ ಅತ್ಯಂತ ದೊಡ್ಡ ಸಂಪತ್ತು ಭಗವಂತ. ಈ ಜಗತ್ತಿನಲ್ಲಿ ಏನೇನು ಸಂಪತ್ತಿದೆಯೋ ಅವೆಲ್ಲವೂ ಅವನಿಗೇ ಸೇರಿದ್ದು. ಅರಿವೆಂಬ ಹಿರಿಯ ಸಿರಿಯನ್ನೀಯುವ ಭಗವಂತ ಮಹಾಧನಃ.

**ಅನಿರ್ವಿಣ್ಣಃ ಸ್ಥವಿಷ್ಠೋಭೂರ್ಧರ್ಮಯೂಪೋ ಮಹಾಮಖಃ ।**

**ನಕ್ಷತ್ರನೇಮಿರ್ನಕ್ಷತ್ರೀ ಕ್ಷಮಃ, ಕ್ಷಾಮಃ ಸಮೀಹನಃ ॥೬೦ ॥**

೪೩೭) ಅನಿರ್ವಿಣ್ಣಃ

'ನಿರ್ವಿಣ್ಣ' ಎಂದರೆ ಸಾಕು ಅಥವಾ ಬೇಡ ಎನ್ನಿಸಿ ಆಸಕ್ತಿ ಕಳೆದುಕೊಳ್ಳುವವ. ಆದರೆ ಭಗವಂತ ಅನಿರ್ವಿಣ್ಣ. ಈ ಹಿಂದೆ ಹೇಳಿದಂತೆ ಸೃಷ್ಟಿ-ಸ್ಥಿತಿ-ಸಂಹಾರ ಅನಂತ ಅನಾದಿ ಕಾಲದಿಂದ ನಡೆಯುತ್ತಿದೆ ಹಾಗೂ ಮುಂದೆಯೂ ಅನಂತವಾಗಿ ನಡೆಯುತ್ತದೆ. ಭಗವಂತ ಎಂದೂ ತನ್ನ ಕ್ರಿಯೆಯಲ್ಲಿ ಆಸಕ್ತಿ ಕಳೆದುಕೊಳ್ಳುವುದಿಲ್ಲ; ಸೃಷ್ಟಿ-ಸಂಹಾರ ಮಾಡಿ ಸಾಕು ಅನ್ನಿಸುವುದು ಅಥವಾ ಸೋಲುವುದು ಅನ್ನುವ ಪ್ರಶ್ನೆ ಭಗವಂತನಲ್ಲಿಲ್ಲ. ಅದ್ದರಿಂದ ಆತ ಅನಿರ್ವಿಣ್ಣಃ.

ಅ+ನಿರ್+ವಿತ್+ಣ; ಇಲ್ಲಿ 'ನಿರ್' ಎಂದರೆ ನಾಶವಿಲ್ಲದ; 'ವಿತ್' ಎಂದರೆ 'ಜ್ಞಾನ'; 'ಣ' ಎಂದರೆ ಬಲ ಅಥವಾ ಆನಂದ. ಆದ್ದರಿಂದ ಅನಿರ್ವಿಣ್ಣ ಎಂದರೆ ನಿಶ್ಚಯಾತ್ಮಕವಾದ, ನಿರ್ಣಯಾತ್ಮಕವಾದ, ನಿರಂತರ ಜ್ಞಾನಾನಂದದ ಸೆಲೆಯಾದ, ಬಲರೂಪಿ 'ಅ'ಕಾರ ವಾಚ್ಯ ಭಗವಂತ. ಆದ್ದರಿಂದ ಆತ ಎಂದೆಂದೂ ಪರಿಪೂರ್ಣ ಹಾಗೂ ಜ್ಞಾನಾನಂದದ ಖನಿ.

೪೩೮) ಸ್ಥವಿಷ್ಠಃ

'ಸ್ಥವಿರ' ಎಂದರೆ 'ಮುದುಕರು'. ಸ್ಥವಿಷ್ಠ ಎಂದರೆ ಹಣ್ಣು ಹಣ್ಣು ಮುದುಕರು! ಇಲ್ಲಿ ಭಗವಂತ ಮುದುಕನಲ್ಲ-ಆತ ಹಿರಿಯರ ಹಿರಿಯ. ಇಡೀ ವಿಶ್ವಕ್ಕೆ ಪಿತಾಮಹನೆನಿಸಿರುವ, ಚತುರ್ಮುಖ ಬ್ರಹ್ಮನನ್ನು ಮಗನಾಗಿ ಪಡೆದ ಭಗವಂತ ಹಿರಿಯರ ಹಿರಿಯ. ಯಾರು ಸೃಷ್ಟಿಯ ಮೊದಲು, ಸೃಷ್ಟಿಯಲ್ಲಿ, ಹಾಗೂ ಸಂಹಾರದ ನಂತರವೂ ಇರುತ್ತಾನೋ ಅವನು ಸ್ಥವಿಷ್ಠಃ.

ಈ ನಾಮವನ್ನು ಭಗವಂತನ ಬೇರೆಬೇರೆ ಲೀಲೆಗಳೊಂದಿಗೆ ನೋಡಿದರೆ ವಿಶಿಷ್ಟ ಅರ್ಥಗಳು ಬೇರೆಬೇರೆ ಆಯಾಮದಲ್ಲಿ ತೆರೆದುಕೊಳ್ಳುತ್ತವೆ. 'ಸ್ಥ' ಎಂದರೆ ನೆಲೆಸಿರುವವನು; 'ವಿಷ್ಠ' ಎಂದರೆ ವಿಶಿಷ್ಟವಾಗಿ ನೆಲೆಸಿರುವವನು. ಇದು ಭಗವಂತನ ವಿಭೂತಿಯನ್ನು ಹೇಳುತ್ತದೆ. ಭಗವಂತ ಎಲ್ಲಾ ಗಿಡ-ಪ್ರಾಣಿ-ಜೀವಜಂತುವಿನಲ್ಲಿ ನೆಲೆಸಿದ್ದಾನೆ. ಆದರೆ ಕೆಲವೊಂದು ಜೀವದಲ್ಲಿ ಆತನ ವಿಶೇಷ ಸನ್ನಿಧಾನ ಅಭಿವ್ಯಕ್ತವಾಗುತ್ತದೆ. ಉದಾಹರಣೆಗೆ ಮರಗಳಲ್ಲಿ ಅಶ್ವತ್ಥ ಮರ ಅತಿಶ್ರೇಷ್ಠ. ಏಕೆಂದರೆ ಅದು ನಮ್ಮ ಜೀವಾನಿಲವಾದ ಆಮ್ಲಜನಕವನ್ನು ಅತೀ ಹೆಚ್ಚು ಪ್ರಮಾಣದಲ್ಲಿ ಹೊರಸೂಸುವ ವೃಕ್ಷ . ಪಕ್ಷಿಗಳಲ್ಲಿ ನವಿಲು ಶ್ರೇಷ್ಠ ಪಕ್ಷಿ. ಏಕೆಂದರೆ ಅದು ತನ್ನ ಸೌಂದರ್ಯ ಹಾಗೂ ವಿಶಿಷ್ಟ ನೃತ್ಯಕ್ಕೆ ಹೆಸರುವಾಸಿ. ಹೀಗೆ ಭಗವಂತ ಎಲ್ಲಾ ಜೀವರೊಳಗಿದ್ದರೂ, ಕೆಲವು ಜೀವ ಜಂತುಗಳಲ್ಲಿ ವಿಶಿಷ್ಟವಾಗಿ ಅಭಿವ್ಯಕ್ತವಾಗುತ್ತಾನೆ. ಇಂತಹ ಭಗವಂತನಿಗೆ ಸ್ಥವಿಷ್ಠಃ ಅನ್ವರ್ಥ ನಾಮ.

೪೩೯) ಭೂಃ (ಅಭೂಃ)

ಈ ನಾಮವನ್ನು ಭೂಃ ಅಥವಾ ಅಭೂಃ ಎಂದು ಎರಡು ರೂಪದಲ್ಲಿ ನೋಡಬಹುದು. ಇದು ಭಗವಂತನ ಅತ್ಯಂತ ಮುಖ್ಯವಾದ ನಾಮಗಳಲ್ಲಿ ಒಂದು. ಏಕೆಂದರೆ ಭಗವಂತನ ಮೊದಲ ನಾಮ ಮೂರು ಅಕ್ಷರಗಳುಳ್ಳ 'ಓಂಕಾರ' (ಅ,ಉ,ಮ). ನಂತರ ಮೂರು ಪದಗಳುಳ್ಳ ವ್ಯಾಹೃತಿ (ಭೂಃ ಭುವಃ ಸುವಃ), ನಂತರ ಮೂರು ಪಾದದ ಗಾಯತ್ರಿ (ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್). ಓಂಕಾರದ ಮೊದಲ ಅಕ್ಷರ 'ಅ-ಕಾರ'ದ ವಿವರಣಾರೂಪ-ಭೂಃ. 'ಭವತೀತಿ ಭೂಃ'; ಭವತಿ ಎಂದರೆ ಪೂರ್ಣವಾಗಿರುವುದು, ನಿರ್ದಿಷ್ಟವಾದ ಇರುವಿಕೆಯುಳ್ಳ ಭಗವಂತ. ಎಲ್ಲಾ ಕಡೆ ಅಭಿವ್ಯಕ್ತನಾಗುವ ಭಗವಂತ ಸ್ಫೂರ್ತಿಯ ಸೆಲೆ. ಎಲ್ಲಾ ಚಟುವಟಿಕೆಗಳ ಮೂಲ ಸ್ಫೂರ್ತಿ. ಎಲ್ಲಾ ಕಡೆ ಪ್ರಕಾಶಮಾನನಾಗಿ ಎಲ್ಲರನ್ನೂ ಪ್ರೇರಣೆ ಮಾಡುವ ಅಂತಃಶಕ್ತಿ ಭಗವಂತ ಭೂಃ. ಭೂಮಿಯನ್ನು ನಿಯಂತ್ರಿಸುವ ದೇವತೆಯ ಒಳಗಿದ್ದು ಎಲ್ಲವನ್ನೂ ನಿಯಮಬದ್ಧವಾಗಿ ನಡೆಸುವ ಭಗವಂತ ಭೂಃ.

ಭಗವಂತನಿಗೆ ಎಂದೂ ಹುಟ್ಟಿಲ್ಲ! ['ನಭವತಿ' ಹಾಗೂ 'ಅಧಿಕಂ ಭವತಿ']. ಎಂದೂ ಹುಟ್ಟಿಲ್ಲದ ಸರ್ವಶ್ರೇಷ್ಠ ಭಗವಂತ ಅಭೂಃ.

೪೪೦)ಧರ್ಮಯೂಪಃ

ಈ ನಾಮವನ್ನು ಸಂಪೂರ್ಣ ತಿಳಿಯಬೇಕಾದರೆ ನಾವು 'ಯೂಪ' ಪದದ ಅರ್ಥವನ್ನು ಮೊದಲು ತಿಳಿಯಬೇಕು. ಹಿಂದೆ ದೇಶರಕ್ಷಣೆ ಮಾಡುತ್ತಿದ್ದ ಕ್ಷತ್ರಿಯರು ಮಾಂಸಹಾರಿಗಳಾಗಿದ್ದರು. ನಾವು ಏನನ್ನು ತಿನ್ನುತೇವೋ ಅದನ್ನು ದೇವರಿಗೆ ಅರ್ಪಿಸಿ ತಿನ್ನುವುದು ಸಂಪ್ರದಾಯ ಹಾಗೂ ಶಾಸ್ತ್ರಸಮ್ಮತ. ಅದಕ್ಕಾಗಿ ಕ್ಷತ್ರಿಯರು ತಮ್ಮ ಆಹಾರವಾದ ಪ್ರಾಣಿಯನ್ನು ಯಜ್ಞದಲ್ಲಿ ಬಲಿಕೊಟ್ಟು ದೇವರಿಗೆ ಅರ್ಪಿಸಿ ನಂತರ ತಿನ್ನುತ್ತಿದ್ದರು. ಪ್ರಾಣಿಬಲಿ ಕೊಡುವ ಮೊದಲು ಆ ಪ್ರಾಣಿಯನ್ನು ಕಟ್ಟುವ ಕಂಬವನ್ನು 'ಯೂಪ' ಎನ್ನುತ್ತಾರೆ. ಈ ಕ್ರಿಯಯನ್ನು 'ಆಲಿಂಬನ' ಎನ್ನುತ್ತಾರೆ. ಯಜ್ಞದಲ್ಲಿ ಪ್ರಾಣಿಯನ್ನು ಬಲಿ ಕೊಡುವುದು ಹಿಂಸೆಯಲ್ಲ-ಧರ್ಮ ಎಂದು ಶಾಸ್ತ್ರಕಾರರು ಪರಿಗಣಿಸಿದ್ದಾರೆ. ಇಂತಹ ಯೂಪದಲ್ಲಿ ಧರ್ಮ ಸ್ವರೂಪನಾಗಿ ಕುಳಿತು ಯಜ್ಞದಲ್ಲಿ ಕೊಟ್ಟ ಆಹುತಿಯನ್ನು ಸ್ವೀಕಾರ ಮಾಡಿ, ಧರ್ಮಕ್ಕೆ ಆಧಾರ ಸ್ಥಂಭನಾಗಿ ನಿಂತ ಭಗವಂತ ಧರ್ಮಯೂಪಃ.

ಇನ್ನೊಂದು ಅರ್ಥದಲ್ಲಿ 'ಧರ್ಮಯೂಗಳು' ಎಂದರೆ ಧರ್ಮದ ಜೊತೆಗೆ ಕೂಡಿಕೊಂಡವರು. ಧರ್ಮಯೂಗಳಿಗೆ-ಪಾಹಿ(ರಕ್ಷಕ) ಭಗವಂತ ಧರ್ಮಯೂಪಃ.

೪೪೧) ಮಹಾಮಖಃ

'ಮಖ' ಎಂದರೆ ಯಜ್ಞ, ಯಶಸ್ಸು, ಸಂಪತ್ತು ಇತ್ಯಾದಿ. ಎಲ್ಲಾ ಯಜ್ಞಗಳು, ಎಲ್ಲಾ ಯಶಸ್ಸು, ಎಲ್ಲಾ ಸಂಪತ್ತು ಯಾರಲ್ಲಿ ಮಹತ್ತಾಗಿದೆಯೋ; ಯಾರ ಕುರಿತಾಗಿ ಮಾಡಿದ ಯಜ್ಞ ಮಹತ್ತಾಗಿರುತ್ತದೋ, ಅವನು ಮಹಾಮಖಃ. ಮಖ(ಯಜ್ಞ) ಭಗವಂತನಿಂದಾಗಿ ಮಹತ್ತಾಗಿದೆ.

೪೪೨) ನಕ್ಷತ್ರನೇಮಿಃ

ನಕ್ಷತ್ರ ಎಂದಾಕ್ಷಣ ನಮಗೆ ತಿಳಿದಿರುವುದು ಆಕಾಶದಲ್ಲಿ ಅನೇಕ ಜ್ಯೋತಿರ್ವರ್ಷ ದೂರದಲ್ಲಿರುವ ಅಸಂಖ್ಯ ನಕ್ಷತ್ರಗಳ ಒಂದು ವಿಸ್ಮಯ ಲೋಕ. ಇಂತಹ ನಕ್ಷತ್ರ ಮಂಡಲಕ್ಕೆ ಆಧಾರವಾಗಿ(ನೇಮಿ) ನಿಂತಿರುವ ಭಗವಂತ ನಕ್ಷತ್ರನೇಮಿಃ.

'ಕ್ಷತ್ರ' ಎಂದರೆ ಕ್ಷತಿಗೊಂಡವರನ್ನು ರಕ್ಷಿಸುವವರು ಹಾಗೂ ಆಳುವವರು (ಉದಾಹರಣೆಗೆ ಕ್ಷತ್ರಿಯರು). ನಕ್ಷತ್ರರು ಎಂದರೆ ಭಗವಂತನಲ್ಲದೆ ಇನ್ನು ಯಾರ ನಿಯಂತ್ರಣದಲ್ಲೂ ಇಲ್ಲದವರು. ಪರಮಾತ್ಮನೊಬ್ಬನೇ ಜಗದೊಡೆಯ ಎಂದು ನಂಬುವ ಭಕ್ತರಿಗೆ ಆಸರೆಯಾದ ಭಗವಂತ ನಕ್ಷತ್ರನೇಮಿಃ.

೪೪೩) ನಕ್ಷತ್ರೀ

ತಾರೆಗಳ ಅಭಿಮಾನಿ ದೇವಿಯರು ಇಪ್ಪತ್ತೇಳು. ಇವರ ಪತಿಯಾದ ಚಂದ್ರನೊಳಗಿರುವ 'ಧನ್ವಂತರಿ' ರೂಪಿ ಭಗವಂತ ನಕ್ಷತ್ರೀ. (ಶೀತಾಂಶು ಮಂಡಲಗತ). ಅಸಂಖ್ಯ ನಕ್ಷತ್ರಗಳನ್ನು ಸೃಷ್ಟಿಸಿ ನಿಯಮಿಸುವ ಭಗವಂತ ನಕ್ಷತ್ರೀ.

೪೪೪) ಕ್ಷಮಃ

ಕ್ಷಮತೇ ಇತಿ ಕ್ಷಮಃ; ಎಲ್ಲವನ್ನೂ ಕ್ಷಮಿಸುವ ಭಗವಂತ ಕ್ಷಮಃ. ಕ್ಷಮೆ ಎಂದರೆ ಎದುರಾಳಿಗಳ ಪ್ರತಿಭಟನೆಯನ್ನು ತಡೆದುಕೊಳ್ಳುವ ಸೋಲಿಲ್ಲದ ಸಹನಾಶಕ್ತಿ. ಭಗವಂತನ ಕ್ಷಮಾ ಗುಣವನ್ನು ಹೇಳುವ ಅನೇಕ ದೃಷ್ಟಾಂತವನ್ನು ಆತನ ಲೀಲೆಗಳಲ್ಲಿ ಕಾಣುತ್ತೇವೆ. ರಾಮಾವತಾರ ಸಂಪೂರ್ಣ ಕ್ಷಮೆ, ತಾಳ್ಮೆ, ಸಹನೆಯ ಅವತಾರ.

ಕೋಪಗೊಂಡು ಕರ್ತವ್ಯನಿರತ ದ್ವಾರಪಾಲಕರಾದ ಜಯ-ವಿಜಯರ ಮೇಲೆ ಶಾಪವನ್ನಿತ್ತ ಸನಕಾದಿಗಳನ್ನು ಭಗವಂತ ಕಂಡ ಬಗೆ; ಕೋಪಗೊಂಡು ಭಗವಂತನ ಎದೆಯನ್ನು ತುಳಿದ ಭೃಗು ಮಹರ್ಷಿಯನ್ನು ಭಗವಂತ ನಡೆಸಿಕೊಂಡ ರೀತಿ; ಇತ್ಯಾದಿ ಆತನ ಕ್ಷಮಾ ಗುಣಕ್ಕೆ ಶ್ರೇಷ್ಠ ನಿದರ್ಶನಗಳು. ಭಗವಂತ ಕ್ಷಮಿಸದೇ ಇದ್ದರೆ ನಾವು ನಮ್ಮ ಪಾಪದಿಂದ ಈಚೆ ಬರಲು ಅಸಾಧ್ಯ. ಒಂದು ಜನ್ಮದಲ್ಲಿ ಮುಂದಿನ ಹತ್ತು ಜನ್ಮಕ್ಕೆ ಬೇಕಾಗುವಷ್ಟು ಪಾಪವನ್ನು ಕಲೆಹಾಕುವ ನಮ್ಮನ್ನು ಕ್ಷಮಿಸಿ, ನಮ್ಮ ಪಾಪವನ್ನು ಅಳಿಸಿ ಮುಕ್ತಿಯ ಮಾರ್ಗದತ್ತ ಕೊಂಡೊಯ್ಯುವ ಭಗವಂತ ಕ್ಷಮಃ.

೪೪೫) ಕ್ಷಾಮಃ

ಎಲ್ಲವನ್ನೂ ಕ್ಷಮಿಸಿ ಮೋಕ್ಷ ಮಾರ್ಗವನ್ನು ತೋರುವ ಭಗವಂತ ಕೆಲವೊಮ್ಮೆ ಅನ್ನಕ್ಕೂ ಗತಿಯಿಲ್ಲದಂತೆ ಮಾಡಿ ಕ್ಷಾಮನೆನಿಸುತ್ತಾನೆ. ಇದು ಅವನು ನಮ್ಮ ಅಜ್ಞಾನವನ್ನು ತೊಳೆಯುವ ರೀತಿ.

ಕ್ಷ+ಅಮ- ಕ್ಷಾಮಃ; ಕ್ಷ ಎಂದರೆ ಕ್ಷಪಯತಿ ಅಂದರೆ ನಾಶಮಾಡುವುದು, 'ಅಮ' ಎಂದರೆ ಅಜ್ಞಾನ. ಭಗವಂತ ಕೊಡುವ ಕಷ್ಟದಲ್ಲಿ ಅಸಾಧಾರಣ ಕಾರುಣ್ಯ ಅಡಗಿದೆ. ನಮ್ಮ ಅಜ್ಞಾನ ನಾಶಮಾಡಿ ಜ್ಞಾನ ಪಕ್ವತೆಯತ್ತ ಕೊಂಡೊಯ್ಯುವ ಭಗವಂತ ಕ್ಷಾಮಃ

೪೪೬) ಸಮೀಹನಃ

'ಸಮೀಹ' ಎಂದರೆ ಸಮೀಚೀನವಾದ ಕ್ರಿಯೆ. ಭಗವಂತನ ಸರ್ವ ಕ್ರಿಯೆಯೂ ನೂರಕ್ಕೆ ನೂರು ಪರಿಪೂರ್ಣ. ಆತನ ಸೃಷ್ಟಿಯಲ್ಲಿ ಅಪರಿಪೂರ್ಣತೆ ಇಲ್ಲ. ಆದರೆ ನಾವು ಪರಿಪೂರ್ಣರಲ್ಲ. ನಮ್ಮ ಯೋಗ್ಯತೆಗೆ ತಕ್ಕಂತೆ ನಮ್ಮನ್ನು ನಡೆಸುವ, ಒಳಿತನ್ನೇ ಮಾಡುವ ಭಗವಂತ ಸಮೀಹನಃ

ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತುಃ ಸತ್ರಂ ಸತಾಂ ಗತಿಃ ।
ಸರ್ವದರ್ಶೀ ವಿಮುಕ್ತಾತ್ಮಾ ಸರ್ವಜ್ಞೋ ಜ್ಞಾನಮುತ್ತಮಮ್ ॥೬೧॥

೪೪೭) ಯಜ್ಞಃ

ವಿಶ್ವದ ಸೃಷ್ಟಿಯೇ ಒಂದು ಯಜ್ಞ. ಎಲ್ಲೆಲ್ಲೂ ಹರಡಿರುವ ವಸ್ತುವನ್ನು ಒಂದು ಕಡೆ ಒಂದುಗೂಡಿಸುವುದು ಯಜ್ಞ. ಬೇರೆ ಬೇರೆ ಕಡೆಯಿಂದ ಬಂದು ಒಂದು ಕಡೆ ಸೇರಿ ಜ್ಞಾನಾರ್ಜನೆ ಮಾಡುವುದು ಜ್ಞಾನಯಜ್ಞ. ಸೃಷ್ಟಿಯ ಆದಿಯಲ್ಲಿ ಪರಮಾಣು ಪುಂಜವಾಗಿದ್ದ ಈ ಸೃಷ್ಟಿಯನ್ನು ಒಂದುಗೂಡಿಸಿ ಪ್ರಪಂಚ ಸೃಷ್ಟಿಮಾಡಿದ ಭಗವಂತ ಯಜ್ಞಃ.

ಇರುವುದನ್ನೆಲ್ಲ ಬಲ್ಲವನೂ, ಯಜ್ಞದಲ್ಲಿ ನೆಲೆಸಿದವನೂ ಆದ ಭಗವಂತ ಯಜ್ಞಃ. ನಾವು ಅಗ್ನಿ ಮುಖದಲ್ಲಿ ಮಾಡುವ ಯಜ್ಞ ಕೂಡಾ ಈ ಸೃಷ್ಟಿಯ ಸಂಕೇತ. ಯಜ್ಞ ಕುಂಡ ಸೃಷ್ಟಿಗೆ ಕಾರಣವಾದ 'ಗರ್ಭ'; ಅದರೊಳಗಿನ ಪ್ರಜ್ವಲಿಸುವ ಅಗ್ನಿ 'ಜೀವ'; ತುಪ್ಪದ ಆಹುತಿ 'ವೀರ್ಯ' (ಸೃಷ್ಟಿಗೆ ಮೂಲಕಾರಣವಾದ ಶಕ್ತಿ).

೪೪೮) ಇಜ್ಯಃ

ಎಲ್ಲರಿಂದ ಇಜ್ಯನಾದ ಭಗವಂತ ಇಜ್ಯ. ಇಲ್ಲಿ ಇಜ್ಯ ಎಂದರೆ ಎಲ್ಲರಿಂದ ಪೂಜಿಸಲ್ಪಡುವವನು. ಯಜ್ಞದಲ್ಲಿ ನಾವು ಪೂಜೆ ಮಾಡುವುದು ಬೆಂಕಿಯನ್ನಲ್ಲ. ಅಗ್ನಿ ಮುಖೇನ ಅಗ್ನಿನಾರಾಯಣನ ಪೂಜೆ ಯಜ್ಞ. ಈ ಅರಿವಿಲ್ಲದೆ ಯಜ್ಞವನ್ನು ಮಾಡಿದರೆ ಹೊಗೆ ತಿಂದು ಸಾಯಬೇಕಾದೀತು! ನಮ್ಮ ಪೂಜೆ ಅಗ್ನಿನಾರಾಯಣನಿಂದ ಸೂರ್ಯ ನಾರಾಯಣನನ್ನು ಸೇರಿ ಮರಳಿ ನರನಾರಾಯಣನನ್ನು ತಲುಪುತ್ತದೆ. ಇದಕ್ಕಾಗಿ ದೇವರನ್ನು ಕುರಿತು ಮಾಡುವ ಯಜ್ಞ ಯಾವಾಗಲೂ ಹಗಲು ಹೊತ್ತಿನಲ್ಲೇ ನಡೆಯುತ್ತದೆ. ಅಗ್ನಿಯ ಏಳು ಬಣ್ಣಗಳ ಮುಖೇನ ಸೂರ್ಯನ ಏಳು ಬಣ್ಣಗಳಲ್ಲಿ ವಿಲೀನವಾಗುವ ಯಜ್ಞಶಕ್ತಿ, ವಾತಾವರಣವನ್ನು ಸೇರಿ ಲೋಕಕ್ಕೆ ಮಂಗಳವನ್ನುಂಟುಮಾಡುತ್ತದೆ. ಹೀಗೆ ಯಜ್ಞಗಳಿಂದ ಆರಾಧ್ಯನಾದ ಭಗವಂತ ಇಜ್ಯಃ.

೪೪೯) ಮಹೇಜ್ಯಃ

ಯಜ್ಞಗಳಿಂದ ಪೂಜಿಸಲ್ಪಡುವ ಶಕ್ತಿಗಳಲ್ಲಿ 'ಮಹತ್ತಾದ ಶಕ್ತಿ' ಮಹೇಜ್ಯಃ. ಇಲ್ಲಿ 'ಮಹ' ಎಂದರೆ ಮಹತ್ತಾದ, ನಮ್ಮಿಂದ ದೊಡ್ಡದಾದ, ಪೂಜನೀಯವಾದ, ಇತ್ಯಾದಿ. ಮಹಹ+ಇಜ್ಯ-ಮಹೇಜ್ಯ. ಮಹಹ ಎಂದರೆ ಉತ್ಸವ, ಸಂಭ್ರಮ ಆಚರಣೆ, ಹಬ್ಬ, ಇತ್ಯಾದಿ. ಉತ್ಸವಗಳ ಪೂಜೆಯನ್ನು ಸ್ವೀಕರಿಸುವವನು ದೇವತೆಗಳ ಅಂತರ್ಯಾಮಿ ಭಗವಂತ. "ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ". ನಾವು ಯಾವ ದೇವತೆಯನ್ನು ಪೂಜಿಸಿದರೂ ಆ ಪೂಜೆಯನ್ನು ಸ್ವೀಕರಿಸುವವನು ಆ ಭಗವಂತ. ಉದಾಹರಣೆಗೆ 'ಹನುಮ ಜಯಂತಿ'. ಈ ಉತ್ಸವದಲ್ಲಿ ನಾವು ಆಂಜನೇಯನನ್ನು ಪೂಜಿಸುತ್ತೇವೆ. ಆದರೆ ಶ್ರೀರಾಮಚಂದ್ರ ಸ್ವೀಕರಿಸದೇ ಅಂಜನೇಯ ಯಾವ ಪೂಜೆಯನ್ನೂ ಸ್ವೀಕರಿಸಲಾರ.

ಉತ್ಸವಗಳಷ್ಟೇ ಅಲ್ಲ, ಹುಟ್ಟುಹಬ್ಬ, ಮದುವೆ, ಇನ್ನಾವುದೋ ಸಂಭ್ರಮದಲ್ಲಿ ಪೂಜೆಯನ್ನು ಸ್ವೀಕರಿಸುವವನು ಮಹೇಜ್ಯನಾದ ಭಗವಂತನೇ. ನಾವು ನಮ್ಮ ಮಗುವಿನ ಹುಟ್ಟು ಹಬ್ಬ ಆಚರಿಸುತ್ತೇವೆ. ಈ ಹಿಂದೆ ಹೇಳಿದಂತೆ ಒಂದು ಜೀವ ಹುಟ್ಟುವಾಗ ಆ ಜೀವದೊಂದಿಗೆ ರಕ್ಷಕನಾಗಿ ಬಿಂಬರೂಪಿ ಭಗವಂತನ ಜನನವಾಗುತ್ತದೆ. ಅಂದರೆ ನಾವು ಆಚರಿಸುವ ಹುಟ್ಟುಹಬ್ಬ ಬಿಂಬರೂಪಿ ಭಗವಂತನ ಹುಟ್ಟುಹಬ್ಬ ಕೂಡಾ ಹೌದು. ಒಬ್ಬ ಮನುಷ್ಯ ನೂರು ವರ್ಷ ಬದುಕಿದ ಎಂದರೆ ಆತನ ದೇಹದೊಳಗೆ ಬಿಂಬ ರೂಪಿ ಭಗವಂತ ನೂರು ವರ್ಷ ಕೂತ ಎಂದರ್ಥ. ಈ ಕಾರಣದಿಂದ ಭಗವಂತನನ್ನು 'ಶತರ್ಷಿ' ಎನ್ನುತ್ತಾರೆ.

ಇನ್ನು ಮದುವೆ, ಪ್ರೀತಿ, ದಾಂಪತ್ಯ, ಬಾಂಧವ್ಯ ಇತ್ಯಾದಿ. ಇಲ್ಲಿ ನಮ್ಮೊಳಗೆ ಕೂತ ಭಗವಂತ ಪ್ರೀತಿಯ ಬೀಜವನ್ನು ಬಿತ್ತದಿದ್ದರೆ ಅಲ್ಲಿ ಪ್ರೀತಿ ಇರುವುದಿಲ್ಲ. ಕೆಲವೊಮ್ಮೆ ನಮಗರಿವಿಲ್ಲದಂತೆ ನಾವು ಇನ್ನೊಬ್ಬರ ಸ್ನೇಹ-ಪ್ರೀತಿಯ ಪಾಶದಲ್ಲಿ ಬಂಧಿಗಳಾಗುತ್ತೇವೆ. ಇನ್ನು ಕೆಲವೊಮ್ಮೆ ಕಾರಣವಿಲ್ಲದೆ ಇನ್ನೊಬ್ಬರಿಂದ ದೂರವಿರುತ್ತೇವೆ. **"I don't know why, but i don't like him"** ಎಂದು ಹೇಳುವ ಜನರನ್ನು ನೀವು ನೋಡಿರಬಹುದು. ಇದಕ್ಕೆ ಕಾರಣ ನಮ್ಮ ಪೂರ್ವಕರ್ಮ ಹಾಗೂ ನಮ್ಮೊಳಗಿದ್ದು ನಮ್ಮಲ್ಲಿ ಪ್ರೀತಿಯ ಬೀಜವನ್ನು ಚಿಗುರಿಸುವ ಭಗವಂತ. ಜೀವನದಲ್ಲಿ ಗಂಡು ಹೆಣ್ಣಿನ ನಡುವೆ ಅನ್ಯೋನ್ಯ ಪ್ರೀತಿ ಕೊನೆಯತನಕ ಬೆಸೆದುಕೊಂಡಿರುವುದಕ್ಕೆ ಕಾರಣ ಭಗವಂತ. ಆದ್ದರಿಂದ ಇಲ್ಲಿ ದಾಂಪತ್ಯ ಕೂಡಾ ಭಗವಂತನ ದಾಂಪತ್ಯ. ಹಾಗಾಗಿ ಮದುವೆ ವರ್ಷೋತ್ಸವ **(Anniversary)** ಕೂಡಾ ಅವನದ್ದೇ! [ಇಲ್ಲಿ ನಾವು ಕೇವಲ ಮಾಧ್ಯಮ ಅಷ್ಟೇ]. ಹೀಗೆ ಪ್ರತಿಯೊಂದು ಉತ್ಸವದಲ್ಲಿ ಪೂಜಿಸಲ್ಪಡುವವನು ಮಹೇಜ್ಯನಾದ ಭಗವಂತ.

ಗೋಪೂಜೆಯ ದಿನ ನಾವು ಗೋವುಗಳನ್ನು, ತುಳಸಿ ಪೂಜೆಯ ದಿನ ತುಳಸಿಯನ್ನು ಆರಾಧಿಸುತ್ತೇವೆ. ಆದರೆ ಗೋವು, ತುಳಸಿ ಎಲ್ಲವೂ ಭಗವಂತನ ಪ್ರತೀಕ. ಹೀಗೆ ಪ್ರತಿಯೊಂದು ಹಬ್ಬ ಹರಿದಿನಗಳಲ್ಲಿ ಆಯಾ ಪ್ರತೀಕದಲ್ಲಿದ್ದು ಇಜ್ಯನಾಗುವ ಭಗವಂತ ಮಹೇಜ್ಯಃ.

೪೫೦) ಕ್ರತುಃ

ಯಜ್ಞಗಳಲ್ಲಿ ಅನೇಕ ವಿಧದ ಪ್ರಕ್ರಿಯೆಗಳು ವೇದಕಾಲದಲ್ಲಿ ಪ್ರಚಲಿತದಲ್ಲಿತ್ತು. ಮೂರುದಿನದ ಯಜ್ಞ, ಆರು ದಿನದ ಯಜ್ಞ, ಚಾತುರ್ಮಾಸದ ಯಜ್ಞ, ಇತ್ಯಾದಿ. ಇಂತಹ ಯಜ್ಞದಲ್ಲಿ ದಿನಂಪ್ರತಿ ಮೂರು ಬಾರಿ ಭಗವಂತನಿಗೆ ಆಹುತಿ ಕೊಡುತ್ತಾರೆ. ಈ ಕ್ರಿಯೆ ಯಜ್ಞದ ಎಲ್ಲಾ ದಿನಗಳಲ್ಲೂ ನಡೆಯುತ್ತದೆ. ಈ ಕ್ರಿಯೆಯನ್ನು 'ಕ್ರತು' ಎನ್ನುತ್ತಾರೆ. ನಮ್ಮ ಕೈಯಿಂದ ಕ್ರತುವನ್ನು ಮಾಡಿಸಿ, ಪ್ರತಿದಿನ ಕ್ರತುವನ್ನು ಸ್ವೀಕಾರ ಮಾಡುವ ಭಗವಂತ ಕ್ರತುಃ. ಕ್ರತು ಸಾಂಗವಾಗಿ ನೆರವೇರಬೇಕಿದ್ದರೆ ನಮ್ಮಲ್ಲಿ ನಂಬಿಕೆ, ಇಚ್ಛಾಶಕ್ತಿ, ಕ್ರಿಯಾಶಕ್ತಿ ಅತ್ಯಗತ್ಯ. ನಮ್ಮ ಹಿಂದೆ ನಿಂತು ಈ ಕ್ರಿಯಾ ಕಲಾಪಗಳನ್ನು ನಡೆಸುವ ಜ್ಞಾನ ಸ್ವರೂಪನೂ, ಕರ್ಮದ ಕಟ್ಟಿನಿಂದ ನಮ್ಮನ್ನು ಪಾರು ಮಾಡುವನೂ ಆದ ಭಗವಂತ ಕ್ರತುಃ.

೪೫೧) ಸತ್ರಮ್.

ಸತ್ರ ಕೂಡಾ ಯಜ್ಞ ಎನ್ನುವ ಅರ್ಥವನ್ನು ಕೊಡುತ್ತದೆ. ಮನೆಯಲ್ಲಿ ನಮಗೋಸ್ಕರ ಅಗ್ನಿಮುಖದಲ್ಲಿ ಮಾಡುವ ಕ್ರಿಯೆ 'ಯಾಗ'. ಹತ್ತಾರು ಜನ ಸೇರಿ ಸಮಷ್ಠಿಯಾಗಿ ಮಾಡಿದರೆ ಅದು 'ಸತ್ರಯಾಗ'. ಸಕಲರನ್ನೂ ರಕ್ಷಿಸುವ, ಎಲ್ಲರನ್ನೂ ಏಕರೀತಿಯಿಂದ ಪಾಲಿಸುವ ಭಗವಂತ ಸತ್ರಮ್.

೪೫೨) ಸತಾಂಗತಿಃ

ಸಾತ್ವಿಕ ಗುಣಗಳಿಂದ ತುಂಬಿದ, ಯಾವಾಗಲೂ ಜ್ಞಾನದ ಮಾರ್ಗದಲ್ಲಿ ನಡೆವ ಸಜ್ಜನರರಿಗೆ, ವಿದ್ವಾಂಸರಿಗೆ ವಿಶಿಷ್ಟವಾದ ಪ್ರೀತಿ ಹಾಗೂ ರಕ್ಷಣೆಯನ್ನು ಕೊಡುವ ಭಗವಂತ ಸತಾಂಗತಿಃ. ಇದಕ್ಕೆ ಉತ್ತಮ ನಿದರ್ಶನ ಮಹಾಭಾರತ. ಸಜ್ಜನರಾದ ಪಾಂಡವರಿಗೆ ದ್ರೋಹವನ್ನು ಮಾಡಿದ ಕೌರವರನ್ನು ಹಾಗೂ ಅವರಿಗೆ ಸಹಾಯ ಮಾಡಿದ ಪ್ರತಿಯೊಬ್ಬರನ್ನೂ ಶಿಕ್ಷಿಸಿ ಸಾತ್ವಿಕತೆಯ ರಕ್ಷಣೆ ಮಾಡಿದ ಭಗವಂತ ಸತಾಂಗತಿಃ

೪೫೩) ಸರ್ವದರ್ಶೀ

ಎಲ್ಲವನ್ನೂ ಕಾಣುವವನು ಹಾಗೂ ಕಾಣಿಸುವವನು ಸರ್ವದರ್ಶೀ. ನಮಗೆ ಗೊತ್ತಿರುವುದು ಕೇವಲ ವರ್ತಮಾನ ಜನ್ಮದ ವಿಷಯ ಮಾತ್ರ. ನಮ್ಮ ಪೂರ್ವಜನ್ಮದಲ್ಲಿ ನಾವು ಏನೇನು ಕರ್ಮಗಳನ್ನು ಮಾಡಿ ಈ ಜನ್ಮ ಪಡೆದಿದ್ದೇವೆ ಎನ್ನುವ ಪರಿಜ್ಞಾನ ನಮಗಿರುವುದಿಲ್ಲ. ಭಗವಂತನಿಗೆ ನಮ್ಮ ಸರ್ವಜನ್ಮದ, ಸರ್ವಕಾಲದ, ಸರ್ವಜೀವನದ ಸ್ಥಿತಿ-ಗತಿಗಳು ತಿಳಿದಿರುತ್ತವೆ. ನಮಗೆ ನಮ್ಮ ಹಿಂದಿನ ಜನ್ಮದ ಫಲ ಎಂದೂ ತಪ್ಪುವುದಿಲ್ಲ. ಹುಟ್ಟುವಾಗಲೇ ನಾವು ಜನ್ಮಾಂತರದ ನಂಟಿನೊಂದಿಗೆ ಹುಟ್ಟುತ್ತೇವೆ. ಇದು ಕರ್ಮಚಕ್ರ. ಇದನ್ನೆಲ್ಲವನ್ನೂ ಬಲ್ಲ ಭಗವಂತ ಸರ್ವದರ್ಶಿ.

೪೫೪) ವಿಮುಕ್ತಾತ್ಮಾ

ಯಾವ ಪೂರ್ವಾಗ್ರಹ ಹಾಗೂ ಯಾವ ಲೇಪವೂ ಇಲ್ಲದ ಭಗವಂತ ವಿಮುಕ್ತಾತ್ಮಾ. ಭಗವಂತ ಯಾವುದೋ ದ್ವೇಷ ಅಥವಾ ಸ್ವಂತ ಹಿತಾಸಕ್ತಿಗಾಗಿ ಜ್ಞಾನ-ಅಜ್ಞಾನ, ಬಡತನ-ಶ್ರೀಮಂತಿಕೆಯನ್ನು ಕೊಡುವುದಿಲ್ಲ. ಅವರವರ ಕರ್ಮಫಲಕ್ಕನುಗುಣವಾಗಿ, ನಿರ್ಲಿಪ್ತನಾಗಿ, ಈ ಸೃಷ್ಟಿ-ಸ್ಥಿತಿ-ಸಂಹಾರ ಕಾರ್ಯವನ್ನು ನಿರಂತರ ನಿಯಮಬದ್ಧವಾಗಿ ಮಾಡುತ್ತಿರುವ ಭಗವಂತನಿಗೆ ವಿಮುಕ್ತಾತ್ಮಾ ಅನ್ವರ್ಥನಾಮ. ಮುಕ್ತಿಯನ್ನು ಪಡೆದ ವಿಮುಕ್ತರಿಗೆ ಮುಕ್ತಿಯಲ್ಲೂ ನಿಯಾಮಕನಾದ ಭಗವಂತ ವಿಮುಕ್ತಾತ್ಮಾ.

೪೫೫) ಸರ್ವಜ್ಞಃ

ಎಲ್ಲವನ್ನೂ ಬಲ್ಲವನು ಸರ್ವಜ್ಞ. ಜ್ಞಾನಸ್ವರೂಪನೂ, ಪರಿಪೂರ್ಣನೂ ಆದ ಭಗವಂತ ಸರ್ವಜ್ಞಃ.

೪೫೬)ಜ್ಞಾನಮುತ್ತಮಮ್

'ಜ್ಞಾ' ಎಂದರೆ ತಿಳಿದವನು, 'ಜ್ಞಾನಂ' ಎಂದರೆ ತಿಳಿವು. ಭಗವಂತ ಸರ್ವೋತ್ತಮ ಜ್ಞಾನಸ್ವರೂಪನೂ ಹೌದು, ಜ್ಞಾನ ಉಳ್ಳವನೂ ಹೌದು. ಎಲ್ಲಕ್ಕಿಂತ ಮಿಗಿಲಾದ ಅನಂತ ಜ್ಞಾನ ಸ್ವರೂಪಿ ಭಗವಂತ ಜ್ಞಾನಮುತ್ತಮಮ್.

**ಸುವ್ರತಃ ಸುಮುಖಃ ಸೂಕ್ಷ್ಮಃ ಸುಘೋಷಃ ಸುಖದಃ ಸುಹೃತ್ ।**

**ಮನೋಹರೋ ಜಿತಕ್ರೋಧೋ ವೀರಬಾಹುರ್ವಿದಾರಣಃ ॥೮೨॥**

"ಸುವ್ರತಃ, ಸುಮುಖಃ, ಸೂಕ್ಷ್ಮಃ, ಸುಘೋಷಃ, ಸುಖದಃ, ಸುಹೃತ್" –ಈ ಎಲ್ಲಾ ನಾಮಗಳು 'ಸು'-ಎನ್ನುವ ಅಕ್ಷರದಿಂದ ಆರಂಭವಾಗುತ್ತದೆ. ಭಗವಂತನ ಮೂಲ ನಾಮವನ್ನು ವ್ಯಾಹೃತಿಯಲ್ಲಿ 'ಸ್ವಃ' (ಭೂರ್ಭುವಃ ಸ್ವಃ) ಎಂಬ ನಾಮದಿಂದ ಸಂಬೋಧಿಸುತ್ತಾರೆ. ಆದ್ದರಿಂದ 'ಸು' ಎಂದರೆ ಸುಂದರ, ಚಲುವ, ಆನಂದಪೂರ್ಣ, ಸುಸ್ಥಿತ, ಸುವ್ಯವಸ್ಥಿತ ಇತ್ಯಾದಿ. ಈ ಅರ್ಥ ಈ ಶ್ಲೋಕದಲ್ಲಿ ಬರುವ ಎಲ್ಲಾ ನಾಮಗಳಿಗೂ ಅನ್ವಯ.

೪೫೭) ಸುವ್ರತಃ

ವ್ರತ ಎಂದರೆ ದೀಕ್ಷೆ, ನಿಷ್ಠೆ, ಶಿಸ್ತುಬದ್ಧವಾದ ಕ್ರಿಯೆ. ಇದು ಇಂದ್ರಿಯ ನಿಗ್ರಹಕ್ಕೆ ಮಾಡುವ ನಿಯತವಾದ ಕ್ರಿಯೆ. ವ್ರತದಲ್ಲಿ ಎರಡು ವಿಧ. ಯಾವುದೋ ಒಂದು ಫಲಾಪೇಕ್ಷೆಯಿಟ್ಟು ಮಾಡುವ ವ್ರತ ಹಾಗೂ ಭಗವಂತನ ಪ್ರೀತ್ಯರ್ಥವಾಗಿ ಮಾಡುವ ವ್ರತ. ಫಲಾಪೇಕ್ಷೆಯಿಟ್ಟು ಮಾಡುವ ವ್ರತವನ್ನು ಕಾಮ್ಯ ಎನ್ನುತ್ತಾರೆ. ಇದನ್ನು ಶಾಸ್ತ್ರದಲ್ಲಿ ವಿರೋಧಮಾಡುತ್ತಾರೆ. ಭಗವಂತನ ಅನುಗ್ರಹ-ಪ್ರೀತಿಗೋಸ್ಕರ ಮಾಡುವ ವ್ರತ ನಿಷ್ಕಾಮ ವ್ರತ. ಇಲ್ಲಿ ವ್ರತ ಮಾಡುವವರು ಭಗವಂತನ ಪ್ರೀತಿಯನ್ನು ಬಿಟ್ಟು ಇನ್ನೇನನ್ನೂ ಬಯಸುವುದಿಲ್ಲ. ಇದಕ್ಕೆ ಉತ್ತಮ ನಿದರ್ಶನ ಪ್ರಹ್ಲಾದನ ವ್ರತ. ತನ್ನ ಮುಂದೆ ಪ್ರತ್ಯಕ್ಷನಾದ ಭಗವಂತ ನಿನಗೇನು ಬೇಕು ಎಂದು ಕೇಳಿದಾಗ ಆ ಪುಟ್ಟ ಬಾಲಕ 'ನಾನು ನಿನ್ನನ್ನು ಭಕ್ತಿ ಮಾಡಿದ್ದು ನಿನ್ನಿಂದ ಪ್ರತಿಫಲಪಡೆಯುವುದಕ್ಕಾಗಿ ಅಲ್ಲ; ನನ್ನ ಭಕ್ತಿ ವ್ಯಾಪಾರವಲ್ಲ' ಎನ್ನುತ್ತಾನೆ! ಸೃಷ್ಟಿ-ಸ್ಥಿತಿ-ಸಂಹಾರ ಭಗವಂತನ ನಿಷ್ಕಾಮ ವ್ರತ. ರಾಮಾಯಣದಲ್ಲಿ ಶ್ರೀರಾಮಚಂದ್ರ ಹೇಳುವಂತೆ "ಅಭಯಂ ಸರ್ವ ಭೂತೇಭ್ಯೋ ದದಾಮಿ ಏತದ್ ವ್ರತಂ ಮಮಃ". ಅಂದರೆ 'ಯಾರು ನನ್ನಲ್ಲಿ ಶರಣು ಕೋರಿ ಬರುತ್ತಾರೋ ಅವರಿಗೆ ಜಗತ್ತಿನಿಂದ ರಕ್ಷಣೆ ಕೊಡುವುದು ನನ್ನ ವ್ರತ'. ಇದನ್ನೇ ಕೃಷ್ಣ ಗೀತೆಯಲ್ಲಿ ಹೀಗೆ ಹೇಳಿದ್ದಾನೆ:

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।

ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥ ಅ-೯ ಶ್ಲೋ-೨೨॥

ಅಂದರೆ 'ಬೇರೆಲ್ಲಾ ತೊರೆದು ನನ್ನನ್ನೇ ನೆನೆಯುತ್ತಾ ಪರಿಪರಿಯಿಂದ ಪೂಜಿಸುವ(ನಿತ್ಯ ನಿಷ್ಕಾಮಕರ್ಮ ಮಾಡುವ) ಜನರು ಎಲ್ಲೆಲ್ಲೂ ನನ್ನ ಸೇವೆಗೆ ಮುಡಿಪಾದವರು. ಅವರ ಯೋಗ-ಕ್ಷೇಮದ ಹೊಣೆ ನನ್ನದು'.

ಭಗವಂತ ಎಂದೂ ಹೂಡಿದ ಬಾಣ ಹಿಂದೆ ಪಡೆಯುವುದಿಲ್ಲ, ಆಡಿದ ಮಾತನ್ನು ತಪ್ಪುವುದಿಲ್ಲ. ಆದರೆ ಕೆಲವೊಮ್ಮೆ ಆತನ ನುಡಿ ನೆರವೇರಲು ಅನೇಕ ಜನ್ಮಗಳೇ ಹಿಡಿಯಬಹುದು! ಹೀಗೆ ನಿರಂತರ ರಕ್ಷಣೆಯ ವ್ರತವನ್ನು ಮಾಡುವ ಆನಂದಮಯ ಭಗವಂತ ಸುವ್ರತಃ.

೪೫೮) ಸುಮುಖಃ

ಮೇಲೆ ಹೇಳಿದ 'ಸು' ಪದದ ಅರ್ಥವನ್ನು 'ಮುಖ' ಪದದೊಂದಿಗೆ ಸೇರಿಸಿದರೆ ಭಗವಂತನ 'ಸುಮುಖಃ' ನಾಮದ ಅರ್ಥ ತೆರೆದುಕೊಳ್ಳುತ್ತದೆ. ಭಗವಂತನ ಸುಂದರವಾದ ರೂಪವನ್ನು ಈ ನಾಮ ಹೇಳುತ್ತದೆ. ವಿಶೇಷವಾಗಿ ಕೃಷ್ಣಾವತಾರದಲ್ಲಿ ಭಗವಂತನ ಸುಮುಖ ರೂಪವನ್ನು ಕಾಣಬಹುದು.

೪೫೯) ಸೂಕ್ಷ್ಮಃ

ಭಗವಂತ ಜ್ಞಾನಾನಂದಮಯ. ಆತ ಸೂಕ್ಷ್ಮದಲ್ಲಿ ಸೂಕ್ಷ್ಮ ಹಾಗೂ ಬೃಹತ್ ರೂಪಿ (Smaller than Smallest and Bigger than Biggest). ಹೀಗಿದ್ದರೂ ಕೂಡಾ ಆತ ಇಷ್ಟಪಟ್ಟರೆ ಭಕ್ತರ ಮುಂದೆ ಕಾಣಿಸಿಕೊಳ್ಳುತ್ತಾನೆ. ರಾಮನ ಕಾಲದಲ್ಲಿದ್ದವರು ರಾಮನನ್ನು, ಕೃಷ್ಣನ ಕಾಲದಲ್ಲಿದ್ದವರು ಕೃಷ್ಣನನ್ನು ಕಂಡಿದ್ದಾರೆ. ಒಳ್ಳೆಯವರು-ಕೆಟ್ಟವರು, ಸಜ್ಜನರು-ದುರ್ಜನರು, ಪಂಡಿತರು-ಪಾಮರರು, ಗಂಡಸರು-ಹೆಂಗಸರು, ಎಳೆಯರು-ಮುದುಕರು, ಹೀಗೆ ಎಲ್ಲರೂ ಕಂಡಿದ್ದಾರೆ. ನಿಜವಾಗಿ ಅವರು ಕಂಡಿದ್ದು ನಮ್ಮ ಕಣ್ಣಿಗೆ ಕಾಣದ ಸೂಕ್ಷ್ಮತತ್ವವನ್ನು. ಇಂತಹ ಸೂಕ್ಷ್ಮಾತಿ-ಸೂಕ್ಷ್ಮತತ್ವ ಭಗವಂತ ಸೂಕ್ಷ್ಮಃ.

೪೬೦) ಸುಘೋಷಃ

ಭಗವಂತನ ಮಾತು ಬಹಳ ಸುಂದರ. ಭಗವಂತನ ಆದೇಶ ಪಡೆದು ಭೂಮಿಯಲ್ಲಿ ಹುಟ್ಟಿದ ಮಹಾಪುರುಷರ ಮಾತಿನ ನಾದದಲ್ಲೂ ಭಗವಂತನನ್ನು ಧ್ವನಿಸುವ ಶಕ್ತಿ ಇರುತ್ತದೆ. ಮಂತ್ರಗಳಲ್ಲಿ ಶಕ್ತಿ ಅಡಗಿರುವುದು ಅದರ ನಾದದಲ್ಲಿ. ಮಂತ್ರವನ್ನು ಪಠಿಸುವವರ ಇಷ್ಟಾರ್ಥ ಸಿದ್ಧಿಗಾಗಿ ಅದನ್ನು ರಚನೆ (Compose) ಮಾಡಿದ್ದಾರೆ. ಇದರ ಹಿಂದೆ ಶಕ್ತಿಯುತ ಮನೋಬಲ (Will power) ಅಡಗಿದೆ. ಭಗವಂತನ ಭಕ್ತರ ನಾದವೇ ಇಷ್ಟೊಂದು ಶಕ್ತಿಶಾಲಿಯಾಗಿರುವಾಗ ಇನ್ನು ಭಗವಂತನ ನಾದ ಹಾಗೂ ಮನೋಬಲವನ್ನು ನಮ್ಮಿಂದ ಊಹಿಸುವುದು ಅಸಾಧ್ಯ. ಜಗತ್ತಿನಲ್ಲಿ ಯಾವಯಾವ ಘೋಷಗಳಿವೆ, ಅವುಗಳೆಲ್ಲವೂ ಸಮೀಚೀನವಾದ ಭಗವಂತನನ್ನೇ ಹೇಳುತ್ತವೆ. ಈ ಪ್ರಪಂಚದಲ್ಲಿರುವ ಎಲ್ಲಾ ನಾದಗಳೂ, ಎಲ್ಲಾ ಭಾಷೆಗಳೂ ಆತನನ್ನೇ ಹೇಳುತ್ತವೆ. ಪಕ್ಷಿಗಳ ಚಿಲಿಪಿಲಿ, ಪ್ರಾಣಿಗಳ ಕೂಗು, ನೀರಿನ ಝುಳು-ಝುಳು, ಸಮುದ್ರದ ಮೊರೆತ, ಗಾಳಿಯ ಸುಯಿಲು, ಎಲೆಗಳ ಮರ್ಮರ, ಎಲ್ಲಾ ಸಮಸ್ತ ನಾದವೂ ಕೂಡಾ ಭಗವಂತನ ಗುಣಗಾನ ಮಾಡುವುದರಿಂದ ಆತ ಸುಘೋಷಃ.

೪೬೧) ಸುಖದಃ

ಭಗವಂತನ ಬಗ್ಗೆ ಕೇಳುವುದೇ ಆನಂದ. ಆನಂದಮಯನಾದ ಆತನ ಚಿಂತನೆ ನಮ್ಮನ್ನು ಆನಂದಮಯರನ್ನಾಗಿ ಮಾಡುತ್ತದೆ. ಆತ ಆನಂದ ಸಾಗರ. ಆತನ ಬಳಿಗೆ ಹೋದವರು ಆನಂದ ಸಾಗರದಲ್ಲಿ ಮುಳುಗಿರುತ್ತಾರೆ. ಇನ್ನೊಂದು ಅರ್ಥದಲ್ಲಿ ಈ ನಾಮವನ್ನು ನೋಡಿದರೆ-ಭಗವಂತ ಸುಖವನ್ನು 'ಧ್ಯತಿಸುವವನು'. ಯಾರು ಅಸತ್ಯದ ದಾರಿಯಲ್ಲಿ ಸಾಗುತ್ತಾರೋ ಅವರ ಸುಖವನ್ನು ಕಸಿದುಕೊಳ್ಳುವ, ಸುಖ-ದುಃಖದ ಮಿಶ್ರಣದ ಬದುಕನ್ನು ಕೊಟ್ಟು ನಮ್ಮನ್ನು ಮುಕ್ತಿಯತ್ತ ಕೊಂಡೊಯ್ಯುವ ಭಗವಂತ ಸುಖದಃ.

೪೬೨) ಸುಹೃತ್

ಎಲ್ಲಾ ಜೀವಜಾತಕ್ಕೆ ಆತ್ಮೀಯ ಗೆಳೆಯ ಭಗವಂತ- ಸುಹೃತ್. ಆತ ನಮಗೆ ಕೊಡುವ ಕಷ್ಟ ನಮ್ಮ ಒಳಿತಿಗಾಗಿ. ನಮ್ಮ ಜೀವನದಲ್ಲಿ ನಮಗರಿವಿಲ್ಲದಿದ್ದರೂ, ಅವನು ಮಾಡುವ ಉಪಕಾರ ಅಪರಿಮಿತ. ಹೀಗೆ ಆತ್ಮೀಯನಾಗಿ ಎಂದೆಂದೂ ನಮ್ಮೊಂದಿಗಿರುವ ಭಗವಂತ ಸುಹೃತ್.

೪೬೩) ಮನೋಹರಃ

ಹಿಂದೆ ಸುಮುಖಃ ಎನ್ನುವ ನಾಮದಲ್ಲಿ ನೋಡಿದಂತೆ ಭಗವಂತ ಸೌಂದರ್ಯದ ಖನಿ. ಭಾಗವತದಲ್ಲಿ ಕವಿಗಳು ಭಗವಂತನನ್ನು ಮನ್ಮಥ ಎನ್ನುತ್ತಾರೆ. ಇದು ಕೇವಲ ದೃಷ್ಟಾಂತ ಅಷ್ಟೇ. ಏಕೆಂದರೆ ಭಗವಂತ ಮನ್ಮಥನ ಅಪ್ಪ! ಎಲ್ಲರ ಮನಸ್ಸನ್ನು ಅಪಹರಿಸುವ ಚಲುವಿನ ಖನಿ ಭಗವಂತ ಮನೋಹರಃ. ಮನೋಮಯ ಕೋಶದ ನಿಯಾಮಕನಾದ ಹರನೊಳಗಿರುವ ಭಗವಂತ ಮನೋಹರ. ಇನ್ನು ಅನ್ನಮಯಕೋಶ, ಮನೋಮಯಕೋಶ, ವಿಜ್ಞಾನಮಯಕೋಶ

ಎಲ್ಲವನ್ನೂ ದಾಟಿದರೆ ಅಮರಕೋಶ. ಅದೇ ನಿತ್ಯವಾಗಿರುವ ಮನನಶೀಲವಾದ ಜೀವ. ಈ ಜೀವವನ್ನು ಸಂಸಾರ ಬಂಧದಿಂದ ಕಳಚಿ ಮೋಕ್ಷವನ್ನು ಕೊಡುವ ಭಗವಂತ ಮನೋಹರಃ.

೪೬೪) ಜಿತಕ್ರೋಧಃ

ಭಗವಂತ ಕೋಪವನ್ನು ಗೆದ್ದವ. ಕೋಪ ಮನಸ್ಸಿನ ವಿಕೃತರೂಪ. ಸರ್ವವನ್ನೂ ಗೆದ್ದ ಋಷಿ ಮುನಿಗಳೂ ಕೂಡಾ ಕೆಲವೊಮ್ಮೆ ಕೋಪಕ್ಕೆ ಬಲಿಬೀಳುತ್ತಾರೆ. ಭಗವಂತ ಎಂದೂ ಕೋಪದ ವಶವಾಗುವುದಿಲ್ಲ, ಆದರೆ ಕೆಲವೊಮ್ಮೆ ತಾಯಿ ತನ್ನ ಮಗುವಿನ ಉದ್ಧಾರಕ್ಕಾಗಿ ಕೋಪಗೊಳ್ಳುವಂತೆ ಕೋಪದ ನಟನೆ ಮಾಡುತ್ತಾನೆ ಭಗವಂತ. ಆ ಕೋಪ ಮೇಲ್ನೋಟಕ್ಕೆ ದುಃಖಕರವಾಗಿ ಕಂಡರೂ ಸುಖಾಂತವಾಗಿರುತ್ತದೆ. ಕ್ರೋಧವಶವಾದ ಧೈತ್ಯ ಪಡೆಯನ್ನು ಗೆದ್ದ ಭಗವಂತ ಜಿತಕ್ರೋಧಃ.

೪೬೫) ವೀರಬಾಹುಃ

ಭಗವಂತನ ತೋಳು ಪೌರುಷ ತುಂಬಿದ ತೋಳು. ಸತ್ಯವನ್ನು ವಿರೋಧಿಸುವ, ಯಥಾರ್ಥವನ್ನು ದ್ವೇಷಿಸುವ, ಸುಳ್ಳನ್ನು ಸಮರ್ಥಿಸುವ, ದುಷ್ಟಶಕ್ತಿಯನ್ನು ನಿಗ್ರಹಿಸುವ ತೋಳುಗಳುಳ್ಳ ಭಗವಂತ ದ್ವೇಷಿಸುವುದು ಅಜ್ಞಾನವನ್ನು. ಸದಾ ಜ್ಞಾನವನ್ನು ಪ್ರೀತಿಸುವ ಹಾಗೂ ರಕ್ಷಿಸುವ ಭಗವಂತ ವೀರಬಾಹುಃ.

೪೬೬) ವಿದಾರಣಃ

ವಿದಾರಣಃ ಎಂದರೆ ಸೀಳಿಬಿಡುವ ಗುಣದವನು. ವೀರಬಾಹುವಾದ ಭಗವಂತ ದುಷ್ಟರನ್ನು, ಎದುರಾಳಿಗಳನ್ನು ಸೀಳಿಬಿಡುವ ಗುಣದವನು. ಕೃಷ್ಣಾವತಾರದಲ್ಲಿ, ನರಸಿಂಹಾವತಾರದಲ್ಲಿ ಇದಕ್ಕೆ ನಿದರ್ಶನಗಳಿವೆ. ಜರಾಸಂಧನನ್ನು ಭೀಮನೊಳಗೆ ಕೂತು ಸೀಳಿ ಸುಮಾರು ೨೨,೮೦೦ ರಾಜಕುಮಾರರನ್ನು ಸೆರೆಮನೆಯಿಂದ ಬಿಡಿಸಿದ ಕೃಷ್ಣ, ನರಸಿಂಹಾವತಾರದಲ್ಲಿ ಹಿರಣ್ಯಕಶಿಪುವಿನ ಎದೆಬಗೆದ. ಹೀಗೆ ದುಷ್ಟರ ನಾಶಕ್ಕಾಗಿ ಸೀಳುವ ಗುಣವುಳ್ಳ ಭಗವಂತ ವಿದಾರಣಃ.

ಸ್ವಾಪನಸ್ಸ್ವವಶೋ ವ್ಯಾಪೀ ನೈಕಾತ್ಮಾ ನೈಕಕರ್ಮಕೃತ್ ।
ವತ್ಸರೋ ವತ್ಸಲೋ ವತ್ಸೀ ರತ್ನಗರ್ಭೋ ಧನೇಶ್ವರಃ ॥೬೩॥

೪೬೭) ಸ್ವಾಪನಃ

ಸ್ವಾಪನ ಎಂದರೆ ನಿದ್ರೆ ಬರಿಸುವವನು! ಈ ಹಿಂದೆ ಹೇಳಿದಂತೆ ಸೃಷ್ಟಿ ಕಾಲ ೪೩೨ ಕೋಟಿ ವರ್ಷ. ಆ ನಂತರ ೪೩೨ ವರ್ಷ ಪ್ರಳಯಕಾಲ. ಈ ಪ್ರಳಯ ಕಾಲದಲ್ಲಿ ಸರ್ವ ಜೀವವೂ ಸೂಕ್ಷ್ಮ ಸ್ಥಿತಿಯಲ್ಲಿದ್ದು, ಭಗವಂತನ ಮಡಿಲಲ್ಲಿ ನಿದ್ರಿಸುತ್ತಿರುತ್ತವೆ. ಜೀವಕ್ಕೆ ಇದು ವಿಶ್ರಾಂತಿ ಕಾಲ. ಪ್ರಳಯದಲ್ಲಿ ಜೀವರನ್ನು ನಿದ್ರಾವಸ್ಥೆಯಲ್ಲಿರಿಸುವ ಭಗವಂತ ಸ್ವಾಪನಃ.

ಪ್ರಳಯ ಕಾಲದಲ್ಲಷ್ಟೇ ಅಲ್ಲ, ದಿನನಿತ್ಯ ನಿದ್ರಾಕಾಲದಲ್ಲಿ ನಾವು ಭಗವಂತನ ಮಡಿಲಲ್ಲಿ ಮಲಗಿರುತ್ತೇವೆ. ಸ್ವಪ್ನ ಪ್ರಪಂಚದ ವಿಸ್ಮಯವನ್ನು ನಮಗೆ ಕೊಟ್ಟಿರುವ ಭಗವಂತ ಸ್ವಾಪನಃ.

೪೬೮) ಸ್ವವಶಃ

ಸರ್ವಸ್ವತಂತ್ರ ಮತ್ತು ಇನ್ನೊಬ್ಬರಿಗೆ ಅಧೀನವಲ್ಲದ ಭಗವಂತ ಸ್ವವಶಃ.

೪೬೯) ವ್ಯಾಪೀ

ಎಲ್ಲೆಡೆ ವ್ಯಾಪಿಸಿದವನು; ಎಲ್ಲರ ಮನಸ್ಸಿನಲ್ಲಿ, ಎಲ್ಲರ ಹೃದಯದಲ್ಲಿ, ಎಲ್ಲರ ಒಳಗೆ, ಎಲ್ಲರ ಹೊರಗೆ-ಹೀಗೆ ಸರ್ವ ವ್ಯಾಪಿಯಾಗಿರುವ ಭಗವಂತ 'ವ್ಯಾಪೀ'.

೪೭೦) ನೈಕಾತ್ಮಾ

ಸಾವಿರಾರು ರೂಪಗಳನ್ನು ತೊಟ್ಟವನು; ಅನಂತ ಜೀವದೊಳಗೆ ಅನಂತ ರೂಪದಲ್ಲಿ ತುಂಬಿರುವ ಬಿಂಬ ರೂಪಿ ಅಂತರ್ಯಾಮಿ ಭಗವಂತ ನೈಕಾತ್ಮಾ.

೪೭೧) ನೈಕಕರ್ಮಕೃತ್

ಸಾವಿರಾರು ಕ್ರಿಯೆಗಳನ್ನು ನಡೆಸುವವನು; ಅನಂತ ಜೀವದೊಳಗೆ ಅನಂತ ರೂಪದಲ್ಲಿ ತುಂಬಿ ಅನಂತ ಕರ್ಮಗಳನ್ನು ಅನಂತ ಕಾಲದ ತನಕ ಮಾಡುತ್ತಿರುವ ಭಗವಂತ ನೈಕಕರ್ಮಕೃತ್

೪೭೨) ವತ್ಸರಃ

ವತ್ಸರ ಎಂದರೆ ಒಂದು ಅರ್ಥದಲ್ಲಿ 'ವರ್ಷ' ಎನ್ನುವ ಅರ್ಥವನ್ನು ಕೊಡುತ್ತದೆ. ಒಂದು ಪೂರ್ಣ ವರ್ಷ ಎಂದರೆ ೩೬೫.೨೪೨೨ ದಿನಗಳು. ಪೂರ್ಣವಾದ ವರ್ಷವನ್ನು ಸಂವತ್ಸರ ಎನ್ನುತ್ತಾರೆ. ಕಾಲ ನಿಯಾಮಕನಾದ ಚತುರ್ಮುಖ ಬ್ರಹ್ಮನೊಳಗೆ ಕುಳಿತು ನಿಯಮಿಸುವ ಭಗವಂತ ವತ್ಸರಃ.

ವಸತ್+ರ; ಅಂದರೆ ಯಾರು ತನ್ನ ಹೃದಯದಲ್ಲಿ ಭಗವಂತ ವಾಸವಾಗಿದ್ದಾನೆ ಎಂದು ತಿಳಿದು ನಡೆಯುತ್ತಾರೋ ಅವರಿಗೆ ಆನಂದವನ್ನು ಕೊಡುವವ. ವತ್ಸ+ರ- ಮಕ್ಕಳಂತೆ ಜೀವರನ್ನು ರಮಿಸುವ ಭಗವಂತ ವತ್ಸರಃ.

೪೭೩) ವತ್ಸಲಃ

ಭಗವಂತ ಪರಮ ಭಕ್ತ ವತ್ಸಲ. ತನ್ನ ಪ್ರೀತಿಯ ಭಕ್ತ ಜಾರಿಬಿದ್ದಾಗ, ಸಂಕಷ್ಟದಲ್ಲಿದ್ದಾಗ ತಾನೇ ಇಳಿದು ಬರುವ ಭಗವಂತ ವತ್ಸಲಃ.

೪೭೪) ವತ್ಸೀ

ವತ್ಸೀ ಎಂದರೆ ಅನಂತ ಸಂತಾನವುಳ್ಳವನು ಎಂದರ್ಥ! ಚತುರ್ಮುಖ ಬ್ರಹ್ಮನಿಂದ ಹಿಡಿದು ಎಲ್ಲರೂ ಆತನ ಮಕ್ಕಳೇ. ಬ್ರಹ್ಮ-ವಾಯುಗಳನ್ನು ಮಕ್ಕಳಾಗಿ ಪಡೆದ ಭಗವಂತ ವತ್ಸೀ.

೪೭೫) ರತ್ನಗರ್ಭಃ

'ರತಿ' ಯನ್ನು ತನ್ನ ಗರ್ಭದಲ್ಲಿ ಧರಿಸಿದವ. ಅಂದರೆ ಭಗವಂತ ಆನಂದದ ಕಡಲು. ಆತನ ಆನಂದದ ಆವಿರ್ಭಾವವೇ ಈ ಪ್ರಪಂಚ. ಇನ್ನು ರತ್ನ ಎಂದರೆ ಸಂಪತ್ತು ಎನ್ನುವ ಅರ್ಥವನ್ನು ಕೊಡುತ್ತದೆ. ಈ ಪ್ರಪಂಚವೇ ಒಂದು ಮಹಾ ಸಂಪತ್ತು . ಇಂತಹ ಸಂಪತ್ತನ್ನು ತನ್ನ ಗರ್ಭದಲ್ಲಿ ಧರಿಸಿ,ಆನಂದದಿಂದ ತುಂಬಿ ತುಳುಕುವ ಭಗವಂತ ರತ್ನಗರ್ಭಃ.

೪೭೬) ಧನೇಶ್ವರಃ

ಭಗವಂತ ಸರ್ವ ಸಂಪತ್ತಿನ ಒಡೆಯ. ಇಲ್ಲಿ ಧನ ಎಂದರೆ ಹಣವಿರಬಹುದು, ಜ್ಞಾನವಿರಬಹುದು ಅಥವಾ ಭಕ್ತಿ ಇರಬಹುದು. ಎಲ್ಲಾ ಸಂಪತ್ತಿನ ಅಧಿಪತಿ ಭಗವಂತ. ಆತ ಕೊಟ್ಟರೆ ನಾವು ಧನಿಕರು-ಇಲ್ಲದಿದ್ದರೆ ಇಲ್ಲ! ಕೆಲವೊಮ್ಮೆ ಭಗವಂತ ನಮ್ಮ ಕೈಯನ್ನು ಸಂಪೂರ್ಣ ಖಾಲಿ ಮಾಡಿ ನಮ್ಮನ್ನು ಇನ್ನೊಂದು ರೀತಿಯಲ್ಲಿ ಉದ್ಧಾರ ಮಾಡುತ್ತಾನೆ. ಇದನ್ನೇ ಕೃಷ್ಣ ಈ ರೀತಿ ಹೇಳಿದ್ದಾನೆ. "ಯಸ್ಯಮ್ ಅನುಗ್ರಹಾಮಿ ತಸ್ಯ ವಿತ್ತಮ್ ಹರಾಮ್ಯಹಂ" ಎಂದು. ಇದಕ್ಕೆ ಉತ್ತಮ ನಿದರ್ಶನ ರಾಜಸೂಯ ಯಾಗ ಮಾಡಿ ಪ್ರಪಂಚವನ್ನೇ ಗೆದ್ದ ಧರ್ಮರಾಯ. ಇಂತಹ ಧರ್ಮರಾಯ ಕೇವಲ ಒಂದು ವಾರದಲ್ಲಿ ಬಿಡಿಗಾಸೂ ಇಲ್ಲದೆ ಕಾಡಿಗೆ ಹೋದ! ಎಲ್ಲವೂ ಆ ಭಗವಂತನ ಸಂಕಲ್ಪ. ಆತ ಕೊಟ್ಟರೆ ಇದೆ, ಇಲ್ಲದಿದ್ದರೆ ಇಲ್ಲ. ಆದರೆ ಇರುವುದು ಇಲ್ಲದಿರುವುದು ಎಲ್ಲವೂ ನಮ್ಮ ಒಳಿತಿಗಾಗಿ! ಹೀಗೆ ಜ್ಞಾನ, ಭಕ್ತಿ, ಐಶ್ವರ್ಯ ಎಲ್ಲವುದರ ಈಶ್ವರ, ಎಲ್ಲಾ ಸಂಪತ್ತಿನ ಒಡೆಯ ಭಗವಂತ ಧನೇಶ್ವರಃ.

ಧರ್ಮಗುಬ್ಧರ್ಮಕೃದ್ಧರ್ಮೀ ಸದಸತ್ಕ್ಷರಮಕ್ಷರಮ್ ।

**ಅವಿಜ್ಞಾತಾ ಸಹಸ್ರಾಂಶುರ್ವಿಧಾತಾ ಕೃತಲಕ್ಷಣಃ ॥೭೪॥**

೪೭೭) ಧರ್ಮಗುಪ್

ಧರ್ಮಗುಪ್ ಅಂದರೆ ಧರ್ಮವನ್ನು ಗೋಪನೆ ಮಾಡುವವನು. ಗೋಪನೆ ಎಂದರೆ ರಕ್ಷಣೆ ಮಾಡುವುದು. ಕೃಷ್ಣ ಗೀತೆಯಲ್ಲಿ ಹೇಳಿದಂತೆ:

ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಾಂ ಸೃಜಾಮ್ಯಹಮ್ । (ಅ ೪- ಶ್ಲೋ ೭)
ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ॥ (ಅ ೪- ಶ್ಲೋ ೮)

ಭಗವದ್ಗೀತೆಯ ಈ ಶ್ಲೋಕದ ಅರ್ಥ ಭಗವಂತನ "ಧರ್ಮಗುಪ್" ಎನ್ನುವ ನಾಮದಲ್ಲಿ ಅಡಗಿದೆ. ಅಧರ್ಮದ ಕೈ ಮೇಲಾಗಿ, ಧರ್ಮ ನೆಲೆ ಕಳೆದುಕೊಳ್ಳುವ ಸಂದರ್ಭ ಬಂದಾಗ ಭಗವಂತ ಭೂಮಿಗಿಳಿದು ಬರುತ್ತಾನೆ. ಭಗವಂತನ ಅವತಾರದ ಉದ್ದೇಶವೇ ಧರ್ಮ ಗೋಪನೆ. ನಾವು ಭಗವಂತನ ದಶಾವತಾರವನ್ನು ನೋಡಿದಾಗ ಇದು ಸ್ಪಷ್ಟವಾಗುತ್ತದೆ. ಮತ್ಸ್ಯಾವತಾರದಲ್ಲಿ ವೇದಾಭಿಮಾನಿ ದೇವತೆಗಳನ್ನು ಬಂಧನದಲ್ಲಿಟ್ಟ ಆಸುರೀಶಕ್ತಿಯನ್ನು ನಿಗ್ರಹಿಸಿ ಧರ್ಮ ರಕ್ಷಣೆ ಮಾಡಿದ ಭಗವಂತ, ಧರ್ಮದ ಬಗ್ಗೆ ಅಲಕ್ಷ ತೋರಿದ ದೇವತೆಗಳು ಸೋತಾಗ, ಕೂರ್ಮಾವತಾರಿಯಾಗಿ ಬಂದು ಧರ್ಮ ರಕ್ಷಣೆ ಮಾಡಿದ. ಹೀಗೆ ಆತನ ಎಲ್ಲಾ ಅವತಾರಗಳು ಧರ್ಮದ ರಕ್ಷಣೆಗಾಗಿಯೇ ಆಗಿದೆ. ವೇದವ್ಯಾಸರ ರೂಪದಲ್ಲಿ ಹದಿನೆಂಟು ಪುರಾಣ, ಬ್ರಹ್ಮಸೂತ್ರ, ಮಹಾಭಾರತ ಇತ್ಯಾದಿ ಗ್ರಂಥಗಳನ್ನು ನಮಗೆ ದಯಪಾಲಿಸಿದ ಭಗವಂತ ಧರ್ಮಗುಪ್.

೪೭೮) ಧರ್ಮಕೃತ್

ಧರ್ಮ ಎಂದರೆ ನಾವು ನಡೆಯಬೇಕಾದ ನಡೆ. ಧರ್ಮಕೃತ್ ಎಂದರೆ ಧರ್ಮವನ್ನು ನಿರ್ಮಾಣ ಮಾಡಿದವ. ಇನ್ನೊಂದು ಅರ್ಥದಲ್ಲಿ ಧರ್ಮ ಎಂದರೆ ಒಂದು ವಸ್ತುವಿನ ಅಸಾಧಾರಣ ಗುಣ. ಉದಾಹರಣೆಗೆ ಕಣ್ಣಿನ ಧರ್ಮ ನೋಡುವುದು; ಕಿವಿಯ ಧರ್ಮ ಕೇಳುವುದು, ನಾಲಿಗೆಯ ಧರ್ಮ ರುಚಿ ನೋಡುವುದು. ಹೀಗೆ ಒಂದೊಂದು ಇಂದ್ರಿಯಗಳಲ್ಲಿ, ಒಂದೊಂದು ವಸ್ತುವಿನೊಳಗೆ ಒಂದೊಂದು ಧರ್ಮವನ್ನಿಟ್ಟ ಭಗವಂತ ಧರ್ಮಕೃತ್.

೪೭೯) ಧರ್ಮೀ

ಎಲ್ಲಾ ಶುಭ ಧರ್ಮಗಳ ನೆಲೆ, ಮೂಲ ಶಕ್ತಿ ಹಾಗೂ ಜಗತ್ತಿನ ಧಾರಕಶಕ್ತಿಗಳಾದ ದೇವತೆಗಳ ದೊರೆಯಾದ ಭಗವಂತ ಧರ್ಮೀ.

೪೮೦) ಸತ್

ಭಗವಂತನನ್ನು ನಾವು ಸತ್-ಚಿತ್-ಆನಂದ ಎಂದು ಉಪಾಸನೆ ಮಾಡುತ್ತೇವೆ. ಇಲ್ಲಿ ಸತ್ ಎಂದರೆ 'ವ್ಯಕ್ತ'. ಆತ ನಿರ್ದಿಷ್ಟ ಹಾಗೂ ದೋಷ ರಹಿತ ಜ್ಞಾನಾನಂದಮೂರ್ತಿ.

೪೮೧) ಅಸತ್

ಅಸತ್ ಎಂದರೆ 'ಅವ್ಯಕ್ತ'. ಭಗವಂತ ಅವ್ಯಕ್ತ ಮೂರ್ತಿ. ಆತ ಎಲ್ಲರ ಕಣ್ಣಿಗೆ ಕಾಣಲಾರ. ಆತನನ್ನು ಒಳಗಣ್ಣಿನಿಂದ ಕಾಣಲು ಪ್ರಯತ್ನಿಸಬೇಕು.

೪೮೨) ಕ್ಷರಮ್

ಕ್ಷರಮ್ ಎಂದರೆ ಸಾವಿನ ಒಡೆಯ. ಸಾವು ಯಾರ ಅಧೀನವೋ ಅವನು ಕ್ಷರಮ್. ಕ್ಷರಣ ಎಂದರೆ ನಿರಂತರ ಬಯಸಿದ್ದನ್ನು ಕೊಡುವವನು. ಎಲ್ಲರ ಒಳಗಿದ್ದು ಆನಂದವನ್ನೀಯುವ ಭಗವಂತ ಕ್ಷರಮ್.

೪೮೩) ಅಕ್ಷರಮ್

'ನ-ಕ್ಷರತಿ ಅಕ್ಷರಮ್'; ಅಂದರೆ ಎಂದೂ ನಾಶವಿಲ್ಲದವನು. 'ಅಷ್ನುತೇ ಇತಿ ಅಕ್ಷರಮ್'; ಅಂದರೆ ಎಲ್ಲಾ ಕಡೆ ತುಂಬಿರುವವನು. 'ಅಧಿಕಮ್ ಕ್ಷರತಿ ಅಕ್ಷರಮ್'; ಅಂದರೆ ಎಲ್ಲರಿಗಿಂತ ಹೆಚ್ಚು ಅಭೀಷ್ಟವನ್ನು ಕೊಡತಕ್ಕ ಸರ್ವಶಕ್ತ. 'ಅಕ್ಷ+ರ' ಅಂದರೆ ಸಮಸ್ತ ವರ್ಣಗಳಲ್ಲಿ (ಅಕ್ಷರಗಳಲ್ಲಿ) ರಮಿಸುವವನು. ಹೀಗೆ ಭಗವಂತನ ಈ ನಾಮಕ್ಕೆ ಅನೇಕ ಅರ್ಥಗಳನ್ನು ಕಾಣಬಹುದು.

೪೮೪) ಅವಿಜ್ಞಾತಾ

'ಅ' ಕಾರ ವಾಚ್ಯನಾಗಿ ತನ್ನ ಸ್ವರೂಪವನ್ನು ತಾನೇ ತಿಳಿದವನು ಅವಿಜ್ಞಾತ. ಸಮಸ್ತ ಚೇತನಾಚೇತನ ಪ್ರಪಂಚದಿಂದ ವಿಲಕ್ಷಣನಾದ ಭಗವಂತ ಅವಿಜ್ಞಾತ.

೪೮೫) ಸಹಸ್ರಾಂಶುಃ

ಸಹಸ್ರಾರು ಕಿರಣಗಳುಳ್ಳ ಭಗವಂತ ಸಹಸ್ರಾಂಶುಃ . ಜ್ಞಾನದ ಕಿರಣಗಳಿಂದ ಜಗತ್ತಿನಲ್ಲಿ ಸನ್ನಿಹಿತನಾದ ಭಗವಂತ, ಸೂರ್ಯ ಕಿರಣದಲ್ಲಿ ಸನ್ನಿಹಿತನಾಗಿ ಜಗತ್ತಿಗೆ ಪ್ರಾಣ ಶಕ್ತಿಯನ್ನು ಹರಿಸುತ್ತಾನೆ. ಅಂಶು ಎಂದರೆ 'ಅಂಶ' . ಭಗವಂತ ಅಪರಂಪಾರವಾದ ಸಾಗರದಂತಾದರೆ ಜೀವಗಳು ಒಂದು ಹನಿಯಂತೆ. ಭಗವಂತ ಒಂದು ಬಿಂಬ ಹಾಗೂ ಆತನಿಗೆ ಕೋಟಿ ಕೋಟಿ ಪ್ರತಿಬಿಂಬ!

೪೮೬) ವಿಧಾತಾ

ಭಗವಂತ ವಿಶಿಷ್ಟವಾದ, ವಿಲಕ್ಷಣವಾದ, ಧಾರಕ ಶಕ್ತಿ. ನಮ್ಮೊಳಗಿದ್ದು, ನಮ್ಮ ಹೊರಗಿದ್ದು, ನಮ್ಮನ್ನು ಧಾರಣೆ ಮಾಡುವ, ಪೋಷಣೆ ಮಾಡುವ; ಸಂಸಾರದಲ್ಲಿ ಮಾತ್ರವಲ್ಲದೇ ಮೋಕ್ಷದಲ್ಲೂ ರಕ್ಷಿಸುವ ದಿವ್ಯ ಶಕ್ತಿ.

೪೮೭) ಕೃತಲಕ್ಷಣಃ

ಲಕ್ಷಣ ಎಂದರೆ ಗುರುತಿಸುವ ಸಂಗತಿ. ಆಕಾರ, ಗುಣಧರ್ಮ, ಹೆಸರು ಇತ್ಯಾದಿ ಮೂಲಭೂತ ಲಕ್ಷಣಗಳು. ಮನುಷ್ಯರೆಲ್ಲರೂ ಒಂದೇ ತರನಾಗಿದ್ದರೂ ನೂರಕ್ಕೆ ನೂರು ಸಮನಾದ ಎರಡು ವಸ್ತು ಈ ಪ್ರಪಂಚದಲ್ಲಿಲ್ಲ. ಪ್ರತಿಯೊಬ್ಬನೊಳಗೆ ಆಯಾ ರೂಪನಾಗಿ ಭಗವಂತ ತುಂಬಿದ್ದಾನೆ. ಆತ ಪ್ರತಿಯೊಂದು ಜೀವಕ್ಕೆ ಒಂದು ಆಕಾರ ಕೊಟ್ಟ, ಆಯಾ ಆಕಾರದ ವಸ್ತುಗಳಿಗೆ ಅದರದ್ದೇ ಆದ ಗುಣಧರ್ಮವನ್ನು ಕೊಟ್ಟ. ಹೀಗಾಗಿ ಪ್ರತಿಯೊಬ್ಬರಿಗೂ ಅವರದೇ ಆದ ಸ್ವಭಾವ. ಒಬ್ಬರ ಸ್ವಭಾವದಂತೆ ಇನ್ನೊಬ್ಬರ ಸ್ವಭಾವ ಇರಲು ಸಾಧ್ಯವಿಲ್ಲ. ಹೀಗೆ ಅನಂತ ರೂಪ ಲಕ್ಷಣವನ್ನು ಹೊಂದಿದ ಭಗವಂತ ಕೃತಲಕ್ಷಣಃ

**ಗಭಸ್ತಿನೇಮಿಃ ಸತ್ತ್ವಸ್ಥಃ ಸಿಂಹೋ ಭೂತಮಹೇಶ್ವರಃ ।**

**ಆದಿದೇವೋ ಮಹಾದೇವೋ ದೇವೇಶೋ ದೇವಭೃದ್ಗುರುಃ ॥೬೫॥**

೪೮೮) ಗಭಸ್ತಿನೇಮಿಃ

'ಗಬಸ್ತಿ' ಎಂದರೆ ಕಿರಣಗಳು, 'ನೇಮಿ' ಎಂದರೆ ಅಚ್ಚು (ಉದಾ: ಗಾಲಿಯ ಅಚ್ಚು). ಗಭಸ್ತಿನೇಮಿ ಎಂದರೆ ಕಿರಣದ ಅಚ್ಚು; ಅಂದರೆ ಪ್ರಕಾಶದ ವಲಯದ ಮಧ್ಯ ನಿಂತವನು. ಭಗವಂತನ ಸುತ್ತ ಕಿರಣಗಳ ಅಚ್ಚು ತುಂಬಿದೆ.ಇದನ್ನೇ ದೇವಸ್ಥಾನದಲ್ಲಿ 'ಪ್ರಭಾವಳಿ' ಎನ್ನುತ್ತಾರೆ.

೪೮೯) ಸತ್ವಸ್ಥಃ

ಭಗವಂತ ಸತ್ವ ಸ್ವರೂಪನಾಗಿ, ಬಲ ಜ್ಞಾನ ಸ್ವರೂಪನಾಗಿ ಎಲ್ಲರೊಳಗೆ ತುಂಬಿದ್ದಾನೆ. ವಿಶೇಷವಾಗಿ ಸಾತ್ವಿಕ ಕಾರ್ಯಗಳಿಗೆ ನೆರವಾಗುವ, ಪ್ರತಿಯೊಬ್ಬರೊಳಗಿದ್ದು, ಕತ್ತಲೆಯನ್ನೋಡಿಸುವ ಬೆಳಕಿನ ಪುಂಜನಾದ ಭಗವಂತ ಸತ್ವಸ್ಥಃ.

೪೯೦) ಸಿಂಹಃ

'ಸಿಮ್ಮತಿ ಇತಿ ಸಿಂಹಃ' ; ಇನ್ನೊಂದು ಪ್ರಾಣಿಯನ್ನು ಕೊಂದು ತಿಂದು ಬದುಕುವ ಪ್ರಾಣಿಗಳಲ್ಲಿ ಶ್ರೇಷ್ಠವಾದ ಪ್ರಾಣಿ ಸಿಂಹ. ಇಲ್ಲಿ ಸಿಂಹಃ ಎಂದರೆ 'ಸಂಹಾರ ಮಾಡುವವ' ಎಂದರ್ಥ. ಸರ್ವಸಂಹಾರಕ ಭಗವಂತ ನಿಜವಾದ ಸಿಂಹ. ನಮ್ಮಲ್ಲಿರುವ ದೌರ್ಬಲ್ಯ, ದೋಷ, ಎಲ್ಲವನ್ನು ನಾಶ ಮಾಡುವವನೂ ಅವನೇ. ಈ ಕಾರಣಕ್ಕಾಗಿ ಭಗವಂತನ ಸಿಂಹ ರೂಪದ ಉಪಾಸನೆ ಮಾಡುತ್ತಾರೆ. "ನನ್ನಲ್ಲಿರುವ ತಮೋಗುಣವನ್ನು, ದೋಷವನ್ನು, ಕಾಮ-ಕ್ರೋಧ-ಮದ-ಮತ್ಸರ-ಲೋಭವನ್ನು ನಾಶಮಾಡಿ, ಸಂಸಾರ ಬಂಧನದಿಂದ ಪಾರುಮಾಡು" ಎಂದು ನರಸಿಂಹ ರೂಪದ ಭಗವಂತನ ಉಪಾಸನೆ ಮಾಡುತ್ತಾರೆ. ಸಾತ್ವಿಕ ಜೀವರೊಳಗಿದ್ದು, ಮುಕ್ತಿಪ್ರದನಾಗಿ, ಸಂಸಾರ ಬಂಧನದ ಸಂಹಾರ ಮಾಡುವ ಭಗವಂತ ಸಿಂಹಃ.

೪೯೧) ಭೂತಮಹೇಶ್ವರಃ

ಈ ನಾಮವನ್ನು ಈ ರೀತಿ ಬಿಡಿಸಬಹುದು. ಭೂತ+ಮಹಾ+ಈಶ+ವರ. ಅಂದರೆ ನಮ್ಮನ್ನು ನಿಯಂತ್ರಿಸುವ ಭೂತಗಳಿಗೆ ಮಹಾ ಈಶ-ಮಹೇಶ, ಅವನಿಗೂ ವರನಾದ ಭಗವಂತ ಮಹೇಶ್ವರಃ. ಪ್ರಪಂಚ ಸೃಷ್ಟಿಗೆ ಕಾರಣವಾದ ಪಂಚಭೂತಗಳೇ ಸರ್ವ ಭೂತಗಳು (ಮಣ್ಣು, ನೀರು, ಬೆಂಕಿ,ಗಾಳಿ ಮತ್ತು ಆಕಾಶ). ಪ್ರಪಂಚದ ಎಲ್ಲಾ ರೂಪಗಳೂ ಪಂಚಭೂತದ ಒಂದು ಸಮಷ್ಟಿ . [ಆದ್ದರಿಂದ ಯಾರಾದರೂ ಸತ್ತಾಗ 'ಪಂಚಭೂತಗಳಲ್ಲಿ ಲೀನವಾದ (ಪಂಚತ್ವಂ ಗತಃ)' ಎನ್ನುತ್ತಾರೆ]. ಭೂಮಿಯ ಒಡೆಯ ಶನಿ, ಶನಿಯ ಮೇಲೆ ಇರುವ ದೇವತೆ ಪ್ರಥ್ವೀದೇವತೆ-ಮಹೇಶಳು; ನೀರಿನ ಈಶ ಬುಧ, ಬುಧನ ಮೇಲೆ ವರುಣ-ಮಹೇಶ; ಬೆಂಕಿಯ ಒಡೆಯ-ಪಾಲಕ, ಅವನ ಮೇಲಿರುವ ವೈಶ್ವಾನರ-ಮಹೇಶ; ಗಾಳಿಯ ಒಡೆಯ ಮರೀಚಿ, ಅವನ ಮೇಲಿರುವ ಪ್ರಭವವಾಯು ಮಹೇಶ; ಆಕಾಶಕ್ಕೆ ಗಣಪತಿ ಒಡೆಯ, ಅವನ ಮೇಲೆ ಪಾರ್ವತಿ. ಈ ಎಲ್ಲಾ ಭೂತ ಮಹೇಶರಿಗೆ ಅಧಿಪತಿಯಾದ ಶಿವ 'ಸರ್ವ ಭೂತ ಮಹೇಶ'. ಇನ್ನೊಬ್ಬ ಸರ್ವಭೂತ ಮಹೇಶ ಮುಖ್ಯ ಪ್ರಾಣ. ಈ ಸರ್ವ ಭೂತ ಮಹೇಶರಿಗೆ ವರನಾದ ಭಗವಂತ ಭೂತಮಹೇಶ್ವರಃ.

೪೯೨) ಆದಿದೇವಃ

ಎಲ್ಲಕ್ಕಿಂತ ಮೊದಲು ಇರುವವ; ಈ ಪ್ರಪಂಚ ಇರುವಾಗಲೂ, ಇಲ್ಲದಾಗಲೂ ಇರುವವ ಆದಿದೇವ. ಅನಾದಿನಿತ್ಯವಾದ ಜೀವ ಹಾಗೂ ಜೀವ ಸ್ವಭಾವಕ್ಕನುಗುಣವಾಗಿ ಭಗವಂತನ ಸೃಷ್ಟಿಯಲ್ಲಿ ಜೀವದ ಬೆಳವಣಿಗೆಯಾಗುತ್ತದೆ. ಅವನು ಎಲ್ಲಕ್ಕೂ ಕಾರಣ ಹಾಗೂ ಅದು ಅವನಿಗೆ ಒಂದು ಕ್ರೀಡೆ. ಎಲ್ಲಕ್ಕಿಂತ ಎತ್ತರದಲ್ಲಿರುವವನು; ಆದಿಯಿಂದ ಅನಾದಿಕಾಲದವರೆಗೆ ಜಗತ್ತಿನ ಎಲ್ಲಾ ವ್ಯವಹಾರವನ್ನೂ ನೆಡೆಸತಕ್ಕಂತಹ, ಎಲ್ಲವುದರ ಒಳಗಿದ್ದು ಎಲ್ಲಾ ಕ್ರಿಯೆಗಳನ್ನು ನಡೆಸುವ ಭಗವಂತ ಆದಿದೇವಃ

೪೯೩) ಮಹಾದೇವಃ

'ದೇವ' ಎಂದರೆ ದೇವತೆಗಳು. ಈ ಜಗತ್ತಿನ ನಿಯಾಮಕ ಶಕ್ತಿಗಳಾದ ದೇವತೆಗಳಿಗೆ ಹಿರಿದೈವನಾದ ಭಗವಂತ ಮಹಾದೇವಃ

೪೯೪) ದೇವೇಶಃ

ಮೇಲೆ ಹೇಳಿದಂತೆ 'ದೇವ' ಎಂದರೆ ದೇವತೆಗಳು; 'ಈಶ' ಎಂದರೆ ಒಡೆಯ. ಸರ್ವ ದೇವತೆಗಳ ಒಡೆಯನಾದ ಭಗವಂತ ದೇವೇಶಃ

೪೯೫) ದೇವಭೃದ್ಗುರುಃ

ಸಮಸ್ತ ದೇವತೆಗಳನ್ನು, ಜ್ಞಾನಿಗಳನ್ನು ಭರಣೆ ಮಾಡಿದ ಭಗವಂತ ಜಗದ್ಗುರು. ಹಾಗಾಗಿ "ಕೃಷ್ಣಂ ಒಂದೇ ಜಗದ್ಗುರುಮ್ " ಎನ್ನುತ್ತಾರೆ. ಭಗವಂತ ಲೋಕಗುರು; ದೇವತೆಗಳಿಗೆ, ಜ್ಞಾನಿಗಳಿಗೆ, ಬ್ರಹ್ಮಾದಿಗಳಿಗೆ, ಶ್ರೀಲಕ್ಷ್ಮಿಗೆ, ಎಲ್ಲರಿಗೂ ಆತ ಗುರು. ಎಲ್ಲಾ ಗುರುವಿನೊಳಗಿದ್ದು ಜ್ಞಾನ ಕೊಡುವವನೂ ಅವನೇ. ಹೀಗೆ ಬ್ರಹ್ಮಾದಿ ದೇವತೆಗಳನ್ನು, ಜ್ಞಾನಿಗಳನ್ನು ಸಲಹುವ ಜಗದ್ಗುರು ಭಗವಂತ ದೇವಭೃದ್ಗುರುಃ.

ಉತ್ತರೋ ಗೋಪತಿರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ ।
ಶರೀರಭೂತಭೃದ್ಭೋಕ್ತಾ ಕಪೀಂದ್ರೋ ಭೂರಿದಕ್ಷಿಣಃ ॥೬೬॥

೪೯೬) ಉತ್ತರಃ

ಉತ್ತರ ಎಂದರೆ ಉತ್ಕೃಷ್ಟ, ಎಲ್ಲಕ್ಕಿಂತ ಶ್ರೇಷ್ಠ. ಸರ್ವ ಪ್ರಶ್ನೆಗಳಿಗೆ ಕೊನೆಯ ಉತ್ತರ ಸರ್ವೋತ್ಕೃಷ್ಟನಾದ ಭಗವಂತ. ಆದ್ದರಿಂದ ಆತ ಉತ್ತರಃ.

೪೯೭) ಗೋಪತಿಃ

ಗೋವುಗಳ ಒಡೆಯನಾದ ಭಗವಂತ ಗೋಪತಿಃ. ಇದು ಮೇಲ್ನೋಟಕ್ಕೆ ಕಾಣುವ ಅರ್ಥ. ಆದರೆ ಸಂಸ್ಕೃತದಲ್ಲಿ ಗೋವು ಎನ್ನುವುದಕ್ಕೆ ಭೂಮಿ, ಕಿರಣ, ಸೂರ್ಯ, ಚಂದ್ರ, ಸ್ವರ್ಗ, ಹಸು, ವಾಕ್, ವೇದ, ಹೀಗೆ ಅನೇಕ ಅರ್ಥಗಳಿವೆ. ಆದ್ದರಿಂದ ಗೋಪತಿಃ ಎಂದರೆ ಭೂಮಿಯ ಹಾಗೂ ಸ್ವರ್ಗದ ಒಡೆಯ; ವಾಕ್ಪತಿ; ಸಮಸ್ತ ವೇದವಿದ್ಯೆಗಳ ಒಡೆಯ ಭಗವಂತ ಗೋಪತಿಃ.

೪೯೮) ಗೋಪ್ತಾ

ಗೋಪ್ತಾ ಎಂದರೆ ಸಲಹುವವನು. ತನ್ನನ್ನು ತಾನು ಅಡಗಿಸಿಕೊಳ್ಳುವವನು, ಬಾಹ್ಯ ದೃಷ್ಟಿಗೆ, ದುಷ್ಟರಿಗೆ ಕಾಣದ ಭಗವಂತ ಕೇವಲ ಭಕ್ತಿಪೂರ್ವಕವಾದ ಒಳಗಣ್ಣಿಗೆ ಮಾತ್ರ ಗೋಚರಿಸಬಲ್ಲ.

೪೯೯) ಜ್ಞಾನಗಮ್ಯಃ

ಅರಿವಿನ ಮೂಲಕ ಮಾತ್ರವೇ ಪಡೆಯಬಹುದಾದವನು. ಭಗವಂತನನ್ನು ತಿಳಿದರೆ ಮಾತ್ರ ಆತನನ್ನು ಸೇರಲು ಸಾಧ್ಯ. ಆತನನ್ನು ತಿಳಿಯುವ ಏಕಮಾತ್ರ ಸಾಧನ ಅರಿವು. ಆದ್ದರಿಂದ ಭಗವಂತ ಜ್ಞಾನಗಮ್ಯಃ.

ಸಹಸ್ರನಾಮ ವಿವರಣೆ-೫೦೦

೫೦೦) ಪುರಾತನಃ

ಈ ನಾಮ ಆದಿದೇವ ಎನ್ನುವ ನಾಮದ ಅರ್ಥವನ್ನೇ ಕೊಡುತ್ತದೆ. ಎಲ್ಲಕ್ಕಿಂತ ಮೊದಲಿದ್ದ ಭಗವಂತ ಪುರಾತನಃ.

೫೦೧) ಶರೀರಭೂತಭೃತ್

ಭಗವಂತ ಶರೀರದಂತಿರುವ ಈ ಚರಾಚರ ಪ್ರಪಂಚವನ್ನು ಹೊತ್ತವನು. ಇನ್ನು ಪಿಂಡಾಂಡವನ್ನು ನೋಡಿದಾಗ, ಈ ಶರೀರ ಅನ್ನಮಯಕೋಶ, ಪ್ರಾಣಮಯಕೋಶ, ಮನೋಮಯಕೋಶ, ವಿಜ್ಞಾನಮಯಕೋಶ ಹಾಗೂ ಆನಂದಮಯಕೋಶ ಎಂಬ ಪಂಚಕೋಶಗಳಿಂದಾಗಿದೆ. ಶರೀರದಲ್ಲಿ ಪಂಚಭೂತಗಳು ಸೂಕ್ಷ್ಮಾತಿ-ಸೂಕ್ಷ್ಮ ಸ್ಥಿತಿಯಲ್ಲಿ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನವಾಗಿ ಪಂಚಕೋಶಗಳಾಗಿವೆ. ಇದನ್ನೇ 'ಶರೀರಭೂತ' ಎನ್ನುತ್ತೇವೆ. ಈ

ಪಂಚಕೋಶಾತ್ಮಕ ಶರೀರದಲ್ಲಿ ಭಗವಂತ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣನಾಗಿ ಪಂಚರೂಪದಲ್ಲಿ ನೆಲೆಸಿದ್ದರೆ, ಪ್ರಾಣದೇವರು ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎನ್ನುವ ಐದು ರೂಪದಲ್ಲಿ ನೆಲೆಸಿದ್ದಾರೆ. ಹೀಗೆ ಪಂಚರೂಪನಾದ ಪ್ರಾಣನ ಜೊತೆಗೆ, ಪಂಚರೂಪನಾದ ಭಗವಂತ ಪಂಚಕೋಶಗಳಲ್ಲಿ ನೆಲೆಸಿದ್ದಾನೆ. ಆದ್ದರಿಂದ ಆತನನ್ನು ಶರೀರಭೂತಭೃತ್ ಎಂದು ಉಪಾಸನೆ ಮಾಡುತ್ತಾರೆ.

೫೦೨) ಭೋಕ್ತಾ

ಎಲ್ಲಾ ವಿಷಯಗಳನ್ನು ಭೋಗಿಸುವುದು, ಭೋಗಿಸಿ ಆನಂದಿಸುವುದು ಆತನ ಲೀಲೆ. ಈ ಪಂಚಭೂತಾತ್ಮಕವಾದ, ಪಂಚಕೋಶಾತ್ಮಕ ಶರೀರದೊಳಗಿದ್ದು, ಶರೀರದ ಎಲ್ಲಾ ಭೋಗಗಳನ್ನು ಭಗವಂತ ತಾನೂ ಉಂಡು, ನಮಗೆ ಉಣ್ಣಿಸಿ, ನಮಗೆ ವಿಷಯ ಭೋಗಗಳನ್ನು ಕೊಡುತ್ತಾನೆ. ಹೀಗೆ ಚರಾಚರಾತ್ಮಕವಾದ ಪ್ರಪಂಚದಲ್ಲಿ, ಬ್ರಹ್ಮಾಂಡ ಪಿಂಡಾಂಡದಲ್ಲಿ, ಪಂಚಕೋಶಗಳಲ್ಲಿ, ಒಂದೊಂದು ಕೋಶದ ಕ್ರಿಯೆಯನ್ನು ಮಾಡಿ, ನಮಗೆ ಆನಂದವನ್ನು ಉಣಿಸುವ, ತಾನೂ ನಿರಂತರ ಆನಂದಮೂರ್ತಿಯಾಗಿರುವ ಭಗವಂತ ಭೋಕ್ತಾ.

೫೦೩) ಕಪೀಂದ್ರಃ

ಯಾವಯಾವ ವಸ್ತುವಿನಲ್ಲಿ ಭಗವಂತ ವಿಶೇಷವಾಗಿ ನೆಲೆಸಿದ್ದಾನೋ ಆ ವಸ್ತುವಿನ ಹೆಸರು ಭಗವಂತನ ಹೆಸರು ಕೂಡಾ ಹೌದು. ಆದ್ದರಿಂದ ತತ್ತದ್ವಸ್ತುವಿನಲ್ಲಿ ಇರತಕ್ಕ ಭಗವಂತನ ರೂಪವನ್ನು ತತ್ತನ್ನಾಮದಿಂದ ಉಪಾಸನೆ ಮಾಡುವುದು ವಾಡಿಕೆ. ಈ ರೀತಿ ನೋಡಿದಾಗ ಭಗವಂತನ ಕಪೀಂದ್ರಃ ನಾಮದ ಮೇಲ್ನೋಟದ ಅರ್ಥ- 'ರಾಮಾವತಾರದಲ್ಲಿ ಸೂರ್ಯಪುತ್ರನಾದ ಸುಗ್ರೀವ ಹಾಗೂ ವಾಯುತನಯ ಆಂಜನೇಯನಲ್ಲಿ ವಿಶೇಷವಾಗಿ ಸನ್ನಿಹಿತನಾಗಿದ್ದ ಭಗವಂತ'.

ಇನ್ನು ಈ ನಾಮದ ಶಬ್ದ ನಿಷ್ಪತ್ತಿಯನ್ನು(etymological meaning) ನೋಡಿದರೆ: 'ಕಪಿ' ಎಂದರೆ 'ಹಂದಿ' ಅಥವಾ 'ವರಾಹ'. ವರಾಹ ರೂಪದಲ್ಲಿ ಭೂಮಿಯನ್ನು ರಕ್ಷಿಸಿದ ಭಗವಂತ ಕಪೀಂದ್ರಃ. 'ಕಂ' ಎಂದರೆ ಆನಂದ. 'ಕಪಿ' ಎಂದರೆ ಆನಂದಪಾನ ಮಾಡುವವರು. ಅಂದರೆ 'ಮುಕ್ತರು'. ಭಗವಂತ ಮುಕ್ತರಿಗೆ ಇಂದ್ರ (ಒಡೆಯ). ಆದ್ದರಿಂದ ಆತ ಕಪೀಂದ್ರಃ.

೫೦೪) ಭೂರಿದಕ್ಷಿಣಃ

ಈ ನಾಮದ ಅರ್ಥ ವಿಶ್ಲೇಷಣೆಗೆ ಮೊದಲು 'ದಕ್ಷಿಣೆ' ಎಂದರೆ ಏನು ಎನ್ನುವುದನ್ನು ತಿಳಿಯೋಣ. ಹಿಂದಿನ ಕಾಲದಲ್ಲಿ ವೈದಿಕ ವೃತ್ತಿಯಲ್ಲಿದ್ದವರಿಗೆ ಸಂಬಳವಿರಲಿಲ್ಲ. ಏಕೆಂದರೆ ಪಾಠ ಹೇಳುವವರು ಸಂಬಳ ತೆಗೆದುಕೊಳ್ಳಬಾರದು ಎನ್ನುವ ನಿಯಮವಿತ್ತು. ಅಂತವರನ್ನು ಸಮಾಜವೇ ಸಾಕಿ ಸಲಹುತ್ತಿತ್ತು. ಪ್ರತಿದಿನ ಒಬ್ಬೊಬ್ಬರು ಇಂತಹ ಪಂಡಿತರನ್ನು ಮನೆಗೆ ಕರೆದು ಊಟ ಹಾಕಿ ನಂತರ ಅವರ ಕುಟುಂಬಕ್ಕಾಗಿ 'ದಕ್ಷಿಣೆ' ಕೊಡುತ್ತಿದ್ದರು. ಹೀಗೆ ಕೊಟ್ಟ ದಕ್ಷಿಣೆ ಅವರ ಮನೆ ಖರ್ಚಿಗಾಗಿ ಬಳಕೆಯಾಗುತ್ತಿತ್ತು. ಈ ಕಾರಣಕ್ಕಾಗಿ ದಕ್ಷಿಣೆ ಕೊಡದೇ ಊಟ ಹಾಕಬಾರದು ಎನ್ನುವ ಸಂಪ್ರದಾಯವಿತ್ತು. ಇನ್ನು ಯಜ್ಞದ ಪೌರೋಹಿತ್ಯ ಮಾಡುವವರಿಗೆ ವಿಶೇಷ ದಕ್ಷಿಣೆ ಕೊಡುತ್ತಿದ್ದರು. ಎಲ್ಲವನ್ನೂ ಕೊಡುವವನು ಭಗವಂತ. ಶ್ರೀಮಂತರೊಳಗಿದ್ದು ಕೈತುಂಬಾ ಕೊಡಿಸುವ ಭಗವಂತ ಭೂರಿದಕ್ಷಿಣಃ.

'ದಕ್ಷಿಣ' ಎಂದರೆ ಲಕ್ಷ್ಮಿ ಎನ್ನುವುದು ಒಂದು ಅರ್ಥ. ಇನ್ನೊಂದು ಅರ್ಥ- 'ಶಿವ-ಪಾರ್ವತಿ'. ಹಿಂದಿನ ಕಾಲದಲ್ಲಿ ಒಂದು ಕ್ರಮವಿತ್ತು, ಗಂಡ ಹೆಂಡತಿ ಕುಳಿತುಕೊಳ್ಳುವ ಕ್ರಮ. ಅವರು ಕುಳಿತ ರೀತಿಯಲ್ಲೇ ಅವರು ಗಂಡ ಹೆಂಡತಿ ಎಂದು ತಿಳಿಯುತ್ತಿತ್ತು. ತಂದೆ-ಮಗಳು ಕುಳಿತುಕೊಳ್ಳುವಾಗ ಮಗಳು ತಂದೆಯ ಬಲ ಭಾಗದಲ್ಲಿ ಕುಳಿತು ಕೊಳ್ಳಬೇಕು,

ಹೆಂಡತಿ ಗಂಡನ ಎಡಭಾಗದಲ್ಲೇ ಕುಳಿತು ಕೊಳ್ಳಬೇಕು. ಇದು ಸಂಪ್ರದಾಯ. ತನ್ನ ಬಲಭಾಗದಲ್ಲಿ ಗಂಡ ಇರುವ ಲಕ್ಷ್ಮಿ 'ದಕ್ಷಿಣ'; ಇಂತಹ ಶ್ರೀಲಕ್ಷ್ಮಿ ಎಲ್ಲಕ್ಕಿಂತ ಶ್ರೇಷ್ಠ ಪರಿವಾರವಾಗಿ ಇರುವ ಭಗವಂತ ಭೂರಿದಕ್ಷಿಣಃ.

**ಸೋಮಪೋಮೃತಪಃ ಸೋಮಃ ಪುರುಜಿತ್ ಪುರುಸತ್ತಮಃ ।**

**ವಿನಯೋ ಜಯಃ ಸತ್ಯಸಂಧೋ ದಾಶಾರ್ಹಸ್ಸಾತ್ವತಾಂ ಪತಿಃ ॥೬೭॥**

೫೦೫) ಸೋಮಪಃ

ಹಿಂದೆ ಯಜ್ಞದಲ್ಲಿ ಸೋಮಲತೆ ಎನ್ನುವ ಬಳ್ಳಿಯಿಂದ ತಯಾರಿಸಿದ ಸೋಮರಸವನ್ನು ಆಹುತಿಯಾಗಿ ಕೊಡುತ್ತಿದ್ದರು. ಹೀಗೆ ಸೋಮರಸವನ್ನು ಆಹುತಿಯಾಗಿ ಕೊಟ್ಟು ಮಾಡುವ ಯಾಗವನ್ನು ಸೋಮಯಾಗ ಎನ್ನುತ್ತಾರೆ. ಆದರೆ ಈಗ ಸೋಮಲತೆ ಎನ್ನುವ ಬಳ್ಳಿಯ ಪರಿಚಯವೇ ಮರೆತು ಹೋಗಿದೆ. ನದಿ ತೀರದಲ್ಲಿ ಹೇರಳವಾಗಿ ಬೆಳೆಯುವ ಈ ಲತೆಗೆ ಅತ್ಯಂತ ಅಮೂಲ್ಯವಾದ ಔಷಧೀಯ ಗುಣವಿದೆ. ವೇದ ಕಾಲದಲ್ಲಿ ಇದಕ್ಕೆ ಸರಿಸಾಟಿಯಾದ ಔಷಧವೇ ಇರಲಿಲ್ಲ. ಈ ಕಾರಣಕ್ಕಾಗಿ ಹಿಂದೆ ಈ ಲತೆಯನ್ನು ಯಜ್ಞದಲ್ಲಿ ಬಳಸುತ್ತಿದ್ದರು. ಯಜ್ಞದಲ್ಲಿ ಬಳಸಿ ಉಳಿದ ಸೋಮರಸವನ್ನು ಪಾನ ಮಾಡುತ್ತಿದ್ದರು. ಇದನ್ನು ಸೋಮಪಾನ ಎನ್ನುತ್ತಾರೆ. ಇಲ್ಲಿ ಸೋಮಪಾನ ಮತ್ತು ಸುರಪಾನ ಒಂದೇ ಅಲ್ಲ. "ಸೋಮಪಾನ ಮಾಡು ಆದರೆ ಎಂದೂ ಸುರಪಾನ ಮಾಡಬೇಡ" ಎಂದು ವೇದಗಳಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಇಂತಹ ಸೋಮಯಜ್ಞವನ್ನು ಯಜಮಾನನಲ್ಲಿ ಕುಳಿತು ಮಾಡಿಸುವ ಹಾಗೂ ಅಗ್ನಿಯಲ್ಲಿ ಸನ್ನಿಹಿತನಾಗಿ ಸೋಮರಸ ಪಾನಮಾಡುವ ಭಗವಂತ ಸೋಮಪಃ.

ಚಂದ್ರನನ್ನು ಸೋಮ ಎನ್ನುತ್ತಾರೆ. ಆತ ಎಲ್ಲಾ ಲತೆಗಳ ಒಡೆಯ. ಚಂದ್ರನ ಮುಖೇನ ಲತೆಗೆ ಇಂತಹ ಅಮೂಲ್ಯ ಗುಣವನ್ನು ದಯಪಾಲಿಸಿದ ಭಗವಂತ ಸೋಮಪಃ.

ಸೋಮ ಎಂದರೆ 'ರಸ' ಎನ್ನುವ ಅರ್ಥವಿದೆ. ನಾವು ನಿತ್ಯ ಪೂಜೆ ಮಾಡುವಾಗ ಹೇಳುವ ಒಂದು ಮಂತ್ರವಿದೆ. "ವಾಯ ವಾಯಾಹಿ ದರ್ಶತೇಮೇ ಸೋಮಾಲಂಕೃತಾಃ ತೇಷಾಂ ಪಾಹಿ ಶುಚೇ ಭವಂ". ಅಂದರೆ " ಓ ವಾಯುದೇವನೇ- ಬಾ, ನಿನಗೆ ಇಲ್ಲಿ ಸೋಮವನ್ನಿಟ್ಟಿದ್ದೇನೆ, ನಮ್ಮ ಕರೆಯನ್ನು ಮನ್ನಿಸಿ ಬಾ. ಬಂದು ಈ ಸೋಮವನ್ನು ಪಾನ ಮಾಡು". ಯಾರೂ ಪೂಜೆಯಲ್ಲಿ ಸೋಮರಸವನ್ನಿಡುವುದಿಲ್ಲ. ಆದರೆ ಪೂಜೆಯ ಪ್ರಾರಂಭದಲ್ಲಿ ಈ ಮಂತ್ರವನ್ನು ಹೇಳುತ್ತಾರೆ! ಇಲ್ಲಿ ಸೋಮರಸ ಎಂದರೆ ಭಕ್ತಿಯಿಂದ ಕರಗಿ ಭಗವಂತನ ಕಡೆಗೆ ಹರಿಯುವ ಮನಸ್ಸು. ಸೋಮಪಃ ಎಂದರೆ ಭಕ್ತಿಯಿಂದ ಕರಗಿದ, ಭಕ್ತಿ ರಸವಾದ ನಮ್ಮ ಮನಸ್ಸಿನ ಪೂಜೆಯನ್ನು ಸ್ವೀಕರಿಸಿ ರಕ್ಷಣೆ ಮಾಡುವ ಭಗವಂತ.

ಮನೋಭಿಮಾನಿ ದೇವತೆಯಾದ ಶಿವ ಕೂಡಾ ಸೋಮ. ಏಕೆಂದರೆ ಆತ 'ಉಮೆಯಿಂದ ಸಹಿತನಾದವನು'. ಅದಕ್ಕಾಗಿ ಆತನನ್ನು ಸೋಮೇಶ್ವರ ಎನ್ನುತ್ತಾರೆ. ಉಮಾಪತಿ ಶಿವ ಮನಸ್ಸನ್ನು ರಕ್ಷಣೆ ಮಾಡುವವ. ಮನಸ್ಸಿನ ಅಭಿಮಾನಿಯಾದ ರುದ್ರ-ಚಂದ್ರಾದಿಗಳನ್ನು ರಕ್ಷಣೆ ಮಾಡುವ ಶಕ್ತಿಯಾದ ಭಗವಂತ ಸೋಮಪಃ.

'ಸೋಮರು' ಎಂದರೆ ಉತ್ಕೃಷ್ಟವಾದ ಜ್ಞಾನ ಉಳ್ಳವರು. ಇಂತಹ ಜ್ಞಾನಿಗಳಲ್ಲಿ ಸದಾ ಸನ್ನಿಹಿತನಾಗಿದ್ದು ರಕ್ಷಣೆ ಮಾಡುವ ಭಗವಂತ ಸೋಮಪಃ.

೫೦೬) ಅಮೃತಪಃ

ಸಮುದ್ರ ಮಥನ ಕಾಲದಲ್ಲಿ ಅಮೃತಪಾನಕ್ಕೆ ದೇವತೆಗಳಿಗೆ ನೆರವು ಮಾಡಿ, ದುಷ್ಟ ರಾಕ್ಷಸರ ಸಂಹಾರ ಮಾಡಿದ ಭಗವಂತ ಅಮೃತಪಃ. ದೇವತೆಗಳನ್ನು, ಮುಕ್ತರನ್ನು, ಬ್ರಹ್ಮ-ವಾಯುವನ್ನು ಸಲಹುವ ಭಗವಂತ ಅಮೃತಪಃ.

೫೦೭) ಸೋಮಃ

ಅರಿವಿನ ನೆಲೆ ಹಾಗೂ ಸೌಮ್ಯ ಸ್ವಭಾವದ ಭಗವಂತ ಸೋಮಃ. ಸೋಮರಸದಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಮನೋನಿಯಾಮಕ ಚಂದ್ರ ಹಾಗೂ ರುದ್ರರಲ್ಲಿ ಸನ್ನಿಹಿತನಾಗಿದ್ದಾನೆ. ಪವಮಾನನೊಳಗೆ (ಉತ್ಕೃಷ್ಟ ಜ್ಞಾನ ಸ್ವರೂಪನೊಳಗೆ) ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಸೋಮಃ.

೫೦೮) ಪುರುಜಿತ್

ಅತ್ಯಂತ ಬಲಿಷ್ಠವಾದ ಸಂಗತಿಗಳನ್ನು(ಬಲ ಮತ್ತು ಜ್ಞಾನ) ಗೆದ್ದು, ಎಲ್ಲಕ್ಕಿಂತ ಎತ್ತರದಲ್ಲಿರುವ, ಧರ್ಮಕ್ಕೆ ವಿರುದ್ಧವಾಗಿ ನಿಲ್ಲುವ ತಾಮಸ ಶಕ್ತಿಯಾದ ಅಸುರ ವೃಂದವನ್ನು ಸೋಲಿಸಿ, ಧರ್ಮ ಸ್ಥಾಪನೆ ಮಾಡಿದ ಭಗವಂತ ಪುರುಜಿತ್.

೫೦೯) ಪುರುಸತ್ತಮಃ

ಪುರು ಎಂದರೆ ದೇಹ. ದೇಹದೊಳಗಿರುವ ಎಲ್ಲಾ ಶ್ರೇಷ್ಠ ಶಕ್ತಿಗಳನ್ನು (ಪುರುಗಳು ಅಂದರೆ ತತ್ವಾಭಿಮಾನಿ ದೇವತೆಗಳು) ನಿಯಂತ್ರಿಸುವ, ಅವರಲ್ಲಿ ಸತ್ತಮನಾಗಿರುವ, ಜ್ಞಾನಿಗಳಲ್ಲಿ ಶ್ರೇಷ್ಠ ಜ್ಞಾನಿ ಭಗವಂತ ಪುರುಸತ್ತಮಃ.

೫೧೦) ವಿನಯಃ

ವಿ+ನಯ-ವಿನಯ; ಇಲ್ಲಿ 'ವಿ' ಎಂದರೆ ವಿವಿಧ ಅಥವ ವಿಶಿಷ್ಟ; ನಯ ಎಂದರೆ ನೀತಿ(**Principle**). ಪ್ರಪಂಚದಲ್ಲಿ ವಿವಿಧವಾದ ನೀತಿಯನ್ನು ನೆಲೆಗೊಳಿಸಿದ ಭಗವಂತ ವಿನಯಃ. ಒಬ್ಬೊಬ್ಬರಿಗೆ ಒಂದೊಂದು ನೀತಿ, ಪ್ರತಿಯೊಬ್ಬ ವ್ಯಕ್ತಿಗೂ ಅವನ ವೈಯಕ್ತಿಕ ನೀತಿಯನ್ನು ನಿಯಮಿಸುವವನು ವಿನಯಃ. ಒಬ್ಬೊಬ್ಬರಿಗೆ ಒಂದೊಂದು ನೀತಿ ಏಕೆಂದರೆ: ಪ್ರತಿಯೊಂದು ಜೀವಕ್ಕೆ ಅದರದ್ದೇ ಆದ ಸ್ವಭಾವವಿದೆ. ಆ ಸ್ವಭಾವಕ್ಕೆ ತಕ್ಕಂತೆ ಆತನ ಜೀವನದ ನಡೆ. ಆದ್ದರಿಂದ ಒಬ್ಬೊಬ್ಬರ ನಡೆ ಒಂದೊಂದು ವಿಧ. ಹೀಗೆ ವಿವಿಧವಾದ ಜೀವನದ ನಡೆಯನ್ನು ನಿಯಂತ್ರಿಸುವ, ಅನಂತ ಜೀವಗಳಿಗೆ ಅನಂತ ರೀತಿಯ ಬದುಕನ್ನು ನೀಡಿದ ಭಗವಂತ ವಿನಯಃ. ಈ ಕಾರಣಕ್ಕಾಗಿ ಭಗವಂತನ ಸೃಷ್ಟಿಯಲ್ಲಿ ನೂರಕ್ಕೆ ನೂರು ಒಂದೇ ರೀತಿಯಾದ ಎರಡು ವಸ್ತುವಿಲ್ಲ, ಒಬ್ಬರಂತೆ ಇನ್ನೊಬ್ಬರಿಲ್ಲ. ಇಂತಹ ಭಗವಂತನ ವಿನಯಪೂರ್ಣತೆಗೆ 'ಶ್ರೀ ರಾಮಚಂದ್ರನ' ಜೀವನದ ನಡೆಯೇ ಸಾಕ್ಷಿ. .

೫೧೧) ಜಯಃ

ಜಯಃ ಎಂದರೆ ಎಲ್ಲವನ್ನೂ ಜಯಿಸಿದವನು. ಮಹಾಭಾರತಕ್ಕೆ 'ಜಯ' ಎನ್ನುತ್ತಾರೆ. ಮಹಾಭಾರತದಿಂದ ಪ್ರತಿಪಾದ್ಯನಾದ ಭಗವಂತ ಜಯಃ.

ಇನ್ನು ಸಂಖ್ಯಾಶಾಸ್ತ್ರವನ್ನು ನೋಡಿದಾಗ, ಅಕ್ಷರಾಂಕದ ಪದ್ಧತಿಯಲ್ಲಿ ೧೮ ಎಂದರೆ ಜಯ; ಜ=೮ ಯ=೧. ಅಕ್ಷರಾಂಕದಲ್ಲಿ ಮೊದಲನೆಯದು ಏಕಸ್ಥಾನ; ಎರಡನೆಯದು ದಶಕ ಸ್ಥಾನ. ಆದ್ದರಿಂದ ಜ-ಯ ಎಂದರೆ ೮೧ ಅಲ್ಲ; ೧೮. ಈ ಕಾರಣಕ್ಕಾಗಿ ಜಯ ನಾಮಕ ಭಾರತದಲ್ಲಿ ಹದಿನೆಂಟು ಪರ್ವಗಳು, ಮಹಾಭಾರತ ಯುದ್ಧ ನಡೆದಿದ್ದು ಹದಿನೆಂಟು ದಿನಗಳು, ಯುದ್ಧದಲ್ಲಿ ಪಾಲ್ಗೊಂಡ ಸೇನೆ ಹದಿನೆಂಟು ಅಕ್ಷೋಹಿಣಿ, ಜಯದ ಸಾರವಾದ ಗೀತೆಯಲ್ಲಿ ಹದಿನೆಂಟು ಅಧ್ಯಾಯ. ಹಿಂದೆ ಹೇಳಿದಂತೆ ಜೀವನಿಗೆ ೧೫ ಬೇಲಿ, ಆ ೧೫ ಬೇಲಿಯೊಳಗೆ ೧೬ನೇ ಜೀವ. ಹೀಗೆ ಜೀವವನ್ನು ಕಟ್ಟಿ ಹಾಕಿದವಳು ೧೭ನೇ ಪ್ರಕೃತಿ. ಜೀವದ ಬಂಧವನ್ನು ಕಳಚುವವನು ೧೮ನೇ ಜಯಃ ನಾಮಕ ಭಗವಂತ.

೫೧೨) ಸತ್ಯಸಂಧಃ

ಎಂದೂ ಹುಸಿಯಾಗದ ಪ್ರತಿಜ್ಞೆಯವನು. ಭಗವಂತನ ನುಡಿ ಎಂದೂ ಹುಸಿಯಾಗುವುದಿಲ್ಲ. ಆದರೂ ಕೆಲವೊಮ್ಮೆ ತನ್ನ ಭಕ್ತರ ಅಭೀಷ್ಟ ಪೂರೈಸುವುದಕ್ಕೋಸ್ಕರ ಹುಸಿಯಾದಂತೆ ತೋರಿಸುತ್ತಾನೆ! ಇಂತಹ ಭಕ್ತವತ್ಸಲ ಭಗವಂತ ಸತ್ಯಸಂಧಃ

೫೧೩) ದಾಶಾರ್ಹಃ

ಮನುಷ್ಯ ಎಂದೂ ಸಂಪೂರ್ಣ ಸ್ವಾತಂತ್ರ್ಯವನ್ನು ಇಷ್ಟ ಪಡುವುದಿಲ್ಲ. ಯಾರ್ಯಾರಿಗೋ ದಾಸನಾಗುವ ಬದಲು ಭಗವಂತನಿಗೆ ದಾಸನಾಗುವುದು ನಮ್ಮ ಗುರಿಯಾಗಬೇಕು. ನಮ್ಮ ಸರ್ವಸ್ವವನ್ನೂ ಅರ್ಪಿಸಲು ತಕ್ಕ ತಾಣವಾದ ಭಗವಂತ ದಾಶಾರ್ಹಃ.

೫೧೪) ಸಾತ್ವತಾಂಪತಿಃ

ಸಾತ್ವತರು ಎಂದು ಯಾದವರ ಒಂದು ಕವಲಿತ್ತು. ಇಂತಹ ಕವಲಿನಲ್ಲಿ ಜನಿಸಿದ ಭಗವಂತನನ್ನು ಸಾತ್ವತಾಂಪತಿಃ ಎನ್ನುತ್ತಾರೆ. ಆದರೆ ಇದು ಕೇವಲ ಲೌಕಿಕ ಅರ್ಥ. ಇದಕ್ಕೊಂದು ಆಂತರಿಕ ಅರ್ಥವಿದೆ. 'ಸಾತ್ವತ' ಎನ್ನುವ ಸಂಹಿತೆ ಒಂದಿದೆ, ಸಾತ್ವಿಕವಾದ ತಂತ್ರಶಾಸ್ತ್ರದ ಪರಂಪರೆ. ಆ ಪರಂಪರೆಯನ್ನು ಜಗತ್ತಿಗೆ ಕೊಟ್ಟವನು ಕಪಿಲ ರೂಪಿ ಭಗವಂತ. ಸಾತ್ವತರೂಪನಾದ ಭಗವಂತನನ್ನು ಉಪಾಸನೆಯಲ್ಲಿ ಬಳಸಿ ಅವನನ್ನು ಆರಾಧನೆ ಮಾಡುವ ಸಾತ್ವಿಕರಿಗೆ ಪಾಲಕನಾಗಿ ಮೋಕ್ಷ ಕರುಣಿಸುವ ಭಗವಂತ ಸಾತ್ವತಾಂಪತಿಃ.

**ಜೀವೋ ವಿನಯಿತಾಸಾಕ್ಷೀ ಮುಕುಂದೋಮಿತವಿಕ್ರಮಃ ।**

**ಅಂಭೋನಿಧಿರನಂತಾತ್ಮಾ ಮಹೋದಧಿಶಯೋಂತಕಃ ॥೬೮॥**

೫೧೫) ಜೀವಃ

ಉಸಿರಾಟ ಉಳ್ಳವರು ಜೀವರು. ಆದರೆ ಪ್ರಾಣಶಕ್ತಿಯನ್ನು ಧಾರಣೆ ಮಾಡುವ ನಿಜವಾದ ಶಕ್ತಿ ಭಗವಂತ. ಪ್ರಾಣ ಶಕ್ತಿಯನ್ನು ಧಾರಣೆ ಮಾಡಿ, ಪ್ರಾಣಧಾರಕನಾಗಿ ಒಳಗೆ ಕುಳಿತು ನಮ್ಮನ್ನು ಬದುಕಿಸುವ ಭಗವಂತ ಜೀವಃ.

೫೧೬) ವಿನಯಿತಾಸಾಕ್ಷೀ

ಭಕ್ತರ ವಿನಯ ಶೀಲತೆಗೆ ಸಾಕ್ಷಿಯಾದವನು ವಿನಯಿತಾಸಾಕ್ಷೀ. ಈ ನಾಮವನ್ನು ಕೆಲವರು ಎರಡು ಶಬ್ದವಾಗಿ ಬಳಸುತ್ತಾರೆ. ಆದರೆ ಇದು ಒಂದೇ ಶಬ್ದ. ವಿನಯಿತಾ ಎಂದರೆ ಒಬ್ಬ ಮನುಷ್ಯನಲ್ಲಿರುವ ಸೌಜನ್ಯ ಅಥವಾ ನಿಯಾಮಕತ್ವ. ಪ್ರತಿಯೊಬ್ಬನಲ್ಲಿಯೂ ಕೂಡಾ ಎರಡು ಗುಣಗಳಿವೆ. ದೊಡ್ಡವರಿಗೆ ವಿನಯವನ್ನು ತೋರಿಸುವ ಹಾಗೂ ಚಿಕ್ಕವರಿಗೆ ನಿಯಾಮಕತ್ವವನ್ನು ತೋರಿಸುವ ಗುಣ. ನನಗಿಂತ ಹೆಚ್ಚು ಜ್ಞಾನವಿರುವವರತ್ತ ವಿನಯ ಹಾಗೂ ಕಡಿಮೆ ಬುದ್ಧಿ ಇರುವವರತ್ತ ನಿಯಾಮಕತ್ವ. ಭಗವಂತ ಸಾಕ್ಷಿ ಪುರುಷನಾಗಿ ಎಲ್ಲರಲ್ಲೂ ಈ ಗುಣಗಳನ್ನು ಯಾವ ಲೇಪವೂ ಇಲ್ಲದೆ ಅವರವರ ಯೋಗ್ಯತೆಗೆ ತಕ್ಕಂತೆ ನಿಯಂತ್ರಿಸುತ್ತಿದ್ದಾನೆ.ಆದ್ದರಿಂದ ಜನಾಂಗದಲ್ಲಿರುವ ವಿನಯಿತಾ ಗುಣಕ್ಕೆ ಕಾರಣೀಭೂತ ಹಾಗೂ ಸಾಕ್ಷಿ ಭಗವಂತ ವಿನಯಿತಾಸಾಕ್ಷೀ.

೫೧೭) ಮುಕುಂದಃ

ಈ ನಾಮ ಬಹಳ ಪ್ರಸಿದ್ಧ. 'ಮುಕು' ಎಂದರೆ ಮುಕ್ತಿ; ಮುಕುಂದಃ ಎಂದರೆ ಮುಕ್ತಿಯನ್ನು ಕೊಡುವವ. ನಿದ್ರೆಯಲ್ಲಿ ನಿತ್ಯ ಮೋಕ್ಷದ ಅನುಭವ ಕೊಡುವವ, ಅಜ್ಞಾನದಿಂದ ಬಿಡುಗಡೆ ಮಾಡಿ ಸಂಸಾರ ಬಂಧದಿಂದ ಮುಕ್ತಿಯನ್ನು ದಯಪಾಲಿಸುವ, ಮೋಕ್ಷಪ್ರದ ಭಗವಂತ ಮುಕುಂದಃ.

೫೧೮) ಅಮಿತವಿಕ್ರಮಃ

'ವಿಕ್ರಮ' ಎಂದರೆ ಎಲ್ಲವನ್ನೂ ನಿಗ್ರಹಿಸುವ, ಎಲ್ಲವನ್ನೂ ನಿರ್ವಹಿಸುವ, ಎಲ್ಲವನ್ನೂ ಮೀರಿನಿಲ್ಲುವ ಎಂದರ್ಥ. 'ಅಮಿತ' ಎಂದರೆ ಅಳತೆಗೆ ಸಿಗದವ. ಅನಂತ ಸಾಮರ್ಥ್ಯವುಳ್ಳ, ಎಣೆಯಿರದ ಪೌರುಷವುಳ್ಳ, ಎಲ್ಲೆಡೆ ತುಂಬಿರುವ ಭಗವಂತ ಅಮಿತವಿಕ್ರಮಃ.

೫೧೯) ಅಂಭೋನಿಧಿಃ

'ಅಂಭೋನಿಧಿ' ಎಂದರೆ ನೀರಿನ ನೆಲೆ, ಅಂದರೆ ಸಮುದ್ರ. ಸಮುದ್ರದಷ್ಟು ವಿಶಾಲವಾದ ನೀರಿನ ನೆಲೆ ಇನ್ನೊಂದಿಲ್ಲ. ಇಂತಹ ಕಡಲಿನಲ್ಲಿ ಸನ್ನಿಹಿತನಾಗಿರುವ ಭಗವಂತ ಅಂಭೋನಿಧಿಃ. ಆದರೆ ಇದು ಕೇವಲ ಮೇಲ್ನೋಟದ ಅರ್ಥ. ಎಲ್ಲಕ್ಕಿಂತ ವಿಲಕ್ಷಣನಾದ, ಎಲ್ಲಾ ದೋಷಗಳಿಂದ ದೂರವಾದ, ಸರ್ವಗುಣಪೂರ್ಣ, 'ಅ'ಕಾರ ವಾಚ್ಯ ಭಗವಂತನನ್ನು ಹೃದಯದಲ್ಲಿ ಭರಿಸಿದವರು 'ಅಂಭಸ್ಸುಗಳು' (ದೇವತೆಗಳು, ಋಷಿಗಳು, ಪಿತೃಗಳು, ಮಾನವರು ಮತ್ತು ಅಸುರರು). ಹೀಗೆ ತಮ್ಮ ಹೃದಯದಲ್ಲಿ ಭಗವಂತನನ್ನು ಹೊತ್ತ ಅಂಭಸ್ಸುಗಳಿಗೆ 'ನಿಧಿ'ಯಾದ ಭಗವಂತ ಅಂಭೋನಿಧಿಃ.

ವಿಶೇಷವಾಗಿ ಭಗವಂತನನ್ನು ಹೃದಯದಲ್ಲಿ ಧರಿಸಿದವನು ಆಂಜನೇಯ. ಇದನ್ನೇ ಕಲಾವಿದರು ಆಂಜನೇಯ ತನ್ನ ಎದೆ ಬಿಚ್ಚಿ ಅದರೊಳಗೆ ರಾಮ-ಸೀತೆಯನ್ನು ತೋರಿಸುವಂತೆ ಚಿತ್ರಿಸುತ್ತಾರೆ. ಇಂತಹ ಆಂಜನೇಯ 'ಅಂಭ'. ಆತನ ನಿಧಿ, ಲಕ್ಷ್ಮಿಯ ಅತಿದೊಡ್ಡ ಸಂಪತ್ತು, ಕ್ಷೀರ ಸಾಗರವಾಸಿ ಭಗವಂತ ಅಂಭೋನಿಧಿಃ.

೫೨೦) ಅನಂತಾತ್ಮಾ

ಭಗವಂತನ ಸ್ವರೂಪ ಅನಂತವಾದದ್ದು. ಏಕೆಂದರೆ ಆತ ಪ್ರಪಂಚದಲ್ಲಿ ಕಾಲತಃ, ದೇಶತಃ, ಗುಣತಃ ಅನಂತ. ಎಲ್ಲಾ ಕಾಲದಲ್ಲೂ 'ಇರವಿನ ಅರಿವಿನೊಂದಿಗೆ' ಅನಾದಿ ಅನಂತ ಕಾಲದಲ್ಲಿರುವ ಭಗವಂತ ಸರ್ವವ್ಯಾಪಿ, ಸರ್ವಶಕ್ತ ಹಾಗೂ ಸರ್ವಗುಣಪೂರ್ಣ. ಅನಂತ ಜೀವರನ್ನು ನಿಯಾಮಿಸುವ, ಅನಂತ ಜೀವರ ಒಡೆಯ, ಮುಕ್ತರ(ಅನಂತರು) ಸ್ವಾಮಿ ಭಗವಂತ ಅನಂತಾತ್ಮಾ.

೫೨೧) ಮಹೋದಧಿಶಯಃ

'ಮಹೋದಧಿ' ಎಂದರೆ ದೊಡ್ಡ ಸಮುದ್ರ. ಸಪ್ತಸಾಗರ(ಉಪ್ಪು, ಕಬ್ಬಿನಹಾಲು, ಸುರ, ಬೆಣ್ಣೆ/ತುಪ್ಪ, ಮೊಸರು, ಕ್ಷೀರ ಹಾಗೂ ಅಮೃತ)ಗಳಲ್ಲಿ ಒಂದಾದ ಕ್ಷೀರಸಾಗರಶಾಹಿ ಭಗವಂತ, ಪ್ರಳಯ ಸಮುದ್ರದಲ್ಲಿ ಪವಡಿಸುವ ಹೃತ್ಕಮಲ(ಹೃದಯ ಸಮುದ್ರ) ಮಧ್ಯ ನಿವಾಸಿ.

ಇನ್ನು ನಮ್ಮ ಪಿಂಡಾಂಡವನ್ನು ನೋಡಿದಾಗ, ಇಲ್ಲಿ ಏಳು ಶಕ್ತಿಚಕ್ರಗಳಿವೆ(spiritual centers). ಇದರಲ್ಲಿ ಮೊದಲನೆಯದ್ದು ನಮ್ಮ ಮಲ-ಮೂತ್ರದ್ವಾರದ ಮಧ್ಯದಲ್ಲಿರುವ 'ಮೂಲಾಧಾರ ಚಕ್ರ', ಇದೇ 'ಉಪ್ಪಿನ ಸಮುದ್ರ'. ಎರಡನೆಯದ್ದು ಹೊಕ್ಕುಳಿನಿಂದ ಸ್ವಲ್ಪ ಕೆಳಗಿರುವ 'ಸ್ವಾಧಿಷ್ಠಾನಚಕ್ರ'; ಇದು 'ಕಬ್ಬಿನಹಾಲಿನ ಸಮುದ್ರ'. ಇದು ಬದುಕಿನಲ್ಲಿ ಐಹಿಕ ಸುಖದ ಖುಷಿ ಕೊಡುವ ಚಕ್ರ. ಇದಕ್ಕೂ ಮೇಲೆ ಹೊಕ್ಕುಳಿನ ಭಾಗದಲ್ಲಿ 'ಮಣಿಪೂರ ಚಕ್ರವಿದೆ. ಇದು ಕಾಮದ ಅಮಲಿನ ಸುಖ ಕೊಡುವ 'ಸುರ ಸಮುದ್ರ'. ಇದಕ್ಕೂ ಮೇಲೆ 'ಅನಾಹತ ಚಕ್ರ'. ಇದನ್ನೇ ತುಪ್ಪ/ಬೆಣ್ಣೆಯ ಸಮುದ್ರ ಅಥವಾ ಹೃದಯ ಸಮುದ್ರ ಎನ್ನುತ್ತಾರೆ. ಇಲ್ಲಿಂದ ಮೇಲೆ ಅಧ್ಯಾತ್ಮದ ವಿಶ್ವ (Spiritual world) ತೆರೆದುಕೊಳ್ಳುತ್ತದೆ. ಮೊತ್ತ ಮೊದಲು ಭಕ್ತಿಯ ನವನೀತವನ್ನು ಹೃದಯದಲ್ಲಿ ತುಂಬಿ ಭಗವಂತನಿಗೋಸ್ಕರ ಕಾಯುವ ಸಾಧನೆ ಪ್ರಾರಂಭವಾಗುವುದೇ ಇಲ್ಲಿಂದ. ಈ ಹೃದಯ ಸಮುದ್ರಶಾಹಿ ಭಗವಂತನನ್ನು ಮಹೋದಧಿಶಯಃ ಎಂದು ಕರೆದಿದ್ದಾರೆ. ಇನ್ನೂ ಮೇಲಕ್ಕೆ ಹೋದರೆ 'ವಿಶುದ್ಧಿಚಕ್ರ'. ಅಥವಾ ಮೊಸರಿನ ಸಮುದ್ರ. ಇಲ್ಲಿ ಜ್ಞಾನಿಯು ತ್ರಿಕಾಲದರ್ಶಿಯಾಗುತ್ತಾನೆ. ಅದರಿಂದಾಚೆಗೆ ಕ್ಷೀರಸಾಗರ ಅಥವಾ ಆಜ್ಞಾಚಕ್ರ. ಇದು ಭ್ರೂ- ಮಧ್ಯದಲ್ಲಿ ಭಗವಂತನನ್ನು ಕಾಣುವಂತಹದ್ದು. ಇದೇ ಕ್ಷೀರ ಶಾಯಿಯಾದ ಭಗವಂತನ ದರ್ಶನ. ಆತನೇ ಮಹೋದಧಿಶಯಃ. ಇದರಿಂದಾಚೆಗೆ ಸಹಸ್ರಾರ ಅಥವಾ ಅಮೃತಸಾಗರ. ಇವು ಮನುಷ್ಯನ ಬದುಕನ್ನು ನಿರ್ಧರಿಸುವ ಏಳು ಮಹಾಸಮುದ್ರಗಳು. ಇಂತಹ ಅಂತರಂಗದ ಸಮುದ್ರದಲ್ಲಿ ನೆಲೆಸಿ ನಮ್ಮನ್ನು ಎತ್ತರಕ್ಕೇರಿಸುವ ಭಗವಂತ ಮಹೋದಧಿಶಯಃ.

೫೨೨) ಅಂತಕಃ

ಸಮಸ್ತ ವಿಶ್ವವನ್ನು ಸಂಹಾರ ಮಾಡಿ ಪ್ರಳಯ ಸಮುದ್ರದಲ್ಲಿ ಪವಡಿಸುವ ಆನಂದಪ್ರದ ಭಗವಂತ ಅಂತಕಃ.

**ಅಜೋ ಮಹಾರ್ಹಃ ಸ್ವಾಭಾವ್ಯೋ ಜಿತಾಮಿತ್ರಃ ಪ್ರಮೋದನಃ ।**

**ಆನಂದೋ ನಂದನೋ ನಂದಃ ಸತ್ಯಧರ್ಮಾ ತ್ರಿವಿಕ್ರಮಃ ॥೬೯॥**

೫೨೩) ಅಜಃ

'ನ ಜಾಯತೇ ಇತಿ ಅಜಃ'; 'ಜ' ಎಂದರೆ ಜನನ; ಅ+ಜಃ-ಅಜಃ ಎಂದರೆ ಹುಟ್ಟಿರದವನು. ಹುಟ್ಟದವನ ಹೊಕ್ಕುಳಲ್ಲಿ ಹುಟ್ಟಿದ ಚತುರ್ಮುಖನನ್ನು ಅಜ ಎನ್ನುತ್ತಾರೆ. ಇಂತಹ ಚತುರ್ಮುಖನೊಳಗೆ ಸನ್ನಿಹಿತನಾಗಿ ಸೃಷ್ಟಿ ಮಾಡುವ ಭಗವಂತ, ತಾನು ಹುಟ್ಟದೆ, ಎಲ್ಲವನ್ನೂ ಸೃಷ್ಟಿ ಮಾಡಿ ಸಂಹಾರ ಮಾಡುವ ಅಜಃ.

೫೨೪) ಮಹಾರ್ಹಃ

ಪೂಜ್ಯರಿಗೆಲ್ಲ ಹಿರಿಯ ಪೂಜ್ಯ ಮಹಾರ್ಹಃ. ಇಲ್ಲಿ ಅರ್ಹ ಎಂದರೆ ಪೂಜೆಗೆ ಯೋಗ್ಯರು, ಪೂಜನೀಯರು. ನಾವು ಪೂಜಿಸಬೇಕಾದ ವಸ್ತುವಿನಲ್ಲಿ ಸರ್ವಶ್ರೇಷ್ಠನಾಗಿ ಸನ್ನಿಹಿತನಾಗಿರುವ ಭಗವಂತ ಮಹಾರ್ಹಃ.

೫೨೫) ಸ್ವಾಭಾವ್ಯಃ

ನಿರ್ಮಾಣ ಮಾಡಲು ಅಸಾಧ್ಯವಾದವ ಹಾಗೂ ಸ್ವತಂತ್ರವಾಗಿದ್ದು ಇನ್ನೊಬ್ಬರ ನಿಯಂತ್ರಣಕ್ಕೊಳಪಡದವನು ಸ್ವಾಭಾವ್ಯಃ .

೫೨೬) ಜಿತಾಮಿತ್ರಃ

ಅಮಿತ್ರರನ್ನು(ಶತ್ರುಗಳನ್ನು) ಗೆದ್ದವ ಜಿತಾಮಿತ್ರಃ. ಭಗವಂತನ ಶತ್ರುಗಳು ಧರ್ಮದ ಮತ್ತು ಜ್ಞಾನದ ವಿರೋಧಿಗಳು. ಯಾರು ಪಾತಕಿಗಳೋ, ಧರ್ಮ ಮತ್ತು ಜ್ಞಾನವನ್ನು ದ್ವೇಷಿಸುತ್ತಾರೋ ಅವರನ್ನು ಭಗವಂತ ಶಿಕ್ಷಿಸುತ್ತಾನೆ. ಆತ ದುಷ್ಟ ನಿಗ್ರಹ ಮಾಡುವುದು ಯಾವುದೇ ದ್ವೇಷದಿಂದಲ್ಲ. ಇದು ತಂದೆ-ತಾಯಿ ಮಕ್ಕಳಿಗೆ ಶಿಕ್ಷೆ ಕೊಟ್ಟಂತೆ. ಏಕೆಂದರೆ ಅಸುರರೂ ಕೂಡಾ ಭಗವಂತನ ಮಕ್ಕಳೇ. ಜೀವಸ್ವಭಾವಕ್ಕನುಗುಣವಾಗಿ ಅವರ ಸ್ವಭಾವ ವೃದ್ಧಿಯಾಯಿತು ಅಷ್ಟೇ. ಅಲ್ಲಿ ದೋಷ ಕಂಡುಬಂದಾಗ ಅದನ್ನು ಭಗವಂತ ನಿಗ್ರಹ ಮಾಡುತ್ತಾನೆ.

ಸಂಸ್ಕೃತದಲ್ಲಿ ಮಿತ್ರ ಎನ್ನುವ ಪದಕ್ಕೆ ಎರಡು ಅರ್ಥವಿದೆ. ಒಂದು ಸೂರ್ಯ, ಇನ್ನೊಂದು ಗೆಳೆಯ. ಸೂರ್ಯ 'ಮಿತಿ-ಅರಿವು' ಕೊಡುವವ. ಅಂದರೆ ಬೆಳಕು ಹರಿಸಿ ವಸ್ತುವಿನ ಜ್ಞಾನ ಕೊಡುವವ. ನಾವು ದಾರಿ ತಪ್ಪಿದಾಗ ದಾರಿ ತೋರಿಸಿ ನಮ್ಮನ್ನು ಸರಿ ದಾರಿಗೆ ತರುವವ ನಿಜವಾದ ಮಿತ್ರ. ಆದ್ದರಿಂದ ಸೂರ್ಯನನ್ನು ಮಿತ್ರ ಎನ್ನುತ್ತಾರೆ. 'ಅಮಿತ್ರ' ಎಂದರೆ ಅಜ್ಞಾನವನ್ನು ಹರಡುವವ. ಕತ್ತಲ ದಾರಿಯನ್ನು (ಅಜ್ಞಾನವನ್ನು) ಕಳಚಿ ಬೆಳಕಿನತ್ತ ಕೊಂಡೊಯ್ಯುವ ಭಗವಂತ ಜಿತಾಮಿತ್ರಃ.

೫೨೭) ಪ್ರಮೋದನಃ

ಪ್ರಮೋದಂ ನಯತಿ ಇತಿ ಪ್ರಾಮಯತಿ. ಅರಿವು ಕೊಟ್ಟು, ಅರಿವಿನ ಮುಖೇನ ನಮ್ಮನ್ನು ಆನಂದದ ದಾರಿಯಲ್ಲಿ ಕೊಂಡೊಯ್ಯುವವನು, ಕೊನೆಗೆ ಮುಕ್ತಿಯಲ್ಲಿ ಪೂರ್ಣಾನಂದವನ್ನು ಕೊಡುವವನು ಪ್ರಮೋದನಃ. ನಿಜವಾದ ಆನಂದ ಯಾವುದು? ಕೆಲವರಿಗೆ ಹೊನ್ನು, ಇನ್ನು ಕೆಲವರಿಗೆ ಹೆಣ್ಣು, ಮತ್ತೆ ಕೆಲವರಿಗೆ ಮಣ್ಣು. ಆದರೆ ನಿಜವಾದ ಆನಂದ ಇದಲ್ಲ. ಜ್ಞಾನದಿಂದ ಮನಸ್ಸು ಅರಳುವುದು ನಿಜವಾದ ಆನಂದ. ನಮಗೆ ಅತ್ಯಂತ ಅಮೂಲ್ಯವಾದ ಅರಿವನ್ನು ಕೊಟ್ಟು, ಅದರಿಂದ ಆನಂದದ ಮಾರ್ಗವನ್ನು ತೋರಿ ಆನಂದದತ್ತ ಕೊಂಡೊಯ್ಯುವವನು ಪ್ರಮೋದನಃ.

೫೨೮) ಆನಂದಃ

ಯಾವುದೇ ಹೊರಗಿನ ಸಂಗತಿಯಿಲ್ಲದೆ, ಒಳಗಿನ ಆತ್ಮಸ್ವರೂಪ ಋಷಿಪಡುವುದು ಆನಂದ. ಭಗವಂತ ಆನಂದದ ಕಡಲು, ನಮ್ಮ ಆನಂದ ಆ ಆನಂದದ ಒಂದು ಕಿಡಿ ಅಷ್ಟೇ. ಅಪರಂಪಾರವಾದ ಸ್ವರೂಪಾನಂದದ ಕಡಲಾದ ಭಗವಂತ ಆನಂದಃ.

೫೨೯) ನಂದನಃ

ವಸುದೇವಾದಿಗಳಿಗೊಲಿದು ಮಗನಾಗಿ ಬಂದವನು; ಸಂತಸವನ್ನೀಯುವವನು; ಒಬ್ಬ ವ್ಯಕ್ತಿಯ ಪೂರ್ಣತೆಗೆ ಏನು ಬೇಕೋ ಅದೆಲ್ಲವೂ ಪರಿಪೂರ್ಣವಾಗಿ ತುಂಬಿದ್ದು ನಮ್ಮನ್ನು ಪೂರ್ಣತೆಯತ್ತ ಕೊಂಡೊಯ್ಯುವ ಶಕ್ತಿ-ನಂದನಃ.

೫೩೦) ನಂದಃ

ನಂದಃ ಎಂದರೆ ಪೂರ್ಣಃ. ಅವರವರ ಯೋಗ್ಯತೆಗೆ ತಕ್ಕಂತೆ ಪೂರ್ಣತೆಯನ್ನೀಯುವವನು ಹಾಗೂ ಭಕ್ತರಿಗೆ ಸಂತಸವನ್ನೀಯುವ ಭಗವಂತ ನಂದಃ.

೫೩೧) ಸತ್ಯಧರ್ಮಾ

ಜಗತ್ತಿನಲ್ಲಿ ವೈವಿಧ್ಯತೆಯನ್ನು ಸೃಷ್ಟಿಸಿದ ಸತ್ಯಕರ್ಮನಾದ ಭಗವಂತನ ಗುಣಕ್ರಿಯೆ ಎಲ್ಲವೂ ಸತ್ಯ ಸ್ವರೂಪ. ಸತ್ಯ ಆತನ ಧರ್ಮ. ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ ಹಾಗೂ ಜ್ಞಾನ-ಅಜ್ಞಾನ-ಬಂಧ-ಮೋಕ್ಷ ಯಾರ ಧರ್ಮವೋ ಅವನು ಸತ್ಯಧರ್ಮಾ.

೫೩೨) ತ್ರಿವಿಕ್ರಮಃ

ಮೂರು ಕಾಲದಲ್ಲಿ (ಭೂತ-ವರ್ತಮಾನ-ಭವಿಷ್ಯತ್), ಮೂರು ಲೋಕಗಳಲ್ಲಿ(ಭೂರ್ಭುವಃ ಸ್ವಃ) ತುಂಬಿ, ಸಮಸ್ತ ವೇದ ವಾಚ್ಯನಾಗಿ[ಋಗ್ವೇದ-ಯಜುರ್ವೇದ-ಸಾಮವೇದ(ಪದ್ಯ-ಗದ್ಯ-ಗಾನ)] ಮೂರು ವಿಧದ ಜೀವರನ್ನು (ಸಾತ್ವಿಕರು-ರಾಜಸರು-ತಾಮಸರು), ಮೂರು ಅವಸ್ಥೆಗಳಲ್ಲಿ (ಎಚ್ಚರ-ಕನಸು-ನಿದ್ದೆ) ನಿಯಂತ್ರಿಸುವ ಹಾಗೂ ರಕ್ಷಿಸುವ ಭಗವಂತ ತ್ರಿವಿಕ್ರಮಃ.

ಮಹರ್ಷಿಃ ಕಪಿಲಾಚಾರ್ಯಃ ಕೃತಜ್ಞೋ ಮೇದಿನೀಪತಿಃ ।
ತ್ರಿಪದಸ್ತ್ರಿದಶಾಧ್ಯಕ್ಷೋ ಮಹಾಶೃಂಗಃ ಕೃತಾಂತಕೃತ್ ॥೬೦॥

೫೩೩) ಮಹರ್ಷಿಃ

ಋಷಿ ಎಂದರೆ ವೇದ ಮಂತ್ರದ ದೃಷ್ಟಾರ, ವೇದ ಮಂತ್ರವನ್ನು ಕಂಡವ. ಸಮಗ್ರ ವೇದವನ್ನು ಕಂಡ ಋಷಿ ಮಹರ್ಷಿ. ಸಮಸ್ತ ವೇದಗಳನ್ನು ಮೊತ್ತಮೊದಲ ಬಾರಿ ಆವಿಷ್ಕಾರ ಮಾಡಿ ಚತುರ್ಮುಖನಿಗೆ ಉಪದೇಶ ಮಾಡಿದ ಮಹರ್ಷಿ-ಭಗವಂತ. ಶಾಸ್ತ್ರಕಾರರು ಹೇಳುತ್ತಾರೆ: "ಯಾವುದಾದರು ಮಂತ್ರ ಜಪ ಮಾಡುವಾಗ ಅಥವಾ ಒಂದು ಸೂಕ್ತ ಹೇಳುವಾಗ ನಮಗೆ ಋಷಿ ಯಾರು ಎಂದು ತಿಳಿದಿಲ್ಲವಾದರೆ ಆಗ 'ಅಸ್ಯ ಶ್ರೀ ಮಹಾಮಂತ್ರಸ್ಯ ಹಯಗ್ರೀವ ಋಷಿಃ' ಎಂದು ಹೇಳಿದರೆ ಸಾಕು" ಎಂದು. ಏಕೆಂದರೆ ಸರ್ವ ವೇದಗಳ ಪ್ರಥಮ ದೃಷ್ಟನಾದ ಭಗವಂತ ಕಾಣದ ಮಂತ್ರವಿಲ್ಲ. ಹೀಗೆ ಮಹತ್ತಾದವನು, ಋಷಿಗಳ ಋಷಿ ಭಗವಂತ ಮಹರ್ಷಿಃ.

ಋಷಿ ಅಂದರೆ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಂಡು ಭಗವಂತನನ್ನು ತಿಳಿದ ಸತ್ಯದರ್ಶಿಗಳು, ಸತ್ಯವಚನರು. ಭಗವಂತನನ್ನು ಪೂರ್ತಿ ತಿಳಿದವ ಭಗವಂತನೊಬ್ಬನೇ! ಆದ್ದರಿಂದ ನಿಜವಾದ ಮಹರ್ಷಿ ಭಗವಂತ. ಸರ್ವಜ್ಞನೂ, ಸರ್ವ ವೇದದೃಷ್ಟನೂ ಆದ ಭಗವಂತ ಮಹರ್ಷಿಃ.

೫೩೪) ಕಪಿಲಾಚಾರ್ಯಃ

'ಆಚಾರ' ಎಂದರೆ ಒಳ್ಳೆಯ ನಡತೆ ಉಳ್ಳವರು. ಯಾವುದು ಸರಿ, ಯಾವುದು ತಪ್ಪು ಎಂದು ತಿಳಿದು ಅದರಂತೆ ನಡೆದು ಇನ್ನೊಬ್ಬರಿಗೆ ದೃಷ್ಟಾಂತವಾಗುವವರು. ಅವತಾರ ರೂಪಿಯಾಗಿ ಬಂದು ಮನುಷ್ಯ ಹೇಗೆ ನಡೆದುಕೊಳ್ಳಬೇಕು ಎಂದು ಕೃತಿಯಲ್ಲಿ ತೋರಿಸಿಕೊಟ್ಟ ಮಹಾ ಆಚಾರ್ಯ, ಮರ್ಯಾದಪುರುಷ ಶ್ರೀರಾಮ. ದೌರ್ಜನ್ಯದಿಂದ ದೂರವಿರುವುದು, ಎಲ್ಲಿ ಪ್ರೀತಿ ಇದೆಯೋ ಅಲ್ಲಿ ಪ್ರೀತಿ ತೋರಿಸುವುದು, ಇನ್ನೊಬ್ಬರು ಸಂತೋಷವಾಗಿರುವುದನ್ನು ನೋಡಿ ಸಂತೋಷಪಡುವುದು, ಇನ್ನೊಬ್ಬರ ಕಷ್ಟಕ್ಕೆ ಕರಗುವುದು, ಒಳ್ಳೆಯವರ ಸಹವಾಸ ಮಾಡುವುದು, ದುಷ್ಟರಿಂದ ದೂರವಿರುವುದು, ಇತ್ಯಾದಿ ಮನೋವೃತ್ತಿ ಅಳವಡಿಸಿಕೊಂಡವರು ನಿಜವಾದ ಆಚಾರ್ಯರು. ಭಗವಂತ ಶ್ರೀರಾಮನಾಗಿ ಬಂದು ಇವೆಲ್ಲವನ್ನೂ ಮಾಡಿತೋರಿಸಿದ. ಇನ್ನು ಕಪಿಲ ಎಂದರೆ ಕಂ+ಪಾಯನ್+ಲಯ; ಇಡೀ ಪ್ರಪಂಚವನ್ನು ತನ್ನಲ್ಲಿ ಲೀನಗೊಳಿಸುವ ಸರ್ವಸಂಹಾರಕ. ಆನಂದ ರೂಪನಾಗಿ ಲಯಗೊಳಿಸುವವನು. ಕಪಿಲ ಮುನಿಯಾಗಿ ಅವತರಿಸಿದವನು. ಆನಂದವನ್ನು ಪಾನಮಾಡುವವನು ಹಾಗೂ ಈಯುವವನು ಆದ ಲೋಕಗುರು ಭಗವಂತ ಕಪಿಲಾಚಾರ್ಯಃ

೫೩೫) ಕೃತಜ್ಞಃ

ನಾವು ಹೇಳುವುದುಂಟು: 'ತಾವು ಮಾಡಿದ ಉಪಕಾರಕ್ಕೆ ನಾವು ಕೃತಜ್ಞರಾಗಿದ್ದೇವೆ ಎಂದು' ; ಇಲ್ಲಿ ಕೃತಜ್ಞತೆ ಎಂದರೆ ಇನ್ನೊಬ್ಬರು ಮಾಡಿದ ಸಹಾಯವನ್ನು ಮರೆಯದೇ ತಿಳಿದಿರುವುದು ಅಥವಾ ನೆನಪಿಟ್ಟುಕೊಳ್ಳುವುದು. 'ಕೃತ' ಎಂದರೆ 'ನಡೆದದ್ದು'. ನಮಗೋಸ್ಕರ ಪ್ರಪಂಚದಲ್ಲಿ ಪರೋಕ್ಷವಾಗಿ ನಡೆಯುವ ಉಪಕಾರವನ್ನು ತಿಳಿಯುವುದು ಕೃತಜ್ಞತೆ. ಒಬ್ಬ ಮನುಷ್ಯನ ಅಸ್ತಿತ್ವಕ್ಕೆ ಸಾವಿರಾರು ಬಂಧಗಳಿರುತ್ತವೆ ಹಾಗೂ ಋಣಿಗಳಾಗಿ ನಾವು ಬದುಕುತ್ತಿರುತ್ತೇವೆ. ನಮಗಾಗಿ ಈ ಪ್ರಪಂಚದಲ್ಲಿ ಏನೇನು ನಡೆಯುತ್ತಿದೆ ಎಂದು ನಮಗೇ ತಿಳಿದಿರುವುದಿಲ್ಲ. ಅದನ್ನು ತಿಳಿದಿರುವವನು ಭಗವಂತನೊಬ್ಬನೇ. ಆದ್ದರಿಂದ ಎಲ್ಲವನ್ನೂ ಬಲ್ಲ ಭಗವಂತ ಕೃತಜ್ಞಃ.

೫೩೬) ಮೇದಿನೀಪತಿಃ

ಮೇದಿನೀಪತಿ ಎಂದರೆ ಮೇದಿನಿಗೆ ಒಡೆಯ ಅಥವಾ ಭೂಪತಿ. ಸಾಮಾನ್ಯವಾಗಿ ರಾಜರಿಗೆ ಭೂಪತಿ ಎನ್ನುವುದುಂಟು. ಆದರೆ ನಾವು ಎಂದೂ ಈ ಭೂಮಿಗೆ ಒಡೆಯರಲ್ಲ. ಯಾರು ಈ ಭೂಮಿಯನ್ನು ಸೃಷ್ಟಿ ಮಾಡಿದನೋ ಅವನು ನಿಜವಾದ ಮೇದಿನೀಪತಿ. ಆದ್ದರಿಂದ ಈ ಭೂಮಿಯನ್ನು ನಿರ್ಮಿಸಿ, ಪಾಲನೆ ಮಾಡುವ ಭಗವಂತ ಮೇದಿನೀಪತಿಃ

೫೩೭) ತ್ರಿಪದಃ

ಮೂರು ವಿಶೇಷ ಹೆಜ್ಜೆಯುಳ್ಳವನು. ಓಂಕಾರದ ಮೂರು ಅಕ್ಷರಗಳಿಂದ(ಅ, ಉ, ಮ್), ಈ ಮೂರು ಅಕ್ಷರದಿಂದಾದ ಮೂರು ಪದಗಳುಳ್ಳ ವ್ಯಾಹೃತಿಯಿಂದ(ಭೂಃ, ಭುವಃ ಸ್ವಃ), ಈ ಪದಗಳಿಂದಾದ ಗಾಯತ್ರಿಯ ಮೂರು ಪಾದಗಳಿಂದ (ತತ್ಸವಿತುರ್ವರೇಣ್ಯಂ, ಭರ್ಗೋದೇವಸ್ಯ ಧೀಮಹಿ, ಧಿಯೋ ಯೋನಃ ಪ್ರಚೋದಯಾತ್) ವಾಚ್ಯನಾದ ಭಗವಂತ ತ್ರಿಪದಃ.

೫೩೮) ತ್ರಿದಶಾಧ್ಯಕ್ಷಃ

'ತ್ರಿದಶರು' ಎಂದರೆ ದೇವತೆಗಳು. ದೇವತೆಗಳ, ಸ್ವರ್ಗದ ಹಾಗೂ ಅಲ್ಲಿರುವ ದೇವಾದಿ ದೇವತೆಗಳ ಒಡೆಯ ಭಗವಂತ ತ್ರಿದಶಾಧ್ಯಕ್ಷಃ. ತ್ರಿದಶ ಎಂದರೆ ಮೂರು ಅವಸ್ಥೆಗಳು(ಎಚ್ಚರ-ಕನಸು-ನಿದ್ದೆ); ಇದೇ 'ಓಂ(ಅ, ಉ, ಮ್); 'ಅ' ಅಂದರೆ ಆಪ್ತಿ, ಹೊರಗಿನ ಪ್ರಪಂಚದೊಂದಿಗೆ ನಮಗಿರುವ ಸಂಬಂಧ. ಇದಿರುವುದು ಎಚ್ಚರದಲ್ಲಿ ಮಾತ್ರ. 'ಉ' ಅಂದರೆ ಉತ್ಕರ್ಷ, ಹೊರಗಿನ ಪ್ರಪಂಚದ ಸಂಪರ್ಕ ಕಡಿದುಕೊಂಡು, ಒಳ ಪ್ರಪಂಚದಲ್ಲಿ ಕಾಣುವ ಕನಸಿನ ಪ್ರಪಂಚ. 'ಮ್'

ಅಂದರೆ ಭಗವಂತನಲ್ಲಿ ಅಂತರ್ಗತನಾಗಿ ಒಳ-ಹೊರ ಪ್ರಪಂಚದ ಅರಿವಿಲ್ಲದೇ ಇರುವ ನಿದ್ರಾಸ್ಥಿತಿ. ಈ ಮೂರೂ ದಶಗಳಲ್ಲಿ ನಾವು ಸ್ವತಂತ್ರರಲ್ಲ. ಮೂರು ದಶಗಳೊಂದಿಗೆ ನಿರಂತರ ನಮ್ಮನ್ನು ನಡೆಸುವ ಭಗವಂತ ತ್ರಿದಶಾಧ್ಯಕ್ಷಃ.

೫೩೯) ಮಹಾಶೃಂಗಃ

ಮೇಲ್ನೋಟಕ್ಕೆ ಮಹಾಶೃಂಗಃ ಎನ್ನುವುದು ಭಗವಂತನ ಮತ್ಸ್ಯಾವತಾರಕ್ಕೆ ಸಂಬಂಧಪಟ್ಟ ಹೆಸರು. ಮತ್ಸ್ಯ ರೂಪದಲ್ಲಿ ತನ್ನ ಒಂದು ಶೃಂಗಕ್ಕೆ ಭೂಮಿಯನ್ನು ನಾವೆಯಾಗಿ ಕಟ್ಟಿ, ಪ್ರಳಯಜಲದಲ್ಲಿ ವೈವಸ್ವತ ಮನುವನ್ನು ಪಾರು ಮಾಡಿದ ರೂಪ. ಉನ್ನತವಾದ ಶೃಂಗದಿಂದ ಭೂಮಿಯನ್ನು ಉದ್ಧಾರ ಮಾಡಿ, ಋಷಿಗಳಿಗೆ ಪ್ರಳಯದ ಆಚೆಗಿನ, ಮುಂದಿನ ಮನ್ವಂತರದ ಬದುಕು ಕೊಟ್ಟ ಭಗವಂತ ಮಹಾಶೃಂಗಃ.

ಶೃಂಗ ಎಂದರೆ ಪರ್ವತ ಕೂಡಾ ಹೌದು. ಹಿಮಾಲಯ ಒಂದು ಮಹಾಶೃಂಗ . ಇಂತಹ ಹಿಮಾಲಯದಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಮಹಾಶೃಂಗಃ

೫೪೦) ಕೃತಾಂತಕೃತ್

ಎಲ್ಲಾ ಕಾಲದಲ್ಲಿ ಎಲ್ಲಾ ಜನರು ಮಾಡುವ/ಮಾಡಿದ ಕರ್ಮ ಕೊನೆಗಾಣಬೇಕಾದರೆ ಭಗವಂತನ ಕೃಪೆ ಬೇಕು. "ನಾಹಂ ಕರ್ತಾ ಹರಿ ಕರ್ತಾ". ಕರ್ಮವನ್ನು ನಮ್ಮೊಳಗಿದ್ದು ಮಾಡಿಸುವವನೂ ಅವನೇ. ಇಂತಹ ಭಗವಂತ ಕೃತಾಂತಕೃತ್.

ಯಮನನ್ನು ಸೃಷ್ಟಿ ಮಾಡಿದ, ಹಾಗೂ ಕೊನೆಗೆ ಅವನನ್ನೂ ಸಂಹಾರ ಮಾಡುವ ಭಗವಂತ, ಎಲ್ಲಾ ಸಂಹಾರ ಶಕ್ತಿಗಳನ್ನು ಮೀರಿ ನಿಂತ ಮಹಾ ಸಂಹಾರ ಶಕ್ತಿ. ಆದ್ದರಿಂದ ಆತ ಕೃತಾಂತಕೃತ್.

**ಮಹಾವರಾಹೋ ಗೋವಿಂದಃ ಸುಷೇಣಃ ಕನಕಾಂಗದೀ ।**

**ಗುಹ್ಯೋ ಗಭೀರೋ ಗಹನೋ ಗುಪ್ತಶ್ಚಕ್ರಗದಾಧರಃ ॥೭೧॥**

೫೪೧) ಮಹಾವರಾಹಃ

ವರಾಹ ಅಂದರೆ ನಮಗೆ ಗೊತ್ತಿರುವ ಅರ್ಥ 'ಹಂದಿ'; ಆದರೆ ಪ್ರಾಚೀನ ಸಂಸ್ಕೃತದಲ್ಲಿ ಈ ಪದಕ್ಕೆಬೇರೆ ಅರ್ಥವಿದೆ. ಶ್ರೇಷ್ಠನಾದವ, ಮೋಡ ಎನ್ನುವ ಅರ್ಥ ವೇದಕಾಲದಲ್ಲಿತ್ತು. ಆದರೆ ಈಗ ಅದು ಪ್ರಚಲಿತದಲ್ಲಿಲ್ಲ. ವರಾಹ ಎಂದರೆ ಎಲ್ಲರೂ ವರ್ಣನೆ ಮಾಡತಕ್ಕ, ಎಲ್ಲರಿಗಿಂತ ಎತ್ತರದಲ್ಲಿರುವ, ಎಲ್ಲರೂ ಆಶ್ರಯಿಸುವ ವಸ್ತು. ಅದಕ್ಕಾಗಿ ಎಲ್ಲರಿಗೂ ಬೇಕಾದ ಮಳೆಯನ್ನು ಕೊಡುವ, ಎತ್ತರದಲ್ಲಿರುವ ಮೋಡವನ್ನೂ ಕೂಡಾ ವರಾಹ ಎಂದು ಕರೆಯುತ್ತಾರೆ. ಆದರೆ ನಿಜವಾಗಿ ಎತ್ತರದಲ್ಲಿರುವ ವಸ್ತು ಮೋಡವಲ್ಲ-ಭಗವಂತ. ಮಹಾವರಾಹ ಎಂದರೆ ಎಲ್ಲರಿಗಿಂತಲೂ ಶ್ರೇಷ್ಠ ಹಾಗೂ ಎತ್ತರದಲ್ಲಿರುವ ಭಗವಂತ.

ಸಂಸ್ಕೃತದ ಮಂತ್ರಶಾಸ್ತ್ರದಲ್ಲಿ 'ವರಾಹಮಂತ್ರಕ್ಕ' ಬಹಳ ಮಹತ್ವವಿದೆ. ಸಾಮಾನ್ಯವಾಗಿ ವರಾಹ ಮಂತ್ರವನ್ನು ಭೂ ಪ್ರಾಪ್ತಿಗಾಗಿ ಉಪಾಸನೆ ಮಾಡುತ್ತಾರೆ. ಆದರೆ ವಾಸ್ತವಿಕವಾಗಿ ನಾವು ಈ ಮಂತ್ರದಿಂದ ಪಡೆಯುವುದು ಭೂಮಿಯನ್ನಲ್ಲ, 'ಭೂ-ಪತಿತ್ವ'ವನ್ನು. ಅಂದರೆ ಪೂರ್ಣತೆಯನ್ನು ಪಡೆಯುವುದು. ನಮ್ಮ ವ್ಯಕ್ತಿತ್ವದ ಪೂರ್ಣ ವಿಕಾಸನವೇ ಭೂ-ಪತಿತ್ವ. ಇಂತಹ ಸರ್ವ ಶ್ರೇಷ್ಠವಾದ ವರಾಹ ಮಂತ್ರದಲ್ಲಿ ಸನ್ನಿಹಿತನಾಗಿರುವ ಭಗವಂತ ಮಹಾವರಾಹಃ.

೫೪೨) ಗೋವಿಂದಃ

ಈ ಹಿಂದೆ ವಿಶ್ಲೇಶಿಸಿದಂತೆ ಗೋವು ಎನ್ನುವ ಪದಕ್ಕೆ ಅನೇಕ ಅರ್ಥಗಳಿವೆ. ಭೂಮಿ, ನೀರು, ಕೂದಲು, ಕಿರಣ, ವೇದ, ಪ್ರಕಾಶ, ಇತ್ಯಾದಿ. ಗೋವಿಂದಃ ಎಂದರೆ ವೇದವನ್ನು ರಕ್ಷಿಸುವುದಕ್ಕೋಸ್ಕರ ಪ್ರಳಯ ಜಲದಲ್ಲಿ ಮತ್ಸ್ಯನಾಗಿ

ಸಂಚರಿಸಿದವ; ಭೂಮಿ ಹಿರಣ್ಯಾಕ್ಷನಿಂದ ತನ್ನ ಕಕ್ಷೆಯನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದಾಗ ವರಾಹನಾಗಿ ರಕ್ಷಣೆ ಮಾಡಿದವ ಗೋವಿಂದಃ; ಗೋವುಗಳ ಜೊತೆಗೆ ಗೋಪಾಲಕನಾಗಿ ಆಟವಾಡಿದ ಭಗವಂತ, ವೇದವ್ಯಾಸನಾಗಿ ವೇದಗಳನ್ನು ಕೊಟ್ಟ ವೇದವೇದ್ಯ. ಹೀಗೆ ಗೋವಿಂದಃ ಎನ್ನುವ ನಾಮಕ್ಕೆ ಅನೇಕ ಅರ್ಥಗಳಿವೆ.

೫೪೩) ಸುಷೇಣಃ

ಸು+ಸೇನಾ- ಸುಷೇಣ; ಇಲ್ಲಿ ಸೇನಾ ಎಂದರೆ ಸೇನೆ. ಸಮರ್ಥವಾದ ಸೇನೆ ಉಳ್ಳವ ಸುಷೇಣಃ. ಸು ಅಂದರೆ ಸುಗ್ರೀವ, ಸಮರ್ಥವಾದ ಕಪಿ ಸೇನೆಯೊಂದಿಗೆ ಲಂಕೆಗೆ ಹೋದವ ಸುಷೇಣಃ. ಜಗತ್ತಿನಲ್ಲಿರುವ ಸೇನೆಗಳಿಗೆ ಧರ್ಮದ ಪರ ಗೆಲ್ಲುವ ಶಕ್ತಿಯನ್ನು ಕೊಟ್ಟ ಭಗವಂತ ಸುಷೇಣಃ.

೫೪೪) ಕನಕಾಂಗದೀ

'ಅಂಗದ' ಎಂದರೆ 'ತೋಳ್ಬಂದಿ', ತೋಳಿನಲ್ಲಿ ಗಂಡಸರು ಹಾಗೂ ಹೆಂಗಸರು ತೊಡುವ ಆಭರಣ- ತೋಳ್ಬಂದಿ. ಮೇಲ್ನೋಟದಲ್ಲಿ ನೋಡಿದರೆ ಚಿನ್ನದ ತೋಳ್ಬಂದಿ ತೊಟ್ಟ ಭಗವಂತ ಕನಕಾಂಗದೀ. ಆದರೆ ಭಗವಂತನ ಈ ನಾಮಕ್ಕೆ ಇನ್ನೂ ಅನೇಕ ಅರ್ಥಗಳಿವೆ. ಹಿಂದಿನವರು ತಮ್ಮ ದೇಹವನ್ನು ಭಗವಂತನ ಪ್ರತಿಮೆ ಎಂದು, ಹಾಗೂ ಅದರೊಳಗೆ ಬಿಂಬ ರೂಪಿ ಭಗವಂತನಿದ್ದಾನೆ ಎನ್ನುವ ಭಾವನೆಯಿಂದ ಆಭರಣಗಳನ್ನು ಧರಿಸುತ್ತಿದ್ದರು. ಚಿನ್ನದ ವರ್ಣದ ಮಯ್ಯುವನು, ಉದಿಸುವ ಸೂರ್ಯನ ಬಣ್ಣದವನು, ಭಕ್ತರ ದುರಿತವನ್ನು ನಾಶಮಾಡುವವನೂ ಆದ ಭಗವಂತ ಕನಕಾಂಗದೀ. 'ಕನಕ' ಅಂದರೆ 'ಅಂತರಂಗದ ಆನಂದ'. ಜ್ಞಾನಾನಂದಮಯವಾದ ಶರೀರವುಳ್ಳ ಭಗವಂತ ಕನಕಾಂಗದೀ.

೫೪೫) ಗುಹ್ಯಃ

ಹೃದಯ ಗುಹೆಯೊಳಗೆ ಗುಟ್ಟಾಗಿ ನೆಲೆಸಿರುವವನು!. ಇದರಿಂದಾಗಿ ಆತನನ್ನು ಹೊರಪ್ರಪಂಚದಲ್ಲಿ ಎಷ್ಟೇ ಹುಡುಕಿದರೂ ಆತ ಸಿಗಲಾರ. ಆದರೆ ಒಳಪ್ರಪಂಚದಲ್ಲಿ ಆತನನ್ನು ಹುಡುಕುವ ಪ್ರಯತ್ನ ಮಾಡಿದರೆ ಹೃದಯ ಗುಹೆಯಲ್ಲಿ ನೆಲೆಸಿದ ಭಗವಂತನ ಸಾಕ್ಷಾತ್ಕಾರವಾಗುತ್ತದೆ. ಉಪನಿಷತ್ತುಗಳನ್ನು 'ಗುಹ್ಯ' ಎನ್ನುತ್ತಾರೆ. ವೇದೋಪನಿಷತ್ತುಗಳಿಂದ ವೇದ್ಯನಾಗಿ, ಹೃದಯಗುಹೆಯಲ್ಲಿ ನಿಗೂಢವಾಗಿರುವ ಭಗವಂತ ಗುಹ್ಯಃ.

೫೪೬) ಗಭೀರಃ

ಎಷ್ಟೇ ಆಳಕ್ಕಿಳಿದರೂ ತುದಿ ಸಿಗದ, ಅಳೆಯಲಾಗದ ಆಳದವನು ಗಭೀರಃ. ಎಷ್ಟೇ ಚಿಂತನೆ ಮಾಡಿದರೂ ಆಳ ತಿಳಿಯಲು ಅಸಾಧ್ಯವಾದ, ಅಳತೆಗೆ ಸಿಗದಷ್ಟು ಅಗಾಧವಾದ, ಸೀಮೆ ಇಲ್ಲದ ಭಗವಂತ ಗಭೀರಃ.

೫೪೭) ಗಹನಃ

ಭಗವಂತನ ಹುಡುಕಾಟ 'ಕಣ್ಣು ಕಟ್ಟಿ ಕಾಡಿನಲ್ಲಿ ಬಿಟ್ಟಂತೆ'. ಆತ ತಿಳಿಯಲಾಗದ ತಿಟ್ಟಿನವನು. ಆತನನ್ನು ಏನು ಎತ್ತ ಎಂದು ಪತ್ತೆ ಹಚ್ಚುವುದು ಅಸಾಧ್ಯ. ಹೀಗೆ ಎಷ್ಟೇ ಅಲೆದಾಡಿದರೂ ಸಿಗದ ಭಗವಂತ ಗಹನಃ.

೫೪೮) ಗುಪ್ತಃ

ಭಗವಂತ ಎಂದೂ ತನ್ನನ್ನು ತಾನು ತೆರೆದು ತೋರಿಸುವುದಿಲ್ಲ. ಆತ ಗುಪ್ತಃ. ಮೊದಲು ನಾವು ಆತನ ಮುಂದೆ ಬತ್ತಲಾಗಬೇಕು, ಆಗ ಆತ ನಮ್ಮ ಮುಂದೆ ತೆರೆದುಕೊಳ್ಳುತ್ತಾನೆ. ಯಾರು ತಮ್ಮನ್ನು ತಾವು ಆತನಲ್ಲಿ ಅರ್ಪಿಸಿಕೊಳ್ಳುತ್ತಾರೋ ಅವರಿಗೆ ಭಗವಂತ ತೆರೆದುಕೊಳ್ಳುತ್ತಾನೆ.

೫೪೯) ಚಕ್ರಗದಾಧರಃ

ಭಗವಂತ ಚಕ್ರ ಗದೆಗಳನ್ನು ತೊಟ್ಟವನು. ಚಕ್ರ-ದುರ್ಗಾರೂಪ, ಗದೆ ವಾಯು ರೂಪ. ಶ್ರೀತತ್ವ ಹಾಗೂ ವಾಯು ತತ್ವ ಸದಾ ಭಗವಂತನೊಂದಿಗಿರುತ್ತಾರೆ. ಚಕ್ರ ಸಂಹಾರ ಶಕ್ತಿಯ ಪ್ರತಿರೂಪವಾದರೆ, ಗದಾ ಕಾಮನಿಗ್ರಹದ ಸಂಕೇತ. ಚಕ್ರದಿಂದ ಧರ್ಮದ ನಿರಂತರ ಚಲನೆ, ಹಾಗೂ ಮನುಷ್ಯನ ಸ್ವಚ್ಛಂದತೆಗೆ ಕಡಿವಾಣವಾಗಿದ್ದು, ಧರ್ಮ ಸಂರಕ್ಷಣೆ ಮಾಡುವ ಭಗವಂತ ಚಕ್ರಗದಾಧರಃ.

**ವೇಧಾಸ್ಸ್ವಾಂಗೋಽಜಿತಃ ಕೃಷ್ಣೋ ದೃಢಸ್ಸಂಕರ್ಷಣೋಽಚ್ಯುತಃ ।**
**ವರುಣೋ ವಾರುಣೋ ವೃಕ್ಷಃ ಪುಷ್ಕರಾಕ್ಷೋ ಮಹಾಮನಾಃ ॥೭೨॥**

**೫೫೦) ವೇಧಾಃ**

'ವಿದತ್ತೇ ಇತೀ ವೇಧಾಃ'; ವಿಶಿಷ್ಟವಾದ ಧಾರಣೆ ಹಾಗೂ ಪೋಷಣೆಯನ್ನು ಜಗತ್ತಿಗೆ ಕೊಡುವವನು ವೇಧಾಃ. ಜಗತ್ತನ್ನು ಹೊರಗಿನಿಂದ ಧಾರಣೆ ಮಾಡಿದ, ಅಂತರಂಗದೊಳಗಿದ್ದು ಅದನ್ನು ಪೋಷಣೆ ಮಾಡುವ ಜಗತ್ತಿನ ಜನಕ ಭಗವಂತ ವೇಧಾಃ.

**೫೫೧) ಸ್ವಾಂಗಃ**

ನಮ್ಮ ದೇಹ ಪಂಚಭೂತಗಳಿಂದಾದದ್ದು. ಆದರೆ ಭಗವಂತ ಜ್ಞಾನಾನಂದ ಸ್ವರೂಪಭೂತವಾದ ಅಂಗಾಂಗಗಳುಳ್ಳವನು. ಈ ಕಾರಣದಿಂದ ನಮ್ಮ ಪಾಂಚಭೌತಿಕ ಇಂದ್ರಿಯ ಆತನನ್ನು ಗ್ರಹಿಸಲಾರದು. ಇಂತಹ ಸ್ವರೂಪಭೂತವಾದ ಅಂಗಾಂಗಗಳುಳ್ಳ ಭಗವಂತ ಸ್ವಾಂಗಃ

**೫೫೨) ಅಜಿತಃ**

ಭಗವಂತನನ್ನು ಯಾರೂ ಸೋಲಿಸಲಾರರು. ಅವನು ಅಜಿತಃ. ಆದರೆ ಭಕ್ತ ಪರಾಧೀನನಾದ ಭಗವಂತ ಕೆಲವೊಮ್ಮೆ ಸೋತಂತೆ ತೋರಿಸಿಕೊಳ್ಳುತ್ತಾನೆ.

**೫೫೩) ಕೃಷ್ಣಃ**

'ಕರ್ಷತಿ ಇತೀ ಕೃಷ್ಣಃ'. ಎಲ್ಲರನ್ನೂ ತನ್ನೆಡೆಗೆ ಸೆಳೆಯುವ ಪಾದರಸ, ಸಂಸಾರದಿಂದ ಎತ್ತರಕ್ಕೆ ಕೊಂಡೊಯ್ಯುವ ಕರ್ಷಣಶಕ್ತಿಯಾದ ಸೌಂದರ್ಯ ಮೂರ್ತಿ ಭಗವಂತ ಕೃಷ್ಣಃ.

ಕೃಷ್ಣ ಎನ್ನುವುದು ಕೃಷಿ+ಣ ಎನ್ನುವ ಎರಡು ಶಬ್ದಗಳ ಸಂಯುಕ್ತ ರೂಪ . ಕೃಷಿ ಎಂದರೆ ಭೂಮಿ; ಕೃಷಿ ಎಂದರೆ ನಿರ್ದೋಷಿತ್ವ. ಭಗವಂತ ದೋಷರಹಿತವಾದ, ಪರಿಶುದ್ಧವಾದ ಅಸ್ಥಿತ್ವವುಳ್ಳ ಬಲಾನಂದಸ್ವರೂಪ.

**೫೫೪) ದೃಢಃ**

ಭಗವಂತನ ವ್ಯಕ್ತಿತ್ವವನ್ನು ಯಾರೂ ಬದಲಿಸಲಾರರು. ಆತ ದೃಢಃ. ಅನಾದಿ ಅನಂತಕಾಲದಲ್ಲಿ ದೃಢವಾದ, ಏಕರೂಪದ, ಎಂದೂ ಬದಲಾಗದ, ಚಪಲ-ಚಾಂಚಲ್ಯವಿಲ್ಲದ, ನಿಶ್ಚಿತವಾದ ವ್ಯಕ್ತಿತ್ವವುಳ್ಳ ಭಗವಂತ ದೃಢಃ.

**೫೫೫) ಸಂಕರ್ಷಣಃ**

ಸಂಕರ್ಷಣ ಎಂದರೆ ಶೇಷ. ಶೇಷನಲ್ಲಿ ಅಂತರ್ಗತನಾಗಿರುವ ಭಗವಂತ, ಸರ್ವ ಗ್ರಹ-ಗೋಲಗಳನ್ನು ಸೆಳೆದು ಹಿಡಿದಿಟ್ಟ ವಿಶ್ವಧಾರಕ ಶಕ್ತಿ.

**೫೫೬) ಅಚ್ಯುತಃ**

ಚ್ಯುತಿ ಇಲ್ಲದೆ, ಅಖಂಡವಾಗಿ ಸೃಷ್ಟಿ-ಸ್ಥಿತಿ-ಸಂಹಾರ ಕಾಲದಲ್ಲಿ ಅನಂತನಾಗಿ ಇರುವ ಭಗವಂತ ಅಚ್ಯುತಃ. ಆತನಿಗೆ ಎಂದೂ ಅಳಿವಿಲ್ಲ.

**೫೫೭) ವರುಣಃ**

ಮಿತ್ರ ಹಗಲಿನ ಸೂರ್ಯನಾದರೆ ವರುಣ ರಾತ್ರಿಯ ಸೂರ್ಯ. ಇದನ್ನೇ "ಶಂ ನೋ ಮಿತ್ರಃ ಶಂ ವರುಣಃ" ಎಂದಿದ್ದಾರೆ. ಮಿತ್ರನಾಗಿ, ವರುಣನಾಗಿ ಜಗತ್ತಿನ ಹಗಲು ರಾತ್ರಿಗಳನ್ನು ನಿಯಂತ್ರಿಸುವ ಭಗವಂತ 'ವರುಣಃ'. ಜೀವರನ್ನು ಸಂಸಾರವೆಂಬ ಮಾಯೆಯ ಆವರಣದಲ್ಲಿಡುವ ಹಿರಿಯ ಆನಂದ ಸ್ವರೂಪ ಭಗವಂತ ವರುಣಃ.

೫೫೮) ವಾರುಣಃ

ನೀರಿನ, ಸಮುದ್ರದ ಮತ್ತು ಪಶ್ಚಿಮದಿಕ್ಕಿನ ದೇವತೆ ವರುಣ. ಇಂತಹ ವರುಣನಲ್ಲಿದ್ದು, ಸಮಸ್ತ ಕಾರ್ಯವನ್ನು ನಿರ್ವಹಿಸುವ, ಶತ್ರುಗಳನ್ನು ತಡೆಯಬಲ್ಲ ಬಲಸ್ವರೂಪ, ಕ್ಷೀರಸಾಗರವಾಸಿ ಭಗವಂತ ವಾರುಣಃ.

೫೫೯) ವೃಕ್ಷಃ

ವೃಕ್ಷ ಎಂದರೆ ಮರ. ಯಾವುದನ್ನು ಕಡಿಯುತ್ತೇವೋ(ಛೇದನೆ) ಅದು ವೃಕ್ಷ. ಸಂಸಾರವೆಂಬ ಮಹಾವೃಕ್ಷವನ್ನು ಕಡಿದು ಮುಕ್ತಿ ಕೊಡುವ ನಿರ್ವಿಕಾರ ಹಾಗೂ ನಿಶ್ಚಲ ಮೂರ್ತಿ ಭಗವಂತ ವೃಕ್ಷಃ.

೫೬೦) ಪುಷ್ಕರಾಕ್ಷಃ

ಪುಷ್ಕರಾಕ್ಷಃ ಎಂದರೆ ಪುಷ್ಕರದಂತೆ(ತಾವರೆಯಂತೆ) ಅಕ್ಷ ಉಳ್ಳವ ಅಥವಾ ತಾವರೆಗಣ್ಣಿನವ. ದೇಹದಲ್ಲಿ ಕಣ್ಣು ಆಕರ್ಷಣೆಯ ಕೇಂದ್ರ. ಭಗವಂತ ಅಗಲವಾದ ಅರಳುಗಣ್ಣಿನ ಸೌಂದರ್ಯಮೂರ್ತಿ. ಕೆಂದಾವರೆ ಬಣ್ಣ ನಸುಗೆಂಪು. ಆರೋಗ್ಯವಾಗಿರುವ ವ್ಯಕ್ತಿಯ ಕಣ್ಣು ಹಾಗಿರುತ್ತದೆ. ರಕ್ತ ಕೆಂಪಾದ ಅಥವಾ ಬಿಳಿಚಾದ ಕಣ್ಣು ಆರೋಗ್ಯದ ಲಕ್ಷಣವಲ್ಲ. ನಸುಗೆಂಪು ವಾತ್ಸಲ್ಯವನ್ನು ಬಿಂಬಿಸುತ್ತದೆ. ಭಕ್ತವಾತ್ಸಲ್ಯವನ್ನು ಬಿಂಬಿಸುವ ಕಣ್ಣುಗಳುಳ್ಳ ವಾತ್ಸಲ್ಯಮೂರ್ತಿ ಭಗವಂತ ಪುಷ್ಕರಾಕ್ಷಃ.

೫೬೧) ಮಹಾಮನಾಃ

ಮನಸ್ಸು ಎಂದರೆ 'ಮನನ'. ಒಂದು ವಸ್ತುವನ್ನು ತಳಸ್ಪರ್ಶಿಯಾಗಿ ತಿಳಿಯುವುದು 'ಅರಿವು'. ಇಂತಹ ಮಹತ್ತರವಾದ ಮನನ ಉಳ್ಳವನು ಮಹಾಮನಃ. ಭಕ್ತರು ಬಯಸಿದ್ದೆಲ್ಲವನ್ನೂ ಕೊಡುವ ಮನೋವೈಶಾಲ್ಯವುಳ್ಳ ಸರ್ವಜ್ಞನಾದ ಭಗವಂತ ಮಹಾಮನಾಃ.

ಭಗವಾನ್ ಭಗಹಾನಂದೀ ವನಮಾಲೀ ಹಲಾಯುಧಃ ।
ಆದಿತ್ಯೋ ಜ್ಯೋತಿರಾದಿತ್ಯಃ ಸಹಿಷ್ಣುರ್ಗತಿಸತ್ತಮಃ ॥೬೩॥

೫೬೨) ಭಗವಾನ್

ಈ ನಾಮ ಬಹಳ ಪ್ರಸಿದ್ಧವಾದ, ಎಲ್ಲಾ ಭಾಷೆಗಳಲ್ಲಿ, ಎಲ್ಲಾ ಜಾತಿ-ಧರ್ಮಗಳಲ್ಲಿ ಇರುವ ನಾಮ. ಸಾಮಾನ್ಯವಾಗಿ ಭಗವಂತನಿಗೆ ಬ್ರಹ್ಮ, ಪರಬ್ರಹ್ಮ, ಆತ್ಮ, ಪರಮಾತ್ಮ ಹಾಗೂ ಭಗವಾನ್ ಎನ್ನುವ ನಾಮಗಳು ವಿಶಿಷ್ಟ ನಾಮಗಳು. ಇಲ್ಲಿ 'ಭಗ' ಎಂದರೆ ಭಾಗ್ಯ; ಭಗವಾನ್ ಎಂದರೆ ಭಾಗ್ಯಸ್ವರೂಪ.

ಮಹಾಭಾರತದಲ್ಲಿ ಹೇಳಿದಂತೆ: "ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಶ್ರೀಹ ಜ್ಞಾನ ವೈರಾಗ್ಯ ಯೋಗಸ್ಚೈವ ಶನ್ನಂ ಭಗಃ". ಆರು ಗುಣಗಳನ್ನು 'ಭಗ' ಶಬ್ದ ಹೇಳುತ್ತದೆ. ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ ಮತ್ತು ವೈರಾಗ್ಯ.

೧) ಐಶ್ವರ್ಯ: ಪೂರ್ಣೈಶ್ವರ್ಯ ಎಂದರೆ ಸರ್ವ ಸಮರ್ಥತೆ **(Omnipotent)**

೨) ವೀರ್ಯ: ಶತ್ರುಗಳನ್ನು, ದೋಷವನ್ನು ನಿರ್ನಾಮ ಮಾಡುವ ಶಕ್ತಿ.

೩) ಯಶಸ್ಸು: ಯಶಸ್ಸು ಎಂದರೆ ಕೀರ್ತಿ. ಭಗವಂತನ ಸರ್ವ ನಿಯಾಮಕತ್ವವನ್ನು ಎಲ್ಲರೂ ಕೀರ್ತನೆ ಮಾಡುತ್ತಾರೆ, ಅದರಿಂದ ಯಶಸ್ಸು.

೪) ಶ್ರೀ: ಶ್ರೀ ಎಂದರೆ ಸಂಪತ್ತು. ಇಡೀ ಜಗತ್ತಿನ ಸಮಸ್ತ ವಸ್ತುವು ಯಾರಿಗೆ ಸೇರಿದ್ದೋ ಅವನು ನಿಜವಾದ ಶ್ರೀ.

೫) ಜ್ಞಾನ: ಜ್ಞಾನಪೂರ್ಣ, ಸರ್ವಜ್ಞ

೬) ವೈರಾಗ್ಯ: ಯಾವುದರ ಬಗ್ಗೆಯೂ 'ನನ್ನದು' ಅನ್ನುವ ಭಾವನೆ ಇಲ್ಲದಿರುವುದು.

ಈ ಆರು ಗುಣಗಳು ಪೂರ್ಣಪ್ರಮಾಣದಲ್ಲಿರುವ, ಸತ್ವ-ರಜ-ತಮೋಗುಣಗಳ ಸ್ಪರ್ಶವೇ ಇಲ್ಲದವ ಭಗವಾನ್.

೫೬೩) ಭಗಹಾ

ದುಷ್ಟರ ಭಾಗ್ಯವನ್ನು ಕಸಿವವನು ಹಾಗೂ ಪುಣ್ಯಾತ್ಮರಿಗೆ ಭಾಗ್ಯಪ್ರದನಾಗಿರುವ ಭಗವಂತ ಭಗಹಾ.

೫೬೪) ಆನಂದೀ

ಪೂರ್ಣಾನಂದವುಳ್ಳವನು; ಪೂರ್ಣಾನಂದ ಸ್ವರೂಪ ಭಗವಂತ ಆನಂದೀ.

೫೬೫) ವನಮಾಲೀ

ಇದು ವಿಶೇಷವಾಗಿ ಕೃಷ್ಣಾವತಾರಕ್ಕೆ ಸಂಬಂಧಪಟ್ಟ ಹೆಸರು. ಕೃಷ್ಣ ಗೋಪಾಲಕರ ಜೊತೆ ಗೋವುಗಳನ್ನು ಕಾಯುತ್ತಿದ್ದ. ಆಗ ಪ್ರಕೃತಿಯಲ್ಲಿರುವ ಹೂ, ನವಿಲುಗರಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದ. ಕುತ್ತಿಗೆಯಿಂದ ಕಾಲಿನ ಗಂಟಿನವರೆಗೆ ಹೂ ಮಾಲೆಯನ್ನು ಮಾಡಿ ಹಾಕಿಕೊಳ್ಳುತ್ತಿದ್ದ ಭಗವಂತನನ್ನು ವನಮಾಲೀ ಎನ್ನುತ್ತಿದ್ದರು.

ಪ್ರಪಂಚ ಸೃಷ್ಟಿಯ ಮೊದಲ ಹಂತದಲ್ಲಿ ನಾನಾ ಬಗೆಯ ವನಸ್ಪತಿಗಳ ರೂಪದಲ್ಲಿ ಜೀವಸೃಷ್ಟಿ ಮಾಡಿದ ಭಗವಂತ ವನಮಾಲೀ.

೫೬೬) ಹಲಾಯುಧಃ

ನೇಗಿಲನ್ನು ಆಯುಧವಾಗಿ ಬಳಸಿದ ನರರೂಪಿ ಬಲರಾಮನೊಳಗೆ, ಆವಿರ್ಭೂತಿಯಾದ ಭಗವಂತ ಹಲಾಯುಧಃ

೫೬೭) ಆದಿತ್ಯಃ

ಭೂಮಿಯಲ್ಲಿ ಪ್ರತಿಯೊಂದು ಜೀವದೊಳಗೆ ಅಂತರ್ಯಾಮಿಯಾಗಿರುವ ಭಗವಂತನೇ ಸೂರ್ಯ ಮಂಡಲದಲ್ಲಿ ತುಂಬಿ ಸೂರ್ಯ ಕಿರಣಗಳ ಮೂಲಕ ಶಕ್ತಿಪಾತ ಮಾಡುತ್ತಿದ್ದಾನೆ. ಆದಿತ್ಯನಲ್ಲಿ ಸನ್ನಿಹಿತನಾಗಿರುವ ಭಗವಂತ ಆದಿತ್ಯಃ.

೫೬೮) ಜ್ಯೋತಿರಾದಿತ್ಯಃ

ಜಗತ್ತಿನಲ್ಲಿ ಯಾವ ಯಾವ ಬೆಳಕುಗಳಿವೆಯೋ ಅದರ ಮೂಲ ಭಗವಂತ. ಗೀತೆಯಲ್ಲಿ ಹೇಳಿದಂತೆ:

> ಯದಾದಿತ್ಯಗತಂ ತೇಜೋ ಜಗದ್ ಭಾಸಯತೇ ऽ ಖಿಲಮ್ ।
> ಯಚ್ಚಂದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್ ॥ (ಅ-೧೫ ಶ್ಲೋ-೧೨)

ಅಂದರೆ: "ಸೂರ್ಯನಲ್ಲಿದ್ದು ವಿಶ್ವವನ್ನೆಲ್ಲಾ ಬೆಳಗುವ ಬೆಳಕು; ಚಂದ್ರನಲ್ಲಿ, ಬೆಂಕಿಯಲ್ಲಿ ಕೂಡಾ, ಅದು ನನ್ನ ಬೆಳಕೆಂದು ತಿಳಿ". ಸಮಸ್ತ ಬೆಳಕಿನ ಪುಂಜಗಳನ್ನು ಬೆಳಗಿಸುವ ಮೂಲಜ್ಯೋತಿ, ಬೆಳಕಿನ ಮೂಲಕಾರಣಗಳಾದ ಸೂರ್ಯಾದಿಗಳಲ್ಲಿ ತುಂಬಿದ ಜ್ಞಾನಮೂರ್ತಿ ಭಗವಂತ ಜ್ಯೋತಿರಾದಿತ್ಯಃ

೫೬೯) ಸಹಿಷ್ಣುಃ

ಭಗವಂತ ಅಪರಾಧಗಳನ್ನು ಸಹಿಸುವ ಕರುಣಾಮೂರ್ತಿ. ನಾವು ಕೆಲವೊಮ್ಮೆ ದೇವರನ್ನು ತಪ್ಪಾಗಿ ತಿಳಿಯುತ್ತೇವೆ, ಬಯ್ಯುತ್ತೇವೆ, ತಪ್ಪು ಉಪಾಸನೆ ಮಾಡುತ್ತೇವೆ. ಆದರೆ ಆತ ಭಕ್ತರ ಸರ್ವಾಪರಾಧಗಳನ್ನು ಮನ್ನಿಸುವ ಮಹಾ ಸಹಿಷ್ಣು.

೫೭೦) ಗತಿಸತ್ತಮಃ

ನಮ್ಮ ಜೀವದ ಗತಿಯನ್ನರಿತ, ಎಲ್ಲರಿಗಿಂತ ಎತ್ತರದಲ್ಲಿರುವ ಕಾರುಣ್ಯಮೂರ್ತಿ. 'ಗತಿ' ಎಂದರೆ ನಾವು ಹೋಗಿ ಸೇರಬೇಕಾದ ತಾಣ. ಗಮ್ಯವಾದ ಸ್ಥಾನದಲ್ಲಿ ಶ್ರೇಷ್ಠವಾದ ಹಿರಿಯ ತಾಣ ಭಗವಂತ ಗತಿಸತ್ತಮಃ.

**ಸುಧನ್ವಾ ಖಂಡಪರಶುರ್ದಾರುಣೋ ದ್ರವಿಣಪ್ರದಃ ।**

**ದಿವಸ್ಪೃಕ್ ಸರ್ವದೃಗ್ವ್ಯಾಸೋ ವಾಚಸ್ಪತಿರಯೋನಿಜಃ ॥೭೪॥**

೫೭೧) ಸುಧನ್ವಾ

ಸೊಗಸಾದ, ಸುಂದರವಾದ ಮತ್ತು ಬಲಿಷ್ಠವಾದ ಧನುಸ್ಸನ್ನು ಶತ್ರುಗಳ ದಮನಕ್ಕೋಸ್ಕರ ಹಿಡಿದ ಭಗವಂತ-ಸುಧನ್ವಾ. ಆತ ನಮಗೆಲ್ಲರಿಗೂ ಓಂಕಾರವೆಂಬ ಧನುಸ್ಸನ್ನು ಕೊಟ್ಟಿದ್ದಾನೆ. ಅದನ್ನು ಉಪಯೋಗಿಸಿ, ನಮ್ಮ ಆತ್ಮವನ್ನು ಬಾಣವಾಗಿಸಿ ಭಗವಂತನತ್ತ ಗುರಿಮಾಡಿ ಹೊಡೆದಾಗ  ನಾವು ಆತನನ್ನು ತಲುಪಬಹುದು. ಓಂ ಎಲ್ಲಾ ವೇದಗಳ ಮೂಲಾಕ್ಷರ. ಇದು ಸಮಸ್ತ ವೇದಗಳ ಜ್ಞಾನದಿಂದ(ಬಿಲ್ಲಿನಿಂದ) ನಮ್ಮ ಆತ್ಮಸ್ವರೂಪ(ಬಾಣ) ಭಗವಂತನನ್ನು ತಲುಪುವ ಸಾಧನ.

ವಿದ್ಯಾಮಾನಿನಿಯಾದ ಶ್ರೀತತ್ವವನ್ನು ಕೈಯಲ್ಲಿ ಹಿಡಿದವ; ರಮೆಯನ್ನು ಬಿಲ್ಲಾಗಿ, ಪ್ರಾಣನನ್ನು ಬಾಣವಾಗಿ ಹಿಡಿದ ಭಗವಂತ ಸುಧನ್ವಾ. ಅವತಾರ ರೂಪಿಯಾಗಿ ವಿಶೇಷ ಬಿಲ್ಲಿನಿಂದ ಶತ್ರು ಸಂಹಾರ ಮಾಡಿದ ಭಗವಂತ ಸುಧನ್ವಾ.

೫೭೨) ಖಂಡಪರಶುಃ

ಶತ್ರುಗಳನ್ನು ತರಿವ ಕೊಡಲಿ ಹೊತ್ತವನು ಖಂಡಪರಶುಃ. ಪರಶುರಾಮನಾಗಿ, ವಿಶೇಷ ಕೊಡಲಿಯಿಂದ ದುಷ್ಟ ಕ್ಷತ್ರಿಯರ ದಮನ ಮಾಡಿದ ಭಗವಂತ ಖಂಡಪರಶುಃ.

೫೭೩) ದಾರುಣಃ

ದುಷ್ಟರಿಗೆ, ಲೋಕ ಕಂಟಕರಿಗೆ ಭಗವಂತ ಭಯಾನಕ (ದಾರುಣ). ಪರಶುರಾಮನಾಗಿ ೨೧ ಬಾರಿ ಕ್ಷತ್ರಿಯರನ್ನು ನಾಶಮಾಡಿ ಭಯಂಕರನಾಗಿ ಕಾಣಿಸಿಕೊಂಡ ಭಗವಂತ ದಾರುಣಃ.

೫೭೪) ದ್ರವಿಣಪ್ರದಃ

ಇಡೀ ಪ್ರಪಂಚದ ಸಂಪತ್ತನ್ನು ಸಮಾಜಕ್ಕೆ ಕೊಡುವವ. ಸಮಾಜದ ಸಂಪತ್ತನ್ನು ತಮ್ಮ ಸ್ವಾರ್ಥಕ್ಕಾಗಿ ನುಂಗುವ ಭ್ರಷ್ಟರನ್ನು ನಿಗ್ರಹ ಮಾಡಿ ಅದನ್ನು ಮರಳಿ ಸಮಾಜಕ್ಕೆ ಕೊಡುವ ಭಗವಂತ ದ್ರವಿಣಪ್ರದಃ. ಈ ಕಾರಣದಿಂದ ಮೋಸ, ವಂಚನೆ ಮಾಡಿ ಗಳಿಸಿದ ಸಂಪತ್ತು ಎಂದೂ ಶಾಶ್ವತವಲ್ಲ. ಅದು ಎಂದೆಂದೂ ಕ್ಷಣಿಕ. ಭಗವಂತ ಭ್ರಷ್ಟರಿಗೆ ದಾರುಣನಾದರೆ, ಸಮಾಜಕ್ಕೆ ದ್ರವಿಣಪ್ರದಃ.

೫೭೫) ದಿವಸ್ಪೃಕ್

ಮುಗಿಲನ್ನು ಮುತ್ತಿ ನಿಂತವನು ದಿವಸ್ಪೃಕ್.  ಭಗವಂತ ಭೂ ಆಕಾಶದಲ್ಲಿ ತುಂಬಿ ನಿಂತಿದ್ದಾನೆ. ಅವನಿಗೆ ತಿಳಿಯದ ವಿಷಯ ಈ ಪ್ರಪಂಚದಲ್ಲಿಲ್ಲ. ಆತ ಎಲ್ಲವನ್ನೂ ಕಾಣಬಲ್ಲ.

೫೭೬) ಸರ್ವದೃಗ್ ವ್ಯಾಸಃ

ಇಲ್ಲಿ ವ್ಯಾಸ ಎನ್ನುವುದು 'ವಿಸ್ತಾರ, ವಿಭಾಗ' ಎನ್ನುವ ಅರ್ಥವನ್ನು ಕೊಡುತ್ತದೆ. ವೇದಗಳನ್ನು ವಿಭಾಗ ಮಾಡಿ ಜ್ಞಾನಿಗಳ ಅರಿವನ್ನು ವಿಸ್ತಾರ ಮಾಡಿದ ಭಗವಂತ ಸರ್ವದೃಗ್ ವ್ಯಾಸಃ.

ಭಗವಂತ ವೇದವನ್ನು ೧೧೩೭ ಸಂಹಿತೆಯಾಗಿ ವಿಭಾಗಮಾಡಿ, ಜ್ಞಾನಿಗಳ ಮುಖೇನ ನಮಗೆ ಕೊಟ್ಟಿದ್ದಾನೆ. ಪ್ರಧಾನವಾಗಿ ವೇದಗಳು ನಾಲ್ಕು. ಪದ್ಯ ಸಂಕಲನ-ಋಗ್ವೇದ; ಗದ್ಯ ಸಂಕಲನ-ಯಜುರ್ವೇದ; ಗಾನಕ್ಕೋಸ್ಕರ-ಸಾಮವೇದ ಮತ್ತು  ಅಥರ್ವ ಮುನಿ ಬ್ರಹ್ಮನಿಂದ ಉಪದೇಶ ಪಡೆದು ಬರೆದ-ಅಥರ್ವಣ ವೇದ. ಮೂಲಭೂತವಾಗಿ

ವೇದಗಳು ಮೂರು. ಆದರೆ ಋಷಿ ಸಂಪ್ರದಾಯದಿಂದ ನಾಲ್ಕು ವೇದಗಳ ಸೃಷ್ಟಿಯಾಯಿತು. ಇದನ್ನೇ ವೇದವ್ಯಾಸರು ನಾಲ್ಕು ಜನ ಮುನಿಗಳಿಗೆ (ಪೈಲ, ವೈಶಂಪಾಯನ, ಸುಮಂತು ಮತ್ತು ಜೈಮಿನಿ) ಹೇಳಿದರು. ಈ ನಾಲ್ಕು ಮುನಿಗಳು ಮತ್ತೆ ವೇದವನ್ನು ಅನೇಕ ಶಾಖೆಗಳಾಗಿ(ಸಂಹಿತೆ) ವಿಂಗಡಿಸಿದರು.

ಋಗ್ವೇದದಲ್ಲಿ ೨೪ ಸಂಹಿತೆಗಳಿವೆ. ಯಜುರ್ವೇದದಲ್ಲಿ ಪ್ರಮುಖವಾಗಿ ಎರಡು ಶಾಖೆ. ಒಂದು ಶುಕ್ಲ ಯಜುರ್ವೇದ ಹಾಗೂ ಇನ್ನೊಂದು ಕೃಷ್ಣ ಯಜುರ್ವೇದ. ಶುಕ್ಲ ಯಜುರ್ವೇದದಲ್ಲಿ ೧೫ ಸಂಹಿತೆ, ಹಾಗೂ ಕೃಷ್ಣ ಯಜುರ್ವೇದದಲ್ಲಿ ೮೬ ಸಂಹಿತೆ, ಒಟ್ಟು ೧೦೧ ಸಂಹಿತೆ. ಸಾಮವೇದದಲ್ಲಿ ೧೦೦೦ ಶಾಖೆಗಳು, ಒಂದು ಸಾವಿರ ಬಗೆಯ ಗಾನ ಪದ್ಧತಿ! ಆದರೆ ಇಂದು ಕೇವಲ ಮೂರು (ಜೈಮಿನಿಯ, ರಣಾಯನಿಯ ಹಾಗೂ ಕೌತುಮನ) ಗಾನಪದ್ಧತಿ ಮಾತ್ರ ಪ್ರಚಲಿತದಲ್ಲಿದೆ. ಅಥರ್ವ ವೇದದಲ್ಲಿ ಒಟ್ಟು ೧೨ ಶಾಖೆಗಳು. ಹೀಗೆ ವೇದವನ್ನು ೧೧೩೭ (೨೪+೧೦೧+೧೨+೧೦೦೦) ಸಂಹಿತೆಗಳಾಗಿ ವಿಂಗಡಿಸಿ, ವಿಸ್ತಾರ ಮಾಡಿದ ಭಗವಂತ, ಮನುಷ್ಯ ಸ್ವಭಾವದ ಬುದ್ಧಿ ವೈಚಿತ್ರ್ಯದ ಜ್ಞಾನ ಸಾಗರವನ್ನು ನಮ್ಮ ಮುಂದೆ ತೆರೆದಿಟ್ಟ ಸರ್ವದೃಗ್ ವ್ಯಾಸಃ.

೫೭೭) ವಾಚಸ್ಪತಿಃ

ಭಗವಂತ ವಾಗ್ದೇವತೆಯ ಒಡೆಯ. ಮೂಲತಃ ವಾಗ್ದೇವತೆ ಸಮಸ್ತ ವೇದಮಾನಿನಿಯಾದ ಲಕ್ಷ್ಮಿ. ಇಂತಹ ವಾಗ್ದೇವತೆಯ ಒಡೆಯ ಭಗವಂತ ವಾಚಸ್ಪತಿಃ

ಸಮಸ್ತ ವೇದದ ಸಾರವನ್ನು ಭಗವದ್ಗೀತೆಯ ಮುಖೇನ ಉಪದೇಶ ಮಾಡಿದ, ಹಾಗೂ ಅದನ್ನೇ ಶಬ್ದರೂಪದಲ್ಲಿ ಸೆರೆ ಹಿಡಿದ ವ್ಯಾಸ ರೂಪಿ ಭಗವಂತ ವಾಚಸ್ಪತಿಃ

೫೭೮) ಅಯೋನಿಜಃ

ತಾಯ ಬಸಿರಿನಿಂದ ಹುಟ್ಟದವನು ಅಯೋನಿಜಃ. ಕೃಷ್ಣ-ದೇವಕಿಯಲ್ಲಿ, ರಾಮ-ಕೌಸಲ್ಯಯಲ್ಲಿ, ವಾಮನ-ಅದಿತಿಯಲ್ಲಿ, ವೇದವ್ಯಾಸ-ಸತ್ಯವತಿಯಲ್ಲಿ ಹುಟ್ಟಿದರು. ಆದರೆ ವಾಸ್ತವಿಕವಾಗಿ ಭಗವಂತ ಅಯೋನಿಜಃ(ಜನನ ಇಲ್ಲದವ). ಇದನ್ನು ಸ್ಪಷ್ಟವಾಗಿ ಆತನ ನರಸಿಂಹ, ಕೂರ್ಮ, ಮತ್ಸ್ಯ, ವರಾಹ ಇತ್ಯಾದಿ ಅವತಾರಗಳಲ್ಲಿ ಕಾಣಬಹುದು. ಆತ ತಾಯಿ ಬಸಿರಿನಿಂದ ಹುಟ್ಟುವುದಿಲ್ಲ, ಆದರೆ ನಮಗೆ ಹಾಗೆ ಕಾಣಿಸಿಕೊಳ್ಳುತ್ತಾನೆ. ಆತನಿಗೆ ಜನನವೆಂಬುದೊಂದಿಲ್ಲ. ಆತ ನಮಗೆ ಕಾಣಿಸಿಕೊಳ್ಳುವುದನ್ನು ನಾವು ಆತನ ಜನನ ಎಂದು ತಿಳಿಯುತ್ತೇವೆ ಅಷ್ಟೇ.

ತ್ರಿಸಾಮಾ ಸಾಮಗಃ ಸಾಮ ನಿರ್ಬಾಣಂ ಭೇಷಜಂ ಭಿಷಕ್ ।
ಸನ್ನ್ಯಾಸಕೃಚ್ಛಮಶ್ಯಾಂತೋ ನಿಷ್ಠಾ ಶಾಂತಿಃ ಪರಾಯಣಮ್ ॥೭೫॥

೫೭೯) ತ್ರಿಸಾಮಾ

ಈ ಹಿಂದೆ ಹೇಳಿದಂತೆ ಹಿಂದಿನ ಕಾಲದಲ್ಲಿ ಯಜ್ಞ ಮಾಡುವಾಗ ಮೂರು ಹೊತ್ತು ಆಹುತಿ ಕೊಡುತ್ತಿದ್ದರು. ಮೂರು ಹೊತ್ತು ದೇವರನ್ನು ಋಗ್ವೇದದ ಮಂತ್ರಗಳಿಂದ ಸ್ತೋತ್ರ ಮಾಡುತ್ತಿದ್ದರು. ಅದಕ್ಕೆ 'ಶಸ್ತ್ರ' ಎಂದು ಹೆಸರು. ಬೆಳಿಗ್ಗೆ ಅಷ್ಟ ವಸುಗಳಿಗೆ ಸಂಬಂಧಪಟ್ಟ 'ವಾಸವಸಾಮ'; ಮಧ್ಯಾಹ್ನ ಹನ್ನೊಂದು ರುದ್ರರಿಗೆ ಸಂಬಂಧಪಟ್ಟ 'ರೌದ್ರಸಾಮ'. ಸಂಜೆ ಹನ್ನೆರಡು ಮಂದಿ ಆದಿತ್ಯರಿಗೆ ಸಂಬಂಧಪಟ್ಟ 'ಆದಿತ್ಯಸಾಮ'. ಹೀಗೆ ಮೂರು ಹೊತ್ತು ಮೂರುವಿಧದ ಸಾಮದಿಂದ ಹೊಗಳಲ್ಪಡುವ ಭಗವಂತ ತ್ರಿಸಾಮಾ.

ಮೂರು ವಸ್ತುಗಳನ್ನು (ಸತ್ವ, ರಜಸ್ಸು, ತಮಸ್ಸು ಅಥವಾ ಮಣ್ಣು, ನೀರು, ಬೆಂಕಿ) ಸಮೀಕರಿಸಿ ಸಮಸ್ತ ಪ್ರಪಂಚವನ್ನು ಸೃಷ್ಟಿ ಮಾಡಿದ ಭಗವಂತ ತ್ರಿಸಾಮ.

೫೮೦) ಸಾಮಗಃ

ಸಾಮವೇದದ ಮಂತ್ರವನ್ನು ಗಾನಬದ್ಧವಾಗಿ ಹಾಡುವವರು ಸಾಮಗರು. ಭಗವಂತ ಮೊದಲು ಹಯಗ್ರೀವ ರೂಪದಲ್ಲಿ ಸಮಸ್ತ ವೇದವನ್ನು ಉಚ್ಛಾರ ಮಾಡಿದವ. ಹೀಗೆ ಸಾಮವನ್ನು ಗಾನಮಾಡಿ ಆವಿಷ್ಕಾರ ಮಾಡಿದ ಭಗವಂತ ಸಾಮಗಃ.

೫೮೧) ಸಾಮ

ವೇದದಲ್ಲಿ ಸಾಮವೇದ ನನಗೆ ಬಲು ಇಷ್ಟ, ಅದಕ್ಕಾಗಿ ಅದರಲ್ಲಿ ವಿಶೇಷವಾಗಿ ಸನ್ನಿಹಿತನಾಗಿದ್ದೇನೆ ಎಂದು ಗೀತೆಯಲ್ಲಿ ಕೃಷ್ಣ ಹೇಳಿದ್ದಾನೆ:

ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ (ಅ-೧೦, ಶ್ಲೋ-೨೨)

ಇಲ್ಲಿ 'ಸಾಮ' ಎಂದರೆ ಎಲ್ಲೆಡೆಯೂ ಸಮನಾಗಿದ್ದು ಎಂದರ್ಥ. 'ವೇದ' ಎಂದರೆ ಜ್ಞಾನ. ಜ್ಞಾನ ರೂಪನಾದ್ದರಿಂದ 'ಸಾಮವೇದ' ಎನ್ನಿಸಿ ಸಾಮವೇದದಲ್ಲಿದ್ದೇನೆ ಎನ್ನುವುದು ಕೃಷ್ಣನ ಈ ಮಾತಿನ ತಾತ್ಪರ್ಯ. ವೇದಗಳೆಲ್ಲವೂ ಅಪೂರ್ವವಾಗಿದ್ದರೂ ಕೂಡಾ ಸಾಮವನ್ನು ಏಕೆ ವಿಶೇಷವಾಗಿ ಹೇಳಿದ್ದಾರೆ ಎನ್ನುವ ಪ್ರಶ್ನೆ ನಿಮ್ಮಲ್ಲಿ ಬರಬಹುದು. ಕಾರಣವೇನೆಂದರೆ, ವೇದದಲ್ಲಿ ತಾರತಮ್ಯವಿಲ್ಲ ಆದರೆ ವೇದಾಭಿಮಾನಿಗಳಲ್ಲಿ ತಾರತಮ್ಯವಿದೆ! ಸಾಮ ವೇದದ ಅಭಿಮಾನಿ ಪ್ರಾಣದೇವರು. ಶಾಸ್ತ್ರಕಾರರು ಹೇಳುವಂತೆ ಸಾಮಗಾನವನ್ನು ಅತ್ಯಂತ ಮಧುರವಾಗಿ ಹಾಡುವವರು ಪ್ರಾಣದೇವರು. ಭಗವಂತನಿಗೆ ಅತಿಪ್ರಿಯನಾದ ಪ್ರಾಣದೇವರ ಹಾಡು 'ಸಾಮಗಾನ' ಭಗವಂತನಿಗೆ ಅತೀ ಇಷ್ಟ.

ಸಾಮದಲ್ಲಿ ಇನ್ನೊಂದು ವಿಶೇಷವಿದೆ. ಋಗ್ವೇದ ಮತ್ತು ಯಜುರ್ವೇದದಲ್ಲಿ ಮಂತ್ರಗಳ ಹಾಗೂ ಶಬ್ದಗಳ ಮುಖೇನ ಭಗವಂತನ ಸ್ತುತಿಯಾದರೆ, ಸಾಮವೇದದಲ್ಲಿ ಶಬ್ದದ ಜೊತೆಗೆ ನಾದವನ್ನು ಭಗವಂತನಲ್ಲಿ ಸಮನ್ವಯಗೊಳಿಸುವ ಅಪೂರ್ವ ಗುಣಧರ್ಮವಿದೆ (Exclusive quality). ಶಬ್ದಗಳ ಹಿಂದಿನ ನಾದದಿಂದ ಭಗವಂತನನ್ನು ಕಾಣುವ ನಾದೋಪಾಸನೆ ಇರುವ ವೇದ ಸಾಮವೇದವಾದ್ದರಿಂದ ಭಗವಂತ ಸಾಮದಲ್ಲಿ ವಿಶೇಷವಾಗಿ ಸನ್ನಿಹಿತನಾಗಿದ್ದಾನೆ. ಈ ಎಲ್ಲಾ ಕಾರಣದಿಂದ 'ಸಾಮ' ಭಗವಂತನ ಅನ್ವರ್ಥ ನಾಮ.

೫೮೨) ನಿರ್ಬಾಣಂ

ಪಾಂಚಭೌತಿಕ ಶರೀರವಿಲ್ಲದ ಜ್ಞಾನಾನಂದಮಯ ಸ್ವರೂಪ ಭಗವಂತ ನಿರ್ಬಾಣಂ.

೫೮೩) ಭೇಷಜಮ್

ಸಂಸಾರವೆಂಬ ರೋಗಕ್ಕೆ ಏಕಮಾತ್ರ ಮದ್ದು ಭಗವಂತ ಭೇಷಜಮ್

೫೮೪) ಭಿಷಕ್

ಸರ್ವ ರೋಗಗಳಿಗೆ ಮದ್ದು ನೀಡುವ ವೈದ್ಯರ ವೈದ್ಯ ಭಗವಂತ ಭಿಷಕ್.

೫೮೫) ಸನ್ನ್ಯಾಸಕೃತ್

ಸನತ್ ಕುಮಾರನಾಗಿ, ನರ-ನಾರಾಯಣ ರೂಪಿಯಾಗಿ ನಮಗೆ ನಿಜವಾದ ಸಂನ್ಯಾಸಿಯ ಬದುಕನ್ನು ಬದುಕಿ ತೋರಿಸಿದ ಭಗವಂತ ಸನ್ನ್ಯಾಸಕೃತ್. ನಿಜವಾದ ಸಂನ್ಯಾಸ ಎಂದರೆ ಕಾಮವನ್ನು ಹಾಗೂ ಕ್ರೋಧವನ್ನು ಸಂಪೂರ್ಣ ಬಿಡುವುದು. ಕಾಮವೇ ಕ್ರೋಧಕ್ಕೆ ಕಾರಣ. ಈಡೇರದ ಆಸೆಯಿಂದ ಮನಸ್ಸಿನಲ್ಲಿ ಉಂಟಾಗುವ ವಿಕಾರ 'ಕೋಪ'. ಪ್ರಪಂಚ ನಾವು ಬಯಸಿದಂತೆ ಎಂದೂ ಇರುವುದಿಲ್ಲ, ಹೀಗಿರುವಾಗ ಹೀಗೇ ಆಗಬೇಕು ಎಂದು ಬಯಸುವುದು ಮೂರ್ಖತನ. ಜಗತ್ತಿನಲ್ಲಿ ಏನು ನಡೆಯುತ್ತಿದೆಯೋ ಅದನ್ನು ಹಾಗೇ ಸ್ವೀಕರಿಸುವುದು ಧರ್ಮ. ಸಮುದ್ರದಲ್ಲಿ ಅಲೆಗಳು, ತರಂಗಗಳು ನಿರಂತರ ಹಾಗೂ ಅನಿವಾರ್ಯ. ಆದ್ದರಿಂದ ತೆರೆಯ ಜೊತೆಗೆ ಸ್ನಾನ ಮಾಡುವುದನ್ನು ಅಭ್ಯಾಸ ಮಾಡಬೇಕೇ ಹೊರತು, ತೆರೆ ನಿಂತ ಮೇಲೆ ಸ್ನಾನ ಮಾಡುತ್ತೇನೆ ಎಂದರಾಗದು. ಬದುಕೂ ಕೂಡಾ ಅಷ್ಟೇ.

ಪ್ರಪಂಚ ಸಮುದ್ರದ ಅಲೆಗಳಂತೆ. ಜೀವನದಲ್ಲಿ ಏನು ಘಟಿಸಿತೋ ಅದಕ್ಕೆ ಒಗ್ಗಿಕೊಂಡು ಬದುಕಬೇಕೇ ಹೊರತು ಜಗತ್ತನ್ನು ನಮ್ಮ ಇಚ್ಛೆಯಂತೆ ಬಯಸುವುದು ತಪ್ಪು. ಹೀಗೆ ಜಗತ್ತಿನ ಅಲೆಗಳಿಗೆ ಒಗ್ಗಿಕೊಂಡು ಬದುಕುವುದು ಒಬ್ಬ ಸಂಸಾರಿಯ ಸಂನ್ಯಾಸ! ಇಂತದ್ದು ಬೇಕು ಎಂದು ಬಯಸದೇ ಇದ್ದದ್ದರಲ್ಲಿ ಖುಷಿ ಪಡುವುದು, ಏನೇ ಬಂದರೂ ಧೃತಿಗೆಡದೆ, ಬದುಕಿನ ಸಂಪೂರ್ಣ ಹೊಣೆಗಾರಿಕೆಯನ್ನು ಭಗವಂತನಿಗೆ ಬಿಟ್ಟುಬಿಡುವುದು ಸಂನ್ಯಾಸ. ಇಡೀ ಬದುಕನ್ನು, ಸರ್ವಸ್ವವನ್ನು, ಸರ್ವ ಕರ್ಮವನ್ನು ಭಗವಂತನಿಗೆ ಅರ್ಪಿಸುವುದು ಸಂನ್ಯಾಸ.

೫೮೬) ಶಮಃ

ಮನಸ್ಸನ್ನು ಸದಾ ಭಗವಂತನಲ್ಲಿಡುವುದು, ಯಾವ ಚಿಂತೆಯೂ ಇಲ್ಲದೆ ನೆಮ್ಮದಿಯಿಂದಿರುವುದು-ಪ್ರತಿಯೊಬ್ಬ ಮನುಷ್ಯ ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದ ಗುಣಧರ್ಮ. ಒಳ್ಳೆಯ ವ್ಯಕ್ತಿತ್ವ ಹೊಂದಿದ ಅಥವಾ ಒಳ್ಳೆಯ ಜೀವಸ್ವಭಾವವಿರುವವರಿಗೆ ಇಂತಹ ಗುಣಗಳನ್ನು ದಯಪಾಲಿಸುವ ಭಗವಂತ ಶಮಃ. ಇದಕ್ಕಾಗಿ ಸಂನ್ಯಾಸಿಯಾಗಬೇಕೆಂದೇನಿಲ್ಲ. ಗೃಹಸ್ಥ ಕೂಡಾ ಅನುಸರಿಸಬಹುದಾದ ಗುಣವಿದು. ಇದಕ್ಕೆ ಉತ್ತಮ ಉದಾಹರಣೆ ಧರ್ಮವ್ಯಾದ. ಮಾಂಸ ಮಾರಿ ಜೀವಿಸುತ್ತಿದ್ದ ವ್ಯಾದನಲ್ಲಿ ಇಂತಹ ಗುಣವಿತ್ತು. ಲೋಕದಲ್ಲಿ ನಡೆಯುವ ಪ್ರತಿಯೊಂದು ಘಟನೆಯ ಹಿಂದೆ ಒಂದು ಕಾರಣವಿರುತ್ತದೆ. ಭಗವಂತ ಎಂದೂ ಕೆಟ್ಟದ್ದನ್ನು ಕೊಡುವುದಿಲ್ಲ. ಆತ ಕೊಡುವುದೆಲ್ಲ ಪ್ರಸಾದ ಎಂದು ಸ್ವೀಕರಿಸುವ ಗುಣ ನಮ್ಮಲ್ಲಿರಬೇಕು ಅಷ್ಟೇ.

೫೮೭) ಶಾಂತಃ

'ಶಂ' ಎಂದರೆ ಆನಂದ; 'ಅಂತ' ಎಂದರೆ ತುತ್ತತುದಿ. ಆನಂದದ ಪರಾಕಾಷ್ಠೆಯಲ್ಲಿರುವ ಭಗವಂತ ಶಾಂತಃ

೫೮೮) ನಿಷ್ಠಾ

ಜಗತ್ತಿನಲ್ಲಿರುವ ಎಲ್ಲವೂ ಏಲ್ಲಿ ಕೊನೆಗೊಳ್ಳುತ್ತದೋ, ಯಾವುದು ಸರ್ವಾಧಾರವೋ, ಅಂತಹ ನಿತ್ಯಸತ್ಯ ಭಗವಂತ ನಿಷ್ಠಾ.

೫೮೯) ಶಾಂತಿಃ

ಜ್ಞಾನಾನಂದಬಲದ ಪರಿಪೂರ್ಣ ಸಮಷ್ಠಿ ಭಗವಂತ ಶಾಂತಿಃ. ಈ ಕಾರಣಕ್ಕಾಗಿ ವೇದಗಳಲ್ಲಿ ಮೊದಲಿಗೆ ಶಾಂತಿ ಮಂತ್ರ ಪಠನೆ ಮಾಡುತ್ತೇವೆ.

೫೯೦) ಪರಾಯಣಮ್

ಪರಾಯಣಮ್ ಎಂದರೆ ಸರ್ವೋತ್ಕೃಷ್ಟವಾದ ತುತ್ತ ತುದಿ, ಕೊನೇಯ ಆಸರೆ (last destination). ಎಲ್ಲಾ ಮೆಟ್ಟಿಲುಗಳನ್ನು ಹತ್ತಿ ಕೊನೆಗೆ ತಲುಪುವ ತುತ್ತ ತುದಿ.

ಶುಭಾಂಗಃ ಶಾಂತಿದಃ ಸ್ರಷ್ಟಾ ಕುಮುದಃ ಕುವಲೇಶಯಃ ।
ಗೋಹಿತೋ ಗೋಪತಿರ್ಗೋಪ್ತಾ ವೃಷಭಾಕ್ಷೋ ವೃಷಪ್ರಿಯಃ ॥೭೬॥

೫೯೧) ಶುಭಾಂಗಃ

ಮಂಗಳಕರವಾದ ಅಂಗಾಂಗಗಳುಳ್ಳವನು ಹಾಗೂ ಆನಂದಮಯವಾದ ಬೆಳಕಿನ ರೂಪ ಭಗವಂತ ಶುಭಾಂಗಃ. ಸಮಷ್ಠಿಯಾಗಿ ಆತನ ಇಡೀ ದೇಹ ಆನಂದಮಯವಾದ ಬೆಳಕಿನ ಮಾಂಗಲಿಕ ರೂಪ. ಆತ ನಮ್ಮೊಳಗಿರುವ ತನಕ ನಮ್ಮ ದೇಹ ಮಂಗಳ (ಶಿವ). ಆತ ಹೊರಟು ಹೋದ ಮೇಲೆ ಶವ! ಆತನ ಸನ್ನಿಧಾನವಿಲ್ಲದ ದೇಹ ಅಮಂಗಳ.

'ಶುಭಾಂಗ' ಎನ್ನುವಲ್ಲಿ 'ಶು' ಎಂದರೆ ಸುಖಸ್ವರೂಪ, 'ಭ' ಎಂದರೆ ಬೆಳಕಿನಪುಂಜ. ಕತ್ತಲು ಹಾಗೂ ದುಃಖದ ಸ್ಪರ್ಶವೇ ಇಲ್ಲದ ಆನಂದಮಯ ಅವಯವಗಳುಳ್ಳ ಜ್ಯೋತಿರ್ಮಯ ಭಗವಂತ ಶುಭಾಂಗಃ.

೫೯೨) ಶಾಂತಿದಃ

ಮೋಕ್ಷವನ್ನು, ಅಜ್ಞಾನದ ಸ್ಪರ್ಶವಿಲ್ಲದ ಪರಿಪೂರ್ಣ ಆನಂದವನ್ನು ಕೊಟ್ಟು, ನಮ್ಮನ್ನು ಸಂಸಾರ ಬಂಧದಿಂದ ಬಿಡಿಸುವ ಭಗವಂತ ಶಾಂತಿದಃ

೫೯೩) ಸ್ರಷ್ಟಾ

ಸೂಕ್ಷ್ಮ ರೂಪಿ ಪರಮಾಣುಗಳ ಪುಂಜದಿಂದ ಸ್ಥೂಲರೂಪದ ಈ ಪ್ರಪಂಚವನ್ನು ಸೃಷ್ಟಿಸಿದ ಭಗವಂತ ಸ್ರಷ್ಟಾ.

೫೯೪) ಕುಮುದಃ

'ಮುದ' ಅಂದರೆ ಆನಂದ; 'ಕು' ಎಂದರೆ ಭೂಮಂಡಲ. ಭೂಮಿಗೆ ಆನಂದವನ್ನು ಕೊಡುವುದಕ್ಕೋಸ್ಕರ ಇಳಿದು ಬಂದ ಭಗವಂತ ಕುಮುದಃ

೫೯೫) ಕುವಲೇಶಯಃ

'ಕು' ಎಂದರೆ ಭೂಮಿ, 'ವಲ' ಎಂದರೆ ಹರಿಯುವುದು. ಪಂಚಭೂತಗಳಲ್ಲಿ ಹರಿಯುವುದು ನೀರು. ಆದ್ದರಿಂದ 'ಕುವಲ' ಎಂದರೆ ನೀರು. ಕುವಲೇಶಯ ಎಂದರೆ ನೀರಿನಲ್ಲಿ ಮಲಗಿದವನು. ಇಲ್ಲಿ 'ನೀರು' ಎಂದರೆ ಸೂಕ್ಷ್ಮರೂಪಿ ಪ್ರಳಯ ಸಮುದ್ರ. ಇಂತಹ ಸೂಕ್ಷ್ಮ ಪ್ರಪಂಚದಲ್ಲಿ ಮಲಗಿದ ಭಗವಂತ ಕುವಲೇಶಯಃ.

೫೯೬) ಗೋಹಿತಃ

'ಗೋವು' ಎನ್ನುವ ಪದವನ್ನು ಹಿಂದೆ ಅನೇಕ ಬಾರಿ ವಿಶ್ಲೇಷಿಸಿದ್ದೇವೆ. ಎಲ್ಲಾ ಬಗೆಯಿಂದಲೂ ನಮಗೆ ಉಪಯೋಗಕ್ಕೆ ಬರುವ ವಸ್ತು ಗೋವು. ಈ ಪದಕ್ಕೆ ಅನೇಕ ಅರ್ಥಗಳಿವೆ. ಸ್ವರ್ಗ, ಸೂರ್ಯ, ಹಸು, ಭೂಮಿ, ನೀರು, ಕಣ್ಣು, ಕೂದಲು, ವೇದ ಇತ್ಯಾದಿ. ನಮಗೆ ಮಾರ್ಗದರ್ಶನ ಮಾಡುವ ವೇದಗಳನ್ನು ನಮಗೆ ಕರುಣಿಸಿದ ವೇದವಾಙ್ಮಯ, ಭೂಮಿಗೆ ಹಿತಕಾರಿಯಾದ, ಗುಂಗುರು ಕೂದಲಿನ ಗೋವಳನಾಗಿ, ಎಲ್ಲರಿಗೂ ಹಿತವನ್ನುಂಟು ಮಾಡಿದ ಭಗವಂತ ಗೋಹಿತಃ.

೫೯೭) ಗೋಪತಿಃ

ಗೋವುಗಳ, ಭೂಮಿಯ, ವೇದದ ಹಾಗೂ ಸ್ವರ್ಗದ ಒಡೆಯ ಭಗವಂತ ಗೋಪತಿಃ.

೫೯೮) ಗೋಪ್ತಾ

ತನ್ನನ್ನು ತಾನು ಮುಚ್ಚಿಟ್ಟುಕೊಂಡು ಜಗತ್ತಿನ ರಕ್ಷಣೆ ಮಾಡುವ ಭಗವಂತ ಗೋಪ್ತಾ. ಎಲ್ಲೆಡೆ ಇದ್ದು ಎಲ್ಲರನ್ನೂ ಕಾಪಾಡುವ ಕರುಣಾಮೂರ್ತಿ ಆತ.

೫೯೯) ವೃಷಭಾಕ್ಷಃ

ವೃಷಭ-ಅಕ್ಷ ಅಂದರೆ ಧರ್ಮದ ಮೇಲೆ ಕಣ್ಣಿಟ್ಟು ಅದರ ರಕ್ಷಣೆಗೋಸ್ಕರ ಪದೇ ಪದೇ ಭೂಮಿಗೆ ಅವತಾರ ರೂಪಿಯಾಗಿ ಇಳಿದು ಬರುವವ. ಭಗವಂತ ಸ್ವತಃ ಭೂಮಿಗಿಳಿದು ಬರಬಹುದು ಅಥವಾ ಮಹಾ ಪುರುಷರನ್ನು, ಸಾತ್ವಿಕರನ್ನು ಕಳುಹಿಸಬಹುದು. ಅವರೊಳಗೆ ವಿಶೇಷ ಸನ್ನಿಧಾನವನ್ನಿಟ್ಟು ಧರ್ಮ ರಕ್ಷಣೆ ಮಾಡುವ ಭಗವಂತ ವೃಷಭಾಕ್ಷಃ.

ಸಹಸ್ರನಾಮ ವಿವರಣೆ-೬೦೦

೬೦೦) ವೃಷಪ್ರಿಯಃ

ಧರ್ಮದ ನಡೆಯನ್ನು ಪ್ರೀತಿಸುವ ಭಗವಂತ ವೃಷಪ್ರಿಯಃ.

ಅನಿವರ್ತೀ ನಿವೃತ್ತಾತ್ಮಾ ಸಂಕ್ಷೇಪ್ತಾ ಕ್ಷೇಮಕೃಚ್ಛಿವಃ ।
ಶ್ರೀವತ್ಸವಕ್ಷಾಃ ಶ್ರೀವಾಸಃ ಶ್ರೀಪತಿಃ ಶ್ರೀಮತಾಂವರಃ ॥೬೬॥

೬೦೧) ಅನಿವರ್ತೀ

ಹಿಡಿದ ಕಾರ್ಯವನ್ನು ಎಂದೂ ಅಪೂರ್ಣ ಮಾಡದ, ಎಂದೂ ಮಾತಿಗೆ ತಪ್ಪದ ಭಗವಂತ ಅನಿವರ್ತೀ. ಜೀವರಲ್ಲಿ ನೆಲೆಸಿದ ಆತ ಮುಕ್ತರನ್ನು ಎಂದೂ ಸಂಸಾರಕ್ಕೆ ಮರಳಿಸುವುದಿಲ್ಲ.

೬೦೨) ನಿವೃತ್ತಾತ್ಮಾ

ಭಗವಂತನಿಗೆ ದೇವತೆಗಳ ಮೇಲೆ ಪ್ರೀತಿಯೂ ಇಲ್ಲ, ದೈತ್ಯರ ಮೇಲೆ ದ್ವೇಷವೂ ಇಲ್ಲ. ಆತನಿಗೆ ಯಾವುದರ ಮೇಲೂ ಮೋಹವಿಲ್ಲ. ಎಲ್ಲಿ ಧರ್ಮವಿದೆಯೋ ಅದನ್ನು ಪ್ರೀತಿಸುವ ಭಗವಂತ, ಎಲ್ಲಾ ಬಂಧಗಳಿಂದಾಚೆಗಿನ ತಟಸ್ಥ ಸ್ವರೂಪ.

೬೦೩) ಸಂಕ್ಷೇಪ್ತಾ

ವಿಶ್ವವನ್ನು ಪ್ರಳಯ ಕಾಲದಲ್ಲಿ ಸಂಕುಚಗೊಳಿಸುವವನು ಸಂಕ್ಷೇಪ್ತಾ. ಪ್ರಳಯ ಕಾಲದಲ್ಲಿ ಮಣ್ಣು-ನೀರಿನಲ್ಲಿ, ನೀರು-ಬೆಂಕಿಯಲ್ಲಿ, ಬೆಂಕಿ-ಗಾಳಿಯಲ್ಲಿ, ಗಾಳಿ-ಆಕಾಶದಲ್ಲಿ, ಆಕಾಶ-ಆತ್ಮನಲ್ಲಿ ಸಂಕುಚಗೊಂಡು ಸೂಕ್ಷ್ಮಸ್ಥಿತಿಯನ್ನು ತಲುಪುತ್ತದೆ. ಹೀಗೆ ತನ್ನ ಸೃಷ್ಟಿಯನ್ನು ಸಂಹಾರ ಮಾಡುವ ಭಗವಂತ ಸಂಕ್ಷೇಪ್ತಾ.

೬೦೪) ಕ್ಷೇಮಕೃಚ್ಛಿವಃ

ಸಜ್ಜನರಿಗೆ ಕ್ಷೇಮವನ್ನೀಯುವ, ದುರ್ಜನರ ಕ್ಷೇಮವನ್ನು ಇಲ್ಲವಾಗಿಸುವ ಮಂಗಳ ಸ್ವರೂಪ ಭಗವಂತ ಕ್ಷೇಮಕೃಚ್ಛಿವಃ. ನಮಗೆ ಜೀವನ ಕೊಟ್ಟು, ಕ್ಷೇಮ ಕೊಟ್ಟವ. ನಾವು ಏನನ್ನು ಪಡೆದಿದ್ದೇವೋ ಅದನ್ನು ಉಳಿಸಿಕೊಳ್ಳಲು ನೆರವನ್ನೀಯುವವ, ನಮ್ಮನ್ನು ಸಂಸಾರ ಬಂಧದಿಂದ ಬಿಡಿಸಿ ಅತಿದೊಡ್ಡ ಕ್ಷೇಮವಾದ ಮೋಕ್ಷವನ್ನು ಕರುಣಿಸುವ ಪರಮಮಂಗಳ ಜ್ಞಾನಾನಂದಬಲಸ್ವರೂಪಿ ಭಗವಂತ ಕ್ಷೇಮಕೃಚ್ಛಿವಃ.

೬೦೫) ಶ್ರೀವತ್ಸವಕ್ಷಾಃ

ಭಗವಂತನ ಬಲಎದೆಯಲ್ಲಿ ಶ್ರೀವತ್ಸ ಮಚ್ಚೆಯಿದೆ. ಇದು ಲಕ್ಷ್ಮೀ ಸ್ವರೂಪ. ಸದಾ ಲಕ್ಷ್ಮಿಯನ್ನು ಎದೆಯಲ್ಲಿ ಧರಿಸಿದ ಭಗವಂತ ಶ್ರೀವತ್ಸವಕ್ಷಾಃ.

೬೦೬) ಶ್ರೀವಾಸಃ

ಯಾರ ಎದೆಯಲ್ಲಿ ಲಕ್ಷ್ಮಿ ಲಕ್ಷಣವಾಗಿ ಕುಳಿತಿದ್ದಾಳೋ ಅವನು ಶ್ರೀವಾಸಃ

೬೦೭) ಶ್ರೀಪತಿಃ

ಲಕ್ಷ್ಮಿಯ ಪತಿ ಹಾಗೂ ಸಮಸ್ತ ವೇದಗಳ ಒಡೆಯ ಭಗವಂತ ಶ್ರೀಪತಿಃ.

೬೦೮) ಶ್ರೀಮತಾಂವರಃ

ಜಗತ್ತಿನಲ್ಲಿರುವ ಶ್ರೀಮಂತರಲ್ಲಿ ಸರ್ವ ಶ್ರೇಷ್ಠ ಶ್ರೀಮಂತ, ಸರ್ವಶ್ರೇಷ್ಠ ಜ್ಞಾನಿ ಶ್ರೀಮತಾಂವರಃ

ಶ್ರೀದಃ ಶ್ರೀಶಃ ಶ್ರೀನಿವಾಸಃ ಶ್ರೀನಿಧಿಃ ಶ್ರೀವಿಭಾವನಃ ।
ಶ್ರೀಧರಃ ಶ್ರೀಕರಃ ಶ್ರೇಯಃ ಶ್ರೀಮಾನ್ ಲೋಕತ್ರಯಾಶ್ರಯಃ ॥೭೮॥

೬೦೯) ಶ್ರೀದಃ

ಸಿರಿಯನ್ನೀಯುವವನು

೬೧೦) ಶ್ರೀಶಃ

ಸರ್ವ ಸಿರಿಯ, ಸರ್ವ ವೇದದ ಅಧಿಪತಿ

೬೧೧) ಶ್ರೀನಿವಾಸಃ

ವೇದದಲ್ಲಿ ಸನ್ನಿಹಿತನಾದ, ಲಕ್ಷ್ಮಿಯ ಅಂತರ್ಗತ ಭಗವಂತ

೬೧೨) ಶ್ರೀನಿಧಿಃ

ನಮಗೆ ಅಮೂಲ್ಯವಾದ ಐದು ನಿಧಿಯನ್ನು (ಕಣ್ಣು, ಮೂಗು, ಬಾಯಿ, ಕಿವಿ, ಮನಸ್ಸು) ಕರುಣಿಸಿದ ಸಿರಿಯ ನೆಲೆ ಭಗವಂತ ಶ್ರೀನಿಧಿಃ.

೬೧೩) ಶ್ರೀವಿಭಾವನಃ

ಶ್ರಿದೇವಿಗೂ ಕಾರಣಪುರುಷ, ಜಗತ್ತಿಗೆ ಐದು ಬಗೆಯ ಶ್ರೀಯನ್ನು ಕೊಟ್ಟು ಉದ್ಧಾರ ಮಾಡಿದ ಭಗವಂತ ಶ್ರೀವಿಭಾವನಃ

೬೧೪) ಶ್ರೀಧರಃ

ಶ್ರೀಯನ್ನು ಧರಿಸಿದವನು. ಎದೆಯಲ್ಲಿ ಹಾಗೂ ತೊಡೆಯಲ್ಲಿ ಶ್ರಿಲಕ್ಷ್ಮಿಯನ್ನು ಧರಿಸಿದ ಭಗವಂತ ಸಮಸ್ತ ವೇದವನ್ನು ಧಾರಣೆ ಮಾಡಿದ ಶ್ರೀಧರಃ.

೬೧೫) ಶ್ರೀಕರಃ

ನಮಗೆ ಇಂದ್ರಿಯವನ್ನು, ಜ್ಞಾನ ಸಂಪತ್ತನ್ನು ಕೊಟ್ಟ ಭಗವಂತ ಶ್ರೀಕರಃ.

೬೧೬) ಶ್ರೇಯಃ

ಭಗವಂತ ಶ್ರೇಯಸ್ಸಿನ ಸ್ವರೂಪ. ಜಗತ್ತಿನ ಪರಮಕಲ್ಯಾಣ ಮಂಗಳ ಸ್ವರೂಪ, ಎಲ್ಲಕ್ಕಿಂತ ಹಿರಿಯ ಹಿತಕಾರಿ ಭಗವಂತ ಶ್ರೇಯಃ.

೬೧೭) ಶ್ರೀಮಾನ್

ಸಿರಿವಂತ; ಅರಿವಿನ ನೆಲೆ.

೬೧೮) ಲೋಕತ್ರಯಾಶ್ರಯಃ

ಮೂರು ಲೋಕದ ಆಸರೆ; ಬ್ರಹ್ಮಾಂಡವನ್ನು ಧಾರಣೆ ಮಾಡಿದ ಶಕ್ತಿ.

ಸ್ವಕ್ಷಃ ಸ್ವಂಗಃ ಶತಾನಂದೋ ನಂದಿರ್ಜ್ಯೋತಿರ್ಗಣೇಶ್ವರಃ ।
ವಿಜಿತಾತ್ಮಾ ವಿಧೇಯಾತ್ಮಾ ಸತ್ಕೀರ್ತಿಶ್ಛಿನ್ನಸಂಶಯಃ ॥೭೯॥

೬೧೯) ಸ್ವಕ್ಷಃ

ಸು+ಅಕ್ಷ; ದೋಷರಹಿತ ಸ್ವರೂಪಭೂತವಾದ ಕಣ್ಣುಳ್ಳವನು.

೬೨೦) ಸ್ವಂಗಃ

ಸು+ಅಂಗಃ; ಭಗವಂತನ ಸಮಸ್ತ ಅಂಗಗಳೂ ಆನಂದಮಯ, ಜ್ಞಾನಮಯ ಹಾಗೂ ಸುಖ ಸ್ವರೂಪ.

೬೨೧) ಶತಾನಂದಃ.

ಶತ+ಆನಂದ; ಇಲ್ಲಿ ಶತ ಅಂದರೆ ನೂರಾರು ಅಥವಾ ಅನಂತ. ಅನಂತ ಆನಂದರೂಪಿ ಭಗವಂತ ಶತಾನಂದಃ

೬೨೨) ನಂದಿಃ.

ಪೂರ್ಣಾನಂದ ಸ್ವರೂಪ.

೬೨೩) ಜ್ಯೋತಿರ್ಗಣೇಶ್ವರಃ

ಎಲ್ಲಾ ಬೆಳಕುಗಳ ಒಡೆಯ; ಜ್ಞಾನಾನಂದಮಯವಾದ ಬೆಳಕನ್ನು ಕೊಟ್ಟು ನಮ್ಮನ್ನು ಅಜ್ಞಾನ ಪ್ರಪಂಚದಿಂದ ಜ್ಞಾನದೆಡೆಗೆ ಕೊಂಡೊಯ್ಯುವ ಭಗವಂತ ಜ್ಯೋತಿರ್ಗಣೇಶ್ವರಃ.

೬೨೪) ವಿಜಿತಾತ್ಮಾ

ಮನಸ್ಸನ್ನು ಗೆದ್ದವನು, ಅಂದರೆ ಸಾಧಕ ಯಾರ ಕೃಪೆಯಿಂದ ತನ್ನ ಮನಸ್ಸನ್ನು ಗೆಲ್ಲಬಲ್ಲನೋ ಅವನು ವಿಜಿತಾತ್ಮಾ. 'ಆತ್ಮ' ಎಂದರೆ ಜೀವಗಳು; ಎಲ್ಲಾ ಜೀವರನ್ನು ಗೆದ್ದ ಭಗವಂತ, ಯಾರನ್ನು ಸ್ವೀಕಾರ ಮಾಡುತ್ತಾನೋ ಅವನ ಮನಸ್ಸು ಮಾತ್ರ ಭಗವಂತನೆಡೆಗೆ ಹರಿಯುತ್ತದೆ.

೬೧೫) ಅವಿಧೇಯಾತ್ಮಾ (ವಿಧೇಯಾತ್ಮಾ)

ಎರಡು ರೂಪದಲ್ಲಿ ಈ ನಾಮವನ್ನು ನೋಡಬಹುದು. ಅವಿಧೇಯಾತ್ಮಾ ಅಂದರೆ ಇನ್ನೊಬ್ಬರಿಗೆ ಅಧೀನವಿಲ್ಲದ ಸ್ವತಂತ್ರ ಸ್ವರೂಪ. ಆದರೆ ಇಂತಹ ಭಗವಂತ ವಿಧೇಯಾತ್ಮಾ! ಏಕೆಂದರೆ ಅವನನ್ನು ಯಾರು ಭಕ್ತಿಯಿಂದ ಒಲಿಸಿಕೊಳ್ಳುತ್ತಾರೋ ಅವರಿಗೆ ಆತ ಅಧೀನ (ಭಕ್ತಪರಾಧೀನ).

೬೧೬) ಸತ್ಕೀರ್ತಿಃ

ನಿರ್ದಿಷ್ಟವಾದ, ದೋಷರಹಿತವಾದ ಸ್ವರೂಪ ಎಂದು ಜ್ಞಾನಿಗಳು ಯಾರನ್ನು ಗುಣಗಾನ ಮಾಡುತ್ತಾರೋ ಅವನು ಸತ್ಕೀರ್ತಿಃ.

೬೧೭) ಛಿನ್ನಸಂಶಯಃ

ಪ್ರತಿಯೊಂದು ವಸ್ತುವಿನ ಸಮಗ್ರ ಹಾಗೂ ಸಾಕ್ಷಾತ್ ಜ್ಞಾನವುಳ್ಳ ಭಗವಂತನಿಗೆ ಸಂಶಯವೇ ಇಲ್ಲ. ನಮ್ಮ ಸಂಶಯವನ್ನು ನಾಶಮಾಡುವ ಭಗವಂತ ಛಿನ್ನಸಂಶಯಃ.

ಉದೀರ್ಣಃ ಸರ್ವತಶ್ಚಕ್ಷುರನೀಶಃ ಶಾಶ್ವತಸ್ಥಿರಃ ।
ಭೂಶಯೋ ಭೂಷಣೋ ಭೂತಿರ್ವಿಶೋಕಃ ಶೋಕನಾಶನಃ ॥೮೦ ॥

೬೧೮) ಉದೀರ್ಣಃ

ಉಪ/ಉಪರಿ ಅಂದರೆ ಎತ್ತರದಲ್ಲಿರುವ ವಸ್ತು (ಇದನ್ನೇ **ऊपर** ಎಂದು ಹಿಂದಿಯಲ್ಲಿ ಹೇಳುತ್ತಾರೆ, ಇಂಗ್ಲೀಷಿನಲ್ಲಿ ಇದು **upper** ಆಗಿದೆ). ಓದಿನಲ್ಲಿ, ಅಧ್ಯಯನದಲ್ಲಿ ಎತ್ತರದಲ್ಲಿರುವವರು ಉಪಾಧ್ಯಾಯರು, ಭೌತಿಕವಾಗಿ ಎತ್ತರದಲ್ಲಿರುವವರು ಉದೀರ್ಣರು. ಗುಣಪೂರ್ಣನಾದ ಭಗವಂತ ಉದೀರ್ಣಃ.

೬೧೯) ಸರ್ವತಶ್ಚಕ್ಷುಃ

ಚಕ್ಷು ಎಂದರೆ 'ಕಣ್ಣು'; ಎಲ್ಲೆಡೆ ಕಣ್ಣುಳ್ಳವನು ಹಾಗೂ ಎಲ್ಲೆಡೆ ಕಣ್ಣಿಟ್ಟವನು ಸರ್ವತಶ್ಚಕ್ಷುಃ.

೬೨೦) ಅನೀಶಃ

ತನಗೆ ಇನ್ನೊಬ್ಬ ಒಡೆಯನಿಲ್ಲದವನು ಅನೀಶಃ. ಭಗವಂತನಿಗಿಂತ ಎತ್ತರದಲ್ಲಿರುವವನು ಇನ್ನೊಬ್ಬನಿಲ್ಲ.

೬೨೧) ಶಾಶ್ವತಸ್ಥಿರಃ

ಯಾವತ್ತೂ ಒಂದೇ ರೀತಿ ಇರುವವನು; ಬದಲಾವಣೆ ಇಲ್ಲದೆ ಅಚಲನಾಗಿರುವ ಭಗವಂತ ಶಾಶ್ವತಸ್ಥಿರಃ.

೬೨೨) ಭೂಶಯಃ

ಭೂಮಿಯಲ್ಲಿ ವ್ಯಾಪಿಸಿದವ, ನಾನಾ ರೀತಿಯ ಅವತಾರದಿಂದ ಭೂಮಿಯಲ್ಲಿ ಬಂದು ನೆಲೆಸಿದ ಭಗವಂತ ಭೂಶಯಃ.

೬೨೩) ಭೂಷಣಃ

ಎಲ್ಲಕ್ಕೂ ಚೆಲುವು ನೀಡುವ ಭಗವಂತ ಭೂಷಣಃ. ಅವನ ಅವತಾರ ಭೂಮಿಗೆ ಶೋಭೆ.

೬೨೪) ಭೂತಿಃ

ಉನ್ನತಿಯ ಸ್ವರೂಪ(ಸಾಕಾರ ಮೂರ್ತಿ)

೬೨೫) ವಿಶೋಕಃ

ಭಗವಂತನಿಗೆ ಎಂದೂ ದುಃಖವಿಲ್ಲ, ಅವತಾರದಲ್ಲಿ ಮಾತ್ರ ದುಃಖಪಟ್ಟವನಂತೆ ತೋರಿರುವುದನ್ನು ಕಾಣುತ್ತೇವೆ. ಆದರೆ ಇದು ಕೇವಲ ನಟನೆ ಅಷ್ಟೇ. ಮಾನವ ಅವತಾರದಲ್ಲಿದ್ದಾಗ ಮಾನವರಂತೆ ನಟಿಸಿ, ಮಾನವನ ನಿಜವಾದ ಜೀವನ ಶೈಲಿಯನ್ನು ತೋರಿಸಿಕೊಡುವುದಕ್ಕಾಗಿ ಅಂತಹ ಶೋಕವನ್ನು ತೋರ್ಪಡಿಸಿದ್ದಾನೆಯೇ ಹೊರತು, ಅವನಿಗೆ ನಿಜವಾದ ಶೋಕವಿಲ್ಲ.

೬೩೬) ಶೋಕನಾಶನಃ

ದುಃಖವಿರದಂತೆ ಮಾಡುವವ.

ಅರ್ಚಿಷ್ಮಾನರ್ಚಿತಃ ಕುಂಭೋ ವಿಶುದ್ಧಾತ್ಮಾ ವಿಶೋಧನಃ ।
ಅನಿರುದ್ಧೋಽಪ್ರತಿರಥಃ ಪ್ರದ್ಯುಮ್ನೋಽಮಿತವಿಕ್ರಮಃ ॥೮೧॥

೬೩೭) ಅರ್ಚಿಷ್ಮಾನ್

ಜಗತ್ತಿನಲ್ಲಿ ಯಾವ ಯಾವ ಬೆಳಕುಗಳಿವೆಯೋ ಅದರ ಮೂಲ ಭಗವಂತ ಅರ್ಚಿಷ್ಮಾನ್. ಆತ ಬೆಳಕಿನ ಜ್ವಾಲೆಗಳಿಂದ ಸುತ್ತುವರಿದವನು.

೬೩೮) ಅರ್ಚಿತಃ

ಎಲ್ಲರಿಂದ ಪೂಜಿಸಲ್ಪಡುವವನು.

೬೩೯) ಕುಂಭಃ

ಕುಂಭ ಎಂದರೆ ಮಡಕೆ. ಸ್ವತ್ತನ್ನು ಮುಚ್ಚಿಡುವ ಪಾತ್ರೆ. ಭಗವಂತ ಪ್ರಳಯಕಾಲದಲ್ಲಿ ಎಲ್ಲವನ್ನೂ ತನ್ನೊಳಗೆ ಮುಚ್ಚಿಡುವ ಕುಂಭಃ. ಕುಂಭ ಎನ್ನುವುದಕ್ಕೆ ಭೂಮಿ ಎನ್ನುವ ವಿಶೇಷ ಅರ್ಥ ಕೂಡಾ ಇದೆ. ಭೂಮಿಯನ್ನು ನಿರ್ಮಿಸಿ ಬೆಳಗುವ ಭಗವಂತ ಕುಂಭಃ.

೬೪೦) ವಿಶುದ್ಧಾತ್ಮಾ

ಭಗವಂತ ಮತ್ಸ್ಯ, ಕೂರ್ಮ, ವರಾಹ ರೂಪದಲ್ಲಿ ಭೂಮಿಗಿಳಿದು ಬಂದರೂ ಕೂಡಾ, ಎಲ್ಲಾ ರೂಪದಲ್ಲೂ ಆತ ಪರಿಶುದ್ಧ ಸ್ವರೂಪ. ಎಲ್ಲಾ ಜೀವರೊಳಗಿರುವ ಭಗವಂತನಿಗೆ ಯಾವ ರೂಪದಲ್ಲೂ ಕೊಳೆಯ ಸ್ಪರ್ಶವಿಲ್ಲ.

೬೪೧) ವಿಶೋಧನಃ

ವಿಶೋಧನಃ ಎಂದರೆ ಪರಿಶುದ್ಧಗೊಳಿಸುವವನು. ನಮ್ಮ ಮನಸ್ಸಿನ ತುಂಬಾ ಭಗವಂತನನ್ನು ತುಂಬಿಕೊಂಡಾಗ ನಾವು ಶುದ್ಧರಾಗುತ್ತೇವೆ. ಸ್ನಾನ ಮಾಡುವುದರಿಂದಾಗಲೀ, ಒದ್ದೆ ಬಟ್ಟೆಯಿಂದಾಗಲೀ ಮೈಲಿಗೆ ಹೋಗುವುದಿಲ್ಲ. ವಿಶೋಧನನಾದ ಭಗವಂತನನ್ನು ಸದಾ ನೆನೆಯುವುದರಿಂದ ನಾವು ಪಾವನರಾಗುತ್ತೇವೆ.

೬೪೨) ಅನಿರುದ್ಧಃ

ಅನಿರುದ್ಧಃ ಎಂದರೆ ತಡೆಯಿಲ್ಲದವನು. ಭಗವಂತ ಇಲ್ಲದ ತಾಣವಿಲ್ಲ. ಎಲ್ಲಿಯೂ ಕೂಡಾ ತಡೆ ಇಲ್ಲದೆ ಇರುವ ಅವನಿಗೆ ಪ್ರವೇಶವಿಲ್ಲದ ತಾಣವಿಲ್ಲ. ಆದರೆ ಭಕ್ತವತ್ಸಲನಾದ ಭಗವಂತನನ್ನು 'ಅನಿಗಳು' (ಪ್ರಾಣ ತತ್ವವನ್ನು ಉಪಾಸನೆ ಮಾಡುವ ಸಾಧಕರು) ತಡೆ ಹಿಡಿಯಬಲ್ಲರು.ಆತ ಭಕ್ತರಾಧೀನ.

೬೪೩) ಅಪ್ರತಿರಥಃ

ಭಗವಂತನನ್ನು ಎದುರಿಸುವ ಇನ್ನೊಂದು ಶಕ್ತಿಯಿಲ್ಲ. ಆತ ಅಪ್ರತಿರಥಃ

೬೪೪) ಪ್ರದ್ಯುಮ್ನಃ

'ದ್ಯುಮ್ನ' ಎಂದರೆ ಬೆಳಕು/ಜ್ಞಾನ/ಸಂಪತ್ತು. ಪ್ರದ್ಯುಮ್ನಃ ಎಂದರೆ ಎಲ್ಲಾ ಸಂಪತ್ತುಗಳ ಸ್ವಾಮಿ, ಸರ್ವಜ್ಞ, ಸರ್ವೇಶ್ವರ. ಜ್ಯೋತಿರ್ಮಯನಾದ ಭಗವಂತ ಪ್ರದ್ಯುಮ್ನಃ.

೭೪೫) ಅಮಿತವಿಕ್ರಮಃ

ಭಗವಂತ ಎಣೆಯಿರದ ಪೌರುಷದವನು. ಅವನ ವಿಕ್ರಮ ಅಮಿತ. ನಾಶವಿಲ್ಲದ, ಅಳತೆಗೆ ಎಟುಕದ, ನಶ್ವರವಲ್ಲದ, ಅನಂತವಾದ ಪೌರುಷದ ಖನಿಯಾದ ಭಗವಂತ ಅಮಿತವಿಕ್ರಮಃ.

**ಕಾಲನೇಮಿನಿಹಾ ವೀರಃ ಶೌರಿಃ ಶೂರಜನೇಶ್ವರಃ ।**

**ತ್ರಿಲೋಕಾತ್ಮಾ ತ್ರಿಲೋಕೇಶಃ ಕೇಶವಃ ಕೇಶಿಹಾ ಹರಿಃ ॥೮೨॥**

೭೪೬) ಕಾಲನೇಮಿನಿಹಾ

ಕಾಲನೇಮಿ ಎನ್ನುವವನು ಒಬ್ಬ ಅಸುರ. ಆತನೇ ಕಂಸನಾಗಿ ಹುಟ್ಟಿದ್ದು. ತಾವು ಬಯಸಿದಂತೆ ಕಾಲವನ್ನು ಬಳಸುವ ಲೋಕಕಂಟಕರನ್ನು ಸಂಹಾರ ಮಾಡುವುದಕ್ಕೋಸ್ಕರ ಭೂಮಿಗಿಳಿದು ಬರುವ ಭಗವಂತ ಕಾಲನೇಮಿನಿಹಾ. ಕಾಲವನ್ನು ನಿಯಂತ್ರಿಸುವ ಬ್ರಹ್ಮನನ್ನೂ ಒಂದು ದಿನ ಸಂಹಾರ ಮಾಡುವ (ಮಹಾಪ್ರಳಯದಲ್ಲಿ) ಭಗವಂತ ಕಾಲನೇಮಿನಿಹಾ.

೭೪೭) ವೀರಃ

ಪರಾಕ್ರಮಶಾಲಿ

೭೪೮) ಶೌರಿಃ

ಶೂರರಿಗೆಲ್ಲ ಈಶ್ವರ. ಅನ್ಯಾಯದ ವಿರುದ್ಧ ಹೋರಾಡುವ ಎಲ್ಲಾ ಶೂರರೊಳಗಿದ್ದು ದುಷ್ಟ ಸಂಹಾರ ಮಾಡುವ ಭಗವಂತ ಶೌರಿಃ. ಶೂರಸೇನನ(ವಸುದೇವನ ತಂದೆ) ವಂಶದಲ್ಲಿ ಹುಟ್ಟಿಬಂದ ಅವತಾರಪುರುಷ ಭಗವಂತ ಶೌರಿಃ.

೭೪೯) ಶೂರಜನೇಶ್ವರಃ

ಶೂರರಿಗೆಲ್ಲಾ ಒಡೆಯ.

೭೫೦) ತ್ರಿಲೋಕಾತ್ಮಾ

ಮೂರು ಲೋಕಗಳ ಎಲ್ಲಾ ಜೀವರೊಳಗಿರುವ ಅಂತರ್ಯಾಮಿ. ಮೂರು ಲೋಕದಲ್ಲಿ ನಿಂತು ಎಲ್ಲವನ್ನೂ ಮಾಡುವ ಭಗವಂತ ತ್ರಿಲೋಕಾತ್ಮಾ.

೭೫೧) ತ್ರಿಲೋಕೇಶಃ

ಮೂರು ಲೋಕಗಳ ಸ್ವಾಮಿ.

೭೫೨) ಕೇಶವಃ

ಕೇಶದಿಂದ ಆವಿರ್ಭಾವ ಹೊಂದಿ ಅವತಾರವೆತ್ತಿದ ಗುಂಗುರು ಕೂದಲಿನ ಚೆಲುವ(ಕೃಷ್ಣ). ಸೂರ್ಯನ ಕಿರಣಗಳಲ್ಲಿ ನಿಂತು ಇಡೀ ಜಗತ್ತಿಗೆ ಶಕ್ತಿ ಪ್ರಧಾನ ಮಾಡುವ ಭಗವಂತ ಕೇಶವಃ.

ಕಹ+ಈಶ-ಕೇಶ. ಕಹ ಅಂದರೆ ಬ್ರಹ್ಮಶಕ್ತಿ, ಈಶ ಎಂದರೆ ಶಿವಶಕ್ತಿ. ಭಗವಂತ ಬ್ರಹ್ಮಶಕ್ತಿ ಮತ್ತು ಶಿವಶಕ್ತಿಯೊಳಗಿನ ಪರಶಕ್ತಿ. ಬೆಳಕಾಗಿ, ಮಳೆಯಾಗಿ, ಸೂರ್ಯಕಿರಣದೊಳಗೆ ಸನ್ನಿಹಿತನಾದ ಭಗವಂತ ಕೇಶವಃ.

೭೫೩) ಕೇಶಿಹಾ

ಕೇಶಿ ಎನ್ನುವ ಅಸುರನನ್ನು ಸಂಹಾರ ಮಾಡಿದವನು, ಪ್ರಳಯ ಕಾಲದಲ್ಲಿ ಸೂರ್ಯನನ್ನೂ, ಪ್ರಾಣತತ್ವವನ್ನೂ ಸಂಹರಿಸುವವನು.

ಸೂರ್ಯನನ್ನು ಮುಳುಗುವಾಗ, ಮೂಡುವಾಗ ಮತ್ತು ಗ್ರಹಣಕಾಲದಲ್ಲಿ ನೇರವಾಗಿ ನೋಡಬಾರದು. ನೀರಿನಲ್ಲಿ ಸೂರ್ಯನ ಪ್ರತಿಬಿಂಬವನ್ನು ನೋಡುವುದು ಕಣ್ಣಿಗೆ ಹಾನಿಕರ. ಏಕೆಂದರೆ ಆ ಕಿರಣಗಳಲ್ಲಿ ದುಷ್ಟ ಶಕ್ತಿಗಳಿರುತ್ತವೆ. ಇಂತಹ ದುಷ್ಟಶಕ್ತಿಗಳನ್ನು ಸಂಹಾರ ಮಾಡುವ ಭಗವಂತ ಕೇಶಿಹಾ.

ಬೆಳಿಗ್ಗೆ ಸೂರ್ಯೋದಯವಾದಮೇಲೂ ಮಲಗಿ ನಿದ್ದೆ ಮಾಡುವಂತೆ ಮಾಡುವ ಅಸುರಶಕ್ತಿಯನ್ನು (ಮಂದೇಹನನ್ನು) ನಾಶಮಾಡುವ ಭಗವಂತ ಕೇಶಿಹಾ.

೬೫೪) ಹರಿಃ

ನಮ್ಮ ಎಲ್ಲಾ ಸಮಸ್ಯೆಗಳನ್ನು, ಸಂಸಾರ ಬಂಧನವನ್ನು ಪರಿಹರಿಸುವ, ಕೊನೆಗೆ ಸಮಸ್ತ ವಿಶ್ವವನ್ನು ಸಂಹರಿಸುವ ಭಗವಂತ ಹರಿಃ.

ಅನಂತ ರೂಪದಲ್ಲಿ ವಿಶ್ವದೊಳಗೆ ವಿಹರಿಸುವ, ಭಕ್ತಿಯಿಂದ ಅರ್ಪಿಸಿದ ಆಹುತಿಯನ್ನು ಸ್ವೀಕರಿಸುವ ಭಗವಂತ, ಹರಿದ್ವರ್ಣನಾಗಿ ಇಡೀ ಭೂಮಿಯಲ್ಲಿ ಸಸ್ಯ ಸಮೃದ್ಧಿ ಮಾಡಿದ ಹರಿಃ.

**ಕಾಮದೇವಃ ಕಾಮಪಾಲಃ ಕಾಮೀ ಕಾಂತಃ ಕೃತಾಗಮಃ ।**
**ಅನಿರ್ದೇಶ್ಯವಪುರ್ವಿಷ್ಣುರ್ವೀರೋಽನಂತೋ ಧನಂಜಯಃ ॥೭೩॥**

೬೫೫) ಕಾಮದೇವಃ

ಈ ನಾಮದ ಮೇಲ್ನೋಟದ ಅರ್ಥ ಎಲ್ಲರಿಗೂ ಚಿರಪರಿಚಿತ. ಮನುಷ್ಯನ ಬದುಕಿನಲ್ಲಿ ಬಯಕೆ ಹಾಗೂ ಅರಿವು (desire and wisdom) ಚೈತನ್ಯದ ಮೂಲಭೂತ ಧರ್ಮ. 'ಕಾಮ' ಸಂಸ್ಕೃತದಲ್ಲಿ ಸೌಂದರ್ಯದ ಸಂಕೇತ. ಅಂದರೆ ಸುಂದರವಾದದ್ದನ್ನು ಬಯಸುವುದು 'ಕಾಮ'. 'ಸುಂದರ' ಅಂದರೆ ಪ್ರಿಯವಾದದ್ದು. ಸುಂದರವಾದದ್ದನ್ನು, ಅಥವಾ ಪ್ರಿಯವಾದದ್ದನ್ನು ಬಯಸುವುದು ಕಾಮ. ಸೌಂದರ್ಯ ವಸ್ತುವಿನಲ್ಲಿಲ್ಲ, ನಾವು ನೋಡುವ ದೃಷ್ಟಿಯಲ್ಲಿದೆ. ನಮಗೆ ಯಾವುದು ಇಷ್ಟವೋ ಅದು ನಮಗೆ ಸುಂದರವಾಗಿ ಕಾಣುತ್ತದೆ. ಹೀಗೆ ಇರುವ ಕಾಮವನ್ನು ಈಡೇರಿಸುವ ಕಾಮದೇವ (ಮನ್ಮಥ) ನಮ್ಮೊಳಗಿದ್ದು ವಿವಿಧ ರೂಪದ ಬಯಕೆಗಳನ್ನು ಪ್ರಚೋದಿಸಿ, ಕಾಮನೆಗಳನ್ನು ಈಡೇರಿಸಿ, ಆನಂದವನ್ನು ಕೊಟ್ಟು ವಿಹರಿಸುವವ.

ಮನ್ಮಥ ವಿಷ್ಣುವಿನ ಮಗ; ಅವನೇ ಶಿವನ ಮಗ ಸ್ಕಂದ (ಷಣ್ಮುಖ), ಅವನೇ ಬ್ರಹ್ಮನ ಮಗ ಸನತ್ಕುಮಾರ. ನಮಗೆ ಕಾಮನೆಗಳನ್ನು ನೀಡುವ ಹಾಗೂ ಅದನ್ನು ನಿಯಂತ್ರಿಸುವ ಮನ್ಮಥ; ಸನತ್ಕುಮಾರ, ಷಣ್ಮುಖನೊಳಗಿರುವ, ಸರ್ವ ಕಾಮಗಳನ್ನು ಗೆದ್ದ ಭಗವಂತ ಕಾಮದೇವಃ.

೬೫೬) ಕಾಮಪಾಲಃ

ನಮ್ಮ ಎಲ್ಲಾ ಬಯಕೆಗಳನ್ನು ರಕ್ಷಣೆ ಮಾಡುವವನು ಭಗವಂತ. ನಮ್ಮ ಬಯಕೆ ನಮ್ಮ ಅಧೀನ ಅಲ್ಲ. ಧರ್ಮ ಕಾರ್ಯ ಮಾಡಬೇಕು ಎನ್ನುವ ಕಾಮ ಇಲ್ಲದಿದ್ದರೆ ಧರ್ಮವಿಲ್ಲ! ಹಣವನ್ನು ಧರ್ಮ ಕಾರ್ಯಕ್ಕೆ ವಿನಿಯೋಗಿಸಬೇಕು ಎನ್ನುವ ಕಾಮನೆ ಇಲ್ಲದಿದ್ದರೆ 'ಅರ್ಥಕ್ಕೆ' ಬೆಲೆಯಿಲ್ಲ. ಕಾಮ ಇಲ್ಲದಿದ್ದರೆ ಎಲ್ಲವೂ ಅಸಾಧ್ಯ. ಬಯಕೆಯೇ ಇಲ್ಲದ ಬದುಕಿಲ್ಲ. ಬಯಕೆ ಕೆಟ್ಟದ್ದಲ್ಲ, ಆದರೆ ಕುತ್ಸಿತವಾದ ಬಯಕೆ ಕೆಟ್ಟದ್ದು. ನಮಗೆ ಒಳ್ಳೆಯ ಬಯಕೆಯನ್ನು ಕೊಟ್ಟು ಅದನ್ನು ಪೂರೈಸಿ ಉದ್ಧರಿಸುವ ಭಗವಂತ ಕಾಮಪಾಲಃ.

೬೫೭) ಕಾಮೀ

ಕಾಮೀ ಅಂದರೆ ಕಾಮ ಉಳ್ಳವನು ಎಂದರ್ಥವಲ್ಲ. ಕಾಮದ ಒಡೆಯ ಕಾಮೀ. ಜಗತ್ತಿನಲ್ಲಿ ಕಾಮನೆಗಳನ್ನು ಪ್ರೇರೇಪಿಸುವ ಮನ್ಮಥನ ಅಪ್ಪ ಭಗವಂತ ಕಾಮೀ.

೬೫೮) ಕಾಂತಃ

ರತಿ-ಮನ್ಮಥರಿಗೆ ರೂಪಕೊಟ್ಟ ಭಗವಂತ ಎಲ್ಲರೂ ಬಯಸುವಂತಹ ಪರಮಸುಂದರ ಮೂರ್ತಿ. ಅತ್ಯಂತ ಸುಂದರ ಮಾಂಗಲಿಕ ರೂಪ ಆತನದ್ದು. ಇಲ್ಲಿ ಸೌಂದರ್ಯ ಎಂದರೆ ಬಾಹ್ಯ ಸೌಂದರ್ಯವಲ್ಲ, ಪಂಚಭೂತಗಳಿಂದಾದ ಸೌಂದರ್ಯವಲ್ಲ, ಜ್ಞಾನಾನಂದಗಳಿಂದ ತುಂಬಿದ ಪರಿಪೂರ್ಣ ಸೌಂದರ್ಯ. ಇಂತಹ ಸುಂದರ ಮೂರ್ತಿ ಭಗವಂತ ಕಾಂತಃ.

೬೫೯) ಕೃತಾಗಮಃ

ಮೊಟ್ಟ ಮೊದಲು ಜ್ಞಾನವನ್ನು, ವೇದವನ್ನು, ಚತುರ್ಮುಖನಿಗೆ ಉಪದೇಶ ಮಾಡಿ ಜಗತ್ತಿಗೆ ಆಗಮನದ ರೂಪದಲ್ಲಿ ಕೊಟ್ಟವ ಭಗವಂತ. ಆತ ಆಗಮಗಳಿಂದ ಕೃತನಾದವನು. ಸಮಸ್ತ ಆಗಮಗಳಿಂದಲೇ ತಿಳಿಯಬೇಕಾದವನು. ಭೂಮಿಗೆ ಇಳಿದು ಬಂದು, ವೇದ-ಪುರಾಣವನ್ನು ರಚಿಸಿ ಕೊಟ್ಟು, ಶೃತಿ-ಸ್ತುತಿಗಳನ್ನು ನೀಡಿದ ಭಗವಂತ ಕೃತಾಗಮಃ.

೬೬೦) ಅನಿರ್ದೇಶ್ಯವಪು

ಇಂಥದ್ದೇ ಎಂದು ನಿರೂಪಿಸಲು ಆಗದ ಆಚಿಂತ್ಯ ರೂಪ ಭಗವಂತನದ್ದು. 'ನಿರ್ದೇಶ' ಎಂದರೆ ಇದು ಇಂತದ್ದೇ ಎಂದು ಮನಸ್ಸು ಗ್ರಹಿಸುವ ರೂಪ. ಕೃಷ್ಣನನ್ನು, ರಾಮನನ್ನು, ವ್ಯಾಸರನ್ನು ಕಂಡವರಿದ್ದಾರೆ. ಆದರೆ ಅದು ಕಂಡು ಗ್ರಹಿಸುವ ರೂಪವಲ್ಲ. ಯಾವುದನ್ನು ನಿರೂಪಿಸಲಾಗದೇ ಮಾತು ಮೂಕವಾಗುತ್ತದೋ, ಮನಸ್ಸು ಸ್ವಚ್ಛವಾಗುತ್ತದೋ, ಅಂತಹ ಆನಂದಮಯ ರೂಪ ಎಂದು ಉಪನಿಷತ್ತು ಹೇಳುತ್ತದೆ. ಹೀಗೆ ಮನಸ್ಸಿನ ಚಿಂತನೆಗೆ ಮೀರಿದ ರೂಪವುಳ್ಳ ಭಗವಂತ ಅನಿರ್ದೇಶ್ಯವಪು.

೬೬೧) ವಿಷ್ಣುಃ

ಎಲ್ಲಾ ಕಡೆಯೂ, ಎಲ್ಲರ ಒಳಗೂ-ಹೊರಗೂ ತುಂಬಿರುವ, ಮಾತು ಮನಸ್ಸಿಗೆ ಮೀರಿದ ಅನಂತ ಶಕ್ತಿ ಭಗವಂತ ವಿಷ್ಣುಃ.

೬೬೨) ವೀರಃ

ಎಲ್ಲವನ್ನೂ ನಿಗ್ರಹಿಸಬಲ್ಲ ಪೌರುಷಶಾಲಿ. 'ವಿ' ಅಂದರೆ ಪಕ್ಷಿ (ಗರುಡ), 'ಈರ' ಅಂದರೆ ಪ್ರಾಣದೇವರು. ಗರುಡ-ಪ್ರಾಣರನ್ನು ನಿಯಂತ್ರಿಸುವ ಪರಾಶಕ್ತಿ ಭಗವಂತ ವೀರ.

೬೬೩) ಅನಂತಃ

ಅಳತೆಗೆ ಸಿಗದ ಅನಂತ ಶಕ್ತಿ. ಆತ ಕಾಲತಃ, ದೇಶತಃ, ಗುಣತಃ ಅನಂತ.

೬೬೪) ಧನಂಜಯಃ

ಅರ್ಜುನನಲ್ಲಿ ಸನ್ನಿಹಿತನಾಗಿ ಅವನನ್ನು ಧನಂಜಯನಾಗಿ ಮಾಡಿದ ಭಗವಂತ ಧನಂಜಯಃ. ಜಗತ್ತಿನಲ್ಲಿರುವ ಎಲ್ಲಾ ಸಂಪತ್ತು ಆತನ ಸೊತ್ತು. ಆದ್ದರಿಂದ 'ನನ್ನದು' ಎನ್ನುವ ಅಹಂಕಾರ ಬಿಟ್ಟು ಆ ಧನಂಜಯನಲ್ಲಿ ಶರಣಾಗಬೇಕು.

ಬ್ರಹ್ಮಣ್ಯೋ ಬ್ರಹ್ಮಕೃದ್ಬ್ರಹ್ಮಾ ಬ್ರಹ್ಮ ಬ್ರಹ್ಮವಿವರ್ಧನಃ ।
ಬ್ರಹ್ಮವಿದ್ಬ್ರಾಹ್ಮಣೋ ಬ್ರಹ್ಮೀ ಬ್ರಹ್ಮಜ್ಞೋ ಬ್ರಾಹ್ಮಣಪ್ರಿಯಃ ॥೭೪॥

೬೬೫) ಬ್ರಹ್ಮಣ್ಯಃ

ಚತುರ್ಮುಖ ಬ್ರಹ್ಮನಿಗೆ ಬಹಳ ಪ್ರಿಯವಾದವನು (ಹಿತನಾದವನು) ಬ್ರಹ್ಮಣ್ಯಃ. ಬ್ರಹ್ಮ ಎನ್ನುವುದಕ್ಕೆ 'ಜೀವರು', 'ವೇದ' ಎನ್ನುವ ಇತರ ವಿಶೇಷ ಅರ್ಥಗಳಿವೆ. ಸಮಸ್ತ ಜೀವಜಾತಕ್ಕೂ ಹಿತನಾಗಿ, ಸದಾ ಜೊತೆಗೆ ಇರತಕ್ಕ ಗೆಳೆಯ ಭಗವಂತ ಬ್ರಹ್ಮಣ್ಯಃ. ಸಮಸ್ತ ವೇದಗಳಿಂದ ಪ್ರತಿಪಾದ್ಯನಾದ ಭಗವಂತ ಬ್ರಹ್ಮಣ್ಯಃ

೭೭೬) ಬ್ರಹ್ಮಕೃತ್

ಸೃಷ್ಟಿಯ ಆರಂಭದಲ್ಲಿ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿ ವೇದೋಪದೇಶ ಮಾಡಿದ ಭಗವಂತ, ಸಮಸ್ತ ಜೀವ ಜಾತಗಳಿಗೆ ಆಯಾ ಜೀವದ ಕರ್ಮಕ್ಕೆ ತಕ್ಕಂತೆ, ಸ್ವರೂಪಕ್ಕೆ ತಕ್ಕಂತೆ, ದೇಹವನ್ನು ಕೊಟ್ಟು ಬದುಕನ್ನು ಕೊಟ್ಟ ಬ್ರಹ್ಮಕೃತ್.

೭೭೭) ಬ್ರಹ್ಮಾ

ಸೃಷ್ಟಿಗೆ ಕಾರಣನಾದ ಚತುರ್ಮುಖನೊಳಗಿದ್ದು ಸೃಷ್ಟಿ ಮಾಡುವ ಭಗವಂತ ಬ್ರಹ್ಮಾ (ಈ ನಾಮ ಪುರುಷ ರೂಪದಲ್ಲಿದೆ ಅಥವಾ ಪುಲ್ಲಿಂಗ)

೭೭೮) ಬ್ರಹ್ಮ

ಭಗವಂತ ಎಲ್ಲಕ್ಕಿಂತ ದೊಡ್ಡ ತತ್ವ (ಬ್ರಹ್ಮ-ನಪುಂಸಕ ಲಿಂಗ; ಇದು ಸಂಸ್ಕೃತದಲ್ಲಿರುವ ವಿಶೇಷ. ಇದು ಗಂಡು-ಹೆಣ್ಣಿನ ದೌರ್ಬಲ್ಯದ ಲೇಪವಿಲ್ಲದೆ ನಮ್ಮನ್ನು ಪೂರ್ಣತೆಗೆ ಒಯ್ಯುವ, ಎಲ್ಲಕ್ಕಿಂತ ದೊಡ್ಡ ತತ್ವ ಭಗವಂತ ಎನ್ನುವುದನ್ನು ಸೂಚಿಸುತ್ತದೆ)

೭೭೯) ಬ್ರಹ್ಮವಿವರ್ಧನಃ

ಜೀವಜಾತದ ಭೌತಿಕ ಬೆಳವಣಿಗೆಗೆ ಬೇಕಾದ ದೇಹವನ್ನು ಕೊಟ್ಟು ಬೆಳೆಸಿದ ಭಗವಂತ ಬ್ರಹ್ಮವಿವರ್ಧನಃ. ಎಲ್ಲಕ್ಕಿಂತ ದೊಡ್ಡ ಜೀವ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಮಾಡಿ, ವೇದ ವಿಜ್ಞಾನವನ್ನು ಬೆಳೆಸಿ, ವಿಸ್ತಾರ ಮಾಡಿದ ಭಗವಂತ ಬ್ರಹ್ಮವಿವರ್ಧನಃ

೭೮೦) ಬ್ರಹ್ಮವಿತ್

ವೇದವನ್ನು ಪೂರ್ಣವಾಗಿ ತಿಳಿದವನು ಬ್ರಹ್ಮವಿತ್. ಭಾರತೀಯ ನಂಬಿಕೆಯ ಪ್ರಕಾರ ವೇದವನ್ನು ಯಾರೂ ನಿರ್ಮಾಣ ಮಾಡಿಲ್ಲ. ಹಾಗಿದ್ದರೆ ವೇದ ಹೇಗೆ ನಿರ್ಮಾಣ ಆಯಿತು ? ಪ್ರಾಚೀನರು ಹೇಳುವಂತೆ ವೇದ ನಮ್ಮ intellectual compilation ಅಲ್ಲ ಅದು intuitional compilation. ಅಂದರೆ ಜ್ಞಾನಿಗಳಿಗೆ ತನ್ನಷ್ಟಕ್ಕೆ ಹೊಳೆದದ್ದು. ಇದನ್ನೇ ಕುಮಾರವ್ಯಾಸ: "ನಾನು ಕೇವಲ ಲಿಪಿಗಾರ, ಭಗವಂತ ಹೇಳಿದ್ದನ್ನು ನಾನು ಬರೆದೆ" ಎಂದಿದ್ದಾನೆ. ನ್ಯೂಟನ್ ಬೀಳುತ್ತಿರುವ ಹಣ್ಣನ್ನು ನೋಡಿ ಭೂಮಿಯ ಗುರುತ್ವಾಕರ್ಷಣೆಯನ್ನು ಕಂಡು ಹಿಡಿದಂತೆ- ಇದೆಲ್ಲವೂ intuitional flash. ಗೀತೆಯಲ್ಲಿ ಶ್ರೀಕೃಷ್ಣ ಹೇಳುವಂತೆ:

ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ ವೇದವಿದೇವ ಚಾಹಮ್ ॥ (ಅ-೧೫, ಶ್ಲೋ-೧೫)

ಅಂದರೆ " ವೇದಾಂತ ಸೂತ್ರಗಳನೊರೆದವನು, ವೇದಗಳ ಮರ್ಮವನ್ನರಿತವನು ನಾನೇ" ಆದ್ದರಿಂದ ವೇದವನ್ನು ಸಂಪೂರ್ಣ ತಿಳಿದವನು ಭಗವಂತನೊಬ್ಬನೇ. ಇಂತಹ ಭಗವಂತ ಬ್ರಹ್ಮವಿತ್.

೭೮೧) ಬ್ರಾಹ್ಮಣಃ

ನಮ್ಮಲ್ಲಿ ಜನಿವಾರ ಹಾಕಿದವರು ಬ್ರಾಹ್ಮಣರು. ಆದರೆ ನಿಜವಾದ ಬ್ರಾಹ್ಮಣ ಎಂದರೆ ವೇದವೇದ್ಯ. (He who knows Brahman). ವೇದವನ್ನು, ಭಗವಂತನನ್ನು ತಿಳಿದವ ಬ್ರಾಹ್ಮಣ. ಆದರೆ ಭಗವಂತನನ್ನು ಮತ್ತು ವೇದವನ್ನು ಪೂರ್ಣವಾಗಿ ತಿಳಿದವ ಭಗವಂತನೊಬ್ಬನೇ! ವೇದದ ಪೂರ್ಣ ಅರ್ಥ ಭಗವಂತನನ್ನು ಬಿಟ್ಟರೆ ಇನ್ಯಾರಿಗೂ ತಿಳಿದಿಲ್ಲ. ಆದ್ದರಿಂದ ಭಗವಂತ ಬ್ರಾಹ್ಮಣಃ

೭೮೨) ಬ್ರಹ್ಮೀ

ಬ್ರಹ್ಮ ಉಳ್ಳವನು ಬ್ರಹ್ಮೀ. ಎಲ್ಲಕ್ಕಿಂತ ಬೃಹತ್ ಆದ ಈ ವಿಶ್ವದ ಬ್ರಹ್ಮ ಭಗವಂತ ಬ್ರಹ್ಮೀ. ಈ ವಿಶ್ವವನ್ನು ನಿರ್ಮಿಸಿದ ಚತುರ್ಮುಖನ ತಂದೆ, ಇಡೀ ಜಗತ್ತಿನ ಎಲ್ಲಾ ರಹಸ್ಯಗಳನ್ನು ಸೆರೆಹಿಡಿದ ವೇದವಾಙ್ಮಯ ಭಗವಂತ ಬ್ರಹ್ಮೀ.

೬೭೩) ಬ್ರಹ್ಮಜ್ಞಃ

ಬ್ರಹ್ಮ (ವೇದ)ವನ್ನು ತಿಳಿದವ, ಇಡೀ ವಿಶ್ವವನ್ನು, ಜೀವಜಾತವನ್ನು ತಿಳಿದ ಭಗವಂತ ಬ್ರಹ್ಮಜ್ಞಃ.

೬೭೪) ಬ್ರಾಹ್ಮಣಪ್ರಿಯಃ

ಬ್ರಹ್ಮಜ್ಞಾನಿಗಳಿಗೆ ಪ್ರಿಯನಾದವ ಹಾಗೂ ಬ್ರಹ್ಮಜ್ಞಾನಿಗಳನ್ನು ಪ್ರೀತಿಸುವ ಭಗವಂತ ಬ್ರಾಹ್ಮಣಪ್ರಿಯಃ.

**ಮಹಾಕ್ರಮೋ ಮಹಾಕರ್ಮಾ ಮಹಾತೇಜಾ ಮಹೋರಗಃ ।**

**ಮಹಾಕ್ರತುರ್ಮಹಾಯಜ್ವಾ ಮಹಾಯಜ್ಞೋ ಮಹಾಹವಿಃ ॥೭೫॥**

೬೭೫) ಮಹಾಕ್ರಮಃ

ಕ್ರಮ ಎಂದರೆ 'ರೀತಿ' ; ಭಗವಂತನ ಸೃಷ್ಟಿ-ಸ್ಥಿತಿ-ಸಂಹಾರ ಆಕಸ್ಮಿಕವಲ್ಲ. ಅದು ಕ್ರಮಬದ್ಧವಾದ ಕ್ರಿಯೆ. ಎಲ್ಲವನ್ನೂ ಕರಾರುವಕ್ಕಾಗಿ ಗಣಿತಬದ್ಧವಾಗಿ ಮಾಡುವ ಭಗವಂತ ಮಹಾಕ್ರಮಃ. ಅನಂತ ಕಾಲದಿಂದ ಈ ಪ್ರಪಂಚ ನಡೆದು ಬಂದಿದೆ, ಹಾಗೂ ಮುಂದುವರಿಯುತ್ತದೆ. ಈವರೆಗೆ ಅನಂತ ಪ್ರಪಂಚ ಸೃಷ್ಟಿಯಾಗಿದೆ ಹಾಗೂ ಇನ್ನು ಮುಂದೆ ಅನಂತ ಪ್ರಪಂಚ ಸೃಷ್ಟಿಯಾಗಲಿದೆ. ಆದರೆ ಪ್ರತಿಯೊಂದು ಸೃಷ್ಟಿಯೂ ಕ್ರಮಬದ್ಧ. ಪ್ರತಿಯೊಂದಕ್ಕೂ ಒಂದು ಲೆಕ್ಕಾಚಾರವಿದೆ. ಅದರಂತೆಯೇ ಈ ವಿಶ್ವ ನಡೆಯುತ್ತದೆ. ಆದ್ದರಿಂದ ಈ ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಘಟನೆಯೂ ಪೂರ್ವನಿರ್ಧಾರಿತ.

೬೭೬) ಮಹಾಕರ್ಮಾ

ಈ ವಿಶ್ವದಲ್ಲಿ ಮಹತ್ತಾದ ಕರ್ಮ ಎಂದರೆ ಸೃಷ್ಟಿ-ಸ್ಥಿತಿ-ಸಂಹಾರ. ಇಂತಹ ಮಹಾ ಕರ್ಮವನ್ನು ನಿರ್ವಹಿಸುವ ಭಗವಂತ ಮಹಾಕರ್ಮಾ. ನಮ್ಮ ಕೈಯಲ್ಲಿ ಮಹತ್ತಾದ ಕರ್ಮವನ್ನು ಮಾಡಿಸುವವನೂ ಅವನೇ.

೬೭೭) ಮಹಾತೇಜಾಃ

ತೇಜಸ್ಸಿನಲ್ಲಿ ಬೆಳಕಿನ ಶಕ್ತಿಯಿದೆ, ಶಾಖ ಕೊಡುವ ಶಕ್ತಿಯಿದೆ ಹಾಗೂ ಸುಡುವ ಶಕ್ತಿಯೂ ಇದೆ. ಇಷ್ಟೇ ಅಲ್ಲದೆ ತೇಜಸ್ಸಿನಲ್ಲಿ ಪಚನ ಶಕ್ತಿಯಿದೆ. ಜಗತ್ತಿನಲ್ಲಿ ನಡೆಯುವ ತೇಜಸ್ಸಿನ ಪ್ರತಿಯೊಂದು ಕ್ರಿಯೆಯ ಮೂಲ ಭಗವಂತ ಮಹಾತೇಜಾಃ. ಆತ ಎಲ್ಲವನ್ನೂ ಬೆಳಗಿಸುವ ಬೆಳಕು. ಗೀತೆಯಲ್ಲಿ ಹೇಳುವಂತೆ:

ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕ

ಯದ್ ಗತ್ವಾ ನ ನಿವರ್ತಂತೇ ತದ್ ಧಾಮ ಪರಮಂ ಮಮ (ಅ-೧೫, ಶ್ಲೋ-೦೬)

ಅಂದರೆ "ಅದನ್ನು ಸೂರ್ಯ ಬೆಳಗಿಸಲಾರ; ಚಂದ್ರ ಬೆಳಗಿಸಲಾರ; ಬೆಂಕಿ ಕೂಡಾ. ಅದರತ್ತ ತೆರಳಿದವರು ಮತ್ತೆ ಮರಳುವುದಿಲ್ಲ. ಅದು ನನ್ನ ಹಿರಿಯ ರೂಪ". ಹೀಗೆ ಬೆಳಕುಗಳಿಗೆ ಬೆಳಕು ನೀಡುವ ಮಹಾ ತೇಜಸ್ಸು ಭಗವಂತ ಮಹಾತೇಜಾಃ.

೬೭೮) ಮಹೋರಗಃ

ಉರಗ ಎಂದರೆ ಹೊಟ್ಟೆ ಹೊಸೆದುಕೊಂಡು ಹೋಗುವ ಪ್ರಾಣಿ; ಅದನ್ನು ಸರ್ಪ ಎನ್ನುತ್ತಾರೆ. ಹೆಡೆ ಇರುವ ಹಾವು 'ನಾಗರ'. ಭಗವಂತ ದೊಡ್ಡ ಉರಗದ ಮೇಲೆ ಮಲಗಿದ ಶೇಷಶಾಹಿ. ಶೇಷಶಾಹಿ ಎಂದರೇನು ಎನ್ನುವುದನ್ನು ನಾವು ನಮ್ಮೊಳಗಿರುವ ದೇವರನ್ನು ಕಾಣಲು ಪ್ರಯತ್ನಿಸಿದಾಗ ಮಾತ್ರ ತಿಳಿಯುತ್ತದೆ. ಈ ಹಿಂದೆ ಹೇಳಿದಂತೆ ನಮ್ಮ ದೇಹದೊಳಗೆ ಮೂಲಾಧಾರದಿಂದ ಸಹಸ್ರಾರದವರೆಗೆ ಬೇರೆ ಬೇರೆ ಶಕ್ತಿ ಕೇಂದ್ರಗಳಿವೆ. ಮೂಲಾಧಾರದಲ್ಲಿ

ಮಡಿಕೆಹಾಕಿ ತಲೆಯನ್ನು ಕೆಳಗಿಟ್ಟು ಮಲಗಿದ ಉರಗದ ಸ್ಥಿತಿಯಲ್ಲಿ ಕುಂಡಲಿನಿ ಶಕ್ತಿ ಅಡಗಿದೆ. ಕೆಳಮುಖವಾಗಿರುವ ಈ ಶಕ್ತಿಕೇಂದ್ರದಿಂದ ಶಕ್ತಿ ಪಾತವಾಗುತ್ತದೆ. ಇಂತಹ ಹಾವನ್ನು ಕೆಣಕಿದರೆ ಮಾತ್ರ ಅದು ಹೆಡೆ ಎತ್ತುತ್ತದೆ; ಆಗ ಶಕ್ತಿ ಮೇಲ್ಮುಖವಾಗಿ ಸ್ವಾಧಿಷ್ಠಾನ-ಮಣಿಪೂರ-ಅನಾಹತ-ವಿಶುದ್ಧಿ-ಆಜ್ಞಾ-ಸಹಸ್ರಾರ, ಹೀಗೆ ಹಂತ ಹಂತವಾಗಿ ಮೇಲೇರುತ್ತದೆ. ನಮ್ಮ ಆಜ್ಞಾ ಚಕ್ರವೇ ಕ್ಷೀರ ಸಾಗರ. ಇಂತಹ ಕ್ಷೀರ ಸಾಗರದಲ್ಲಿ ಸಹಸ್ರಾರದತ್ತ ಹೆಡೆಯೆತ್ತಿ ನಿಂತ ಶೇಷ ಶಕ್ತಿ ಹಾಗೂ ಅದರ ಮೇಲೆ ಮಲಗಿ ದರ್ಶನವನ್ನೀಯುವ ಅನಂತ ಪದ್ಮನಾಭ ಭಗವಂತ ಮಹೋರಗಃ.

೬೭೯) ಮಹಾಕ್ರತುಃ

'ಕ್ರತು' ಎಂದರೆ ಒಂದು ಅರ್ಥದಲ್ಲಿ ಕರ್ಮ ಅಥವಾ ಕ್ರಿಯೆ; ಇನ್ನೊಂದು ಅರ್ಥ ಜ್ಞಾನ. ನಿಶ್ಚಯ ಅಥವಾ ಖಚಿತ ಜ್ಞಾನದಿಂದ ಕರ್ಮ(ಸೃಷ್ಟಿ-ಸ್ಥಿತಿ-ಸಂಹಾರ) ಮಾಡುವ ಭಗವಂತ ಮಹಾಕ್ರತುಃ. ಯಜ್ಞದಲ್ಲಿ ಮೂರುಹೊತ್ತು ಮಾಡತಕ್ಕ ಯಜ್ಞಕರ್ಮ ಕ್ರತು. ನಾವು ಮಾಡುವ ಯಜ್ಞ-ಯಾಗಾದಿಗಳು ಭಗವಂತನಲ್ಲಿ ಅರ್ಪಿತವಾದಾಗ ಅದು ಮಹಾಕ್ರತುವಾಗುತ್ತದೆ. ಹೀಗೆ ನಿಶ್ಚಯ ಜ್ಞಾನದಿಂದ ಮಾಡುವ ಯಜ್ಞವನ್ನು ಸ್ವೀಕರಿಸುವ ಭಗವಂತ ಮಹಾಕ್ರತುಃ.

೬೮೦) ಮಹಾಯಜ್ವಾ

'ಯಜ್ವಾ' ಎಂದರೆ ಯಜ್ಞ ಮಾಡಿಸುವ ಯಜಮಾನ. ಭಗವಂತ ಹಿರಿಯ ಯಾಜಕ. ಯಜಮಾನನೊಳಗೆ ನಿಂತು ಎಲ್ಲವನ್ನೂ ಮಾಡಿಸುವ ಆತ ಮಹಾಯಜ್ವಾ.

೬೮೧) ಮಹಾಯಜ್ಞ

ಯಾರಿಂದ ಯಜ್ಞ ಮಹತ್ತಾಗುತ್ತದೋ ಅವನು ಮಹಾಯಜ್ಞ. ಯಜ್ಞದಲ್ಲಿ ನೆಲೆಸಿ, ಯಜ್ಞಗಳಿಂದ ಆರಾಧ್ಯನಾದ ಭಗವಂತ ಮಹಾಯಜ್ಞ.

೬೮೨) ಮಹಾಹವಿಃ

ಯಜ್ಞದಲ್ಲಿ ಅರ್ಪಿಸುವ ಹವಿಸ್ಸನ್ನು ಸ್ವೀಕರಿಸುವ, ಯಾಗದಿಂದ ಆರಾಧಿಸಲ್ಪಡುವ, ದೇವತೆಗಳ ಒಡೆಯ, ಸರ್ವಶಬ್ದ ವಾಚ್ಯ ಭಗವಂತ ಮಹಾಹವಿಃ.

ಸ್ತವ್ಯಃ ಸ್ತವಪ್ರಿಯಃ ಸ್ತೋತ್ರಂ ಸ್ತುತಿಃ ಸ್ತೋತಾ ರಣಪ್ರಿಯಃ ।
ಪೂರ್ಣಃ ಪೂರಯಿತಾ ಪುಣ್ಯಃ ಪುಣ್ಯಕೀರ್ತಿರನಾಮಯಃ ॥೭೬॥

೬೮೩) ಸ್ತವ್ಯಃ

ಎಲ್ಲಾ ಸ್ತೋತ್ರಗಳಿಂದ ಸ್ತುತಿಸಲ್ಪಡಬೇಕಾದವನು ಸ್ತವ್ಯಃ.

೬೮೪) ಸ್ತವಪ್ರಿಯಃ

ನಾವು ಭಕ್ತಿಯಿಂದ ಸ್ತೋತ್ರ ಮಾಡಿದರೆ ಅದನ್ನು ಪ್ರೀತಿಸುವವನು.

೬೮೫) ಸ್ತೋತ್ರಮ್

ಸ್ತುತಿಗಳಲ್ಲಿ ವಾಚ್ಯನಾಗಿ ನೆಲೆಸಿದವನು.

೬೮೬) ಸ್ತುತಿಃ

ಸ್ತವನ ಕ್ರಿಯೆಯಲ್ಲಿ ಇರುವವನು.

೬೮೭) ಸ್ತೋತಾ

ಸ್ತುತಿಸುವವನೊಳಗಿರುವವನು.

೬೮೮) ರಣಪ್ರಿಯಃ

ಗುಣಗಾನ ಮಾಡುವ ವೇದ ಶಬ್ದವನ್ನು ಮೆಚ್ಚುವವನು. ದುಷ್ಟರ ಜೊತೆಗೆ ಕದನ ಕುತೂಹಲಿ.

೭೮೯) ಪೂರ್ಣಃ

ನಾವು ಶಾಂತಿ ಮಂತ್ರಗಳಲ್ಲಿ ಈ ರೀತಿ ಹೇಳುತ್ತೇವೆ:

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೆ.
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ
ಓಂ ಶಾಂತಿಃ ಶಾಂತಿಃ ಶಾಂತಿಃ

ಅಂದರೆ "ಅದೂ ಪೂರ್ಣ, ಇದೂ ಪೂರ್ಣ, ಪೂರ್ಣದಿಂದ ಪೂರ್ಣ ಉಂಟಾಗುತ್ತದೆ, ಪೂರ್ಣದಿಂದ ಪೂರ್ಣವನ್ನು ತೆಗೆದು ಹಾಕಿದರೆ ಪೂರ್ಣವೇ ಉಳಿಯುತ್ತದೆ" ಎಂದರ್ಥ. ಭಗವಂತ ನಮ್ಮೊಳಗೂ ಇದ್ದಾನೆ ಹೊರಗೂ ಇದ್ದಾನೆ. ಆತ ಒಳಗೂ ಪೂರ್ಣ, ಹೊರಗೂ ಪೂರ್ಣ. ಆತ ಅವತಾರದಲ್ಲೂ ಪೂರ್ಣ, ಅವತಾರದ ನಂತರವೂ ಪೂರ್ಣ. ಆತ ಹಣತೆಯಂತೆ. ಒಂದು ಹಣತೆಯಿಂದ ಇನ್ನೊಂದು, ಇನ್ನೊಂದರಿಂದ ಮತ್ತೊಂದು ಹೀಗೆ ಸಹಸ್ರಾರು ಹಣತೆಗಳನ್ನು ಹಚ್ಚಿದರೂ, ಮೂಲ ಹಣತೆ ಏನನ್ನೂ ಕಳೆದುಕೊಳ್ಳುವುದಿಲ್ಲ. ಎಲ್ಲಾ ಸದ್ಗುಣಗಳಿಂದ ಪೂರ್ಣನಾದ ಸರ್ವ ಶಬ್ದವಾಚ್ಯ ಭಗವಂತ ಪೂರ್ಣಃ.

೭೯೦) ಪೂರಯಿತಾ

ನಮಗೆ ಯಥಾರ್ಥ ಜ್ಞಾನ ಕೊಟ್ಟು ಮೋಕ್ಷದತ್ತ ಕೊಂಡೊಯ್ಯುವ ಭಗವಂತ ಪೂರಯಿತಾ. ಭಗವಂತ ಸೂರ್ಯನಾದರೆ ನಾವು ಮಿಂಚು ಹುಳದಂತೆ, ಆತ ಕಡಲಾದರೆ ನಾವು ಕೊಡದಂತೆ. ಕಡಲಿನಿಂದ ನಾವು ನಮ್ಮನಮ್ಮ ಕೊಡವನ್ನು ತುಂಬಿಸಿಕೊಳ್ಳಬೇಕು. ಅವರವರ ಯೋಗ್ಯತೆಗೆ ತಕ್ಕಂತೆ ಇದನ್ನು ಮಾಡಿಸುವವನೂ ಅವನೇ.

೭೯೧) ಪುಣ್ಯಃ

ಪುಣ್ಯ ಎಂದರೆ ಪವಿತ್ರ ಅಥವಾ ಪಾವನ. ಭಗವಂತನ ಜ್ಞಾನ ನಮ್ಮನ್ನು, ನಮ್ಮ ಮನಸ್ಸನ್ನು ಪಾವನ ಗೊಳಿಸುವ ಏಕೈಕ ಸಾಧನ. ಮಾನಸಿಕವಾಗಿ ಗೊಂದಲ, ದುಃಖ, ನಿರಾಶೆಗೊಳಗಾದ ಮನಸ್ಸನ್ನು ಭಗವಂತನತ್ತ ಹರಿಸಿದಾಗ ಮನಸ್ಸು ನೆಮ್ಮದಿಯಿಂದಿರುತ್ತದೆ. ಇದೇ ಪುಣ್ಯ ಅಥವಾ ಪಾವಿತ್ರ್ಯ. ಲೋಕೋತ್ತರವಾದ ಸುಂದರ ಭಗವಂತನ ಚಿಂತನೆಯಿಂದ ಮನಸ್ಸು ಹೂವಿನಂತೆ ಅರಳುತ್ತದೆ. ಬಾಡುವುದಿಲ್ಲ, ಮುದುಡುವುದಿಲ್ಲ. ಹೀಗೆ ಪವಿತ್ರನೂ ಪರಮ ಸುಂದರನೂ ಆದ ಭಗವಂತ ಪುಣ್ಯಃ

೭೯೨) ಪುಣ್ಯಕೀರ್ತಿಃ

ಕೀರ್ತನ ಮಾತ್ರದಿಂದ ಎಲ್ಲಾ ಪಾಪಗಳನ್ನು ಕಳೆಯುವ ಭಗವಂತ ಪುಣ್ಯಕೀರ್ತಿಃ. ಅವನ ಗುಣಗಾನ ನಮ್ಮ ಬದುಕನ್ನು ಪಾವನಗೊಳಿಸುತ್ತದೆ. ಭಗವನ್ನಾಮ ನಮ್ಮನ್ನು ಉದ್ಧಾರ ಮಾಡುತ್ತದೆ.

೭೯೩) ಅನಾಮಯಃ

'ಆಮಯ' ಎಂದರೆ ದೋಷಗಳು. ಬೆಂಕಿಯ ಜೊತೆಗೆ ಹೊಗೆ ಇರುವಂತೆ ನಮ್ಮಲ್ಲಿ ದೋಷಗಳು ಇದ್ದೇ ಇರುತ್ತದೆ. ಆದರೆ ಭಗವಂತನಿಗೆ ಯಾವುದೇ ದೋಷದ ಲೇಪವಿಲ್ಲ. ಆತ ಪೂರ್ಣ ನಿರ್ದೋಷ. ಇಂತಹ ಭಗವಂತ ಅನಾಮಯಃ

ಮನೋಜವಸ್ತೀರ್ಥಕರೋ ವಸುರೇತಾ ವಸುಪ್ರದಃ ।
ವಸುಪ್ರದೋ ವಾಸುದೇವೋ ವಸುರ್ವಸುಮನಾ ಹವಿಃ ॥೮೭॥

೭೯೪) ಮನೋಜವಃ

ಎಲ್ಲಕ್ಕಿಂತ ವೇಗವಾಗಿ ಹೋಗುವ ವಸ್ತು ಮನಸ್ಸು. ಆದರೆ ಭಗವಂತನ ವೇಗ ಮನಸ್ಸಿನ ವೇಗಕ್ಕಿಂತ ಮಿಗಿಲು. ಆದ್ದರಿಂದ ಆತ ಮನೋಜವಃ. ಇಂತಹ ಭಗವಂತನನ್ನು ತಲುಪಬೇಕಾದರೆ ನಾವು ನಮ್ಮ ಅಹಂಕಾರವನ್ನು ಸಂಪೂರ್ಣವಾಗಿ ಕಳಚಿ ಆತನಲ್ಲಿ ಶರಣಾಗಬೇಕು. ಆಗ ಮಾತ್ರ ನಮ್ಮ ಮನಸ್ಸು ಆತನನ್ನು ಮುಟ್ಟಬಲ್ಲದು.

೬೯೫) ತೀರ್ಥಕರಃ

ಭಗವಂತನ ಕಡೆಗೆ ಹೋಗಬೇಕಾದರೆ ಹಂತ-ಹಂತವಾಗಿ ಹೋಗಬೇಕು. ಮೊದಲು ನಮ್ಮ ಮನಸ್ಸು ಒಳ್ಳೆಯ ಕಡೆ ಹರಿಯಬೇಕು. ಮನಸ್ಸಿನಲ್ಲಿ ಬೇಡವಾದ ಪ್ರಾಪಂಚಿಕ ವಿಷಯ ತುಂಬಿಕೊಂಡರೆ ನಾವು ಭಗವಂತನತ್ತ ಪಯಣಿಸಲು ಸಾಧ್ಯವಿಲ್ಲ. ಈ ಕಾರಣಕ್ಕಾಗಿ ಭಗವಂತ ದೇವಸ್ಥಾನ ಹಾಗೂ ಪುಣ್ಯ ತೀರ್ಥಗಳನ್ನು ಸೃಷ್ಟಿ ಮಾಡಿದ. ಗಂಗೆ ಕಾವೇರಿಯಂತಹ ಪವಿತ್ರ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ನಮ್ಮ ಮನಸ್ಸಿನ ಕಲ್ಮಶ ಹೊರಟು ಹೋಗಿ ಮನಸ್ಸು ಭಗವಂತನೆಡೆಗೆ ಹರಿಯುತ್ತದೆ. ಶಾಸ್ತ್ರಗಳನ್ನೂ ಕೂಡಾ ತೀರ್ಥ ಎಂದು ಕರೆಯುತ್ತಾರೆ. ಸ್ವಚ್ಛ ಮನಸ್ಸಿನಿಂದ ಓದಲು ಶಾಸ್ತ್ರಗಳ ನಿರ್ಮಾಣ ಕೂಡಾ ಭಗವಂತನ ಸೃಷ್ಟಿ. ಇದರಿಂದ ಮನಸ್ಸಿಗೆ ವೇಗ ಸಿಗುತ್ತದೆ. ಹೀಗೆ ಪವಿತ್ರ ತೀರ್ಥಗಳ, ಶಾಸ್ತ್ರಗಳ ಸೃಷ್ಟಿ ಮಾಡಿದ ಭಗವಂತ ತೀರ್ಥಕರಃ

೬೯೬) ವಸುರೇತಾಃ

'ವಸುಗಳು' ಎಂದರೆ ದೇವತೆಗಳು. ಎಲ್ಲಾ ದೇವತೆಗಳ ಸೃಷ್ಟಿಗೆ ಕಾರಣ ಪುರುಷನಾದ ಭಗವಂತ ವಸುರೇತಾಃ.

೬೯೭) ವಸುಪ್ರದಃ

ಮೋಕ್ಷವೆಂಬ ಸಿರಿಯನ್ನೀಯುವವ. ನಾವು ದಾರಿತಪ್ಪಿದಾಗ ಎಲ್ಲವನ್ನೂ ಕಸಿದುಕೊಳ್ಳುವವನು. (ಏಕೆಂದರೆ ದೇವರ ಸಾಮ್ರಾಜ್ಯದಲ್ಲಿ ತಪ್ಪಿಗೆ ಸಜೆ ತಪ್ಪಿದ್ದಲ್ಲ)

೬೯೮) ವಸುಪ್ರದಃ

ಈ ನಾಮ ಒಂದೇ ಕಡೆ ಎರಡು ಸಾರಿ ಬಂದಿದೆ. ವ +ಸು+ಪ್ರದ; ಇಲ್ಲಿ 'ವ' ಅಂದರೆ ಜ್ಞಾನ, 'ಸು' ಎಂದರೆ ಸುಖ ಅಥವಾ ಆನಂದ. ಆದ್ದರಿಂದ ನಮ್ಮೊಳಗಿನಿಂದ ಅರಿವಿನ ಆನಂದವನ್ನು ಅರಳಿಸುವ ಭಗವಂತ ವಸುಪ್ರದಃ. ಒಮ್ಮೆ ನಮ್ಮ ಅಂತರಂಗದ ಅರಿವು ತೆರೆದುಕೊಂಡಾಗ, ಹೊರಗಿನ ಯಾವ ಸಲಕರಣೆಯೂ ಬೇಡ, ಯಾವುದರ ನೆರವೂ ಬೇಡ, ಯಾವ ಪುಸ್ತಕವೂ ಬೇಡ, ಯಾವ ಓದೂ ಬೇಡ. ಮನಸ್ಸಿನ ಈ ಸ್ಥಿತಿಯಲ್ಲಿ ನಮಗೆ ಅಧ್ಯಾತ್ಮದ ಮೇಲೆ ಅಧಿಕಾರ ಬರುತ್ತದೆ. ಇದು ನಮ್ಮ ಹೃದಯ ಮಾತನಾಡುವ ಅದ್ಭುತ ಸ್ಥಿತಿ. ಇಂತಹ ಸ್ಥಿತಿಯಲ್ಲಿ ನಮಗೆ ಅಧ್ಯಾತ್ಮದ ಬಗ್ಗೆ ಬರೆಯುವ ಹಾಗೂ ಮಾತನಾಡುವ ಶಕ್ತಿ ಬರುತ್ತದೆ. ಹೀಗೆ ನಮಗೆ ನಮ್ಮ ಹೃದಯದಿಂದ ಅರಿವು ಆನಂದವಾಗಿ ಚಿಮ್ಮುವ ಸ್ಥಿತಿಯನ್ನು ಕೊಡುವ ಭಗವಂತ ವಸುಪ್ರದಃ.

೬೯೯) ವಾಸುದೇವಃ

ವಾಸು+ದೇವ-ವಾಸುದೇವ. ಭಗವಂತ ವಾಸು, ಅಂದರೆ ತನ್ನನ್ನು ತಾನು ಮುಚ್ಚಿಕೊಂಡವನು. ಯಾವಾಗ ನಾವು ಹದಿನೈದು ಬೇಲಿಗಳನ್ನು ದಾಟಿ, ಸಮಾಧಿ ಸ್ಥಿತಿಯಿಂದ ಆಳಕ್ಕಿಳಿದು, ಹದಿನಾರನೇ ಜೀವಸ್ವರೂಪವನ್ನು ಕಾಣುತ್ತೇವೋ, ಆಗ ಭಗವಂತನ ಸಾಕ್ಷಾತ್ಕಾರವಾಗುತ್ತದೆ; ಈ ಸ್ಥಿತಿಯಲ್ಲಿ ಮುಚ್ಚಿಕೊಂಡ ಭಗವಂತ ದೇವನಾಗಿ ತೆರೆದುಕೊಳ್ಳುತ್ತಾನೆ. ಭಗವಂತನನ್ನು ಕಾಣಬೇಕಾದರೆ ಮೊದಲು ನಾವು ನಮ್ಮನ್ನು ಕಾಣಬೇಕು. ನಮ್ಮ ಅರಿವೇ ನಮಗಿಲ್ಲದೆ ಭಗವಂತನನ್ನು ಕಾಣುವುದು ಅಸಾಧ್ಯ. ನಾವು ನಮ್ಮ ಜೀವಸ್ವರೂಪವನ್ನು ಕಂಡಾಗ, ಅದರೊಳಗಿನಿಂದ ಸಾಕ್ಷಾತ್ಕಾರವಾಗುವ ಭಗವಂತ ದೇವಃ. ನಾವು ನಮ್ಮ ಪಂಚಕೋಶಗಳ(ಅನ್ನಮಯ ಕೋಶ, ಪ್ರಾಣಮಯ ಕೋಶ ,

ವಿಜ್ಞಾನಮಯ ಕೋಶ, ಮನೋಮಯ ಕೋಶ ಹಾಗೂ ಆನಂದಮಯ ಕೋಶ) ಪರದೆಯಲ್ಲಿದ್ದಾಗ ವಾಸುವಾಗಿ; ಪರದೆಯಿಂದಾಚೆಗೆ ಬಂದು ಜೀವ ಸ್ವರೂಪವನ್ನು ಕಂಡಾಗ ದೇವನಾಗಿ ದರ್ಶನ ಕೊಡುವ ಭಗವಂತ ವಾಸುದೇವಃ.

ಸಹಸ್ರನಾಮ ವಿವರಣೆ-೭೦೦

೭೦೦) ವಸುಃ

ಭಗವಂತ ಸರ್ವೋತ್ಕೃಷ್ಟವಾದ ಜ್ಞಾನಾನಂದ ಸ್ವರೂಪ. ನಮಗಿರುವ ಆನಂದ ಒಂದು ಸೂಕ್ಷ್ಮ ಬಿಂದು ಹಾಗೂ ಅದು ದುಃಖದ ಜೊತೆಗಿರುವ ಆನಂದ. ಆದರೆ ಭಗವಂತ ಎಂದೂ ದುಃಖಸ್ಪರ್ಶವಿಲ್ಲದ, ಎಂದೂ ಅಳಿವಿರದ, ಅನಂತ ಜ್ಞಾನಾನಂದಸ್ವರೂಪ.

೭೦೧) ವಸುಮನಾಃ

ಜ್ಞಾನಾನಂದ ಸ್ವರೂಪಭೂತವಾದ ಮನಸ್ಸುಳ್ಳ ಭಗವಂತ ವಸುಮನಾಃ.

೭೦೨) ಹವಿಃ

'ಹವನ' ಎಂದರೆ ಆಹುತಿ; ಯಾರಿಗೋಸ್ಕರ ನಾವು ಆಹುತಿ ಕೊಡುತ್ತೇವೋ ಆತ ಹವಿಃ.

ನಾವು ಎರಡು ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತೇವೆ. ನಮ್ಮ ಮನಸ್ಸನ್ನು ಕ್ರಿಯೆಯಲ್ಲಿ ತೊಡಗಿಸಿದರೆ ಅದು ಧ್ಯಾನ. ದೈಹಿಕ ಇಂದ್ರಿಯಗಳನ್ನು ಕ್ರಿಯೆಯಲ್ಲಿ ತೊಡಗಿಸಿದರೆ ಅದು ಕರ್ಮ. ನಾವು ನಮ್ಮ ಮನಸ್ಸನ್ನು ಹಾಗೂ ಕರ್ಮವನ್ನು ಭಗವಂತನತ್ತ ಹರಿದು ಬಿಡಬೇಕು. ಅದೇ ನಿಜವಾದ ಹವನ. "ನಿನ್ನ ಮನಸ್ಸು ಭಗವಂತನನ್ನೇ ನೆನೆಯಲಿ, ಭಗವಂತನ ನಾಮಗಳ ಗುಣಾನುಸಂಧಾನದಲ್ಲಿ ಮೈಮರೆಯಲಿ, ನಿನ್ನ ಸಮಸ್ತ ಇಂದ್ರಿಯಗಳು ಭಗವಂತನ ಅರ್ಪಣರೂಪವಾದ ಕರ್ಮದಲ್ಲಿ ತೊಡಗಲಿ ಆಗ ಭಗವಂತ ಹವಿಯಾಗಿ ನಿನ್ನ ರಕ್ಷಣೆ ಮಾಡುತ್ತಾನೆ"

ಸದ್ಗತಿಃ ಸತ್ಕೃತಿಃ ಸತ್ತಾ ಸದ್ಭೂತಿಃ ಸತ್ಪರಾಯಣಃ ।
ಶೂರಸೇನೋ ಯದುಶ್ರೇಷ್ಠಃ ಸನ್ನಿವಾಸಃ ಸುಯಾಮುನಃ ॥೭೬॥

೭೦೩) ಸದ್ಗತಿಃ

ಭಗವಂತನ ಗುಣಗಾನ ಮಾಡುತ್ತಾ ನಾಮ ಜಪ ಮಾಡುತ್ತಾ ಕುಳಿತರೆ ನಮ್ಮ ದೈನಂದಿನ ಚಟುವಟಿಕೆಯನ್ನು ಯಾರು ಮಾಡುತ್ತಾರೆ? ಈ ಪ್ರಶ್ನೆ ಎಲ್ಲರಲ್ಲೂ ಮೂಡುತ್ತದೆ. ನಾವು ಮಾಡುವ ನಮ್ಮ ದೈನಂದಿನ ಕೆಲಸ ಕಾರ್ಯವನ್ನು ಭಗವದರ್ಪಣೆಯಾಗಿ ಮಾಡುವುದೇ ಮಹಾಹವನ. ಇದು ಸಜ್ಜನರಿಗೆ ಗಮ್ಯನಾದ ಭಗವಂತನನ್ನು ಸೇರಲು ಇರುವ ಅತ್ಯಂತ ಸರಳ ವಿಧಾನ. ಹೀಗೆ ಸಜ್ಜನರಿಗೆ, ಜ್ಞಾನಿಗಳಿಗೆ, ಸಾತ್ವಿಕರಿಗೆ ಗಮ್ಯನಾದ ಭಗವಂತ ಸದ್ಗತಿಃ.

೭೦೪) ಸತ್ಕೃತಿಃ

ನಮ್ಮಿಂದ ಸಮೀಚೀನವಾದ ಕ್ರಿಯೆಯನ್ನು ಮಾಡಿಸಿ, ನಮ್ಮ ಜ್ಞಾನವೃದ್ಧಿ ಮಾಡಿಸುವ ಭಗವಂತ ಸತ್ಕೃತಿಃ .

೭೦೫) ಸತ್ತಾ

'ಸತ್ತಾ' ಅಂದರೆ 'ಇರುವಿಕೆ' (Pure Existence). ಈ ಜಗತ್ತಿನಲ್ಲಿ ಇರುವ ಏಕಮಾತ್ರ 'ನಿರ್ದೋಷತ್ವವಾದ ಇರುವಿಕೆ' ಕೇವಲ ಭಗವಂತ. ಯಾವ ದೋಷವೂ ಇಲ್ಲದ ಪರಿಶುದ್ಧ ಇರುವಿಕೆಯ ಭಗವಂತ ಸತ್ತಾ.

೭೦೬) ಸದ್ಭೂತಿಃ

ಸಜ್ಜನರಿಗೆ ಭೂತಿಯನ್ನು ಕೊಡುವ ಭಗವಂತ, ಜ್ಞಾನಿಗಳಿಗೆ ಉನ್ನತಿಯನ್ನು ಕೊಟ್ಟು ಎತ್ತರಕ್ಕೇರಿಸುವ ಸದ್ಭೂತಿಃ.

೭೦೭) ಸತ್ಪರಾಯಣಃ

ಸಜ್ಜನರು ಹೋಗಿ ಸೇರಬೇಕಾದ ಕೊನೇಯ ನಿಲುದಾಣ **(Last Destination).** ಅಲ್ಲಿಂದ ಮುಂದೆ ಪ್ರಯಾಣವಿಲ್ಲ. ನಮ್ಮ ಪಯಣದ ಕೊನೇಯ ನಿಲ್ದಾಣ ಭಗವಂತ-ಸತ್ಪರಾಯಣಃ

೭೦೮) ಶೂರಸೇನ

ಶೂರರಾದ ಸೈನಿಕರ ಪಡೆಯುಳ್ಳವನು ಶೂರಸೇನ. ಭಗವಂತನ ಸೇನೆ ದೇವತೆಗಳ ಸೇನೆ. ಭಗವಂತ ದೇವತೆಗಳ ಜೊತೆಗಿರುವ ತನಕ ಅವರಿಗೆ ಎಂದೂ ಸೋಲಿಲ್ಲ. ಆದರೆ ಅಹಂಕಾರದಿಂದ ದೇವರಿಂದ ದೂರ ಸರಿದವರಿಗೆ ಎಂದೂ ಜಯವಿಲ್ಲ!

೭೦೯) ಯದುಶ್ರೇಷ್ಠಃ

ಯದುವಂಶದಲ್ಲಿ ಶ್ರೇಷ್ಠನಾಗಿ ಹುಟ್ಟಿಬಂದ, ದುಷ್ಟ ಸಂಹಾರಕ, ಎಲ್ಲರಿಗಿಂತ ಹಿರಿಯ ಭಗವಂತ ಯದುಶ್ರೇಷ್ಠಃ

೭೧೦) ಸನ್ನಿವಾಸಃ

ಸಜ್ಜನರಿಗೆ ಸದಾ ನೆಲೆಯಾದ ಭಗವಂತ ಸದಾ ಅವರಲ್ಲಿ ನಿವಾಸ ಮಾಡುವ ಸನ್ನಿವಾಸಃ.

೭೧೧) ಸುಯಾಮುನಃ

ಯಮುನೆಯ ನೀರನ್ನು ನಿರ್ದೋಷಗೊಳಿಸಿದ ಭಗವಂತ ಸುಯಾಮುನಃ. ಯಮುನೆಯ ನೀರು ಕಾಲಿಯನ ವಿಷದಿಂದ ಕೆಟ್ಟು ಹೋದಾಗ, ಆ ಕಾಲಿಯನ ತಲೆಯಮೇಲೆ ನಿಂತು ನಲಿದಾಡಿ ಯಮುನೆಯನ್ನು ಸ್ವಚ್ಛಗೊಳಿಸಿ ಹೊಸ ಚೈತನ್ಯವನ್ನು ಕೊಟ್ಟ ಭಗವಂತ ಸುಯಾಮುನಃ

ನಮ್ಮ ಒಳ ಪ್ರಪಂಚದಲ್ಲೂ ಯಮುನೆಯೊಬ್ಬಳಿದ್ದಾಳೆ. ಇದು ನಮ್ಮೊಳಗಿರುವ ಶಕ್ತಿ ಕೇಂದ್ರಗಳಿಗೆ ಸಂಬಂಧಪಟ್ಟ ವಿಷಯ. ನಮ್ಮ ಮೂಲಾಧಾರದ ಎಡಭಾಗಕ್ಕೆ 'ಇಡಾ' ಹಾಗೂ ಬಲ ಭಾಗಕ್ಕೆ 'ಪಿಂಗಳ' ಎನ್ನುವ ಎರಡು ನಾಡಿಗಳು ಹಾವಿನಂತೆ ಸುಷಮ್ನಾ ನಾಡಿಯನ್ನು ಹೆಣೆದುಕೊಂಡು ಊರ್ಧ್ವಮುಖವಾಗಿ ಆಜ್ಞಾ ಚಕ್ರದಲ್ಲಿ ಸಂಗಮಿಸುತ್ತವೆ. ಈ ನಾಡಿಗಳನ್ನು ಗಂಗಾ(ಇಡಾ), ಯಮುನಾ(ಪಿಂಗಳ) ಹಾಗೂ ಸರಸ್ವತಿ(ಸುಷಾಮ್ನಾ) ಎಂದು ಕರೆಯುತ್ತಾರೆ. ಕುಂಡಲಿನಿ ನಿಯಂತ್ರಣ ತಿಳಿಯದವರಿಗೆ ಕುಂಡಲಿನಿ ಜಾಗೃತವಾದರೆ ಹುಚ್ಚುಹಿಡಿಯಬಹುದು! ಇಂತಹ ಸಂದರ್ಭದಲ್ಲಿ ಜಾಗೃತಗೊಂಡ ಕುಂಡಲಿನಿಯ ತಲೆಯಮೇಲೆ ನಿಂತು ನಾಟ್ಯವಾಡಿ ನಮಗೆ ಶಕ್ತಿಯ ಆನಂದವನ್ನು ಕೊಡುವ ಭಗವಂತ ಸುಯಾಮುನಃ.

ಭೂತಾವಾಸೋ ವಾಸುದೇವಃ ಸರ್ವಾಸುನಿಲಯೋನಲಃ ।
ದರ್ಪಹಾ ದರ್ಪದೋ ದೃಪ್ತೋ ದುರ್ಧರೋಥಾಪರಾಜಿತಃ ॥೭೬॥

೭೧೨) ಭೂತಾವಾಸಃ

ಎಲ್ಲಾ ಭೂತಗಳ ಒಳಗೆ ಆವಾಸ ಮಾಡುವ ಭಗವಂತ ಭೂತಾವಾಸಃ. ಚೇತನಾಚೇತನ, ಚರಾಚರಾತ್ಮಕ, ಸಮಸ್ತ ಪ್ರಾಣಿಗಳ ಒಳಗೆ, ಪಂಚಭೂತಗಳಲ್ಲಿ ನೆಲೆಸಿರುವ ಭಗವಂತ ಭೂತಾವಾಸಃ.

೭೧೩) ವಾಸುದೇವಃ

ನಮ್ಮ ಜೀವನದಲ್ಲಿ ಎಚ್ಚರ-ಕನಸು-ನಿದ್ದೆ ಈ ಮೂರು ಹಂತಗಳು ಯಾವಾಗಲೂ ಇರುತ್ತವೆ. ಈ ಹಂತಗಳಿಗೆ ಭಗವಂತನ ಅರಿವೂ ಬೇಡ, ಕುಂಡಲಿನಿ ಜಾಗೃತವಾಗುವುದು ಬೇಡ. ಈ ಹಂತಗಳನ್ನು ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧರೂಪಿ ಭಗವಂತ ನಿಯಂತ್ರಿಸುತ್ತಾನೆ. ಈ ಮೂರು ಹಂತಗಳ ಆಚೆಗಿನ ಸ್ಥಿತಿ 'ತುರಿಯ'. ಈ ಸ್ಥಿತಿಯನ್ನು

ತಲುಪಬೇಕಾದರೆ ಕುಂಡಲಿನಿ ಜಾಗೃತವಾಗಬೇಕು. ಈ ಸ್ಥಿತಿಯನ್ನು ನಿಯಂತ್ರಿಸುವ ಭಗವಂತನ ರೂಪ ವಾಸುದೇವ ರೂಪ. ಜ್ಞಾನಾನಂದದ ಸ್ಫುರಣದೊಂದಿಗೆ, ಅಂತರಂಗದ ಜಾಗೃತಾವಸ್ಥೆಯಲ್ಲಿ, ಅಂತರಾತ್ಮನನ್ನು ಕಾಣುವ ಅನುಭೂತಿಗೊಳಪಡಿಸುವ ಭಗವಂತ ವಾಸುದೇವಃ.

೭೧೪) ಸರ್ವಾಸುನಿಲಯಃ

ಪ್ರತಿಯೊಂದು ಜೀವದೊಳಗೆ, ಪ್ರತಿಯೊಂದು ಇಂದ್ರಿಯದಲ್ಲಿ ನೆಲೆಸಿರುವ, ಸರ್ವ ಪ್ರಾಣಿಗಳಿಗಾಸರೆಯಾದ ಭಗವಂತ ಸರ್ವಾಸುನಿಲಯಃ

೭೧೫) ಅನಲಃ

ಮಿತಿಯಿಲ್ಲದ ಶಕ್ತಿ ಸಂಪನ್ನ, ಅಗ್ನಿಯ ಅಂತರ್ಯಾಮಿ ಭಗವಂತ ಅನಲಃ.

೭೧೬) ದರ್ಪಹಾ

ದರ್ಪ+ಹಾ. ದರ್ಪವನ್ನು ದಮನಿಸುವ(ನಾಶಮಾಡುವ) ಭಗವಂತ ದರ್ಪಹಾ. ಸಾಮಾನ್ಯವಾಗಿ ಮನುಷ್ಯನಿಗೆ ಅನುಕೂಲ, ಅಧಿಕಾರ ಸಿಕ್ಕಾಗ ಅದರಿಂದ ಅಹಂಕಾರ ಬರುತ್ತದೆ. ಶ್ರೀಮಂತಿಕೆಯ-ಮದ, ಯೌವನದ-ಮದ, ಅಧಿಕಾರದ-ಮದ, ವಿದ್ಯೆಯ-ಮದ, ಹೀಗೆ ಅನೇಕ ಕಾರಣದಿಂದಾಗಿ ತಾನು ದೊಡ್ಡ ವ್ಯಕ್ತಿ ಎನ್ನುವ ದರ್ಪ ನಮ್ಮಲ್ಲಿ ಮನೆಮಾಡುತ್ತದೆ. ಇದರ ಪರಿಣಾಮ ನಾವು ಇನ್ನೊಬ್ಬರನ್ನು ಕೀಳಾಗಿ ಕಾಣುತ್ತೇವೆ. ಕೆಲವೊಮ್ಮೆ ಒಳ್ಳೆಯವರೂ ಕೂಡಾ ಇಂತಹ ದರ್ಪಕ್ಕೆ ಬಲಿಬೀಳುತ್ತಾರೆ. ಇಂತಹ ಸಂದರ್ಭದಲ್ಲಿ ಭಗವಂತ ನಮ್ಮ ದರ್ಪ ಹರಣ ಮಾಡುತ್ತಾನೆ. ವಿಷ್ಣು ಪುರಾಣದಲ್ಲಿ ಹೇಳುವಂತೆ :

ಯಸ್ಯ ಅನುಗ್ರಹಂ ಇಚ್ಛಾಮಿ ತಸ್ಯ ವಿತ್ತಂ ಹರಾಮ್ಯಹಂ

ಶ್ರೀಮಂತಿಕೆಯಿಂದ ಭಗವಂತನನ್ನು ಮರೆಯುವ ಸಂದರ್ಭ ಬಂದಾಗ, ಅಂತವರನ್ನು ದಿವಾಳಿ ಮಾಡಿ ಉದ್ಧರಿಸುವ ಭಗವಂತ ದರ್ಪಹಾ. ಇದನ್ನೇ ಭಾಗವತದಲ್ಲಿ ಹೀಗೆ ಹೇಳಿದ್ದಾರೆ:

ಯಸ್ಯಾಹಮನುಗೃಹ್ಣಾಮಿ ಹರಿಷ್ಯೇ ತದ್ಧನಂ ಶನೈಃ ।
ತತೋಽಧನಂ ತ್ಯಜಂತ್ಯಸ್ಯ ಸ್ವಜನಾ ದುಃಖದುಃಖಿನಮ್ ॥ ೧೦-೮೮-೮॥

ಭಗವಂತನ ಮೊದಲ ಪರೀಕ್ಷೆ ಭಕ್ತನ ಕಿಸೆ ಖಾಲಿ ಮಾಡುವುದು. ಕ್ರಮೇಣ ಕೈಯಲ್ಲಿದ್ದ ದುಡ್ಡೆಲ್ಲ ಕರಗಿತು ಎನ್ನುವಾಗ ಬಂಧು-ಬಾಂಧವರು ದೂರ ಸರಿಯುತ್ತಾರೆ. ದುಡ್ಡಿದ್ದಷ್ಟು ಕಾಲ ಬೆನ್ನ ಹಿಂದೆ ಜನ ತಿರುಗಾಡುತ್ತಾರೆ. ಗೌರವ ಸ್ಥಾನಮಾನ ಸಿಗುತ್ತದೆ. ಇದರಿಂದ ಅಹಂಕಾರ ಬಲಿಯುತ್ತದೆ. ದೇವರ ಸ್ಮರಣೆ ಮರೆಯಾಗುತ್ತದೆ. ದುಡ್ಡಿಲ್ಲದಾಗ, ಎಲ್ಲಾ ಜನ ಕೈಬಿಟ್ಟಾಗ ಭಗವಂತ ಕೈಹಿಡಿಯುತ್ತಾನೆ!

೭೧೭) ದರ್ಪದಃ

ನಮ್ಮ ದರ್ಪ ಹರಣ ಮಾಡುವ ಭಗವಂತ, ನಮಗೆ ದರ್ಪದ ಅಗತ್ಯವಿದ್ದಾಗ ಅದನ್ನು ಕೊಡುವವನೂ ಅವನೇ ! ದುಷ್ಟರ ವಿರುದ್ಧ, ಅನ್ಯಾಯದ ವಿರುದ್ಧ ಸೆಟೆದು ನಿಲ್ಲುವ ಕೆಚ್ಚನ್ನು ಕೊಡುವ ಭಗವಂತ ದರ್ಪದಃ. ಸೌಜನ್ಯ ಅನ್ಯಾಯಕ್ಕೆ ಶರಣಾಗುವ ಸ್ಥಿತಿಬಂದಾಗ ಭಗವಂತ ನಮಗೆ ದರ್ಪವನ್ನು ಕೊಟ್ಟು ಸಲಹುತ್ತಾನೆ.

೭೧೮) ದೃಪ್ತಃ

ಯಾರಿಗೂ ಮಣಿಯದ ನಿತ್ಯತೃಪ್ತ ಭಗವಂತ, ದುಷ್ಟರಲ್ಲಿದ್ದು ದರ್ಪ ತೋರಿಸುವ ದೃಪ್ತಃ!

೭೧೯) ದುರ್ಧರಃ

ಭಗವಂತ ಸುಲಭದಲ್ಲಿ ಧ್ಯಾನಕ್ಕೆ ಸಿಗದವನು. ಆತ 'ಏನು-ಎಂತು' ಎಂದು ತಿಳಿಯುವುದು ಕಷ್ಟ. ಆತನನ್ನು ತಿಳಿಯಲು ಅನೇಕ ಜನ್ಮದ ಸಾಧನೆ ಬೇಕು.

೭೧೦) ಅಪರಾಜಿತಃ

ಎಂದೂ ಸೋಲರಿಯದ ಭಗವಂತ ಅಪರಾಜಿತಃ.

ವಿಶ್ವಮೂರ್ತಿರ್ಮಹಾಮೂರ್ತಿರ್ದೀಪ್ತಮೂರ್ತಿರಮೂರ್ತಿಮಾನ್ ।
ಅನೇಕಮೂರ್ತಿರವ್ಯಕ್ತಃ ಶತಮೂರ್ತಿಃ ಶತಾನನಃ ॥೯೦॥

೭೧೧) ವಿಶ್ವಮೂರ್ತಿಃ

ಭಗವಂತ ವಿಶ್ವಮೂರ್ತಿ. ವಿಶ್ವದ ಎಲ್ಲಾ ವಸ್ತುಗಳಲ್ಲೂ ಆತನ ಸನ್ನಿಧಾನವಿದೆ. ನಾವು ಮಾಡುವ ಪ್ರತಿಮೆಗಿಂತ ಹಿರಿಮೆಯುಳ್ಳ ಪ್ರತಿಮೆ ಭಗವಂತನೇ ಮಾಡುವ ಪ್ರತಿಮೆ. ಉದಾಹರಣೆಗೆ ನೇಪಾಳದ ಘಂಡಕೀ ನದಿಯಲ್ಲಿ ಸಿಗುವ ಸಾಲಗ್ರಾಮ, ನರ್ಮದಾ ನದಿಯಲ್ಲಿ ಸಿಗುವ ಶಿವಲಿಂಗ ಇತ್ಯಾದಿ. ಇಷ್ಟೇ ಅಲ್ಲದೆ ಬೆಟ್ಟಗಳು, ನದಿಗಳೂ ಕೂಡಾ ಆತನ ಪ್ರತೀಕ. ಬದರಿಯ ನರ-ನಾರಾಯಣ ಪರ್ವತ, ಹಿಮಾಲಯದ ಕೈಲಾಸ ಪರ್ವತ, ಗಂಗಾತೀರ್ಥ ಇತ್ಯಾದಿ. ಅಗ್ನಿಯಲ್ಲಿ ಅಗ್ನಿನಾರಾಯಣ, ಸೂರ್ಯನಲ್ಲಿ ಸೂರ್ಯ ನಾರಾಯಣ, ಮರದಲ್ಲಿ(ಅಶ್ವತ್ಥ), ಗೋವುಗಳಲ್ಲಿ ಹೀಗೆ ಸಮಸ್ತ ವಿಶ್ವವೇ ಆತನ ಪ್ರತೀಕ.

೭೧೨) ಮಹಾಮೂರ್ತಿಃ

ಇಡೀ ಬ್ರಹ್ಮಾಂಡವೇ ಪ್ರತೀಕವಾಗಿರುವ, ಸರ್ವವ್ಯಾಪಿ ರೂಪವುಳ್ಳ ಭಗವಂತ ಮಹಾಮೂರ್ತಿಃ.

೭೧೩) ದೀಪ್ತಮೂರ್ತಿಃ

ಎಲ್ಲಾ ಕಡೆಯೂ ಬೆಳಕಿನ ಪುಂಜವಾಗಿರುವ, ಪ್ರಕಾಶ ಸ್ವರೂಪ ಭಗವಂತ ದೀಪ್ತಮೂರ್ತಿಃ.

೭೧೪) ಅಮೂರ್ತಿಮಾನ್

ಭಗವಂತ ಜ್ಞಾನಾನಂದ ಸ್ವರೂಪಿ. ಆತನಿಗೆ ಪಾಂಚಭೌತಿಕವಾದ ರೂಪವಿಲ್ಲ. ಆದ್ದರಿಂದ ಆತ ಅಮೂರ್ತಿಮಾನ್.

೭೧೫) ಅನೇಕಮೂರ್ತಿಃ

ಭಗವಂತ ಒಂದೊಂದು ಕಡೆ ಒಂದೊಂದು ರೂಪದಲ್ಲಿ ತುಂಬಿದ್ದಾನೆ. ಪಂಚಕೋಶಗಳಲ್ಲಿ, ಕರ್ಮೇಂದ್ರಿಯಗಳಲ್ಲಿ, ಜ್ಞಾನೇಂದ್ರಿಯಗಳಲ್ಲಿ, ಪಂಚಭೂತಗಳಲ್ಲಿ, ಹೀಗೆ ಅನೇಕ ರೂಪದಲ್ಲಿ ನಮ್ಮ ಒಳಗೂ ಹೊರಗೂ ತುಂಬಿರುವ ಭಗವಂತ ಅನೇಕಮೂರ್ತಿಃ.

೭೧೬) ಅವ್ಯಕ್ತಃ

ಭಗವಂತ ಸರ್ವವ್ಯಾಪಿಯಾದರೂ ಸಹ ಆತ ವ್ಯಕ್ತನಾಗಿ ಕಾಣಿಸಿಕೊಳ್ಳದ ಅವ್ಯಕ್ತ ಮೂರ್ತಿ.

೭೧೭) ಶತಮೂರ್ತಿಃ

ಅನಂತರೂಪಿ ಭಗವಂತ ಶತಮೂರ್ತಿಃ. ಆತನ ಒಂದೊಂದು ಅವತಾರದಲ್ಲೂ ನೂರಾರು ರೂಪಗಳು. ಇದನ್ನು ಕೃಷ್ಣ ಅಷ್ಟೋತ್ತರ ಶತನಾಮದಲ್ಲಿ, ನರಸಿಂಹ ಅಷ್ಟೋತ್ತರ ಶತನಾಮದಲ್ಲಿ ಹಾಗೂ ರಾಮ ಅಷ್ಟೋತ್ತರ ಶತನಾಮದಲ್ಲಿ ಕಾಣಬಹುದು. ನಾರಾಯಣ ಅಷ್ಟೋತ್ತರದಲ್ಲಿ ಆತನ ೧೦೮ ರೂಪಗಳ ವರ್ಣನೆಯಿದೆ;

ಸಹಸ್ರನಾಮದಲ್ಲಿ ಆತನ ಸಹಸ್ರ ರೂಪಗಳು, ಹೀಗೆ ನೂರಾರು ರೂಪಗಳುಳ್ಳ ಭಗವಂತ ಶತಮೂರ್ತಿಃ.

೭೧೮) ಶತಾನನಃ

ಭಗವಂತ ಅನಂತ ಮುಖದವನು. ಶತಾನಂದ(ಚತುರ್ಮುಖ ಬ್ರಹ್ಮ) ಮೊಟ್ಟಮೊದಲು ಸೃಷ್ಟಿಯ ಆದಿಯಲ್ಲಿ ಭಗವಂತನ ವಿಶ್ವರೂಪ ಕಂಡವ. ಈ ಕಾರಣದಿಂದಲೂ ಭಗವಂತನನ್ನು ಶತಾನನಃ ಎಂದು ಕರೆಯುತ್ತಾರೆ . 'ಸಹಸ್ರ ಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ ಎಂದು ಭಗವಂತನನ್ನು ಪುರುಷಸೂಕ್ತದಲ್ಲಿ ವರ್ಣಿಸಿದ್ದಾರೆ. ಇಲ್ಲಿ ಬಹುಶಿರ ಎಂದರೆ ಸಹಸ್ರ-ಸಹಸ್ರ ಶಿರಸ್ಸನ್ನು ಹೊಂದಿರುವವನು ಎಂದರ್ಥ.

**ಏಕೋ ನೈಕಃ ಸವಃ ಕಃ ಕಿಂ ಯತ್ತತ್ಪದಮನುತ್ತಮಮ್ ।**
**ಲೋಕಬಂಧುರ್ಲೋಕನಾಥೋ ಮಾಧವೋ ಭಕ್ತವತ್ಸಲಃ ॥೬೧॥**

೭೨೬) ಏಕಃ

ಯಾರು ಸರ್ವಕರ್ತನೋ, ಯಾರಿಂದ ಈ ಜಗತ್ತು ಸೃಷ್ಟಿಯಾಗಿದೆಯೋ ಅವನೇ ದೇವರು. ಆತನ ರೂಪ ಹಲವು, ನಾಮ ಹಲವು. ಆದರೆ ದೇವರು ಒಬ್ಬನೇ. ದೇವರು ಒಂದೊಂದು ಮತಕ್ಕೆ, ಒಂದೊಂದು ಭಾಷೆಗೆ, ಒಂದೊಂದು ಜನಾಂಗಕ್ಕೆ, ಒಂದೊಂದು ಜಾತಿಗೆ, ಒಂದೊಂದು ದೇಶಕ್ಕೆ, ಒಬ್ಬೊಬ್ಬ ಅಲ್ಲ. ಆತ ಒಬ್ಬನೇ; ಆತ ಏಕಃ.

೭೩೦) ನೈಕಃ

ಭಗವಂತ ಒಬ್ಬಂಟಿಯಲ್ಲ! ಬಿಂಬರೂಪನಾಗಿ ಅನಂತಜೀವರಲ್ಲಿ ನೆಲೆಸಿ ಒಬ್ಬನೇ ಅನೇಕವಾಗಿದ್ದಾನೆ!

೭೩೧) ಸವಃ

ಎಲ್ಲಾ ಯಜ್ಞಗಳಿಂದ(ಮಾನಸ, ಧ್ಯಾನ, ಪೂಜೆ, ಪ್ರಾರ್ಥನೆ, ದೈನಂದಿನ ಕರ್ಮ ಇತ್ಯಾದಿ) ಆರಾಧಿಸಲ್ಪಡುವ, ಜ್ಞಾನ ಸ್ವರೂಪ ಭಗವಂತ ಸವಃ.

೭೩೨) ಕಃ

ಕಃ ಅಂದರೆ 'ಯಾರು' ('WHO' is the name of God); ಆನಂದ ಸ್ವರೂಪ ಭಗವಂತ ಕಃ.

೭೩೩) ಕಿಮ್

ಏನು ಎಂತು ಎಂದು ಎಲ್ಲರೂ ತಿಳಿಯಲು ಬಯಸುವ ವಸ್ತು; ಕಂ ಅಂದರೆ ಆನಂದ, ಕಿಮ್ ಎಂದರೆ ಅತಿಶಯ ಅಥವಾ ಅನಂತ ಆನಂದ ಸ್ವರೂಪ.

೭೩೪) ಯತ್

ಎಲ್ಲಾ ಕಡೆ ತುಂಬಿರುವ, ಎಲ್ಲವನ್ನೂ ಬಲ್ಲ ಭಗವಂತ ಯತ್.

೭೩೫) ತತ್

ನಮ್ಮ ಒಳಗೆ, ನಮ್ಮ ಹೊರಗೆ ತುಂಬಿರುವ, ಕಾಲತಃ, ದೇಶತಃ, ಗುಣತಃ ಅನಂತವಾಗಿ ವ್ಯಾಪ್ತನಾದ ಭಗವಂತ ತತ್.

೭೩೬) ಪದಮನುತ್ತಮಮ್ (ಪದಮ್+ಅನುತ್ತಮಮ್)

ಎಲ್ಲರೂ ಕೊನೆಗೆ ಹೋಗಿ ಸೇರಬೇಕಾದ ಕೊನೇಯ ತಾಣ(Last destination of every soul); ಇದಕ್ಕಿಂತ ಉತ್ತಮ ಸ್ಥಾನ ಇನ್ನೊಂದಿಲ್ಲ(ಹಿರಿಯ ಗಮ್ಯ ಸ್ಥಾನ).

೭೩೭) ಲೋಕಬಂಧುಃ

ಭಗವಂತ ಜೀವ ಜಾತದ ಬಂಧು; ನಮ್ಮ ಎಲ್ಲಾ ಸಮಸ್ಯೆಗಳನ್ನು ಹೇಳಿಕೊಳ್ಳಬಹುದಾದ ಜಗತ್ತಿನ ಹಿರಿಯ; ಎಲ್ಲರಿಗೂ ಅತ್ಯಂತ ಹತ್ತಿರದ ಗೆಳೆಯ. ನಿಜವಾದ ಗೆಳೆಯರು ಎಂದೂ ತಪ್ಪನ್ನು ಹುಡುಕುವುದಿಲ್ಲ, ದೋಷಗಳನ್ನು ಎತ್ತಿಹಿಡಿಯುವುದಿಲ್ಲ. ಗೆಳೆತನದಲ್ಲಿ ಸ್ವಾರ್ಥವಿರುವುದಿಲ್ಲ. ನಿಸ್ವಾರ್ಥವಾಗಿ, ಕಾರಣವಿಲ್ಲದೆ ಒಬ್ಬರಿಗೊಬ್ಬರು ಸ್ಪಂದಿಸುವವರು 'ಸ್ನೇಹಿತರು'. ಇಂತಹ ನಿಸ್ವಾರ್ಥ ಬಾಂಧವ್ಯ ಗಂಡ-ಹೆಂಡಿರ ನಡುವೆ, ತಂದೆ-ತಾಯಿ-ಮಕ್ಕಳ

ನಡುವೆ ಇರುವುದಿಲ್ಲ. ಭಗವಂತ ಒಬ್ಬ ಆತ್ಮೀಯ ಗೆಳೆಯನಂತೆ. ನಮ್ಮ ಸರ್ವದೋಷಗಳನ್ನು ಕಡೆಗಣಿಸಿ ಸ್ವೀಕರಿಸುವ ಕರುಣಾಸಿಂಧು. ತಪ್ಪುಗಳನ್ನು ಕ್ಷಮಿಸಿ ನಮ್ಮನ್ನು ಮೇಲೆತ್ತುವ, ಜಗತ್ತನ್ನು ಉದ್ಧರಿಸುವ ಲೋಕಬಂಧುಃ.

೭೩೮) ಲೋಕನಾಥಃ

ಎಲ್ಲರನ್ನೂ ಪ್ರೀತಿಸಿ ಸಲಹುವ ಲೋಕದ ಸ್ವಾಮಿ.

೭೩೯) ಮಾಧವಃ

'ಮಾ' ಎಂದರೆ 'ಇಲ್ಲ' ; 'ಧವ' ಎಂದರೆ ನಿಯಂತ್ರಿಸತಕ್ಕ ಯಜಮಾನ. ಭಗವಂತನನ್ನು ನಿಯಂತ್ರಿಸುವ ಇನ್ನೊಬ್ಬ ಯಜಮಾನ ಅಥವಾ ಸ್ವಾಮಿ ಯಾರೂ ಇಲ್ಲ.

೭೪೦) ಭಕ್ತವತ್ಸಲಃ

ಭಕ್ತಿಗೆ ಕರಗುವ ಭಗವಂತ ಭಕ್ತವತ್ಸಲಃ. ಭಕ್ತಿ ಎಂದರೆ ಸಮರ್ಪಣಾಭಾವ. 'ನಾನು ಏನೂ ಅಲ್ಲ, ನನ್ನನ್ನು ನಿನ್ನ ಪಾದದಲ್ಲಿ ಅರ್ಪಿಸಿಕೊಂಡಿದ್ದೇನೆ, ನನ್ನ ರಕ್ಷಣೆಯ ಭಾರ ನಿನ್ನದು' ಎನ್ನುವ ಅರ್ಪಣಾಭಾವ. ಸ್ವಾರ್ಥ ರಹಿತವಾಗಿ ಭಗವಂತನನ್ನು ಪ್ರೀತಿಸುವುದೇ ಭಕ್ತಿ. ಒಬ್ಬ ಸ್ನೇಹಿತ ಇನ್ನೊಬ್ಬ ಸ್ನೇಹಿತನನ್ನು ಹೇಗೆ ನಿಸ್ವಾರ್ಥವಾಗಿ ಪ್ರೀತಿಸುತ್ತಾನೋ ಹಾಗೇ ನಾವು ಭಗವಂತನನ್ನು ಪ್ರೀತಿಸಬೇಕು. ಯಾವ ಕಾರಣಕ್ಕೂ ಸ್ವಾರ್ಥಕ್ಕೆ ಎಡೆ ಇರಬಾರದು. ಭಗವಂತನೆಂದರೆ ಭಯಾನಕ ವಸ್ತು ಎಂದು ಭಯದಿಂದ ಪೂಜಿಸದೇ, ಪ್ರಹ್ಲಾದನಂತೆ ಪ್ರೀತಿಯಿಂದ ಮಾಡುವ ಭಕ್ತಿಗೆ ಕರಗುವ ಭಗವಂತ ಭಕ್ತವತ್ಸಲಃ.

ಸುವರ್ಣವರ್ಣೋ ಹೇಮಾಂಗೋ ವರಾಂಗಶ್ಚಂದನಾಂಗದೀ ।
ವೀರಹಾ ವಿಷಮಃ ಶೂನ್ಯೋ ಘೃತಾಶೀರಚಲಶ್ಚಲಃ ॥೭೨॥

೭೪೧) ಸುವರ್ಣವರ್ಣಃ

ಭಗವಂತ ಚಿನ್ನದ ಬಣ್ಣದವನು. ನಾವು ಭಗವಂತನನ್ನು ಕಾಣಬೇಕಾದರೆ ಮೊದಲು ನಮ್ಮ ಮನಸ್ಸನ್ನು ತಟಸ್ಥಗೊಳಿಸಬೇಕು. ಆಗ ನಮ್ಮ ಆತ್ಮ ಕೆಲಸ ಆರಂಭಿಸುತ್ತದೆ. ಇದು ಸಮಾಧಿ ಸ್ಥಿತಿ. ಈ ಸ್ಥಿತಿಯಲ್ಲಿ ಆತ್ಮ ಸ್ವರೂಪದಿಂದ ಧ್ಯಾನ ಮಾಡಿದಾಗ ಉದಿಸುವ ಸೂರ್ಯನಂತೆ ಕಂಗೊಳಿಸುವ ಭಗವಂತನ ದರ್ಶನವಾಗುತ್ತದೆ.

೭೪೨) ಹೇಮಾಂಗಃ

ಭಗವಂತನ ಅಂಗಾಂಗವೂ ಚಿನ್ನದಂತೆ ಕಂಗೊಳಿಸುತ್ತಿರುತ್ತದೆ. ಆತ ಚಿನ್ನದಂತ ಮೈಯವನು.

೭೪೩) ವರಾಂಗಃ

ಭಗವಂತನ ಅಂಗಗಳು ಚಿನ್ನದಂತೆ ಕಂಗೊಳಿಸುತ್ತಿರುತ್ತದೆ. ಆದರೆ ಇದು ಯಾವುದೋ ಆಭರಣದ ಬಣ್ಣವಲ್ಲ. ಅದು ವರಾಂಗ. 'ವಾ' ಅಂದರೆ ಜ್ಞಾನ 'ರಂ' ಅಂದರೆ ಆನಂದ. ಜ್ಞಾನಾನಂದಮಯವಾದ ಅಂಗಗಳುಳ್ಳ ಭಗವಂತ ವರಾಂಗಃ.

೭೪೪) ಚಂದನಾಂಗದೀ

ಚಂದನ ಬಳಿದು ಅಂಗದ ತೊಟ್ಟವನು, ಸರ್ವಾಭರಣ ಸುಂದರ ಮೂರ್ತಿ.

೭೪೫) ವೀರಹಾ

ವೀರ+ಹಾ; ಅಂದರೆ ವೀರರ ಸಂಹಾರ ಮಾಡುವವನು! ಈ ನಾಮ 'ಜನಾರ್ದನ' ಎನ್ನುವ ನಾಮದಂತೆ. ಅಲ್ಲಿ 'ಜನ' ಎಂದರೆ 'ದುರ್ಜನ' 'ವೀರ' ಎಂದರೆ 'ತನ್ನ ಪರಾಕ್ರಮವನ್ನು ದುರ್ಬಲ ಜನರ ಮೇಲೆ ದಬ್ಬಾಳಿಕೆಯಾಗಿ

ಉಪಯೋಗಿಸುವವರು'. ವಿ+ಈರ, ಅಂದರೆ ಈರನಿಗೆ(ಪ್ರಾಣನಿಗೆ) ವಿರುದ್ಧವಾಗಿ ನಿಲ್ಲುವ ಲೋಕಕಂಟಕರು. ಇಂತಹ ಸಮಾಜಕಂಟಕರನ್ನು ಸಂಹಾರ ಮಾಡುವ ಭಗವಂತ ವೀರಹಾ.

೭೪೬) ವಿಷಮಃ (ಅವಿಷಮಃ)

ಭಗವಂತ ವಿಷಮಃ, ಏಕೆಂದರೆ ಆತ ಯಾರಿಗೂ ಏಕ ರೂಪದಲ್ಲಿ ಏನನ್ನೂ ಕೊಡುವುದಿಲ್ಲ. ಆಯಾ ಜೀವಧರ್ಮಕ್ಕನುಗುಣವಾಗಿ ಭಗವಂತ ಸೃಷ್ಟಿ ನಿರ್ಮಾಣ ಮಾಡಿದ್ದಾನೆ. ಆದರೆ ಆತ ಅವಿಷಮಃ, ಏಕೆಂದರೆ ಆತನಿಗೆ ಯಾರ ಮೇಲೂ ದ್ವೇಷವಿಲ್ಲ; ಎಲ್ಲರೂ ಆತನಿಗೆ ಏಕ.

೭೪೭) ಶೂನ್ಯಃ

ಕ್ಷ+ಊನ+ಯಾ-ಶೂನ್ಯ; ಕ್ಷ+ಊನ-ಶೂನ ಅಂದರೆ 'ಆನಂದಹೀನ'; 'ಯಾ' ಎಂದರೆ ನಿಯಂತ್ರಿಸುವವ. ಆನಂದದಿಂದ ಊನವಾಗಿರುವ ಜೀವರನ್ನು ಜ್ಞಾನ ಕೊಟ್ಟು ನಿಯಂತ್ರಿಸುವ ಭಗವಂತ ಶೂನ್ಯಃ. ನಾವು ಆನಂದದಿಂದ ಊನವಾಗಿರಲು ಕಾರಣ ನಮ್ಮ ಅಜ್ಞಾನ. ಮನುಷ್ಯ ಸಾಮಾನ್ಯವಾಗಿ ಇನ್ನೊಬ್ಬರಿಂದ ನನಗೆ ಸುಖ ಸಿಗಬಹುದು ಎಂದು ಬಯಸುತ್ತಾನೆ. ಆದರೆ ಇದೇ ಮೂಲ ದುಃಖಕ್ಕೆ ಕಾರಣ. ತನ್ನೊಳಗೆ ನಿಜವಾದ ಸುಖ ಅಡಗಿದೆ ಎಂದು ತಿಳಿಯದೇ ಸುಖವನ್ನು ಅರಸುತ್ತಾ ಎಲ್ಲೆಲ್ಲೋ ಹೋಗುವುದು, ಬೇರೆಡೆಯಲ್ಲಿ ಸುಖವಿದೆ ಎನ್ನುವ ಭ್ರಮೆಯಿಂದಲೇ ದುಃಖಪಡುವುದು. ಇಂತಹ ಶೂನರಿಗೆ ಜ್ಞಾನವನ್ನು ಕೊಟ್ಟು ಉದ್ಧಾರ ಮಾಡುವ ಭಗವಂತ ಶೂನ್ಯಃ.

೭೪೮) ಘೃತಾಶೀಃ

ಆಸೆಗಳೇ ಇಲ್ಲದ ಬೆಳಗುವ ಇಚ್ಛಾರೂಪಿ ಭಗವಂತ ಘೃತಾಶೀಃ.

ಆತ ತುಪ್ಪ ತಿನ್ನುವವನು ಎನ್ನುವ ಮೇಲ್ನೋಟದ ಅರ್ಥವನ್ನು ಈ ನಾಮ ಕೊಡುತ್ತದೆ. ಅಂದರೆ ಭಗವಂತ ಭಕ್ತಿಯಿಂದ ಕೊಡುವ ಯಾವುದೇ ಹವಿಸ್ಸನ್ನು ಸ್ವೀಕರಿಸುತ್ತಾನೆ ಎಂದರ್ಥ. ಹೋಮ ಮಾಡುವಾಗ ನಮ್ಮ ಪಿಂಡಾಂಡದ ೩೬೦ ಅಸ್ತಿಗಳನ್ನು, ಕಾಲ ಚಕ್ರದ ೩೬೦ ದಿನಗಳನ್ನು ಬಿಂಬಿಸುವ ೩೬೦ ಇಟ್ಟಿಗೆಯಿಂದ ಹೋಮ ಕುಂಡ ನಿರ್ಮಾಣ ಮಾಡಿ, ಅದರಲ್ಲಿ ಅಗ್ನಿಯನ್ನು ಆಹ್ವಾನ ಮಾಡಿ, ಗರ್ಭಾದಾನ, ಪುಂಸವನ, ಸೀಮಂತೋನ್ನಯನ, ವಿಷ್ಣುಬಲಿ, ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ, ಉಪನಯನ, ಮಹಾವ್ರತ, ಉಪನಿಷದ್ ವ್ರತ, ಮಹಾನಾಮ್ನಿವ್ರತ, ಗೊದಾನವ್ರತ, ಸಮಾವರ್ತನ, ವಿವಾಹ ಇತ್ಯಾದಿ ಷೋಡಷ ಸಂಸ್ಕಾರವನ್ನು ಮಾಡುತ್ತಾರೆ. ಉರಿಯುವ ಅಗ್ನಿ ಜೀವ ಚೈತನ್ಯದ ಸ್ವರೂಪ. ಇಂತಹ ಅಗ್ನಿಯಲ್ಲಿ ಕಣ್ಣು ಬಾಯಿಯ ಪರಿಕಲ್ಪನೆ ಮಾಡಿ, ಮೊದಲು ಅಗ್ನಿ-ಸೋಮರ ಪ್ರತಿರೂಪವಾಗಿ ಚಕ್ಷುಹೋಮ (ಕಣ್ಣಿಗೆ ತುಪ್ಪದ ಅರ್ಪಣೆ) ಮಾಡಿ ಆನಂತರ ಬಾಯಿಗೆ ತುಪ್ಪವನ್ನು ಅರ್ಪಿಸುತ್ತಾರೆ. ಇದು ಅಗ್ನಿ ಮತ್ತು ಸೋಮರ ಅಂತರ್ಗತನಾಗಿ ಜಗತ್ತನ್ನು ನಡೆಸುವ, ಅಗ್ನಿ ಮುಖೇನ ತುಪ್ಪವನ್ನು ಆಹುತಿಯಾಗಿ ಸ್ವೀಕರಿಸುವ ಭಗವಂತನ ಪರಿಕಲ್ಪನೆ.

೭೪೯) ಅಚಲಃ

ಸರ್ವವ್ಯಾಪ್ತನಾದ ಭಗವಂತ ಅಚಲಃ

೭೫೦) ಚಲಃ

ಎಲ್ಲಾ ಕಡೆಯೂ ಚಲಿಸುವವನು! [ಈ ರೀತಿಯ ವರ್ಣನೆ ಭಗವಂತನಿಗಲ್ಲದೆ ಇನ್ಯಾವುದೇ ವಸ್ತುವಿಗೆ ಮಾಡಲು ಸಾಧ್ಯವಿಲ್ಲ. **It moves (ಚಲಃ) ; it moves not(ಅಚಲಃ)]**

**ಅಮಾನೀ ಮಾನದೋ ಮಾನ್ಯೋ ಲೋಕಸ್ವಾಮೀ ತ್ರಿಲೋಕಧೃಕ್ ।**
**ಸುಮೇಧಾ ಮೇಧಜೋ ಧನ್ಯಃ ಸತ್ಯಮೇಧಾ ಧರಾಧರಃ ॥೯೩॥**

೭೫೧) ಅಮಾನೀ

ಅ+ಮಾನೀ; ಅಂದರೆ ಮಾನ ಇಲ್ಲದವನು! ಇಲ್ಲಿ ಮಾನ ಎಂದರೆ ಅಭಿಮಾನ(Attachment); 'ನನ್ನದು' ಎನ್ನುವ ಕ್ಷುದ್ರ ಮನೋವೃತ್ತಿ. ಇಂದ್ರಾದಿ ದೇವತೆಗಳಿಗೂ ಕೂಡಾ ಅಭಿಮಾನವಿದೆ. ಆದರೆ ಭಗವಂತನಿಗೆ ಇಂತಹ ಯಾವುದೇ ಅಭಿಮಾನವಿಲ್ಲ. ಇನ್ನು 'ಮಾನ' ಎನ್ನುವ ಪದಕ್ಕೆ ನಾಶ, ಅಳತೆ, ಎನ್ನುವ ಅರ್ಥ ಕೂಡಾ ಇದೆ. ಅಳತೆಗೆ ಸಿಗದ (immeasurable), ನಾಶವಿಲ್ಲದ, ಯಾವುದೇ ಅಭಿಮಾನವಿಲ್ಲದ ಅನಂತ ತತ್ವ ಭಗವಂತ ಅಮಾನೀ.

೭೫೨) ಮಾನದಃ

ನಮಗೆ ಅಭಿಮಾನವನ್ನು ಕೊಡುವವನು ಹಾಗೂ ನಮ್ಮ ಅಭಿಮಾನವನ್ನು(Ego) ಕಳಚುವವನು, ನಮ್ಮ ಅಹಂಕಾರ ನಾಶಮಾಡುವ ಭಗವಂತ ಮಾನದಃ.

೭೫೩) ಮಾನ್ಯಃ

ಎಲ್ಲರಿಂದಲೂ ಪೂಜ್ಯನಾದ ಭಗವಂತ ಮಾನ್ಯಃ. ಭಗವಂತನನ್ನು ದ್ವೇಷಿಸುವವರು ಅಂತತಃ ಆತನನ್ನು ಹೆಚ್ಚು ನೆನೆಯುತ್ತಾರೆ! ಕಂಸನಿಗೆ ಕನಸಿನಲ್ಲಿ, ಎಚ್ಚರದಲ್ಲಿ, ನಿದ್ದೆಯಲ್ಲಿ, ಎಲ್ಲೆಲ್ಲೂ ಕೃಷ್ಣನೇ ಕಾಣುತ್ತಿದ್ದನಂತೆ. ನಾಸ್ತಿಕರು ದೇವರನ್ನು ದ್ವೇಷಿಸುವ ಭ್ರಮೆಯಲ್ಲಿ ಯಾವಾಗಲೂ ದೇವರ ಬಗ್ಗೆಯೇ ಚಿಂತಿಸುತ್ತಿರುತ್ತಾರೆ! ಕೆಲವರಿಗೆ ಉಪಾಸನೆ ಮಾಡಲು, ಕೆಲವರಿಗೆ ನಿರಾಕರಣೆ ಮಾಡಲು, ಕೆಲವರಿಗೆ ಪ್ರೀತಿಮಾಡಲು, ಇನ್ನು ಕೆಲವರಿಗೆ ದ್ವೇಷಿಸಲು, ಹೀಗೆ ಎಲ್ಲರಿಗೂ ಭಗವಂತ ಮಾನ್ಯ.

೭೫೪) ಲೋಕಸ್ವಾಮೀ

ಈ ನಾಮಕ್ಕೆ ವಿಶೇಷ ವಿಶ್ಲೇಷಣೆಯ ಅಗತ್ಯವಿಲ್ಲ, ಕೇಳಿದಾಕ್ಷಣ ಅದರ ಅರ್ಥ ಹೊಳೆಯುತ್ತದೆ. ಈ ಜಗತ್ತಿನಲ್ಲಿ ಪ್ರತಿಯೊಬ್ಬರೂ ಕೂಡಾ ನಾನು-ನನ್ನಿಂದ ಎನ್ನುವ ಭ್ರಮೆಯಲ್ಲಿರುತ್ತಾರೆ. ಆದರೆ ಎಲ್ಲವನ್ನೂ ಮಾಡಿಸುವ ಪರಶಕ್ತಿಯನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕು. ಈ ಲೋಕಕ್ಕೆ ಭಗವಂತನೊಬ್ಬನೇ ನಿಜವಾದ ಸ್ವಾಮಿ. ನಾನು-ನನ್ನದು ಎನ್ನುವುದು ಕೇವಲ ತಿಳಿಗೇಡಿತನ. ಇದನ್ನೇ ಗೀತೆಯಲ್ಲಿ ಶ್ರೀಕೃಷ್ಣ ಹೀಗೆ ಹೇಳಿದ್ದಾನೆ:

ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ (ಅ-೧೮, ಶ್ಲೋ-೧೬)

"ಏನೂ ಮಾಡದ ತನ್ನನ್ನು 'ಮಾಡುವವನು' ಎಂದು (ತಾನೊಬ್ಬನೇ ಎಲ್ಲವನ್ನೂ ಮಾಡಿದವನು ಎಂದು) ತಿಳಿದವನು ಬುದ್ಧಿಗೇಡಿ. ಅಂತಹ ತಿಳಿಗೇಡಿಗಳಿಗೆ ಏನೂ ತಿಳಿದಿಲ್ಲ". ಆದ್ದರಿಂದ ಭಗವಂತನನ್ನು ಬಿಟ್ಟರೆ ಬೇರೆ ಯಾರೂ 'ಸ್ವಾಮಿ' ಶಬ್ದಕ್ಕೆ ಅರ್ಹರಲ್ಲ.

ಲೋಕ ಎಂದರೆ ಜ್ಞಾನಿ ಎನ್ನುವ ವಿಶೇಷ ಅರ್ಥವಿದೆ. ಭಗವಂತ ಎಲ್ಲರಿಗೂ ಸ್ವಾಮಿಯಾದರೂ ಕೂಡಾ ಜ್ಞಾನಿಗಳಿಗೆ ವಿಶೇಷ ಸ್ವಾಮಿ. ಏಕೆಂದರೆ ಇರುವಿಕೆ ಮುಖ್ಯವಲ್ಲ, ಇರವಿನ ಅರಿವು ಮುಖ್ಯ. ಆದ್ದರಿಂದ ಭಗವಂತ 'ಲೋಕಸ್ವಾಮಿ' ಎಂದು ತಿಳಿದ ಜ್ಞಾನಿಗಳಿಗೆ ಆತ ನಿಜವಾದ ಸ್ವಾಮಿ. ಉಳಿದವರು ಅರಿವಿಲ್ಲದೆ ಅವನನ್ನು ಕಳೆದುಕೊಳ್ಳುತ್ತಾರೆ.

೭೫೫) ತ್ರಿಲೋಕಧೃಕ್

ಮೂರು ಲೋಕಗಳನ್ನು ಧರಿಸಿದ ಭಗವಂತ ತ್ರಿಲೋಕಧೃಕ್. ಪ್ರಾಚೀನರು ಬ್ರಹ್ಮಾಂಡವನ್ನು ಹದಿನಾಲ್ಕು ವಿಭಾಗವಾಗಿ ವಿಂಗಡಿಸಿದ್ದರು. ಅವುಗಳೆಂದರೆ: ಅತಳ, ವಿತಳ, ಸುತಳ, ತಳಾತಳ, ರಸಾತಳ, ಮಹಾತಳ, ಪಾತಾಳ, ಭೂಲೋಕ, ಭುವರ್ಲೋಕ, ಸುವರ್ಲೋಕ, ತಪೋಲೋಕ, ಮಹಾಲೋಕ, ಜನರ್ಲೋಕ ಮತ್ತು ಸತ್ಯಲೋಕ. ಈ ಹದಿನಾಲ್ಕು ಲೋಕಗಳನ್ನೊಳಗೊಂಡ ಮೂರು ಪ್ರಮುಖ ಲೋಕಗಳೇ ತ್ರಿಲೋಕಗಳು. 'ಭೂಲೋಕ'

ಹಾಗೂ ಅದರ 'ಮೇಲೆ ಏಳು' ಹಾಗೂ 'ಕೆಳಗಿನ ಆರು' ಲೋಕಗಳನ್ನು ಮೂರು ಲೋಕಗಳನ್ನಾಗಿ ಭೂಃ, ಭುವಃ, ಸ್ವಃ ಎಂದು ಕರೆಯುತ್ತಾರೆ. 'ಭೂಃ' ನಾವು ವಾಸವಾಗಿರುವ ಸ್ಥೂಲಲೋಕ. ಇತರ ಎರಡು ಲೋಕಗಳು ಸೂಕ್ಷ್ಮ ಲೋಕಗಳು. ಈ ಮೂರು ಲೋಕಗಳನ್ನು ಧರಿಸಿರುವ(ಹೊತ್ತಿರುವ) ಭಗವಂತ ತ್ರಿಲೋಕಧೃಕ್.

೭೫೬) ಸುಮೇಧಾಃ

'ಮೇಧಾ' ಎಂದರೆ ವಿಷಯಗಳನ್ನು ಮರೆಯದೆ ನೆನಪಿಟ್ಟುಕೊಳ್ಳುವ ಶಕ್ತಿ. ಕೇವಲ ಒಂದು ಜನ್ಮದ ವಿಷಯವಲ್ಲದೆ, ಜನ್ಮಜನ್ಮಾಂತರದ ವಿಷಯವನ್ನು ಕೂಡಾ ಸ್ಮರಣೆ ಮಾಡಿಕೊಳ್ಳುವ ಶಕ್ತಿ ಮೇಧಾವಿಗಳಿಗಿರುತ್ತದೆ. ಭಗವಂತ ಎಂದೂ ಮರೆಯದ ಅರಿವಿನ ಕಡಲು. ಅನಂತ ಕಾಲದ ಸಂಪೂರ್ಣ ಸ್ಮರಣಶಕ್ತಿಯುಳ್ಳ ಭಗವಂತ ಸುಮೇಧಾಃ.

೭೫೭) ಮೇಧಜಃ

'ಮೇಧ' ಎಂದರೆ ಭಗವಂತನನ್ನು ಕುರಿತು ಮಾಡುವ ಯಜ್ಞ(ಉದಾ: ಅಶ್ವಮೇಧ). ಯಜ್ಞಗಳಿಂದ ವ್ಯಕ್ತನಾಗುವ ಭಗವಂತ ಮೇಧಜಃ.

೭೫೮) ಧನ್ಯಃ

'ಧನ' ಎಂದರೆ ಸಂಪತ್ತು. ದುಡ್ಡು ನಿಜವಾದ ಧನವಲ್ಲ! ಯಾವುದನ್ನು ಹಂಚಿದಾಗ ಖರ್ಚಾಗುವುದಿಲ್ಲವೋ ಅದು ನಿಜವಾದ 'ಧನ' (ಉದಾ: ಗುಣ, ಜ್ಞಾನ). ನಿರಪೇಕ್ಷನೂ ಗುಣಪೂರ್ಣನೂ ಆದ ಭಗವಂತ ಧನ್ಯಃ.

೭೫೯) ಸತ್ಯಮೇಧಾಃ

ತಪ್ಪು ತಿಳುವಳಿಕೆಗಳಿಲ್ಲದ ಯಥಾರ್ಥವಾದ ಅರಿವಿನ ಮೂರ್ತಿ ಭಗವಂತ ಸತ್ಯಮೇಧಾಃ.

೭೬೦) ಧರಾಧರಃ

ಈ ಧರಿತ್ರಿಯನ್ನು ಹೊತ್ತ ಶೇಷಶಾಯಿ ಭಗವಂತ ಧರಾಧರಃ.

ತೇಜೋವೃಷೋ ದ್ಯುತಿಧರಃ ಸರ್ವಶಸ್ತ್ರಭೃತಾಂ ವರಃ ।
ಪ್ರಗ್ರಹೋ ನಿಗ್ರಹೋ ವ್ಯಗ್ರೋ ನೈಕಶೃಂಗೋ ಗದಾಗ್ರಜಃ ॥೯೪॥

೭೬೧) ತೇಜೋವೃಷಃ

ಇದು ಅಪೂರ್ವವಾದ ಶಬ್ದ. ತೇಜಸ್ಸು ಅಂದರೆ ಬೆಳಕು ಅಥವಾ ಪ್ರಕಾಶ; ವೃಷ ಅಂದರೆ ಧರ್ಮ. ನಮಗೆ ತೇಜಸ್ಸನ್ನು, ವೃಷವನ್ನು ಕೊಡುವ ಭಗವಂತ ತೇಜೋವೃಷಃ. ನಮಗೆ ಅಧ್ಯಯನದಿಂದ, ಯೋಗ ಸಾಧನೆಯಿಂದ, ಪ್ರಾಣಾಯಾಮದಿಂದ ವರ್ಚಸ್ಸನ್ನು ಗಳಿಸಬೇಕು ಎನ್ನುವ ಆಸೆ ಇರಬಹುದು. ಆದರೆ ಆ ವರ್ಚಸ್ಸನ್ನು ಕರುಣಿಸುವವನು ಭಗವಂತ. ಅದೇ ರೀತಿ ನಮಗೆ ಧರ್ಮದ ದಾರಿಯಲ್ಲಿ ನಡೆಯಬೇಕು ಎನ್ನುವ ಆಸೆ ಇರಬಹುದು, ಆದರೆ ಯಾವುದು ಧರ್ಮ, ಯಾವುದು ಅಧರ್ಮ ಎನ್ನುವ ಜ್ಞಾನ ಕೊಟ್ಟು ಆ ನಡೆಯನ್ನು ತೋರಿಸುವವನು ಭಗವಂತ.

೭೬೨) ದ್ಯುತಿಧರಃ

ಎಲ್ಲಾ ಬಗೆಯ ಪ್ರಕಾಶವನ್ನು ಧರಿಸಿರುವ ಜ್ಯೋತಿರ್ಮಯಸ್ವರೂಪ ಭಗವಂತ ದ್ಯುತಿಧರಃ

ಗೀತೆಯಲ್ಲಿ ಹೇಳುವಂತೆ:

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।
ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್॥ (ಅ-೧೫, ಶ್ಲೋ-೧೨)

ಅಂದರೆ "ಸೂರ್ಯನಲ್ಲಿದ್ದು ವಿಶ್ವವನ್ನೆಲ್ಲಾ ಬೆಳಗುವ ಬೆಳಕು, ಚಂದ್ರನಲ್ಲಿ, ಬೆಂಕಿಯಲ್ಲಿ ಕೂಡಾ, ಅದು ನನ್ನದೇ ಬೆಳಕೆಂದು ತಿಳಿ". ಈ ರೀತಿ ಹೊರಗೂ ಒಳಗೂ ತುಂಬಿರುವ, ಎಲ್ಲಾ ಬೆಳಕನ್ನು ಬೆಳಗಿಸುವ ಮಹಾ ಬೆಳಕು ಭಗವಂತ ದ್ಯುತಿಧರಃ

೭೬೩) ಸರ್ವಶಸ್ತ್ರಭೃತಾಂವರಃ

ಎಲ್ಲಾ ಶಸ್ತ್ರಧಾರಿಗಳಿಗಿಂತಲೂ ಉತ್ತಮವಾದ ಶಸ್ತ್ರವನ್ನು ಹಿಡಿದು ಧರ್ಮ ಸ್ಥಾಪನೆ ಮಾಡುವ ಭಗವಂತ ಸರ್ವಶಸ್ತ್ರಭೃತಾಂವರಃ.

ಈ ಹಿಂದೆ ಹೇಳಿದಂತೆ ಹಿಂದಿನ ಕಾಲದಲ್ಲಿ ಯಜ್ಞ ಮಾಡುವಾಗ ಮೂರು ಹೊತ್ತು ಆಹುತಿ ಕೊಡುತ್ತಿದ್ದರು. ಮೂರು ಹೊತ್ತು ದೇವರನ್ನು ಋಗ್ವೇದದ ಮಂತ್ರಗಳಿಂದ ಸ್ತೋತ್ರ ಮಾಡುತ್ತಿದ್ದರು. ಈ ರೀತಿ ಭಗವಂತನ ಗುಣಗಾನ ಮಾಡುವ ಮಂತ್ರವನ್ನು 'ಶಸ್ತ್ರ' ಎನ್ನುತ್ತಾರೆ. ಇಂತಹ ವೇದ ಮಂತ್ರಗಳಲ್ಲಿ ಬೇರೆ ಬೇರೆ ದೇವತೆಗಳ ಮಂತ್ರವಿದೆ. ಒಂದೊಂದು ಮಂತ್ರ ಒಂದೊಂದು ದೇವತೆಗಳನ್ನು ಹೇಳುತ್ತದೆ. ದೇವತೆಗಳು ಅನೇಕ, ಆದರೆ ದೇವರು ಒಬ್ಬನೇ. ಅಗ್ನಿಮಂತ್ರದಿಂದ ಕರೆದರೆ ಅಗ್ನಿಯಲ್ಲಿರತಕ್ಕಂತಹ ಭಗವಂತ, ವಾಯು ಮಂತ್ರದಿಂದ ಕರೆದರೆ ವಾಯುವಿನಲ್ಲಿರತಕ್ಕಂತಹ ಭಗವಂತ, ಇಂದ್ರ ಮಂತ್ರದಿಂದ ಕರೆದರೆ ಇಂದ್ರನೊಳಗಿರತಕ್ಕಂತಹ ಭಗವಂತ. ಹೀಗೆ ಸಮಸ್ತ ದೇವತೆಗಳಲ್ಲಿರುವ, ಸರ್ವ ಶಸ್ತ್ರಗಳಲ್ಲಿ (ಭಗವಂತನ ಗುಣಗಾನ ಮಾಡುವ ಸಮಸ್ತ ಮಂತ್ರಗಳಲ್ಲಿ) ಶ್ರೇಷ್ಠನಾಗಿ ಧಾರಣೆ ಮಾಡಿರುವ ಭಗವಂತ ಸರ್ವಶಸ್ತ್ರಭೃತಾಂವರಃ.

೭೬೪) ಪ್ರಗ್ರಹಃ

ದುರ್ಜನರಿಗೆ ಕಡಿವಾಣ ಹಾಕುವ ಭಗವಂತ ಪ್ರಗ್ರಹಃ. ಎಲ್ಲರ ಮನಸ್ಸಿನೊಳಗೆ ಸನ್ನಿಹಿತನಾಗಿದ್ದು ನಿಯಂತ್ರಿಸುವವ, ಮನಸ್ಸಿನಿಂದ ಅರ್ಪಿಸಿದರೆ ಅದನ್ನು ಸ್ವೀಕರಿಸಿ ನಮ್ಮನ್ನು ಎತ್ತರಕ್ಕೆ ಕೊಂಡೊಯ್ಯುವ ಭಗವಂತ ಪ್ರಗ್ರಹಃ

೭೬೫) ನಿಗ್ರಹಃ

ದುರ್ಜನರನ್ನು ದಮನಿಸುವವನು ನಿಗ್ರಹಃ. ಭಗವಂತನನ್ನು ಒಪ್ಪದೇ ಅಧರ್ಮದ ದಾರಿಯಲ್ಲಿ ನಡೆಯುವವರನ್ನು ಶಾಶ್ವತವಾಗಿ ನಿಗ್ರಹಿಸುವ ಭಗವಂತ ನಿಗ್ರಹಃ. ಇದನ್ನೇ ಗೀತೆಯಲ್ಲಿ ಹೀಗೆ ಹೇಳಿದ್ದಾರೆ:

ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ (ಅ-೧೬; ಶ್ಲೋ-೧೯)
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥ (ಅ-೧೬; ಶ್ಲೋ-೨೦)

"ಪರತತ್ವವನ್ನು ದ್ವೇಷಿಸುವ, ಕನಿಕರವಿಲ್ಲದ ಕೊಳಕಾದ ಅಂಥ ನೀಚ ಮನುಜರನ್ನು ನಾನು ನಿರಂತರವಾಗಿ ಬಾಳ ಬವಣೆಗಳಲ್ಲಿ, ಕೆಡುನಡೆಯ ಬಸಿರುಗಳಲ್ಲಿ ಕೆಡುವುತ್ತೇನೆ. ಕೆಡುನಡೆಯ ಬಸಿರಿನಲ್ಲಿ ಮರಳಿ ಮರಳಿ ಹುಟ್ಟಿಬಂದ ಆ ತಿಳಿಗೇಡಿಗಳು ಕೊನೆಗೂ ನನ್ನನ್ನು ಸೇರದೆಯೇ, ಅಲ್ಲಿಂದ ಮತ್ತೆ ಅಧೋಗತಿಯನ್ನು ಪಡೆಯುತ್ತಾರೆ". ಇದು ನಿಗ್ರಹಃ ನಾಮದ ತಾತ್ಪರ್ಯ.

೭೬೬) ವ್ಯಗ್ರಃ

ದುಷ್ಟರ ದುಷ್ಟತನ ಅತಿರೇಕವನ್ನು ಕಂಡಾಗ ಸಿಟ್ಟಿಗೇಳುವ ಭಗವಂತ ವ್ಯಗ್ರಃ. ಇನ್ನೊಂದು ಅರ್ಥದಲ್ಲಿ ಅವನು ವಿಗತ+ಅಗ್ರಃ, ವ್ಯಗ್ರಃ ಎಂದರೆ ಕೊನೆ ಇಲ್ಲದವನು. ಎಲ್ಲವುದರ ಕೊನೆ ಅವನೇ **(last destination).**

೭೬೭) ನೈಕಶೃಂಗಃ

ಅನೇಕ ಕೋಡುಗಳುಳ್ಳವನು! ಶೃಂಗ(ಪರ್ವತ)ಗಳಲ್ಲಿ ಸನ್ನಿಹಿತನಾದವನು ನೈಕಶೃಂಗಃ. ವೇದದಲ್ಲಿ ಭಗವಂತನನ್ನು ನಾಲ್ಕು ಕೋಡಿನ ಎತ್ತು ಎಂದು ಕರೆದಿದ್ದಾರೆ. ಇಲ್ಲಿ ಕೋಡು ಎಂದರೆ ಗುರುತಿಸುವ ಸಾಧನ. ಭಗವಂತ ನಾಲ್ಕು ಬಗೆಯ ಶಬ್ದಗಳಿಂದ ವಾಚ್ಯನಾದವ. (೧) ನಾಮಪದ (೨) ಕ್ರಿಯಾಪದ (೩) ಉಪಸರ್ಗಗಳು (೪) ಅವ್ಯಯಗಳು. ಈ ನಾಲ್ಕರಿಂದ ನಾಲ್ಕು ವೇದಗಳು. ಇಂತಹ ನಾಲ್ಕು ವೇದಗಳಿಂದ ವಾಚ್ಯನಾದ ಭಗವಂತ ನೈಕಶೃಂಗಃ.

೭೬೮) ಗದಾಗ್ರಜಃ

ಗದಾ ಅನ್ನುವವನು ರೋಹಿಣಿಯ ಮಗನಲ್ಲಿ ಒಬ್ಬ. ಆತ ಕೃಷ್ಣನನ್ನು ನೆರಳಂತೆ ಅನುಸರಿಸಿದವನು. ಈ ಕಾರಣಕ್ಕಾಗಿ ಭಗವಂತನನ್ನು ಗದನ ಅಣ್ಣ ಎಂದು ಕರೆಯುತ್ತಾರೆ. ಆದರೆ ಇದು ಕೇವಲ ಕೃಷ್ಣಾವತಾರಕ್ಕೆ ಸಂಬಂಧಪಟ್ಟಿದ್ದು. ಗದಾ ಎನ್ನುವುದಕ್ಕೆ ಇನ್ನೂ ಅನೇಕ ಅರ್ಥಗಳಿವೆ. ಸ್ಪಷ್ಟವಾದ ಮಾತುಗಾರಿಕೆಗೆ ಗದಾ ಎನ್ನುತ್ತಾರೆ. ಗದ್ಯರೂಪದ ಸಮಸ್ತ ವೇದ ಮಂತ್ರಗಳಿಂದ ವಾಚ್ಯನಾಗಿ, ಯಜುರ್ವೇದದ ಮಂತ್ರಗಳಿಂದ ಅಗ್ನಿರೂಪದಲ್ಲಿ ಅಭಿವ್ಯಕ್ತನಾಗುವ ಭಗವಂತ ಗದಾಗ್ರಜಃ. ಗದೆಯ ತುದಿಯಿಂದ ಅರಿಗಳನ್ನು ತರಿದ ಭಗವಂತ ಗದಾಗ್ರಜಃ.

**ಚತುರ್ಮೂರ್ತಿಶ್ಚತುರ್ಬಾಹುಶ್ಚತುರ್ವ್ಯೂಹಶ್ಚತುರ್ಗತಿಃ ।**

**ಚತುರಾತ್ಮಾ ಚತುರ್ಭಾವಶ್ಚತುರ್ವೇದವಿದೇಕಪಾತ್ ॥೯೫॥**

೭೬೯) ಚತುರ್ಮೂರ್ತಿಃ

ವಿಶ್ವ, ತೈಜಸ, ಪ್ರಾಜ್ಞ ಹಾಗೂ ತುರಿಯ ಎನ್ನುವ ನಾಲ್ಕು ರೂಪದಲ್ಲಿ ನಮ್ಮ ನಾಲ್ಕು ಸ್ಥಿತಿಯನ್ನು ನಿಯಂತ್ರಿಸುವ ಭಗವಂತ ಚತುರ್ಮೂರ್ತಿಃ. ಎಚ್ಚರ ಸ್ಥಿತಿಯಲ್ಲಿ ನಮ್ಮ ಕಣ್ಣಿನ ಮಧ್ಯ (ಭ್ರೂ-ಮಧ್ಯ) ಬಲಗಣ್ಣಿಗೆ ಒತ್ತಿಕೊಂಡಿರುವ ಶಕ್ತಿ ಕೇಂದ್ರದಲ್ಲಿ (ಆಜ್ಞಾಚಕ್ರ) ಇದ್ದು, ನಮ್ಮ ಎಚ್ಚರ ಸ್ಥಿತಿಯನ್ನು ನಿಯಂತ್ರಿಸುವ ವಿಶ್ವರೂಪಿ ಭಗವಂತ; ಕಂಠದಲ್ಲಿ ಕಿರುನಾಲಿಗೆಯ ಕೆಳಗೆ ಸೂಜಿ ಮೊನೆಯಷ್ಟು ಸೂಕ್ಷ್ಮವಾಗಿರುವ, ವಿಶುದ್ಧಿಚಕ್ರದಲ್ಲಿದ್ದು ನಮ್ಮ ಕನಸಿನ ಸ್ಥಿತಿಯನ್ನು ನಿಯಂತ್ರಿಸುವ ತೈಜಸ ರೂಪಿ ಭಗವಂತ; ನಿದ್ರೆಯನ್ನು ನಿಯಂತ್ರಿಸುವ ಪ್ರಾಜ್ಞಾ ನಾಮಕ ಭಗವಂತ; ಈ ಮೂರು ಸ್ಥಿತಿಳಿಂದಾಚೆಗಿನ ನಾಲ್ಕನೇ ಸ್ಥಿತಿ (ತುರಿಯ-ಧ್ಯಾನದಲ್ಲಿ ದೇವರನ್ನು ಕಾಣುವ ಸ್ಥಿತಿ)ಯನ್ನು ನಿಯಂತ್ರಿಸುವ ಭಗವಂತ ಚತುರ್ಮೂರ್ತಿಃ.

೭೭೦) ಚತುರ್ಬಾಹುಃ

ಭಗವಂತ ತನ್ನ ಭಕ್ತರಿಗೆ ದರ್ಶನ ಕೊಟ್ಟಾಗಲೆಲ್ಲಾ ನಾಲ್ಕು ಬಾಹುವಿನೊಂದಿಗೆ ಕಾಣಿಸಿಕೊಂಡಿದ್ದಾನೆ. ವಿಶ್ವರೂಪ ದರ್ಶನವನ್ನು ನೋಡಿ ಭಯಭೀತನಾದ ಅರ್ಜುನ "ನಿನ್ನ ಚತುರ್ಭುಜ ರೂಪವನ್ನು ತೋರು" ಎಂದು ಶ್ರೀಕೃಷ್ಣನಲ್ಲಿ ಈ ರೀತಿ ಅಂಗಲಾಚುವುದನ್ನು ಗೀತೆಯಲ್ಲಿ ಕಾಣುತ್ತೇವೆ.

ಕಿರೀಟಿನಂ ಗದಿನಂ ಚಕ್ರಹಸ್ತಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।

ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವ ವಿಶ್ವಮೂರ್ತೇ (ಅ-೧೧; ಶ್ಲೋ-೪೬)

ಅಂದರೆ "ಮುಕುಟವಿಟ್ಟ, ಕೈಯಲ್ಲಿ ಗದೆ-ಚಕ್ರ ತೊಟ್ಟ ನಿನ್ನನ್ನು ಆ ರೂಪದಲ್ಲೇ ಕಾಣಬಯಸುತ್ತೇನೆ. ಸಾವಿರ ತೋಳಿನ ವಿಶ್ವರೂಪನೇ, ಮತ್ತೊಮ್ಮೆ ನಾಲ್ಕು ತೋಳಿನ ಅದೇ ರೂಪದಿಂದ ಕಾಣಿಸಿಕೋ"

ಭಗವಂತನ ನಾಲ್ಕು ತೋಳು ಧರ್ಮ-ಅರ್ಥ-ಕಾಮ-ಮೋಕ್ಷದ ಸಂಕೇತ. ಇದಕ್ಕನುಗುಣವಾಗಿ ನಾಲ್ಕು ಆಯುಧಗಳು ಅಥವಾ ಅಭಯ ಹಾಗೂ ಧ್ಯಾನ ಮುದ್ರೆ. ಭಗವಂತನು ಹಿಡಿದಿರುವ ಆಯುಧದ ಮಹತ್ವವನ್ನು ನಾವು ಈ ಹಿಂದೆ ವಿಶ್ಲೇಷಿಸಿದ್ದೇವೆ. ಇಲ್ಲಿ ಧ್ಯಾನ ಮತ್ತು ಅಭಯಮುದ್ರೆಯ ಬಗ್ಗೆ ಸಂಕ್ಷಿಪ್ತವಾಗಿ ತಿಳಿಯೋಣ. ತೋರು ಬೆರಳು ಉಳಿದ ಮೂರು ಬೆರಳುಗಳಿಂದ ಮುಂದಕ್ಕೆ ಬಾಗಿ ಹೆಬ್ಬೆರಳನ್ನು ಸ್ಪರ್ಶಿಸುವುದು ಧ್ಯಾನ ಮುದ್ರೆ. ಇಲ್ಲಿ ತೋರು ಬೆರಳು ಜೀವರನ್ನು, ಹೆಬ್ಬೆರಳು ಭಗವಂತನನ್ನು ಸೂಚಿಸುತ್ತದೆ. ಉಳಿದ ಮೂರು ಬೆರಳು ಅವಿಧ್ಯ, ಕಾಮ, ಕರ್ಮವನ್ನು ಸೂಚಿಸುತ್ತದೆ. ಈ ರೀತಿ ಅವಿಧ್ಯ, ಕಾಮ, ಕರ್ಮವನ್ನು ಬಿಟ್ಟು; ಜ್ಞಾನ, ಭಕ್ತಿ, ಮೋಕ್ಷವಾದ ಭಗವಂತನನ್ನು ಸೇರುವುದನ್ನು ಧ್ಯಾನಮುದ್ರೆ ಪ್ರತಿಪಾದಿಸುತ್ತದೆ. ಇನ್ನು ಅಭಯ: ಅಭಯ ಭಗವಂತನ ಪಾದವನ್ನು ತೋರಿಸುತ್ತದೆ. ಅಂದರೆ ಭಗವಂತನ ಪಾದದಲ್ಲಿ ಶರಣಾಗತಿಯನ್ನು ಬೇಡಿ ಬಂದ ಭಕ್ತರನ್ನು ಭಗವಂತ ಎಂದೂ ಕೈ ಬಿಡುವುದಿಲ್ಲ ಎಂದರ್ಥ.

೭೭೧) ಚತುರ್ವ್ಯೂಹಃ

ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕು ರೂಪಗಳ ಗುಂಪು ಉಳ್ಳವನು ಚತುರ್ವ್ಯೂಹ. ಶರೀರಪುರುಷ ಶಿವ, ಛಂದಃಪುರುಷ ಶೇಷ, ವೇದಪುರುಷ ಗರುಡ, ಮಹಾಪುರುಷ ಬ್ರಹ್ಮವಾಯು. ಹೀಗೆ ನಾಲ್ಕು ಗುಂಪಿನ ದೇವತೆಗಳ ಪರಿವಾರ ಉಳ್ಳವನು ಚತುರ್ವ್ಯೂಹಃ.

೭೭೨) ಚತುರ್ಗತಿಃ

ನಾಲ್ಕು ಆಶ್ರಮಗಳಿಗೆ ಆಸರೆಯಾದವನು ಚತುರ್ಗತಿಃ. ಮೋಕ್ಷದಲ್ಲಿ ನಾಲ್ಕು ವಿಧ. (೧) ಸಾಲೋಕ್ಯ (೨) ಸಾಮೀಪ್ಯ (೩) ಸಾರೂಪ್ಯ ಹಾಗೂ (೪) ಸಾಯುಜ್ಯ. ಸಾಲೋಕ್ಯ ಎಂದರೆ ಭಗವಂತ ಇರುವ ಲೋಕದಲ್ಲಿ ನಾವಿರುವುದು; ಸಾಮೀಪ್ಯ ಎಂದರೆ ಭಗವಂತನ ಪಕ್ಕದಲ್ಲಿರುವುದು; ಸಾರೂಪ್ಯ ಎಂದರೆ ಭಗವಂತನಿಗೆ ಸಮನಾಗಿರುವುದು, ಸಾಯುಜ್ಯ ಎಂದರೆ ಹಾಲು-ನೀರು ಬೆರೆತಂತೆ ಭಗವಂತನಲ್ಲಿ ಬೆರೆತಿರುವುದು. ಈ ರೀತಿ ನಾಲ್ಕು ವಿಧದ ಮುಕ್ತಿಯನ್ನು ಕರುಣಿಸುವ ಭಗವಂತ ಚತುರ್ಗತಿಃ. ಮನುಷ್ಯನಿಗೆ ಇನ್ನೊಂದು ರೀತಿಯಲ್ಲಿ ನಾಲ್ಕು ಗತಿಗಳಿವೆ. ಭೂಮಿಯಲ್ಲಿದ್ದು ಪುಣ್ಯ ಮಾಡಿದವರಿಗೆ ಸ್ವರ್ಗ, ಪಾಪ ಮಾಡಿದವರಿಗೆ ನರಕ. ಆಸುರ ಸ್ವಭಾವದವರಿಗೆ ತಮಸ್ಸು, ಸಾತ್ವಿಕರಿಗೆ ಮುಕ್ತಿ. ಹೀಗೆ ತಮಸ್ಸು, ಮುಕ್ತಿ, ಸ್ವರ್ಗ ಹಾಗೂ ನರಕಗಳೆಂಬ ಚತುರ್ಗತಿಗಳಿಗಾಸರೆಯಾದ ಭಗವಂತ ಚತುರ್ಗತಿಃ.

೭೭೩) ಚತುರಾತ್ಮಾ

ನಮ್ಮ ದೇಹದೊಳಗಿನ ಜೀವಸ್ವರೂಪದಲ್ಲಿ ಆತ್ಮ-ಅಂತರಾತ್ಮ-ಪರಮಾತ್ಮ-ಜ್ಞಾನಾತ್ಮ ಎಂಬ ನಾಲ್ಕು ರೂಪಗಳಿಂದ ನಮ್ಮನ್ನು ನಿಯಂತ್ರಿಸುವ ಭಗವಂತ ಚತುರಾತ್ಮಾ.

೭೭೪) ಚತುರ್ಭಾವಃ

ಈ ನಾಮದಲ್ಲಿ ಓಂಕಾರಕ್ಕೆ ಸಂಬಂಧಪಟ್ಟ ವಿಷಯ ಅಡಗಿದೆ. 'ಅ'ಕಾರ , 'ಉ'ಕಾರ, 'ಮ'ಕಾರ ಹಾಗೂ 'ನಾದ' ಈ ನಾಲ್ಕು ಅಕ್ಷರಗಳಿಂದ ಭಾವಿಸಲ್ಪಡುವ ಭಗವಂತ ಚತುರ್ಭಾವಃ. 'ಅ'ಕಾರಕ್ಕೆ ಸಂಬಂಧಪಟ್ಟ ರೂಪ 'ಕೃಷ್ಣ'; 'ಉ'ಕಾರಕ್ಕೆ ಸಂಬಂಧಪಟ್ಟ ರೂಪ 'ರಾಮ'; 'ಮ'ಕಾರಕ್ಕೆ ಸಂಬಂಧಪಟ್ಟ ರೂಪ 'ನರಸಿಂಹ' ಹಾಗೂ 'ನಾದ'ಕ್ಕೆ ಸಂಬಂಧಪಟ್ಟ ರೂಪ 'ವರಾಹ'. ಇವೇ ನಾಲ್ಕು ಭಾವಗಳು. ಈ ನಾಲ್ಕು ಅವತಾರಗಳು ಜಯ-ವಿಜಯರ ಆಸುರೀ ಶಕ್ತಿಯ ಸಂಹಾರಕ್ಕೆ ಭಗವಂತ ತಳೆದ ರೂಪ. ಹಿರಣ್ಯಾಕ್ಷನನ್ನು 'ವರಾಹ'ನಾಗಿ, ಹಿರಣ್ಯಕಶಿಪುವನ್ನು 'ನರಸಿಂಹ' ನಾಗಿ; ರಾವಣ-ಕುಂಭಕರ್ಣರನ್ನು 'ರಾಮ'ನಾಗಿ; ಶಿಶುಪಾಲ-ದಂತವಕ್ರರನ್ನು 'ಕೃಷ್ಣ'ನಾಗಿ ಭಗವಂತ ಸಂಹಾರ ಮಾಡಿ ಜಯ-ವಿಜಯರನ್ನು ಅವರ ಆಸುರೀ ರೂಪದಿಂದ ಬಿಡುಗಡೆ ಮಾಡಿದ. ಜಯ-ವಿಜಯರು 'ಶೇಷನ' ಮಕ್ಕಳು. ಇವರನ್ನು

ಭಗವಂತನ ಅರಮನೆಯ ಬಾಗಿಲು ಕಾಯುವ ಸೇವಕರು ಎಂದು ಹೇಳುತ್ತಾರೆ. ನಮ್ಮ ದೇಹದಲ್ಲಿ ಭಗವಂತನ ಅರಮನೆ 'ಹೃತ್ಕಮಲ', ಈ ಹೃತ್ಕಮಲವನ್ನು ಕಾಯುವ ಶಕ್ತಿಗಳಾದ ಜಯ-ವಿಜಯರು ಆಸುರೀ ರೂಪ ತೊಟ್ಟರೆ ನಾವು ನಮ್ಮ ಸ್ಥಿಮಿತವನ್ನು ಕಳೆದುಕೊಳ್ಳುತ್ತೇವೆ. ನಿರಂತರ ಓಂಕಾರದ ಉಪಾಸನೆಯಿಂದ ಅಥವಾ ರಾಮ-ಕೃಷ್ಣ-ನರಸಿಂಹ-ವರಾಹರೂಪಿ ಭಗವಂತನ ಉಪಾಸನೆಯಿಂದ ನಾವು ಮೋಕ್ಷವನ್ನು ಕಾಣಬಹುದು.

ನಾಲ್ಕು ಪುರುಷಾರ್ಥಗಳನ್ನು, ನಾಲ್ಕು ವರ್ಣಗಳನ್ನು ಹುಟ್ಟಿಸಿದ ಭಗವಂತ ಚತುರ್ಭಾವಃ.

೭೭೫) ಚತುರ್ವೇದಃ

ನಾಲ್ಕು ವೇದಗಳ ಅಂತರಂಗದ ಸಂಪೂರ್ಣ ಅರ್ಥವನ್ನು ಬಲ್ಲ ಭಗವಂತ ಚತುರ್ವೇದಃ. ವೇದವೆಂಬ ಕಡಲಿನಲ್ಲಿ ಮುಳುಗಿ, ಅಲ್ಲಿರುವ ಮುತ್ತುಗಳನ್ನು ಹೆಕ್ಕಿ ತರಬಲ್ಲವರು ನಿಜವಾದ ವೇದಪಾರಂಗತರು. ನಾವು ಎಷ್ಟೇ ತಿಳಿದರೂ ಅದು ಅಪೂರ್ಣ. ವೇದವನ್ನು ಸಂಪೂರ್ಣ ತಿಳಿದವನು ಭಗವಂತನೊಬ್ಬನೇ. ಇದನ್ನು ಗೀತೆಯಲ್ಲಿ ಹೀಗೆ ಹೇಳಿದ್ದಾರೆ:

ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।
ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ ವೇದವಿದೇವ ಚಾಹಮ್ (ಅ-೧೫; ಶ್ಲೋ-೧೫)

ಅಂದರೆ "ಎಲ್ಲರ ಹೃದಯದಲ್ಲಿ ನಾನು ನೆಲೆಸಿರುವೆ, ನೆನಪು, ಅರಿವು,ಮರೆವು ಎಲ್ಲವೂ ನನ್ನ ಕೊಡುಗೆ. ಎಲ್ಲಾ ವೇದಗಳಿಂದ ಅರಿಯಬೇಕಾದವನು ನಾನೇ. ವೇದಾಂತಸೂತ್ರಗಳನೊರೆದವನು, ವೇದಗಳ ಮರ್ಮವನ್ನರಿತವನು ನಾನೇ"

೭೭೬) ಏಕಪಾತ್

ಭಗವಂತನ ರೂಪ ಹಲವು. ಅನಂತ ರೂಪಿ ಭಗವಂತ ಏಕರೂಪದವನಾದವನು. ಅಖಂಡ ಅಭಿನ್ನ ಸ್ವರೂಪದಿಂದ ಸರ್ವ ಜೀವಜಾತವನ್ನು ಆವರಿಸಿರುವ ಭಗವಂತ ಏಕಪಾತ್.

ಸಮಾವರ್ತೋ ನಿವೃತ್ತಾತ್ಮಾ ದುರ್ಜಯೋ ದುರತಿಕ್ರಮಃ ।
ದುರ್ಲಭೋ ದುರ್ಗಮೋ ದುರ್ಗೋ ದುರಾವಾಸೋ ದುರಾರಿಹಾ ॥೯೬॥

೭೭೭) ಸಮಾವರ್ತಃ

ಸಮಾವರ್ತಃ ಎಂದರೆ ಸಂಸಾರ ಚಕ್ರ ತಿರುಗಿಸುವವನು. ಈ ಜಗತ್ತಿನ ಕೇಂದ್ರ ಬಿಂದು ಧ್ರುವಮಂಡಲದ ಸಮೀಪವಿದೆ. ಇಲ್ಲಿ 'ಶಿಂಶುಮಾರ' ರೂಪದಲ್ಲಿ ನಿಂತು, ನಿಯಮಿತವಾಗಿ, ಗಣಿತಬದ್ಧವಾಗಿ ಪ್ರಪಂಚವನ್ನು, ಗ್ರಹ-ಗೋಲವನ್ನು ತಿರುಗಿಸುತ್ತಿರುವ ಚಕ್ರಧಾರಿ ಭಗವಂತ ಸಮಾವರ್ತಃ. ಭಗವಂತ ಕೇಂದ್ರಬಿಂದುವಿನಲ್ಲಿ ನಿಂತು ಪ್ರಪಂಚವನ್ನು ತಿರುಗಿಸುವುದಲ್ಲದೆ, ತಾನೂ ಕೂಡಾ ಪ್ರತಿಯೊಂದು ವಸ್ತುವಿನಲ್ಲಿ ನೆಲೆಸಿ ತಿರುಗುತ್ತಿದ್ದಾನೆ.

೭೭೮) ಅನಿವೃತ್ತಾತ್ಮಾ(ನಿವೃತ್ತಾತ್ಮಾ)

ನಿರಂತರವಾಗಿ ಈ ಸಂಸಾರ ಚಕ್ರವನ್ನು ತಿರುಗಿಸುತ್ತಿರುವ ಭಗವಂತ ಯಾವುದೇ ರೀತಿಯ ಮೋಹ(Attachment) ಇಲ್ಲದೆ ಎಲ್ಲವನ್ನೂ ನಿಯಮಿತವಾಗಿ ಮಾಡುವ ನಿವೃತ್ತಾತ್ಮಾ.

೭೭೯) ದುರ್ಜಯಃ

ಜಯ ಎಂದರೆ ಒಂದು ಅರ್ಥದಲ್ಲಿ ಇನ್ನೊಬ್ಬರನ್ನು ಸೋಲಿಸುವುದು, ಇನ್ನೊಂದು ಅರ್ಥದಲ್ಲಿ ವರ್ತನೆಯಲ್ಲಿ ಎತ್ತರದಲ್ಲಿರುವುದು. ಒಂದು ಪಡೆಯುವುದು, ಇನ್ನೊಂದು ಇರುವುದು (Greatness). ಭಗವಂತ ಎಲ್ಲರಿಂದ ಎತ್ತರದಲ್ಲಿರುವವ. ಆತನನ್ನು ಮೀರಿ ಮೇಲಕ್ಕೆ ಹೋಗುವುದು ಅಸಾಧ್ಯ.

೭೮೦) ದುರತಿಕ್ರಮಃ

ಇಡೀ ಜಗತ್ತು ಭಗವಂತನ ಅಂಕೆಯಲ್ಲಿದೆ. ಅವನ ಆಣತಿಯನ್ನು ಮೀರಿ ಯಾರೂ ಮೇಲಕ್ಕೆ ಹೋಗಲಾರರು. ಅವನನ್ನು ಮೀರುವ ಒಂದು ವಸ್ತು ಈ ಜಗತ್ತಿನಲ್ಲಿಲ್ಲ.

೭೮೧) ದುರ್ಲಭಃ

ಭಗವಂತ ಎಲ್ಲಾ ಕಡೆ ಇದ್ದರೂ ಕೂಡಾ ಆತನನ್ನು ಸುಲಭವಾಗಿ ಪಡೆಯಲು ಸಾಧ್ಯವಿಲ್ಲ. ಆತ ದುರ್ಲಭಃ.

೭೮೨) ದುರ್ಗಮಃ

ಭಗವಂತನನ್ನು ಸುಲಭವಾಗಿ ತಿಳಿಯುವುದು ಕಷ್ಟ. ಆತ ನಮ್ಮ ಇಂದ್ರಿಯಗಳಿಗೆ ಎಟುಕಲಾರ. ಆತ ದುರ್ಗಮಃ. ಆತನನ್ನು ತಿಳಿಯಬೇಕಾದರೆ ನಾವು ನಮ್ಮ ಹೊರಪ್ರಪಂಚವನ್ನು ಬಿಟ್ಟು ಒಳಪ್ರಪಂಚದಿಂದ ಸಾಧನೆ ಮಾಡಬೇಕು.

೭೮೩) ದುರ್ಗಃ

ಭಗವಂತ ಅಜ್ಞಾನಿಗಳಿಗೆ ಎಂದೂ ದಕ್ಕುವುದಿಲ್ಲ. ಆತ ಅಜ್ಞಾನಿಗಳು ಲಗ್ಗೆ ಹೊಡೆಯಲಾಗದ ಕೋಟೆ.

೭೮೪) ದುರಾವಾಸಃ

ಸುಲಭವಾಗಿ ಧ್ಯಾನಕ್ಕೆ ಸಿಗದ ಭಗವಂತ ದುರಾವಾಸಃ. ಮಹಾನ್ ಸಂತರಿಗೂ ಕೂಡಾ ಭಗವಂತ ಕಾಣಿಸುವುದು ಕೇವಲ ಕೆಲವು ಕ್ಷಣಗಳು ಮಾತ್ರ .'ಅ'ಕಾರವನ್ನು ಉಚ್ಛಾರ ಮಾಡಲು ಬೇಕಾಗುವ ಸಮಯದ ನಾಲ್ಕನೇ ಒಂದು ಭಾಗದಷ್ಟು ಸಮಯ ಭಗವಂತನ ದರ್ಶನವಾದರೆ ಅದೇ ಮಹಾ ಪುಣ್ಯ.

೭೮೫) ದುರಾರಿಹಾ

ಕೆಟ್ಟ ದಾರಿ ಹಿಡಿದ ದುಷ್ಟರನ್ನು ಕೆಡಹುವ ಭಗವಂತ ದುರಾರಿಹಾ. ನಮ್ಮೊಳಗಿದ್ದು ನಮ್ಮ ಸುತ್ತ ಮುತ್ತಿಗೆ ಹಾಕುವ ಕೆಟ್ಟ ಶಕ್ತಿಗಳಾದ ಕಾಮ-ಕ್ರೋಧ, ಅಜ್ಞಾನ-ಅಸೂಯೆ-ಅಹಂಕಾರಗಳಿಂದ ನಮ್ಮನ್ನು ಬಿಡಿಸಬಲ್ಲ ಭಗವಂತ ದುರಾರಿಹಾ.

**ಶುಭಾಂಗೋ ಲೋಕಸಾರಂಗಃ ಸುತಂತುಸ್ತಂತುವರ್ಧನಃ ।**
**ಇಂದ್ರಕರ್ಮಾ ಮಹಾಕರ್ಮಾ ಕೃತಕರ್ಮಾ ಕೃತಾಗಮಃ ॥೯೭॥**

೭೮೬) ಶುಭಾಂಗಃ

ಭಗವಂತ ಸರ್ವಾಂಗ ಮಂಗಳಮೂರ್ತಿ. ದೋಷ ದುರ್ಗುಣದ ಸ್ಪರ್ಶ ಅವನಿಗಿಲ್ಲ. ಹೆಜ್ಜೆ-ಹೆಜ್ಜೆಗೂ ಕೆಟ್ಟ ದಾರಿ ಹಿಡಿಯುವ ನಮ್ಮ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಬೇಕಾದರೆ ಆ ಶುಭಾಂಗಃನಲ್ಲಿ ಶರಣಾಗಬೇಕು.

೭೮೭) ಲೋಕಸಾರಂಗಃ

ಲೋಕದಲ್ಲಿ ವಸ್ತು 'ಸಾರ'ವಾಗಲು ಕಾರಣ ಭಗವಂತ. ಆತ ನಮ್ಮೊಳಗಿದ್ದರೆ ಸಾರ, ಇಲ್ಲದಿದ್ದರೆ ನಿಸ್ಸಾರ. ನಮಗೆ ಸಾರಭೂತವಾದದ್ದನ್ನು ಗ್ರಹಿಸುವ ಶಕ್ತಿಕೊಡುವ ಭಗವಂತ ಲೋಕಸಾರಂಗಃ.

೭೮೮) ಸುತಂತುಃ

ಇಡೀ ಜಗತ್ತು ಒಂದಕ್ಕೊಂದು ಹೆಣೆದುಕೊಂಡು ನಿಯತಬದ್ಧವಾಗಿ ನಿಲ್ಲುವಂತೆ 'ನಿಯತಿಯ' ಹಗ್ಗದ ಬಲೆ ನೇಯ್ದ ಭಗವಂತ ಸುತಂತುಃ. 'ತಂತು' ಎಂದರೆ ಸಂತತಿ, ಬ್ರಹ್ಮಾದಿ ದೇವತೆಗಳೆಂಬ ಶ್ರೇಷ್ಠ ಸಂತತಿಯುಳ್ಳ ಭಗವಂತ ಸುತಂತುಃ.

೭೮೯) ತಂತುವರ್ಧನಃ

ಸಂತತಿಯನ್ನು ಬೆಳೆಸುವವನು ಹಾಗೂ ಸಂಹರಿಸುವವನು ತಂತುವರ್ಧನಃ. ನಮ್ಮೊಳಗೆ ಸ್ನೇಹದ, ಪ್ರೀತಿಯ ಅಂಕುರವನ್ನು ಬಿತ್ತಿ ಸಂಸಾರವನ್ನು ಬೆಳೆಸುವ ಭಗವಂತ ಪ್ರಳಯಕಾಲದಲ್ಲಿ ಎಲ್ಲವನ್ನೂ ಸಂಹಾರ ಮಾಡುತ್ತಾನೆ.

೭೯೦) ಇಂದ್ರಕರ್ಮಾ

ಸಂಸ್ಕೃತದಲ್ಲಿ 'ಇಂದ್ರ' ಎಂದರೆ ಸರ್ವ ಸಮರ್ಥ ಎನ್ನುವ ಅರ್ಥವಿದೆ. ಯಾವುದೇ ಕರ್ಮವನ್ನು ಮಾಡಬೇಕಾದರೂ ಸಾಮರ್ಥ್ಯ ಅಗತ್ಯ. ಭಗವಂತನ ಕೈಯಿಂದ ಆಗದೇ ಇರುವ ಯಾವ ಕೆಲಸವೂ ಇಲ್ಲ. ಆತ ಸರ್ವ ಕರ್ಮಗಳನ್ನು ನಿಭಾಯಿಸಬಲ್ಲ ಸಾಮರ್ಥ್ಯವುಳ್ಳ ಇಂದ್ರಕರ್ಮಾ

೭೯೧) ಮಹಾಕರ್ಮಾ

ಈ ಜಗತ್ತಿನಲ್ಲಿ ಎಲ್ಲಾ ಶ್ರೇಷ್ಠ ಕರ್ಮ ಮಾಡುವವನು ಹಾಗೂ ಮಾಡಿಸುವವನು ಆದ ಭಗವಂತ ಮಹಾಕರ್ಮಾ.

೭೯೨) ಕೃತಕರ್ಮಾ

ಕೃತಕೃತ್ಯನಾದವನು ಕೃತಕರ್ಮಾ. ಭಗವಂತ ಮಾಡಬೇಕಾದ ಯಾವುದೇ ಕರ್ಮ ಬಾಕಿ ಇಲ್ಲ. ಆದರೂ ಸಹ ಆತ ಈ ಪ್ರಪಂಚವನ್ನು ನಡೆಸುವ ಮಹಾ ಕರ್ಮವನ್ನು ನಿರಂತರ ಮಾಡುತ್ತಿರುತ್ತಾನೆ.

೭೯೩) ಕೃತಾಗಮಃ

'ಆಗಮ' ಎನ್ನುವ ಪದ 'ಶಾಸ್ತ್ರ' ಎನ್ನುವ ಅರ್ಥವನ್ನು ಕೊಡುತ್ತದೆ. ಸಮಸ್ತ ಶಾಸ್ತ್ರಗಳ ಸೃಷ್ಟಿಕರ್ತ ಭಗವಂತ ಕೃತಾಗಮಃ. ನಮ್ಮ ಜೀವನದ ನಡೆಗೆ ಬೇಕಾದ ನೀತಿ ಸಂಹಿತೆ ಕೊಟ್ಟವನು ಭಗವಂತ. ಇಷ್ಟೇ ಅಲ್ಲದೆ 'ಆಗಮ' ಎನ್ನುವುದಕ್ಕೆ ಫಲಿಸುವುದು ಅಥವಾ ಕೈಗೂಡುವುದು ಎನ್ನುವ ಅರ್ಥ ಕೂಡಾ ಇದೆ. ಭಗವಂತ ಮಾಡುವ ಸರ್ವ ಕರ್ಮವೂ ಕೂಡಾ ಫಲವನ್ನೀಯುತ್ತದೆ, ಆದ್ದರಿಂದ ಆತ ಕೃತಾಗಮಃ.

**ಉದ್ಭವಃ ಸುಂದರಃ ಸುಂದೋ ರತ್ನನಾಭಃ ಸುಲೋಚನಃ ।**
**ಅರ್ಕೋ ವಾಜಸನಃ ಶೃಂಗೀ ಜಯಂತಃ ಸರ್ವವಿಜ್ಜಯೀ ॥೯೮॥**

೭೯೪) ಉದ್ಭವಃ

ಉತ್+ಭವ; ಇಲ್ಲಿ ಉತ್ ಎಂದರೆ ಉತ್ಕೃಷ್ಟವಾದ ಎಂದರ್ಥ. ಆದ್ದರಿಂದ ಯಾವ ದೋಷವೂ ಇಲ್ಲದ ಅತ್ಯಂತ ಉತ್ಕೃಷ್ಟವಾದ ಇರುವಿಕೆ(ಭವ) ಉಳ್ಳ, ಹುಟ್ಟಿರದ ಭಗವಂತ ಉದ್ಭವಃ. ಎಲ್ಲವುದರ ಒಳಗಿದ್ದು ಪ್ರತಿಯೊಂದಕ್ಕೂ ಉತ್ಕೃಷ್ಟವನ್ನು ಕೊಟ್ಟವ ಆ ಭಗವಂತ.

೭೯೫) ಸುಂದರಃ

ಭಗವಂತ ಸೌಂದರ್ಯದ ಖನಿ. ಅವನು ಸೌಂದರ್ಯದ ಪರಾಕಾಷ್ಠೆ.

೭೯೬) ಸುಂದಃ

'ಸು' ಎಂದರೆ ಆನಂದ. ಸುಖವನ್ನೀಯುವವನು ಹಾಗೂ ದಾರಿತಪ್ಪಿದಾಗ ಸುಖದ ದಾರಿಯನ್ನು ಮುಚ್ಚುವ ಭಗವಂತ ಸುಂದಃ.

೭೯೭) ರತ್ನನಾಭಃ

ಆನಂದವೆಂಬ ಮುತ್ತು ಸುರಿಯುವ ಹೊಕ್ಕುಳುಳ್ಳವನು ರತ್ನನಾಭಃ. ಈ ವಿಶ್ವವೆಂಬ ಆನಂದದ ಬುಗ್ಗೆ ಭಗವಂತನ ನಾಭಿಯಿಂದ ಚಿಮ್ಮಿ ಸೃಷ್ಟಿಯಾಯಿತು. ಇಂತಹ ಮಹಾರತ್ನವನ್ನು ನಾಭಿಯಿಂದ ಸೃಷ್ಟಿಸಿದ ಭಗವಂತ ರತ್ನನಾಭಃ.

೭೯೮) ಸುಲೋಚನಃ

ಭಗವಂತ ಚಲುಗಣ್ಣಿನವನು ಆತ ಪ್ರತಿಯೊಂದನ್ನೂ ಸಮರ್ಪಕವಾಗಿ ಆಲೋಚಿಸಿ ಮಾಡುವ ಸುಲೋಚನಃ. ನಮ್ಮ ದೇಹದಲ್ಲಿ ಸೌಂದರ್ಯದ ಕೇಂದ್ರ 'ಕಣ್ಣು'. ನಮಗೆ ಸೌಂದರ್ಯವನ್ನು ಕೊಟ್ಟವನು ಹಾಗೂ ಇತರ ಇಂದ್ರಿಯಗಳಿಗಿಂತ ಅತೀ ಭಿನ್ನವಾದ ಸವಲತ್ತನ್ನು ಕಣ್ಣಿಗೆ ಕೊಟ್ಟ ಕಮಲ ನಯನ ಭಗವಂತ ಸುಲೋಚನಃ.

೭೯೯) ಅರ್ಕಃ

ಅರ್ಕ ಎಂದರೆ ಸೂರ್ಯ ಎನ್ನುವುದು ನಿಘಂಟಿನಲ್ಲಿ ಸಿಗುವ ಅರ್ಥ. ಸೂರ್ಯನಲ್ಲಿ ಸನ್ನಿಹಿತನಾಗಿ ಬೆಳಕನ್ನು ಕೊಟ್ಟು, ಕಣ್ಣಿನೊಳಗಿದ್ದು ನೋಡುವ ಶಕ್ತಿ ತುಂಬುವ ಭಗವಂತ ಅರ್ಕಃ.

ಭಗವಂತನನ್ನು ಅರ್ಚನೆ ಮಾಡುವುದಕ್ಕೋಸ್ಕರ ಬಳಸುವ ಮಂತ್ರಗಳು ಅರ್ಕಗಳು. ಆ ಮಂತ್ರಗಳಿಂದ ಅರ್ಚಿಸಲ್ಪಡುವ ಭಗವಂತ ಅರ್ಕಃ. ನಾವು ಸಾಮಾನ್ಯವಾಗಿ ಅರ್ಚನೆ ಮಾಡುವುದು ನೀರಿನಿಂದ; ನೀರನ್ನು ಅರ್ಕ ಎನ್ನುತ್ತಾರೆ. ಭಗವಂತ ಪ್ರಪಂಚ ಸೃಷ್ಟಿಯಲ್ಲಿ ಮೊಟ್ಟ ಮೊದಲು ಸೃಷ್ಟಿ ಮಾಡಿದ್ದು ನೀರನ್ನು. ಮಹಾ ಪ್ರಳಯದ ಕಾಲದಲ್ಲಿ ಭಗವಂತ ಮಲಗಿದ್ದು ಸೂಕ್ಷ್ಮ ರೂಪದ ಪ್ರಳಯ ಜಲದಲ್ಲಿ. ಆತನಿಗೆ ನೀರೆಂದರೆ ಅತಿಪ್ರೀಯ. ನೀರು ಅನೇಕ ಅರ್ಥಗಳಿಗೆ ಸಂಕೇತ. ನೀರು ಎಂದರೆ ಹರಿದುಕೊಂಡು ಹೋಗುವ ವಸ್ತು. ನಮ್ಮ ಮನಸ್ಸು ಭಕ್ತಿಯಿಂದ ಕರಗಿ ನೀರಾಗಿ ಹರಿದು ಭಗವಂತನಡೆಗೆ ಹೋಗಬೇಕು. ನಮ್ಮ ಮನಸ್ಸು ಭಕ್ತಿಯಿಂದ ಕರಗುವ ಸಂಕೇತ ಅರ್ಚನೆಯಲ್ಲಿ ಬಳಸುವ ನೀರು. ನೀರಿನಲ್ಲಿ ಸನ್ನಿಹಿತನಾಗಿದ್ದು, ಅದಕ್ಕೆ ಪಾವಿತ್ರ್ಯವನ್ನು ಕೊಟ್ಟ ಆನಂದ ಸ್ವರೂಪಿ, ಎಲ್ಲರಿಂದ ಪೂಜ್ಯನಾದ(One who has supreme bliss) ಪೂರ್ಣಾನಂದಸ್ವರೂಪ ಭಗವಂತ ಅರ್ಕಃ.

ಸಹಸ್ರನಾಮ ವಿವರಣೆ-೮೦೦

೮೦೦) ವಾಜಸನಃ

'ವಾಜ' ಎಂದರೆ ಆಹಾರ, ಯುದ್ಧ, ಕುದುರೆ(ವಾಜೀ), ವಾದ ಹೀಗೆ ಅನೇಕ ಅರ್ಥಗಳನ್ನು ಈ ಪದ ಕೊಡುತ್ತದೆ. ಎಲ್ಲರ ಅಗತ್ಯಕ್ಕೆ ಬೇಕಾದ ಆಹಾರವನ್ನು, ಜ್ಞಾನವನ್ನು ಕೊಡುವ, ಕುದುರೆಯ ರೂಪದಲ್ಲಿ ಸೂರ್ಯ ಹಾಗೂ ಆಶ್ವೀದೇವತೆಗಳಲ್ಲಿ ಸನ್ನಿಹಿತನಾದ ಭಗವಂತ ವಾಜಸನಃ. ಆತ ವಾದದ ಮೂಲಕ ಅರಿವನ್ನು ಬೆಳೆಸುವವ. ಇಲ್ಲಿ ವಾದ ಎಂದರೆ ವಿಷಯ ತಿಳುವಳಿಕೆಗಾಗಿ ಮಾಡುವ ಚರ್ಚೆ.

೮೦೧) ಶೃಂಗೀ

ಶೃಂಗವುಳ್ಳ ಮೀನಿನ ರೂಪದಲ್ಲಿ ಅವತರಿಸಿದವನು, ಉನ್ನತಿಕೆ ಅಥವಾ ನಿಜವಾದ ದೊಡ್ಡಸ್ಥಿಕೆ ಉಳ್ಳ ಭಗವಂತ ಶೃಂಗೀ.

೮೦೨) ಜಯಂತಃ

ಇಂದ್ರನ ಮಗನಾದ, ಕಾಲಿನ ಅಭಿಮಾನಿ ದೇವತೆ ಜಯಂತ. ಜಯಂತನೊಳಗಿದ್ದು ಸಮಸ್ತ ದೇಹವನ್ನು ಧಾರಣೆ ಮಾಡುವ ಭಗವಂತ, ಬಾಳಿನಲ್ಲಿ ಜಯವನ್ನು ತರುವವನು. ಯಾರ ಹಂಗೂ ಇಲ್ಲದೆ ನಮ್ಮ ಕಾಲ ಮೇಲೆ ನಾವು ನಿಲ್ಲುವಂತೆ ಮಾಡುವ ಆತನಿಗೆ ಜಯಂತಃ ಅನ್ವರ್ಥ ನಾಮ.

೮೦೩)ಸರ್ವವಿಜ್ಜಯೀ

ಎಲ್ಲವನ್ನೂ ಪಡೆದವನು, ಎಲ್ಲವನ್ನೂ ತಿಳಿದವನು, ಎಲ್ಲರನ್ನೂ ಅರಿತು ಎಲ್ಲರನ್ನೂ ಮೀರಿ ನಿಂತ ಭಗವಂತ ಸರ್ವವಿಜ್ಜಯೀ. ಆತ ಅವರವರ ಜೀವ ಸ್ವರೂಪದ ಯೋಗ್ಯತೆಗೆ ತಕ್ಕಂತೆ ಅಭೀಷ್ಟವೀಯುವವನು.

ಸುವರ್ಣಬಿಂದುರಕ್ಷೋಭ್ಯಃ ಸರ್ವವಾಗೀಶ್ವರೇಶ್ವರಃ ।
ಮಹಾಹ್ರದೋ ಮಹಾಗರ್ತೋ ಮಹಾಭೂತೋ ಮಹಾನಿಧಿಃ ॥೮೮॥

೮೦೪) ಸುವರ್ಣಬಿಂದು

ಸುವರ್ಣಬಿಂದು ಎಂದರೆ ಬಂಗಾರದ ಚುಕ್ಕೆ ಎನ್ನುವುದು ಮೇಲ್ನೋಟಕ್ಕೆ ಕಾಣುವ ಅರ್ಥ. ಸು+ವರ್ಣ-ಅಂದರೆ ವರ್ಣಗಳಲ್ಲಿ ಅತ್ಯಂತ ಶ್ರೇಷ್ಠವಾದ ವರ್ಣ. ಸುವರ್ಣಬಿಂದು ಎಂದರೆ ಓಂಕಾರದ 'ಅ', 'ಉ', 'ಮ' ಹಾಗೂ 'ನಾದ'ದ

ನಂತರ ಬರುವ ಬಿಂದು. ಓಂಕಾರದಲ್ಲಿ ನಮ್ಮ ಕಿವಿಗೆ ಕೇಳುವ ಕೊನೇಯ ವರ್ಣ ಬಿಂದು. ಓಂಕಾರದ ಬಿಂದುವಿನಿಂದ ಪ್ರತಿಪಾದ್ಯನಾದ ಭಗವಂತ ಸುವರ್ಣಬಿಂದು. ಓಂಕಾರದಲ್ಲಿ 'ಅ'ಕಾರ ಕೃಷ್ಣ ರೂಪವನ್ನು, 'ಉ'ಕಾರ ರಾಮ ರೂಪವನ್ನು,'ಮ'ಕಾರ ನರಸಿಂಹ ರೂಪವನ್ನು ಪ್ರತಿಪಾದಿಸಿದರೆ, ಬಿಂದು ಭಗವಂತನ ವಿಷ್ಣು ರೂಪವನ್ನು ಪ್ರತಿಪಾದಿಸುತ್ತದೆ. ಜಗತ್ತಿನ ಸರ್ವ ಸಾಹಿತ್ಯದಲ್ಲಿ ಶ್ರೇಷ್ಠವಾದ ದಿವ್ಯ ಅನುಭೂತಿಯನ್ನು ಹೇಳುವ ಮಹಾಭಾರತ ಹಾಗೂ ವೇದಗಳಿಂದ ವಾಚ್ಯನಾದ ಭಗವಂತ ಸುವರ್ಣಬಿಂದು.

೮೦೫) ಅಕ್ಷೋಭ್ಯಃ

ಭಗವಂತನನ್ನು ಕಂಗೆಡಿಸಲು ಯಾವ ಶಕ್ತಿಯಿಂದಲೂ ಸಾಧ್ಯವಿಲ್ಲ. ಎಲ್ಲರೂ ತಮ್ಮ ಪದವಿಯನ್ನು ಒಂದಲ್ಲ ಒಂದುದಿನ ಕಳೆದುಕೊಳ್ಳಲೇಬೇಕು, ಆದರೆ ಭಗವಂತನ ಪದವಿ ಎಂದೂ ಬದಲಾಗದು. ಇಂತಹ ಭಗವಂತ ಅಕ್ಷೋಭ್ಯಃ.

೮೦೬) ಸರ್ವವಾಗೀಶ್ವರೇಶ್ವರಃ

ಒಬ್ಬರ ಭಾವನೆಯನ್ನು ಇನ್ನೊಬ್ಬರಿಗೆ ತಿಳಿಸುವ 'ನಾದ' ಮಾತು ಅಥವಾ 'ವಾಕ್'. ಮನುಷ್ಯ ಮಾತ್ರವಲ್ಲ, ಪ್ರಾಣಿಗಳೂ ಸಹ ನಾದದ ಮುಖೇನ ಮಾತನಾಡಿಕೊಳ್ಳುತ್ತವೆ. ಎಲ್ಲಾ ಮಾತುಗಳ ಒಡತಿ ಸರಸ್ವತಿ. ಪಾರ್ವತಿಯನ್ನೂ ಕೂಡಾ ಒಂದು ನೆಲೆಯಲ್ಲಿ ವಾಗೀಶ್ವರಿ ಎಂದು ಕರೆಯುತ್ತಾರೆ. ಏಕೆಂದರೆ ಮಾತು ಮತ್ತು ಮನಸ್ಸು ದಂಪತಿಗಳಿದ್ದಂತೆ. ಮನಸ್ಸು ಶಿವ ಮಾತು ಪಾರ್ವತಿ. ಮನಸ್ಸು ಯೋಚಿಸಿದ್ದನ್ನು ಮಾತು ಹೇಳುತ್ತದೆ. ಆದ್ದರಿಂದ ನಮ್ಮೊಳಗಿರುವ ಶಿವಶಕ್ತಿ ಮತ್ತು ಪಾರ್ವತಿ ಶಕ್ತಿಯೇ ನಮ್ಮ ಮನನ ಮತ್ತು ಮಾತುಗಳ ಹಿಂದಿರುವ ಶಕ್ತಿ. ಇಷ್ಟೇ ಅಲ್ಲದೆ ಭಾರತಿ-ಸರಸ್ವತಿ, ಬ್ರಹ್ಮ-ವಾಯು ಇವರೆಲ್ಲರೂ ಸರ್ವವಾಗೀಶ್ವರರು. ಇವರೆಲ್ಲರ ಒಡೆಯ ಸರ್ವಶಬ್ದ ವಾಚ್ಯನಾದ ಪರಶಕ್ತಿಯಾದ ಭಗವಂತ ಸರ್ವವಾಗೀಶ್ವರೇಶ್ವರಃ.

೮೦೭) ಮಹಾಹ್ರದಃ

'ಹ್ರದ' ಎಂದರೆ ಅತ್ಯಂತ ದೊಡ್ಡ ಸರೋವರ, ಅಂದರೆ ಕಡಲು. ಜಗತ್ತಿನಲ್ಲಿ ಸಮುದ್ರಗಳನ್ನು ನಿರ್ಮಿಸಿ ಅದರಲ್ಲಿ ಸನ್ನಿಹಿತನಾಗಿರುವ ಭಗವಂತ ಮಹಾಹ್ರದಃ. ಪ್ರಳಯಕಾಲದಲ್ಲಿ ಪ್ರಳಯ ಸಮುದ್ರದಲ್ಲಿ ಪವಡಿಸಿರುವ ಅನಂತಶಯನ ಭಗವಂತ ಮಹಾಹ್ರದಃ.

೮೦೮) ಮಹಾಗರ್ತಃ

'ಗರ್ತ' ಎಂದರೆ ಗುಹೆ ಅಥವಾ ಕಣಿವೆ (valleys). ಜಗತ್ತಿನ ಮಹಾಗರ್ತ ನಮ್ಮ ಹೃದಯ ಗುಹೆ. ಇಂತಹ ಮಹಾ ಕಣಿವೆಯಲ್ಲಿ ನೆಲೆಸಿರುವ ಹೃತ್ಕಮಲ ಮಧ್ಯನಿವಾಸಿ ಭಗವಂತ ಮಹಾಗರ್ತಃ

೮೦೯) ಮಹಾಭೂತಃ

ಯಾವುದು ಎಲ್ಲಾ ಕಾಲದಲ್ಲಿ ಶಾಶ್ವತವಾಗಿರುತ್ತದೋ ಅದು ಮಹಾಭೂತ. ಕಾಲಾತೀತನಾದ, ಸರ್ವೋನ್ನತನಾದ ಭಗವಂತ ಮಹಾಭೂತಃ

೮೧೦) ಮಹಾನಿಧಿಃ

ಭಗವಂತ ನಮ್ಮ ಹೃದಯಗುಹೆಯಲ್ಲಿ ಅಡಗಿರುವ ಮಹಾನ್ ಸಂಪತ್ತು. ಆತನಿಗಿಂತ ಹಿರಿದಾದ ನಿಧಿ ಇನ್ನೊಂದಿಲ್ಲ. ಬಾಹ್ಯ ಪ್ರಪಂಚದ ಹಣದ ಆಸೆಯಿಂದ ಜೀವನವನ್ನು ವ್ಯರ್ಥ ಮಾಡಿಕೊಳ್ಳುವ ಬದಲು, ನಮ್ಮೊಳಗಿರುವ ಕೊಪ್ಪರಿಗೆ 'ಮಹಾನಿಧಿಃ' ಭಗವಂತನನ್ನು ತಿಳಿದರೆ ನಮ್ಮ ಜೀವನ ಸಾರ್ಥಕ.

**ಕುಮುದಃ ಕುಂದರಃ ಕುಂದಃ ಪರ್ಜನ್ಯಃ ಪಾವನೋಽನಿಲಃ ।**

**ಅಮೃತಾಶೋಽಮೃತವಪುಃ ಸರ್ವಜ್ಞಃ ಸರ್ವತೋಮುಖಃ ॥೧೦೦ ॥**

೮೧೧) ಕುಮುದಃ

ಕು+ಮುದ; ಇಡೀ ಜಗತ್ತಿಗೆ ಆನಂದವನ್ನು ಕೊಡತಕ್ಕಂತಹ ಶಕ್ತಿ. 'ಕು' ಎಂದರೆ ಭೂಮಿ. ಭೂಮಿಗೆ ಮುದವನ್ನಿತ್ತವನು ಕುಮುದಃ. 'ಕು' ಎಂದರೆ 'ಕುಸ್ಸಿತ'. ನಮ್ಮನ್ನು ಕುಸ್ಸಿತವಾದ, ಕ್ಷುದ್ರವಾದ, ಆನಂದದ ಬೆನ್ನಹಿಂದೆ ಹೋಗುವಂತೆ ಮಾಡುವವನೂ ಅವನೇ! ಈ ಹಿಂದೆ ಹೇಳಿದಂತೆ ಇದು ಅವನ ಶಿಕ್ಷಣ ಪದ್ಧತಿ.

೮೧೨) ಕುಂದರಃ

'ಕುಂದ' ಎನ್ನುವುದು ಒಂದು ಹೂವಿನ ಹೆಸರು(Jasmine flower). ಭಗವಂತನಿಗೆ 'ಕುಂದ' ಪುಷ್ಪ ತುಂಬಾ ಇಷ್ಟ. ಭಗವಂತನ ಮಂದಹಾಸ ಬೀರುವ ತುಟಿಗಳು 'ಕುಂದ' ಪುಷ್ಪದಂತೆ ಎಂದು ಭಾಗವತದಲ್ಲಿ ಈ ರೀತಿ ವರ್ಣನೆ ಮಾಡಿದ್ದಾರೆ:

ತೇ ವಾ ಅಮುಷ್ಯ ವದನಾಸಿತಪದ್ಮಕೋಶಂ ಉದ್ವೀಕ್ಷ್ಯ ಸುಂದರತರಾಧರಕುಂದಹಾಸಂ ॥೧೩-೧೫-೪೪॥

ಅಂದರೆ " ಭಗವಂತನ ಸುಂದರ ಮುಖ ತಾವರೆಯಂತೆ, ಆತನ ಮುಗುಳ್ನಗು ಅರಳುತ್ತಿರುವ ಕುಂದ ಪುಷ್ಪದಂತೆ". ಹೀಗೆ ಸದಾ ಮಂದಹಾಸದಿಂದಿರುವ ಆನಂದಮೂರ್ತಿ ಭಗವಂತ ಕುಂದರಃ.

ಕುಂ-ದದಾತೀತಿ ಕುಂದರಃ. ಇಲ್ಲಿ ಕುಂ ಅಂದರೆ ಭೂಮಿ. ನಮ್ಮ ವಾಸಕ್ಕೋಸ್ಕರ ಭೂಮಿಯನ್ನು ಕೊಟ್ಟು, ಅದರಲ್ಲಿ ನೆಲೆಸಿ ಆನಂದವನ್ನು ಕೊಡುವ ಭಗವಂತ ಕುಂದರಃ.

೮೧೩) ಕುಂದಃ

ಕುಂ-ದ್ಯತೀತಿ ಕುಂದಃ; ಕುಸ್ಸಿತವಾದ ಕೆಟ್ಟ ಆಲೋಚನೆಯನ್ನು ಹೊಂದಿದ ದುಷ್ಟರನ್ನು ನಿಗ್ರಹಿಸುವ(ದ್ಯತಿ) ಭಗವಂತ ಕುಂದಃ. ಅಂತಹ ಜನರಿಗೆ ನಿಲ್ಲಲು ನೆಲೆ ಕೂಡಾ ಇರದು.

೮೧೪) ಪರ್ಜನ್ಯಃ

ಪರ್ಜನ್ಯ ಎಂದರೆ ಪ್ರಸಿದ್ಧವಾದ ಅರ್ಥ ಮೋಡ. ಮಳೆ ಬಾರದಿದ್ದಾಗ ಮಳೆಗಾಗಿ ಪರ್ಜನ್ಯ ಮಂತ್ರ ಜಪ ಮಾಡುತ್ತಾರೆ. ಪರ+ಜನ್ಯ-ಪರ್ಜನ್ಯ. ಯಾವುದರಿಂದ ನಾವು ಬದುಕುತ್ತೇವೋ, ಯಾವುದು ನಮಗೆ ಆಹಾರವೋ ಅದು 'ಪರ'. ಸಸ್ಯಗಳು, ಧಾನ್ಯಗಳು, ಹೂ-ಹಣ್ಣು-ತರಕಾರಿಗಳು 'ಪರ'. ಇಂತಹ ನಮ್ಮನ್ನು ಬದುಕಿಸುವ ಗಿಡಗಳು ಯಾರಿಂದ ಜನ್ಯವೋ ಅವನು ಪರ್ಜನ್ಯಃ. ಈ ಗಿಡಗಳು ಹುಟ್ಟಿ ಬೆಳೆದು ಫಲವನ್ನು ಕೊಡಬೇಕಾದರೆ ಮಳೆ ಬೇಕು. ಇಳೆಗೆ ಮಳೆಯನ್ನು ಕೊಟ್ಟು ಸಲಹುವ ಭಗವಂತ ಪರ್ಜನ್ಯಃ.

೮೧೫) ಪಾವನಃ

ನಮ್ಮೊಳಗಿದ್ದು ನಮ್ಮನ್ನು ಪವಿತ್ರಗೊಳಿಸುವ ಭಗವಂತ ಪಾವನಃ. ಆತ ನಮ್ಮೊಳಗಿದ್ದರೆ ಈ ಶರೀರ 'ಶಿವ', ಇಲ್ಲದಿದ್ದರೆ 'ಶವ'

೮೧೬) ಅನಿಲಃ

ನೆಲೆ ಇರದವನು ಅನಿಲಃ. ಸರ್ವಾಂತರ್ಯಾಮಿಯಾದ ಭಗವಂತನಿಗೆ ಇಂತದ್ದೇ ಎನ್ನುವ ನೆಲೆಯೊಂದಿಲ್ಲ. ವಾಯು ಅಥವಾ ಪ್ರಾಣತತ್ವವನ್ನು ಭಜಿಸುವ ಭಕ್ತರು ಆತನಿಗೆ ಅತೀ ಪ್ರೀಯ. 'ಪ್ರಾಣ' ಆತನ ಆತ್ಮೀಯ. ಪ್ರಾಣತತ್ವದಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಅನಿಲಃ.

೮೧೭) ಅಮೃತಾಶಃ

ಇಲ್ಲಿ ಅಮೃತ ಎಂದರೆ ನಿತ್ಯಾನಂದ. ಮೋಕ್ಷದಲ್ಲಿ ನಮಗೆ ಎಂದೂ ಕೊನೆಯಿಲ್ಲದ ನಿರಂತರ ಆನಂದವನ್ನು ಉಣಿಸುವ, ನಾಶವಿಲ್ಲದ ಆನಂದ ಸ್ವರೂಪಿ ಭಗವಂತ ಅಮೃತಾಶಃ. ಮೋಕ್ಷದಲ್ಲಿ ಅಮೃತವಾಗಿರುವ ಜೀವಜಾತಗಳು ಯಾರ ಅಂಶವೋ ಅವನು ಅಮೃತಾಂಶ.

೮೧೮) ಅಮೃತವಪುಃ

ಎಂದೂ ನಾಶವಿಲ್ಲದ, ಜ್ಞಾನಾನಂದಮಯವಾದ, ಹುಟ್ಟು-ಸಾವಿಗೆ ಬದ್ಧವಲ್ಲದ ಶರೀರವುಳ್ಳ ಭಗವಂತ ಅಮೃತವಪುಃ. ಭಗವಂತನ ದೇಹ ಪಾಂಚಬೌತಿಕವಾದುದ್ದಲ್ಲ. ಅವತಾರ ರೂಪದಲ್ಲಿ ಆತ ನಮಗೆ ಕಾಣಿಸುವುದು ಸಾಮಾನ್ಯ ಮಾನವ ಶರೀರ ರೂಪದಲ್ಲಿ. ಆದರೆ ಭಗವಂತನಿಗೂ ಕೂಡಾ ನಮ್ಮಂತೆ ಪಾಂಚಭೌತಿಕಶರೀರವಿದೆ, ಅದು ಒಂದು ದಿನ ಬಿದ್ದುಹೋಗುತ್ತದೆ ಎಂದು ತಿಳಿಯುವುದು ತಪ್ಪು. ಇದನ್ನು ಶ್ರೀಕೃಷ್ಣ ಗೀತೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ:

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ (ಅ-೯, ಶ್ಲೋ-೧೧)

ಅಂದರೆ "ಮನುಷ್ಯರಂತೆ ಕಾಣಿಸಿಕೊಂಡು ಮೈದಾಳಿದ ನನ್ನನ್ನು ಮನುಷ್ಯನೆಂದು ಬಗೆದು ಕಡೆಗಣಿಸುತ್ತಾರೆ - ಎಂದೆಂದೂ ಎಲ್ಲಡೆಯೂ ಇರುವ ಹಿರಿದಕ್ಕೂ ಹಿರಿದಾದ ನನ್ನ ಹಿರಿಮೆಯನ್ನರಿಯದ ತಿಳಿಗೇಡಿಗಳು" ಹೀಗೆ ಹುಟ್ಟು-ಸಾವಿಗೆ ಬದ್ಧವಲ್ಲದ, ಅಳಿವಿಲ್ಲದ ಶರೀರವುಳ್ಳ ಭಗವಂತ ಅಮೃತವಪುಃ

೮೧೯) ಸರ್ವಜ್ಞಃ

ನಮ್ಮ ಆತ್ಮ 'ಜ್ಞಾನಾನಂದ' ಸ್ವರೂಪ. ಆದರೆ ಆ ಜ್ಞಾನ ಹಾಗೂ ಆನಂದದ ಅನುಭವ ಆಗದಂತೆ ಮುಚ್ಚಿಟ್ಟಿರುವುದು ಈ ಶರೀರ. ಲಿಂಗಶರೀರ, ಸೂಕ್ಷ್ಮಶರೀರ ಹಾಗೂ ಸ್ಥೂಲಶರೀರ. ಈ ಮೂರು ಮುಚ್ಚಳಗಳಿಂದ ಮುಚ್ಚಿರುವ ನಮ್ಮ ಆತ್ಮಕ್ಕೆ ಅಭಿವ್ಯಕ್ತವಿಲ್ಲ. ಆದರೆ ಭಗವಂತ ಜ್ಞಾನಾನಂದ ಸ್ವರೂಪ. ಆತನ ಜ್ಞಾನಕ್ಕೆ ಯಾವುದೇ ರೀತಿಯ ಮುಚ್ಚಳವಿಲ್ಲ. ಅವನಿಗೆ ತಿಳಿಯದ ವಿಷಯವೊಂದಿಲ್ಲ. ಆತ ಸರ್ವಜ್ಞಃ.

೮೨೦) ಸರ್ವತೋಮುಖಃ

ಈ ನಾಮವನ್ನು ಕೇಳಿದಾಗ ನಮಗೆ ಪುರುಷಸೂಕ್ತದ ಈ ಸಾಲುಗಳು ನೆನಪಿಗೆ ಬರುತ್ತದೆ. 'ಸಹಸ್ರ ಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ ಎಂದು ಭಗವಂತನನ್ನು ಪುರುಷಸೂಕ್ತದಲ್ಲಿ ವರ್ಣಿಸಿದ್ದಾರೆ. ಇಲ್ಲಿ ಬಹುಶಿರ ಎಂದರೆ ಸಹಸ್ರ-ಸಹಸ್ರ ಶಿರಸ್ಸನ್ನು ಹೊಂದಿರುವವನು ಎಂದರ್ಥ. ಭಗವಂತನಿಗೆ ನಮ್ಮಂತೆ ಒಂದು ಮುಖವಲ್ಲ. ಜ್ಞಾನಾನಂದ ಸ್ವರೂಪಿಯಾದ ಆತನ ಶರೀರ ಎಲ್ಲಾ ಕಡೆ ವ್ಯಾಪಿಸಿದೆ. ಆತ ಸರ್ವತೋಮುಖಃ

ಸುಲಭಃ ಸುವ್ರತಃ ಸಿದ್ಧಃ ಶತ್ರುಜಿಚ್ಛತ್ರುತಾಪನಃ ।
ನ್ಯಗ್ರೋಧೋದುಂಬರೋಶ್ವತ್ಥಶ್ಚಾಣೂರಾಂಧ್ರನಿಸೂದನಃ ॥೧೦೧॥

೮೨೧) ಸುಲಭಃ

ಭಗವಂತ ನಮ್ಮೊಳಗೇ ಇದ್ದಾನೆ, ಆತ ಎಲ್ಲಾ ಕಡೆ ತುಂಬಿದ್ದಾನೆ ಎನ್ನುವ ಅರಿವು ನಮ್ಮಲ್ಲಿ ಮೂಡಿದಾಗ ಭಗವಂತ ಭಕ್ತರಿಗೆ ಸುಲಭನಾಗುತ್ತಾನೆ. ಇದನ್ನು ಪ್ರಹ್ಲಾದ ನಮಗೆ ತೋರಿಸಿಕೊಟ್ಟಿದ್ದಾನೆ. ನಾವು ಪ್ರಹ್ಲಾದ-ದ್ರುವನಂತೆ ನಿಷ್ಕಲ್ಮಶವಾದ ಭಕ್ತಿಯಿಂದ ಮಗುವಿನಂತೆ ಭಗವಂತನನ್ನು ಭಜಿಸಿದರೆ ಆತ ಸುಲಭಃ.

೮೨೨) ಸುವ್ರತಃ

ಭಕ್ತನ ರಕ್ಷಣೆಯೇ ಭಗವಂತನ ವ್ರತ. ರಾಮಾಯಣದಲ್ಲಿ ಶ್ರೀರಾಮ ಈ ರೀತಿ ಹೇಳಿದ್ದಾನೆ. "ನಾನು ನಿನ್ನವ, ನನ್ನನ್ನು ಕೈಬಿಡಬೇಡ ಎಂದು ಯಾರು ಒಂದು ಬಾರಿ ನನ್ನ ಹತ್ತಿರ ಭಕ್ತಿಯಿಂದ ಬೇಡಿಕೊಳ್ಳುತ್ತಾರೋ, ಅಂತವರನ್ನು ಎಂದೂ ಕೈಬಿಡುವುದಿಲ್ಲ" ಇದು ಭಗವಂತನ ವ್ರತ. ಇದನ್ನೇ ಶ್ರೀಕೃಷ್ಣ ಭಗವದ್ಗೀತೆಯಲ್ಲಿ ಈ ರೀತಿ ಹೇಳಿದ್ದಾನೆ:

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ (ಅ-೯, ಶ್ಲೋ:೨೨)

ಅಂದರೆ "ಯಾವುದೋ ಬೇಡವಾದ ವಿಷಯ ಚಿಂತನೆ ಬಿಟ್ಟು, ನನ್ನನ್ನು ಪರಿಪರಿಯಿಂದ ಪೂಜಿಸುವ ಜನರು ಎಲ್ಲೆಲ್ಲೂ ನನ್ನ ಸೇವೆಗೆ ಮುಡಿಪಾದವರು. ಅವರ ಯೋಗ-ಕ್ಷೇಮದ ಹೊಣೆ ನನ್ನದು". ಈ ರೀತಿ ಯಾರು ಭಗವಂತನನ್ನು ನಂಬಿ ಬರುತ್ತಾರೋ ಆತ ಅಂತವರ ಕೈ ಎಂದೂ ಬಿಡಲಾರ. ಇದು ಅವನ ವ್ರತ. ಇಂತಹ ಸು-ವ್ರತವುಳ್ಳ ಭಗವಂತ ಸುವ್ರತಃ.

೮೨೩) ಸಿದ್ಧಃ

ನಾವು ಯಾವಾಗಲೂ ಶ್ರೀಮಂತರಾಗಬೇಕು, ಇಲ್ಲದ್ದನ್ನು ಪಡೆಯಬೇಕು ಎನ್ನುವ ಬಯಕೆಯಲ್ಲಿ ನಮ್ಮ ಜೀವನವನ್ನು ಹಾಳು ಮಾಡಿಕೊಳ್ಳುತ್ತೇವೆ. ಆದರೆ ನಮ್ಮೊಳಗೇ ಸಿದ್ಧನಾಗಿರುವ ಭಗವಂತನನ್ನು ಅರಿಯುವ ಪ್ರಯತ್ನ ಎಂದೂ ಮಾಡುವುದಿಲ್ಲ. ಭಗವಂತನನ್ನು ಸಾಧಿಸಬೇಕಾಗಿಲ್ಲ. ಆತ ನಮ್ಮೊಳಗೇ ಸದಾ ಸಿದ್ಧನಾಗಿದ್ದಾನೆ, ಆತ ಸಿದ್ಧಃ.

೮೨೪) ಶತ್ರುಜಿತ್

ಈ ಹಿಂದೆ ಹೇಳಿದಂತೆ ಧರ್ಮವನ್ನು ದ್ವೇಷಿಸುವವರು ಭಗವಂತನ ಶತ್ರುಗಳು. ಇಂತಹ ಅರಿಗಳನ್ನು ಗೆದ್ದ ಭಗವಂತ ಶತ್ರುಜಿತ್.

೮೨೫) ಶತ್ರುತಾಪನಃ

ಅರಿಗಳನ್ನು ಪರಿಪರಿಯಾಗಿ ಗೋಳಾಡಿಸುವ ಭಗವಂತ ಶತ್ರುತಾಪನಃ !

೮೨೬) ನ್ಯಗ್ರೋಧಃ

ಆಲದ ಮರದಲ್ಲಿ ಸನ್ನಿಹಿತನಾಗಿರುವ ಭಗವಂತ ನ್ಯಗ್ರೋಧಃ.

೮೨೭) ಉದುಂಬರಃ

ಅತ್ತಿಯ ಮರದಲ್ಲಿ ವಿಶೇಷತಃ ಸನ್ನಿಹಿತನಾದ ಭಗವಂತ ಉದುಂಬರಃ.

೮೨೮) ಅಶ್ವತ್ಥಃ

ಅರಳಿಯಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಅಶ್ವತ್ಥಃ.

೮೨೯) ಚಾಣೂರಾಂಧ್ರನಿಸೂದನಃ

ಚಾಣೂರನೆಂಬ ರಾಕ್ಷಸನನ್ನು ಕೊಂದವ, ಅಜ್ಞಾನದಲ್ಲಿ ಸುಖವನ್ನು ಕಾಣುವವರನ್ನು ಮುಗಿಸುವವನು, ಕುರುಡನಲ್ಲಿ ಜನಿಸಿದ ಅಜ್ಞಾನಿಗಳಾದ ದುರ್ಯೋಧನಾದಿಗಳನ್ನು ಮುಗಿಸಿದ ಭಗವಂತ ಚಾಣೂರಾಂಧ್ರನಿಸೂದನಃ.

**ಸಹಸ್ರಾರ್ಚಿಃ ಸಪ್ತಜಿಹ್ವಃ ಸಪ್ತೈಧಾಃ ಸಪ್ತವಾಹನಃ ।**
**ಅಮೂರ್ತಿರನಘೋಽಚಿಂತ್ಯೋ ಭಯಕೃದ್ಭಯನಾಶನಃ ॥೧೦೨॥**

೮೩೦) ಸಹಸ್ರಾರ್ಚಿಃ

ಸಹಸ್ರ +ಅರ್ಚಿ; ಇಲ್ಲಿ ಸಹಸ್ರ ಎಂದರೆ ಸಾವಿರಾರು ಅಥವಾ ಅನಂತ; ಅರ್ಚಿ ಎಂದರೆ ಜ್ವಾಲೆ, ಅಂಶು, ಬೆಳಕಿನ ಕಿಡಿಗಳು ಇತ್ಯಾದಿ. ಸೂರ್ಯ ಮಂಡಲದ ಮಧ್ಯದಲ್ಲಿದ್ದು, ಈ ಜಗತ್ತಿಗೆ ಸೌರಶಕ್ತಿಯನ್ನು ಕೊಟ್ಟು ಬದುಕಿಸುವ

ಭಗವಂತ ಸಹಸ್ರಾರ್ಚಿಃ. ಸಹಸ್ರಾರು ಅವತಾರಗಳನ್ನು ತಾಳಿ ಜೀವಕೋಟಿಯನ್ನು ರಕ್ಷಿಸುವ ಭಗವಂತ ಸಹಸ್ರಾರ್ಚಿಃ. ಅಂತಹ ಮಹಾನ್ ಜ್ವಾಲೆಯ ಸಣ್ಣ ಅಂಶಗಳಾದ ಅನಂತ ಜೀವರ ಒಳಗಿದ್ದು ರಕ್ಷಿಸುವ ಬಿಂಬರೂಪಿ ಭಗವಂತ ಸಹಸ್ರಾರ್ಚಿಃ.

೮೨೧) ಸಪ್ತಜಿಹ್ವಃ

ಜಿಹ್ವ ಎಂದರೆ ನಾಲಿಗೆ. ಏಳು ನಾಲಿಗೆಗಳುಳ್ಳ ಭಗವಂತ ಸಪ್ತಜಿಹ್ವಃ! ಅಗ್ನಿಯಲ್ಲಿ ಸನ್ನಿಹಿತನಾಗಿರುವ ಭಗವಂತನಿಗೆ ಏಳು ನಾಲಿಗೆಗಳು. ಕಟ್ಟಿಗೆಯಿಂದ ಪ್ರಜ್ವಲಿಸುವ ಅಗ್ನಿಯಲ್ಲಿ ಏಳುವರ್ಣಗಳಿವೆ(**Spectrum**). ಇದನ್ನು ಪ್ರಾಚೀನರು ಗುರುತಿಸಿದ್ದಾರೆ. ಹೀಗೆ ಏಳು ಬಣ್ಣದ ನಾಲಿಗೆಯಿಂದ ನಾವು ಕೊಡುವ ಹವಿಸ್ಸನ್ನು ಸ್ವೀಕರಿಸುವ ಭಗವಂತ ಸಪ್ತಜಿಹ್ವಃ. ನಮ್ಮೊಳಗೆ ಅಂತರ್ಯಾಮಿಯಾಗಿರುವ ಭಗವಂತ ನಮ್ಮ ದೇಹದಲ್ಲಿ ಏಳು ಜ್ವಾಲೆಯಾಗಿ ಹವನವನ್ನು ಸ್ವೀಕರಿಸುತ್ತಾನೆ. ಕಣ್ಣು ಎನ್ನುವ ಜ್ವಾಲೆಯಲ್ಲಿ-ರೂಪದ ಹೋಮ, ಕಿವಿಯಲ್ಲಿ-ನಾದದ ಹೋಮ, ಮೂಗಿನಿಂದ ಗಂಧದ ಆಹುತಿ, ನಾಲಿಗೆಯಿಂದ-ಆಹಾರದ ಆಹುತಿ, ತೊಗಲಿನಿಂದ-ಸ್ಪರ್ಶದ ಆಹುತಿ ಹಾಗೂ ಈ ಐದು ಜ್ಞಾನೇಂದ್ರಿಯಗಳನ್ನು ನಿಯಂತ್ರಿಸುವ ಹಾಗೂ ಗ್ರಹಿಸುವ ಮನಸ್ಸು ಮತ್ತು ಬುದ್ಧಿ. ಹೀಗೆ ಏಳು ನಾಲಿಗೆಗಳನ್ನು ಜೀವರಿಗೆ ಕೊಟ್ಟು ಅದರಿಂದ ವಿಷಯ ಜ್ಞಾನವನ್ನು ಕೊಡುವ ಭಗವಂತ ಸಪ್ತಜಿಹ್ವಃ.

೮೨೨) ಸಪ್ತೈಧಾಃ

ಏಳು ಜ್ಞಾನೇಂದ್ರಿಯಗಳಿಗೆ ವಿಷಯಗಳನ್ನಿತ್ತವನು. ಏಳು ಇಂದ್ರಿಯಗಳನ್ನು ಸೃಷ್ಟಿ ಮಾಡಿ, ಜೀವನಿಗೆ ಏಳು ಜ್ವಾಲೆಗಳನ್ನು ಕೊಟ್ಟು, ಆ ಜ್ವಾಲೆಯ ಬೆಳಕಿನಲ್ಲಿ ಏಳು ಅರಿವನ್ನು ಕೊಟ್ಟು, ಏಳು ವಿಷಯಗಳನ್ನು ಸವಿಯುವ ಭಗವಂತ ಸಪ್ತೈಧಾಃ. ಇದನ್ನೇ ಗೀತೆಯಲ್ಲಿ ಹೀಗೆ ಹೇಳಿದ್ದಾರೆ:

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ (ಅ-೧೫; ಶ್ಲೋ-೯)**

೮೨೩) ಸಪ್ತವಾಹನಃ

ಭಗವಂತ ಇಡೀ ಪ್ರಪಂಚವನ್ನು ನಿರ್ವಹಿಸುವ ರೀತಿಯನ್ನು ಈ ನಾಮ ತಿಳಿಸುತ್ತದೆ. ಇಲ್ಲಿ ಸಂಖ್ಯೆ ಏಳಕ್ಕೆ ಪ್ರಾಮುಖ್ಯವಿದೆ. ಇದು ವೈದಿಕ ಸಂಖ್ಯೆ ಕೂಡಾ ಹೌದು. ನಮ್ಮ ದೇಹ ಸಪ್ತ ಧಾತುವಿನಿಂದಾಗಿದೆ. ತ್ವಕ್(ಹೊರ ಪದರ), ಚರ್ಮ(ಒಳಪದರ), ಮಾಂಸ, ರಕ್ತ, ಕೊಬ್ಬು, ಎಲುಬು ಹಾಗೂ ಮಜ್ಜೆ. ನಮ್ಮ ದೇಹದಲ್ಲಿ ಪಂಚ ಜ್ಞಾನೇಂದ್ರಿಯಗಳು ಐದು ಕುದುರೆಗಳು. ಮನಸ್ಸು ಕಡಿವಾಣ-ಬುದ್ಧಿ ಸಾರಥಿ. ಸಪ್ತ ಧಾತುವಿನಿಂದಾದ ಈ ದೇಹಕ್ಕೆ ಪಂಚ ಜ್ಞಾನೇಂದ್ರಿಯಗಳೆಂಬ ಐದು ಕುದುರೆಗಳನ್ನು ಕಟ್ಟಿ, ಮನಸ್ಸೆಂಬ ಕಡಿವಾಣ ಹಾಗೂ ಬುದ್ಧಿ ಎನ್ನುವ ಸಾರಥಿಯಿಂದ ನಡೆಸುವ ಭಗವಂತ ಸಪ್ತವಾಹನಃ.

ಜಗತ್ತಿನಲ್ಲಿರುವ ಸಮಸ್ತ ವಾಙ್ಮಯವೂ ಕೂಡಾ ಸಪ್ತ ಸ್ವರಗಳಿಂದಾಗಿದೆ. ಅವುಗಳೆಂದರೆ: ಷಡ್ಜ , ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ. (ಸ, ರಿ, ಗ, ಮ, ಪ, ಧ, ನಿ). ಈ ಸಪ್ತ ಸ್ವರಗಳಿಗೆ ಸಪ್ತ ಛಂದಸ್ಸುಗಳಾದವು. ಷಡ್ಜಕ್ಕೆ-೨೪ ಅಕ್ಷರದ ಗಾಯತ್ರಿ, ಋಷಭಕ್ಕೆ- ೨೮ ಅಕ್ಷರದ ಉಷ್ಣಿಕ್, ಗಾಂಧಾರಕ್ಕೆ- ೩೨ ಅಕ್ಷರದ ಅನುಷ್ಟುಪ್, ಮಧ್ಯಮಕ್ಕೆ-೩೬ ಅಕ್ಷರದ ಬೃಹತೀ, ಪಂಚಮಕ್ಕೆ-೪೦ ಅಕ್ಷರದ ಪಂಕ್ತಿ, ಧೈವತಕ್ಕೆ-೪೪ ಅಕ್ಷರದ ತ್ರಿಷ್ಟುಪ್ ಮತ್ತು ನಿಷಾದಕ್ಕೆ-೪೮ ಅಕ್ಷರದ ಜಗತೀ. ಈ ಏಳು ಛಂದಸ್ಸುಗಳೇ ಸೂರ್ಯನ ರಥದ ಏಳು ಕುದುರೆಗಳು. ಅವೇ ಸೂರ್ಯ ಕಿರಣದಲ್ಲಿರುವ ಏಳು ಬಣ್ಣಗಳು.ಅಗ್ನಿಯಲ್ಲಿಯೂ ಕೂಡಾ ಏಳು ಬಣ್ಣಗಳು(ಕಾಳೀ, ಕರಾಳೀ, ಮನೋಜವಾ, ಸುಲೋಹಿತ, ಸುಧೂಮ್ರವರ್ಣಾ, ಸ್ಫಲಿಂಗಿನಿ ಹಾಗೂ ವಿಶ್ವರುಚೀ). ಮೂಲಭೂತವಾಗಿ ಸಮಸ್ತ ಸಂಸ್ಕೃತ

ವಾಙ್ಮಯಗಳು ಇರುವುದು ಮೇಲೆ ಹೇಳಿದ ಏಳು ಅಂಶಗಳಲ್ಲಿ. ಭಗವದ್ಗೀತೆಯ ಸುಮಾರು ೬೦೦ ಶ್ಲೋಕಗಳು 'ಅನುಷ್ಟುಪ್'ನಲ್ಲಿದ್ದರೆ, ಇತರ ಶ್ಲೋಕಗಳು ತ್ರಿಷ್ಟುಪ್ ಮತ್ತು 'ಜಗತೀ'ಛಂದಸ್ಸಿನಲ್ಲಿದೆ.

ಇಷ್ಟೇ ಅಲ್ಲದೆ ಕಾಲಕ್ಕೆ ಏಳು ವಾರಗಳು(ಭಾನು, ಸೋಮ,ಮಂಗಳ, ಬುಧ, ಗುರು, ಶುಕ್ರ, ಶನಿ); ಹದಿನಾಲ್ಕು ಲೋಕಗಳಲ್ಲಿ ಮೇಲಿನ ಲೋಕಗಳು ಏಳು(ಭೂಃ, ಭುವಃ ಸ್ವಃ ಮಹಃ, ಜನಃ, ತಪಃ, ಸತ್ಯಮ್) ಕೆಳಗಿನ ಲೋಕಗಳು ಏಳು (ಅತಳ, ವಿತಳ, ಸುತಳ, ತಳಾತಳ, ರಸಾತಳ, ಮಹಾತಳ, ಪಾತಾಳ). ಭೂಲೋಕವನ್ನು ಸುತ್ತುವರಿದಿರುವ ಏಳು ಸೂಕ್ಷ್ಮ ಸಾಗರಗಳು(ಲವಣ, ಇಕ್ಷು, ಸುರಾ, ಘೃತ, ದಧಿ, ಕ್ಷೀರ ಮತ್ತು ಶುದ್ಧೋದಕ ಸಮುದ್ರ).

ನಮ್ಮ ದೇಹದಲ್ಲಿರುವ ಅಧ್ಯಾತ್ಮ ಚಕ್ರಗಳು(ನಿರ್ನಾಳ ಗ್ರಂಥಿಗಳು) ಏಳು. ಅವುಗಳೆಂದರೆ ಮೂಲಾಧಾರ(Gonad), ಸ್ವಾಧಿಷ್ಠಾನ(Cells of Leydig), ಮಣಿಪೂರ(Adrenal), ಅನಾಹತ(Thymus), ವಿಶುದ್ಧಿ(Thyroid and parathyroid), ಆಜ್ಞಾ(Pineal), ಮತ್ತು ಸಹಸ್ರಾರ(Pituitary).

ಏಳು ಮಹಾ ಪರ್ವತಗಳು(ಹಿಮವಂತ, ಮೇರು, ಹೇಮಕೂಟ, ನಿಷಧ, ಮಾಲ್ಯವಂತ, ಗಂಧಮಾದನ, ಪಾರಿಯಾತ್ರ); ಏಳು ಮಹಾ ನದಿಗಳು (ಗಂಗಾ, ಯಮುನಾ, ಸರಸ್ವತಿ, ಗೋದಾವರಿ , ನರ್ಮದಾ, ಸಿಂಧು, ಕಾವೇರಿ). ಇಷ್ಟೇ ಅಲ್ಲದೆ ಸಪ್ತಗಂಗೆಗಳು, ಸಪ್ತಸಿಂಧುಗಳು, ಸಪ್ತಕ್ಷೇತ್ರಗಳು, ಸಪ್ತ ಮಾತೃಕೆಯರು, ಇತ್ಯಾದಿ.

ಈ ರೀತಿ ಜಗತ್ತನ್ನು ನಿರ್ವಹಿಸುವ ಭಗವಂತನ ಏಳನೇ ಅವತಾರ ರಾಮಾವತಾರ. ಈ ಅವತಾರದಲ್ಲಿ ಭಗವಂತ ಜನಿಸಿದ್ದು ಏಳನೇ ನಕ್ಷತ್ರವಾದ ಪುನರ್ವಸು ನಕ್ಷತ್ರದಲ್ಲಿ. ಇದು ಭಗವಂತನ ಪ್ರಪಂಚ ನಿರ್ವಹಣೆಯ ರೀತಿ ಹಾಗೂ ಆತನ ವ್ಯವಸ್ಥೆ. ಇಂತಹ ಭಗವಂತ ಸಪ್ತವಾಹನಃ.

೮೩೪) ಅಮೂರ್ತಿಃ

ಭಗವಂತನಿಗೆ ನಮ್ಮಂತೆ ಅಪೂರ್ಣವಾದ, ಸ್ವರೂಪಕ್ಕಿಂತ ಭಿನ್ನವಾದ, ಹುಟ್ಟಿ-ಸಾಯುವ ಶರೀರವಿಲ್ಲ. ಅವನು ಪ್ರಾಕೃತ ದೇಹ(ಮೂರ್ತಿ)ವಿರದವನು. ಎಲ್ಲಾ ಕಡೆ ತುಂಬಿರುವ ಸ್ವರೂಪವುಳ್ಳ ಭಗವಂತ ಅಮೂರ್ತಿಃ.

೮೩೫) ಅನಘಃ

ಪಾಪ ಲೇಪವಿಲ್ಲದ ಭಗವಂತ ಅನಘಃ. ನಮಗೆ ಪಾಂಚಭೌತಿಕ ದೇಹ ಬಂದಿರುವುದು ನಮ್ಮ ಪಾಪದ ಫಲದಿಂದ. ಹಿಂದಿನ ಜನ್ಮದ ಫಲ ಈ ಜನ್ಮದಲ್ಲಿ ಹಾಗೂ ಈ ಜನ್ಮದ ಫಲ ಮುಂದಿನ ಜನ್ಮದಲ್ಲಿ. ಆದರೆ 'ಅಮೂರ್ತಿಃ'ಯಾದ ಭಗವಂತನಿಗೆ ಯಾವ ಪಾಪದ ಲೇಪವೂ ಇಲ್ಲ.

೮೩೬) ಅಚಿಂತ್ಯಃ

ಯಾವ ಚಿಂತನೆಗೂ ನಿಲುಕದ ಭಗವಂತ ಅಚಿಂತ್ಯಃ. ಯಾವುದೇ ವಿಶಿಷ್ಟ ಆಕಾರಕ್ಕೆ ಬದ್ಧನಾಗಿರದ, ಪಾಂಚಭೌತಿಕ ಮೂರ್ತಿ ಇಲ್ಲದ ಭಗವಂತನನ್ನು ಚಿತ್ರಿಸಲು ಅಸಾಧ್ಯ. ಆದ್ದರಿಂದ ನಮಗೆ ಆತನ ಚಿಂತನೆ ಮಾಡುವುದು ಅಸಾಧ್ಯ. ಆತ ಆಕಾಶದಂತೆ ಎಲ್ಲಾ ಕಡೆ ತುಂಬಿರುವವನು, ಚಿಂತಿಸಲು ಆಗದವನು, ಆದರೂ ಕೂಡಾ ಚಿಂತಿಸಬೇಕಾದವನು!

೮೩೭) ಭಯಕೃತ್

ಭಯ ಬರಿಸುವ ಭಗವಂತ ಭಯಕೃತ್! ಇಲ್ಲಿ ಭಯ ಎಂದರೆ ಹೆದರಿಕೆಯಷ್ಟೇ ಅಲ್ಲ. ಭಯದ ಸರಮಾಲೆಯಲ್ಲಿರುವ ಈ ಸಂಸಾರ, ಈ ಸಂಸಾರಕ್ಕೆ ನಮ್ಮನ್ನು ತಂದ ಭಗವಂತ ಭಯಕೃತ್. ಈ ಸಂಸಾರದಲ್ಲಿ ನಾವು ಭಯದಿಂದಲೇ ಬದುಕುತ್ತೇವೆ. ಶ್ರೀಮಂತನಿಗೆ ಕಳ್ಳಕಾಕರ ಭಯವಾದರೆ, ಬಡವನಿಗೆ ಹೊಟ್ಟೆಯ ಹಿಟ್ಟಿನ ಭಯ; ದುರ್ಬಲರಿಗೆ ಬಲಿಷ್ಟರ ಭಯ; ಬಲಿಷ್ಠರಿಗೆ ಸಾಮರ್ಥ್ಯ ಕಳೆದುಕೊಳ್ಳುವ ಭಯ. ಭಯವೇ ಇಲ್ಲದ ಸ್ಥಿತಿ ಮೋಕ್ಷ. ಆದ್ದರಿಂದ ನಮಗೆ ಹುಟ್ಟು ಸಾವಿನ ಈ ಸಂಸಾರ ಕೊಟ್ಟ ಭಗವಂತ ಭಯಕೃತ್.

೮೩೮) ಭಯನಾಶನಃ

ಭಗವಂತ ಭಯ ಕಳೆಯುವವನು. ಈ ಸಂಸಾರಕ್ಕೆ ನಮ್ಮನ್ನು ತಂದ ಭಗವಂತ ಒಂದು ದಿನ ಈ ಸಂಸಾರದಿಂದ ಪಾರುಮಾಡುತ್ತಾನೆ. ಸಂಸಾರದಲ್ಲಿ ಇಟ್ಟವನೇ ಸಂಸಾರದಿಂದ ಪಾರು ಮಾಡುವವನು. ಮೋಕ್ಷಪ್ರದನಾದ ಭಗವಂತ ಭಯನಾಶನಃ.

ಅಣುರ್ಬೃಹತ್ಕೃಶಃ ಸ್ಥೂಲೋ ಗುಣಭೃನ್ನಿರ್ಗುಣೋ ಮಹಾನ್ ।
ಅಧೃತಸ್ಸ್ವಧೃತಸ್ಸ್ವಾಸ್ಯಃ ಪ್ರಾಗ್ವಂಶೋ ವಂಶವರ್ಧನಃ ॥೧೦೩॥

೮೩೯) ಅಣುಃ

ಅಣುವಿನಲ್ಲಿ ಅಣುವಾಗಿರುವ ಭಗವಂತ ಅಣುಃ. ಇದನ್ನು ಭಗವದ್ ಗೀತೆಯಲ್ಲಿ ಹೀಗೆ ಹೇಳಿದ್ದಾರೆ:

ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್ (ಅ-೮, ಶ್ಲೋ-೯)

"ಎಲ್ಲವನ್ನೂ ಬಲ್ಲವನು, ಎಲ್ಲಕ್ಕಿಂತ ಮೊದಲಿದ್ದವನು, ಎಲ್ಲರ ಒಡೆಯ. ಅಣುವಿಗಿಂತ ಅಣು"

೮೪೦) ಬೃಹತ್

ಭಗವಂತ ಎಲ್ಲಾ ದೊಡ್ಡವಸ್ತುವಿಗಿಂತ ದೊಡ್ಡವನು. ಮಹತ್ತಿಗಿಂತ ಮಹತ್ತಾದವನು. ಅವನು ಬೃಹತ್.

೮೪೧) ಕೃಶಃ

ಭಗವಂತ ತೆಳುಮೈಯವನು! ಕೃಶನಲ್ಲಿ ಕೃಶನಾಗಿ, ಅವರಿಗೆ ಕಾಶ್ಯವನ್ನು ಕೊಟ್ಟ ಭಗವಂತ ಕೃಶಃ.

೮೪೨) ಸ್ಥೂಲಃ

ಎಲ್ಲೆಡೆ ತುಂಬಿರುವ ಹಿರಿ ಮೈಯವನು! ಸ್ಥೂಲ ದೇಹಿಯಲ್ಲಿ ಸ್ಥೂಲನಾಗಿ ನಿಂತು ಸ್ಥೂಲನಾದ ಭಗವಂತ ಸ್ಥೂಲಃ.

೮೪೩) ಗುಣಭೃತ್

ಜ್ಞಾನಾನಂದದಿಂದ ಗುಣಪೂರ್ಣನಾದ ಭಗವಂತ ಗುಣಭೃತ್.

೮೪೪) ನಿರ್ಗುಣಃ

ತ್ರಿಗುಣಾತೀತ ಭಗವಂತನಿಗೆ ಬಂಧಕಕಾರಿ ಗುಣಗಳಿಲ್ಲ. ಅವನು ಗುಣರಹಿತ-ನಿರ್ಗುಣಃ.

೮೪೫) ಮಹಾನ್

ನಮ್ಮೆಲ್ಲಾ ಚಿಂತನೆಗೆ ಎಟುಕದಷ್ಟು ದೊಡ್ಡವ. ಎಲ್ಲಕ್ಕಿಂತ ಎತ್ತರದಲ್ಲಿರುವ ಭಗವಂತ ಮಹಾನ್.

೮೪೬) ಅಧೃತಃ

ಭಗವಂತನಿಗೆ ಇನ್ನೊಬ್ಬರು ಧಾರಕರಿಲ್ಲ ಆತ ಎಲ್ಲರನ್ನೂ ರಕ್ಷಿಸುವ ವಿಶ್ವಶಕ್ತಿ.

೮೪೭) ಸ್ವಧೃತಃ

ತನ್ನನ್ನು ತಾನೇ ಧರಿಸಿದವನು. ತನ್ನ ಮಹಿಮೆಯಲ್ಲಿ ನೆಲೆಗೊಂಡವನು.

೮೪೮) ಸ್ವಾಸ್ಯಃ

ಚೆಲು ಮೋರೆಯವನು! ಆತ ಭೂಮಿಯಲ್ಲಿ ರೂಪ ತೊಟ್ಟು ಬಂದಾಗ, ವಿಶೇಷವಾಗಿ ರಾಮ ಹಾಗೂ ಕೃಷ್ಣಾವತಾರದಲ್ಲಿ ಎಲ್ಲರೂ ಆತನನ್ನು ನೋಡಿ ಆಕರ್ಶಿತರಾಗುತ್ತಿದ್ದರು. ಆತ ಚೆಲುವರ ಚೆಲುವ-ಸ್ವಾಸ್ಯಃ.

೮೪೯) ಪ್ರಾಗ್ವಂಶಃ

ಮೊದಲು ತನ್ನ ಪ್ರಪಂಚದ ವಂಶವನ್ನು ಬೆಳೆಸಿದವನು ಪ್ರಾಗ್ವಂಶಃ. ನಾವೆಲ್ಲರೂ ಭಗವಂತನ ವಂಶದಿಂದ ಬಂದವರು. ಇಲ್ಲಿ ನನ್ನ ವಂಶ ದೊಡ್ಡದು, ನಿನ್ನ ವಂಶ ಚಿಕ್ಕದು ಎಂದಿಲ್ಲ. ಎಲ್ಲರಿಗೂ ಭಗವಂತ ಒಬ್ಬನೇ.

೮೫೦) ವಂಶವರ್ಧನಃ

ತನ್ನ ವಂಶವಾದ ವಿಶ್ವವನ್ನು ಬೆಳೆಸುವವನು. ಹಾಗೂ ಪ್ರಳಯ ಕಾಲದಲ್ಲಿ ಸಂಹಾರ ಮಾಡುವವನು ವಂಶವರ್ಧನಃ.

ಭಾರಭೃತ್ ಕಥಿತೋ ಯೋಗೀ ಯೋಗೀಶಃ ಸರ್ವಕಾಮದಃ ।
ಆಶ್ರಮಃ ಶ್ರಮಣಃ, ಕ್ಷಾಮಃ ಸುಪರ್ಣೋ ವಾಯುವಾಹನಃ ॥೧೦೪॥

೮೫೧) ಭಾರಭೃತ್

ಇಡೀ ಜಗತ್ತಿನ ಭಾರವನ್ನು ಹೊತ್ತ ಭಗವಂತ ಭಾರಭೃತ್. ಆತ ಎಲ್ಲಾ ಶಾಸ್ತ್ರಗಳಲ್ಲಿ ನೆಲೆಸಿ ಎಲ್ಲಾ ವಂಶವನ್ನು ನಿರ್ವಹಣೆ ಮಾಡುವವನು.

೮೫೨) ಕಥಿತಃ

ಭಗವಂತನನ್ನು ಬೇರೆಬೇರೆ ಧರ್ಮ ಗ್ರಂಥಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆದರೂ ಕೂಡಾ ದೇವರು ಒಬ್ಬನೇ. ಯಾವಯಾವ ಮತದವರು, ಯಾವಯಾವ ದೇಶದವರು, ಯಾವಯಾವ ಭಾಷೆಯವರು, ಯಾವಯಾವ ಶಬ್ದದಿಂದ ಯಾರನ್ನು ಹೇಳುತ್ತಾರೋ ಆತ ಕಥಿತಃ. ಆತ ಎಲ್ಲರಿಂದಲೂ ದೇವರೆಂದು ಒಪ್ಪಿಕೊಂಡವನು. ಆತ ಎಲ್ಲಾ ಶಬ್ದಗಳಿಂದ ಕಥಿತನಾದವನು.

೮೫೩) ಯೋಗೀ

ಸರ್ವಶಬ್ದ ವಾಚ್ಯನಾದ ಭಗವಂತನಲ್ಲಿ ಎಲ್ಲಾ ಶಬ್ದದ ಯೋಗಾರ್ಥ ಅಡಗಿದೆ. ಎಲ್ಲಾ ಗುಣಗಳ ಸಂಯೋಗ ಸಂಪೂರ್ಣವಾಗಿ ಅವನೊಬ್ಬನಲ್ಲಿರುವುದು. ಆದ್ದರಿಂದ ಆತ ಯೋಗೀ **(Full of Attributes).**

೮೫೪) ಯೋಗೀಶಃ

ಯೋಗಾರ್ಥ ಅನ್ವಯವಾಗುವ ಅನೇಕ ಸಾಧಕರಿದ್ದಾರೆ, ದೇವತೆಗಳಿದ್ದಾರೆ. ಅವರೆಲ್ಲರ ಒಡೆಯನಾದ ಭಗವಂತ ಯೋಗೀಶಃ.

೮೫೫) ಸರ್ವಕಾಮದಃ

ಸರ್ವಕಾಮದಃ ಎಂದರೆ ಎಲ್ಲಾ ಬಯಕೆಗಳನ್ನೀಡೆರಿಸುವವನು. ನಾವು ನಮ್ಮ ಕಾಮನೆಯನ್ನು ಯಾರ್ಯಾರಲ್ಲೋ ಬೇಡುವ ಅಗತ್ಯವಿಲ್ಲ. ಎಲ್ಲವನ್ನೂ ಕೊಡುವವನು ಸರ್ವಕಾಮದಃ ಭಗವಂತ. ನಮ್ಮ ಎಲ್ಲಾ ಕಾಮನೆಗಳನ್ನು ಈಡೇರಿಸಬಲ್ಲವ ಭಗವಂತನೊಬ್ಬನೇ.

ನಮಗೆ ನಮ್ಮ ನಿಜವಾದ ಕಾಮನೆ ಏನು, ನಮಗೆ ಏನು ಬೇಕು, ಯಾವುದರಿಂದ ನಮಗೆ ಒಳಿತು ಎನ್ನುವ ಜ್ಞಾನ ಕೂಡಾ ಇಲ್ಲ. ಮಕ್ಕಳು ಅರಿವಿಲ್ಲದೆ ಆರೋಗ್ಯಕ್ಕೆ ಹಾನಿಕಾರಕವಾದ ಕೆಟ್ಟ ತಿಂಡಿತಿನಿಸನ್ನು ಬಯಸಿದಂತೆ ನಾವು ನಮಗರಿವಿಲ್ಲದೆ ಕೆಟ್ಟ ಕಾಮನೆಗೆ ಬಲಿಬಿದ್ದು, ಮೊಂಡುತನದಿಂದ, ಹಟದಿಂದ ಆಪತ್ತನ್ನು ತಂದುಕೊಳ್ಳುತ್ತೇವೆ. ಅದಕ್ಕಾಗಿ ನಾವು ಭಗವಂತನಲ್ಲಿ ಏನನ್ನೂ ಬೇಡದೆ ಆತನಲ್ಲಿ ಶರಣಾಗಬೇಕು. ನಮಗೇನುಬೇಕು ಎನ್ನುವುದು ನಮಗಿಂತ ಚೆನ್ನಾಗಿ ಭಗವಂತನಿಗೆ ಗೊತ್ತು. ಯಾವುದನ್ನೂ ಬಯಸದೇ, ಕೊಡದಿದ್ದನ್ನು ಏಕೆ ಕೊಡಲಿಲ್ಲ ಎಂದು ಕೇಳದೇ, ಕೊಟ್ಟಿದ್ದನ್ನು ಏಕೆ ಕೊಟ್ಟೆ ಎಂದು ಪ್ರಶ್ನಿಸದೇ ಪ್ರಸಾದವಾಗಿ ಸ್ವೀಕರಿಸಬೇಕು ಹಾಗೂ ಆತನಲ್ಲಿ ಶರಣಾಗಬೇಕು.

೮೫೬) ಆಶ್ರಮಃ

ಆಶ್ರಮ ಎನ್ನುವುದಕ್ಕೆ ಮುಖ್ಯವಾಗಿ ಎರಡು ಅರ್ಥಗಳಿವೆ. ನಮ್ಮ ಜೀವನದ ನಾಲ್ಕು ಮಜಲುಗಳು ಆಶ್ರಮ; ವಿರಕ್ತ ಜೀವನ ನಡೆಸುವವರು ವಾಸಮಾಡುವ ಪರ್ಣಕುಟೀರ ಆಶ್ರಮ. ಜೀವನದ ನಾಲ್ಕು ಮಜಲುಗಳೆಂದರೆ: ಬ್ರಹ್ಮಚರ್ಯ, ಗ್ರಹಸ್ಥಾಶ್ರಮ, ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮ.

ಮೊದಲನೆಯ ಆಶ್ರಮ ಬ್ರಹ್ಮಚರ್ಯ. ಬ್ರಹ್ಮ ಎಂದರೆ 'ವೇದ', 'ಚರ್ಯ' ಎಂದರೆ 'ಅಧ್ಯಯನ'. ಹಿಂದಿನ ಕಾಲದಲ್ಲಿ ಎಂಟು ವರ್ಷದಿಂದ ಇಪ್ಪತ್ನಾಲ್ಕು ವರ್ಷಗಳ ತನಕ ಗುರುಕುಲದಲ್ಲಿ ಸುಮಾರು ಹನ್ನೆರಡು ವರ್ಷ ಸಾಹಿತ್ಯ, ಸಂಗೀತ, ನೃತ್ಯ, ವೇದ, ವ್ಯಾಕರಣ, ಛಂದಸ್ಸು, ಧಾತು, ಪ್ರಾಣಿವಿದ್ಯೆ, ವೈದ್ಯವಿದ್ಯೆ, ಭೂತವಿದ್ಯೆ, ಕ್ಷತ್ರವಿದ್ಯೆ, ನಕ್ಷತ್ರವಿದ್ಯೆ, ಗ್ರಹವಿದ್ಯೆ, ಶಾಸ್ತ್ರ, ಪುರಾಣ, ಗಂದರ್ವವಿದ್ಯೆ, ಹೀಗೆ ಎಲ್ಲಾ ರೀತಿಯ ವಿದ್ಯೆಯನ್ನು ಕಲಿಸುತ್ತಿದ್ದರು. ಇದು ಬ್ರಹ್ಮಚರ್ಯ.

ವೇದ ವಿದ್ಯೆಯನ್ನು ಕಲಿತ ನಂತರ ಸುಮಾರು ಇಪ್ಪತ್ತರಿಂದ ಇಪ್ಪತ್ನಾಲ್ಕು ವಯಸ್ಸಿನಲ್ಲಿ ಮನೆ, ಮದುವೆ ಹಾಗೂ ಹೆಂಡತಿ. ಈ ಸಮಯದಲ್ಲಿ ಕಲಿತ ವಿದ್ಯೆಯ ಅನುಷ್ಠಾನ. ಯಜ್ಞ ಯಾಗಾದಿಗಳು, ಅತಿಥಿಸತ್ಕಾರ, ಧಾನ-ಧರ್ಮ, ಪ್ರಾಣಿ ಸಂರಕ್ಷಣೆ ಹಾಗೂ ದಾಂಪತ್ಯ. ಇದು ಗ್ರಹಸ್ಥಾಶ್ರಮ.

ಮಕ್ಕಳಾಗಿ ಅವರು ದೊಡ್ಡವರಾದ ಮೇಲೆ, ಗೊಂದಲವಿಲ್ಲದ ಪ್ರಶಾಂತವಾದ ಕಾಡಿನಲ್ಲಿ ಹಣ್ಣು ಹಂಪಲನ್ನು ಬೆಳೆದು ತಮ್ಮ ವಿಶೇಷಾಧ್ಯಾಯನ ಮುಂದುವರಿಸುವ ಹಂತ ವಾನಪ್ರಸ್ಥ.

ಪೂರ್ಣ ಪ್ರಮಾಣದಲ್ಲಿ, ಯಾವ ಬದ್ದತೆಯೂ ಇಲ್ಲದೆ ಸದಾ ಭಗವಂತನ ಚಿಂತನೆಯಲ್ಲಿ ಕಳೆಯುವ ನಾಲ್ಕನೇ ಆಶ್ರಮ ಸಂನ್ಯಾಸಾಶ್ರಮ.

ಹೀಗೆ ನಾಲ್ಕು ಬಗೆಯ ಆಶ್ರಮವನ್ನು ನಿರ್ಮಿಸಿ ಆಶ್ರಮದಲ್ಲಿ ಬದುಕುವವರನ್ನು ಪಾಲಿಸುವ, ಎಲ್ಲಾ ಬಗೆಯ ಜೀವನಕ್ರಮವನ್ನು ನಿಯಂತ್ರಿಸುವ, ವಿಶೇಷವಾಗಿ ತಪೋತಾಣಗಳಲ್ಲಿ ಸನ್ನಿಹಿತನಾಗಿರುವ, ಯಾವ ರೀತಿಯ ಶ್ರಮವಿಲ್ಲದ(ಆ+ಶ್ರಮ) ಭಗವಂತ ಆಶ್ರಮಃ.

೮೫೭) ಶ್ರಮಣಃ

ನಮ್ಮೆಲ್ಲರ ಶ್ರಮವನ್ನು, ಆಯಾಸವನ್ನು, ದುಃಖವನ್ನು, ಬಳಲಿಕೆಯನ್ನು ಪರಿಹರಿಸುವ ಭಗವಂತ ಶ್ರಮಣಃ.

'ಶ್ರಮಣ' ಎಂದರೆ 'ಸಂನ್ಯಾಸಿ' ಎನ್ನುವ ಇನ್ನೊಂದು ಅರ್ಥವಿದೆ; ನಾಲ್ಕನೇ ಆಶ್ರಮದಲ್ಲಿರುವವರು. ಭಗವಂತನಿಗೆ ಅತ್ಯಂತ ಪ್ರಿಯವಾದ ಆಶ್ರಮ ಶ್ರಮಣಾಶ್ರಮ. ಭಗವಂತನನ್ನು ಆಶ್ರಯಿಸಿಕೊಂಡು, ನಿರಂತರ ಭಗವಂತನ ಚಿಂತನೆ ಮಾಡಿಕೊಂಡು, ಇಡೀ ಬದುಕನ್ನು ಭಗವಂತನಲ್ಲಿ ಅರ್ಪಿಸುವ ಶ್ರಮಣರಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಭಗವಂತ ಶ್ರಮಣಃ.

೮೫೮) ಕ್ಷಾಮಃ

ದುಷ್ಟರನ್ನು ಕ್ಷೀಣಿಸುವ, ಅಜ್ಞಾನ ಅತಿಯಾದಾಗ ಕ್ಷಾಮವನ್ನು(ಬರಗಾಲವನ್ನು) ಕೊಡುವ; ಕ್ಷಮಾಶೀಲರಲ್ಲಿ ಸನ್ನಿಹಿತನಾದ ಭಗವಂತ ಕ್ಷಾಮಃ. ನಮ್ಮ ಜೀವನದಲ್ಲಿ ಕ್ಷಮಾಗುಣ ಅತ್ಯಂತ ಮಹತ್ವದ ಗುಣ. ಇದು ದಾನ ಧರ್ಮದಷ್ಟೇ ಹಿರಿದಾದ ಗುಣ. ಸಾಮರ್ಥ್ಯವಿದ್ದೂ ಕ್ಷಮಿಸುವುದು ನಿಜವಾದ ಕ್ಷಮೆ. ಮಹಾಭಾರತದ ಧರ್ಮರಾಯನಲ್ಲಿ ಈ ಗುಣವನ್ನು ಕಾಣುತ್ತೇವೆ. ಭಗವಂತನಿಗೆ ಕ್ಷಮಾಗುಣ ಉಳ್ಳವರು ಅತಿಪ್ರಿಯ.

೮೫೯) ಸುಪರ್ಣಃ

ಸು+ಪ+ಣ-ಸುಪರ್ಣ; ಅಂದರೆ ನಿತ್ಯಾನಂದನಾದ, ಪರಿಪೂರ್ಣ ಆನಂದ ಸ್ವರೂಪಿ ಭಗವಂತ. ಸುಪರ್ಣ ಎಂದರೆ ಹಕ್ಕಿ. ಗರುಡನಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುವ ಗರುಡವಾಹನ ಭಗವಂತ ಸುಪರ್ಣಃ.

೮೬೦) ವಾಯುವಾಹನಃ

ಹೆಣ್ಣಿನ ದೇಹದಲ್ಲಿ ಒಂದು ಪುಟ್ಟ ಜೀವದ ಅಧಿಷ್ಠಾನ ಆಗುವುದು ಪ್ರಾಣದೇವರ ವಾಹನನಾಗಿ ಭಗವಂತ ಬಂದು ಗರ್ಭದಲ್ಲಿ ಕುಳಿತಾಗ. ಅದಕ್ಕಾಗಿ ದೇವಸ್ಥಾನದಲ್ಲಿ ದೇವರ ಮೂಲ ಗ್ರಹ ಹಾಗೂ ಗರ್ಭಿಣಿಯ ಹೊಟ್ಟೆಯನ್ನು ಏಕ ಶಬ್ದದಿಂದ 'ಗರ್ಭ' ಅಥವಾ 'ಗರ್ಭಗುಡಿ' ಎಂದು ಕರೆಯುತ್ತಾರೆ. ನಮ್ಮೊಳಗೆ ಪ್ರಾಣ-ನಾರಾಯಣರಿದ್ದರೆ ಮಾತ್ರ ಜೀವ. ಇಲ್ಲದಿದ್ದರೆ ಶವ! ಭಗವಂತನ ಜೊತೆಗೆ ಸದಾ ವಾಹನನಾಗಿರುವ ನಿತ್ಯಸಂಗಾತಿ ಪ್ರಾಣದೇವರು. ಇಂತಹ ವಾಯುದೇವರನ್ನು ವಾಹನವನ್ನಾಗಿಸಿಕೊಂಡು ನಮ್ಮೊಳಗೆ ಅಂತರ್ಯಾಮಿಯಾಗಿರುವ ಭಗವಂತ ವಾಯುವಾಹನಃ.

ಧನುರ್ಧರೋ ಧನುರ್ವೇದೋ ದಂಡೋ ದಮಯಿತಾ ದಮಃ ।
ಅಪರಾಜಿತಸ್ಸರ್ವಸಹೋ ನಿಯಂತಾ ನಿಯಮೋ ಯಮಃ ॥೧೦೫॥

೮೬೧) ಧನುರ್ಧರಃ

ಭಗವಂತ ನಮ್ಮನ್ನು ರಕ್ಷಣೆ ಮಾಡುವುದಕ್ಕೋಸ್ಕರ ಒಮ್ಮೊಮ್ಮೆ ಬಿಲ್ಲನ್ನು ಹಿಡಿದು ಅವತಾರ ರೂಪದಲ್ಲಿ ಬರುತ್ತಾನೆ. ಹೀಗೆ ಧನುಸ್ಸನ್ನು ಧರಿಸಿ ನಮ್ಮನ್ನು ರಕ್ಷಣೆ ಮಾಡುವ ಕೋದಂಡಪಾಣಿ ಭಗವಂತ ಧನುರ್ಧರಃ.

೮೬೨) ಧನುರ್ವೇದಃ

ಭಗವಂತ ಕೇವಲ ಬಿಲ್ವಿದ್ಯೆ ತಿಳಿದವನಷ್ಟೇ ಅಲ್ಲ, ಗುರುವಾಗಿ ಜಗತ್ತಿಗೆ ಬಿಲ್ವಿದ್ಯೆಯನ್ನು ಕಲಿಸಿಕೊಟ್ಟವನು ಪರಶುರಾಮ ರೂಪಿ ಭಗವಂತ. ಆತ ದ್ರೋಣಾಚಾರ್ಯ, ಭೀಷ್ಮ ಹಾಗೂ ಕರ್ಣರಿಗೆ ಬಿಲ್ವಿದ್ಯೆಯನ್ನು ಕಲಿಸಿಕೊಟ್ಟ ಗುರು. ಇತರರು ಬಿಲ್ವಿದ್ಯೆಯನ್ನು ಕಲಿತದ್ದು ದ್ರೋಣಾಚಾರ್ಯರಿಂದ. ಭಗವಂತ ಗುರುವಿನ ಗುರು.

ನಾಲ್ಕು ಉಪವೇದಗಳಲ್ಲಿ ಧನುರ್ವೇದ ಕೂಡಾ ಒಂದು. ಬದುಕಿಸುವ ಶಾಸ್ತ್ರ-ಆಯುರ್ವೇದ ಹಾಗೂ ಸಾಯಿಸುವ ಶಾಸ್ತ್ರ-ಧನುರ್ವೇದ. ಬದುಕಿ ಸಾಯುವ ತನಕ ಲಲಿತ ಕಲೆಗಳ ಹವ್ಯಾಸಕ್ಕಾಗಿ ಸಂಗೀತಕ್ಕೆ ಸಂಬಂಧಪಟ್ಟ ಗಾಂದರ್ವವೇದ; ಶಿಲ್ಪಕಲೆ ಮತ್ತು ಚಿತ್ರಕಲೆಗೆ ಸಂಬಂಧಪಟ್ಟ ಸ್ಥಾಪತ್ಯವೇದ. ಈ ನಾಲ್ಕು ಉಪವೇದಗಳಲ್ಲಿ ಧನುರ್ವೇದ ಕೇವಲ ಸಾಯಿಸುವ ವೇದವಷ್ಟೇ ಅಲ್ಲ, ಜಗತ್ತಿನ ದುಷ್ಟ ಶಕ್ತಿಗಳ ನಿರ್ನಾಮ ಮಾಡಿ ಸಜ್ಜನರು ಬದುಕುವಂತೆ ಮಾಡುವ ಆಯುರ್ವೇದಕ್ಕೆ ಪೂರಕವಾದ ವೇದ. ಇಂತಹ ವೇದವನ್ನು ಪ್ರವರ್ತನೆ ಮಾಡಿ ಜಗತ್ತಿನ ಆರೋಗ್ಯಕ್ಕೂ ಹಾಗೂ ಸುವ್ಯವಸ್ಥೆಗೂ ಕಾರಣನಾದ ಭಗವಂತ ಧನುರ್ವೇದಃ

೮೬೩) ದಂಡಃ

ದಂಡ ಎಂದರೆ ಶಿಕ್ಷೆ. ಸಂಸ್ಕೃತದಲ್ಲಿ ಶಿಕ್ಷೆ ಎನ್ನುವುದಕ್ಕೆ ಶಿಕ್ಷಣ ಎನ್ನುವ ಅರ್ಥವಿದೆ. ಆದರೆ ಇಲ್ಲಿ ದಂಡ ಎಂದರೆ ದಂಡಿಸುವುದು(Punishment). ತಪ್ಪು ಮಾಡಿದವರಿಗೆ ದೇವರ ರಾಜ್ಯದಲ್ಲಿ ಕ್ಷಮೆ ಇಲ್ಲ. ನಾವು ಮಾಡಿದ ಕರ್ಮವನ್ನು ನಾವು ಅನುಭವಿಸಲೇಬೇಕು. ತಪ್ಪು ಮಾಡಿದವರಿಗೆ ನಿರ್ದಾಕ್ಷಿಣ್ಯ ಹಾಗೂ ನಿಷ್ಠುರವಾದ ದಂಡನೆಯನ್ನು ಕೊಡುವ ಭಗವಂತ ದಂಡಃ.

೮೬೪) ದಮಯಿತಾ

ಯಾರು ಸಮಾಜ ಕಂಟಕರೋ, ಯಾರು ಧರ್ಮದ ವಿರುದ್ಧ ನಡೆಯುತ್ತಾರೋ ಅಂಥವರನ್ನು ದಮನ ಮಾಡುವ ಭಗವಂತ ದಮಯಿತಾ. ಇದಕ್ಕೋಸ್ಕರ ಆತ ಅನೇಕ ರೂಪ ಧರಿಸಿ ಭೂಮಿಯಲ್ಲಿ ಅವತರಿಸುತ್ತಾನೆ. ನಾವು ಕೃಷ್ಣಾಷ್ಟಮಿಯಂದು ಕೃಷ್ಣನಿಗೆ ಅರ್ಘ್ಯವನ್ನು ಕೊಡುವಾಗ ಈ ರೀತಿ ಹೇಳುತ್ತೇವೆ:

ಜಾತಃ ಕಂಸ ವಧಾರ್ಥಾಯ ಭೂಭಾರ ಹರಣಾಯ ಚ ।
ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ॥

ಪಾಂಡವಾನಾಂ ಹಿತಾರ್ಥಾಯ ಧರ್ಮ ಸಂಸ್ಥಾಪನಾಯಚ ।
ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ ॥

ಎಲ್ಲಾ ದುಷ್ಟ ಶಕ್ತಿಗಳ ದಮನ ಮಾಡಿ ಭೂಮಿಯ ಭಾರವನ್ನು ಇಳಿಸುವುದಕ್ಕೋಸ್ಕರ ಭಗವಂತ ಇಳಿದು ಬರುತ್ತಾನೆ. ಈ ಕಾರಣಕ್ಕಾಗಿ ಆತನನ್ನು ದಮಯಿತಾ ಎನ್ನುತ್ತಾರೆ. ಇದನ್ನೇ ಗೀತೆಯಲ್ಲಿ ಶ್ರೀಕೃಷ್ಣ ಹೀಗೆ ಹೇಳಿದ್ದಾನೆ:

ಯದಾಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾऽऽತ್ಮಾನಂ ಸೃಜಾಮ್ಯಹಮ್ (ಅ-೪; ಶ್ಲೋ-೭)

೮೬೫) ದಮಃ

'ದಮ' ಎಂದರೆ ಇಂದ್ರಿಯ ನಿಗ್ರಹ. ಅವತಾರ ರೂಪದಲ್ಲಿ ಇಂದ್ರಿಯ ನಿಗ್ರಹದ ಪರಾಕಾಷ್ಠೆಯನ್ನು ತೋರಿಸಿಕೊಟ್ಟ ಭಗವಂತ ದಮಃ. ನರ-ನಾರಾಯಣ ರೂಪದಲ್ಲಿ, ಸನತ್ಕುಮಾರನಾಗಿ, ಕಪಿಲನಾಗಿ, ದತ್ತಾತ್ರಯನಾಗಿ, ಹೀಗೆ ಅನೇಕ ಅವತಾರದಲ್ಲಿ ಭಗವಂತ ಇಂದ್ರಿಯ ನಿಗ್ರಹದ ಪರಾಕಾಷ್ಠೆಯನ್ನು ತೋರಿಸಿಕೊಟ್ಟಿದ್ದಾನೆ.

೮೬೬) ಅಪರಾಜಿತಃ

ಭಗವಂತನನ್ನು ಯಾರಿಂದಲೂ ಸೋಲಿಸಲು ಅಸಾಧ್ಯ. ಯಾವುದಕ್ಕೂ ಸೋಲದ, ಎಲ್ಲಕ್ಕಿಂತ ಎತ್ತರದಲ್ಲಿರುವ ಭಕ್ತವತ್ಸಲ ಭಗವಂತ ಅಪರಾಜಿತಃ. ಇದಕ್ಕೊಂದು ಅಪವಾದವೆಂದರೆ: 'ಭಗವಂತ ಭಕ್ತ ಪರಾಧೀನ' !

೮೬೭) ಸರ್ವಸಹಃ

ಅಸಹನೆಯಿಲ್ಲದೆ, ಎಲ್ಲಾ ಹೊಣೆಗಾರಿಕೆಯನ್ನು ಹೊರುವ ಸಹನಾಮೂರ್ತಿ ಭಗವಂತ ಸರ್ವಸಹಃ.

೮೬೮) ನಿಯಂತಾ

ಸಮಸ್ತ ಪ್ರಪಂಚವನ್ನು, ಚರಾಚರಾತ್ಮಕವಾದ ವಿಶ್ವವನ್ನು ನಿಯಮನ ಮಾಡುವ ಶಕ್ತಿ ಭಗವಂತ ನಿಯಂತಾ.

೮೬೯) ನಿಯಮಃ(ಅನಿಯಮಃ)

ಜಗತ್ತಿನಲ್ಲಿ ಯಾವುದು ಸರಿ, ಯಾವುದು ತಪ್ಪು ಎಂದು ನಿಯಮ ಮಾಡಿದವನು, ಆ ನಿಯಮದಂತೆ ಶಿಕ್ಷೆ ಕೊಟ್ಟು, ರಕ್ಷೆ ಕೊಟ್ಟು, ಪಾಲನೆ ಮಾಡುವ ಭಗವಂತ ನಿಯಮಃ. ಇಂತಹ ಭಗವಂತ ಇನ್ನೊಂದು ನಿಯಮಕ್ಕೆ ಬದ್ಧನಲ್ಲ. ಆದ್ದರಿಂದ ಆತ ಅನಿಯಮಃ. ಆತ ತನ್ನ ನಿಯತಿಗೆ ತಕ್ಕಂತೆ ತಾನೇ ಬದ್ಧನಾಗಿ ನಡೆಯುತ್ತಾನೆ.

೮೭೦) ಯಮಃ(ಅಯಮಃ)

ಯೋಗಶಾಸ್ತ್ರದಲ್ಲಿ ಯಮ ಎನ್ನುವ ಪದವನ್ನು ವಿಶಿಷ್ಟ ಅರ್ಥದಲ್ಲಿ ಬಳಸಿದ್ದಾರೆ. ಅದು ನಾವು ಮಾಡಬಾರದ ಐದು ನಿಯಮಗಳನ್ನು ಹೇಳುತ್ತದೆ. (೧) ಹಿಂಸೆ, (೨) ಸುಳ್ಳು ಹೇಳುವುದು,(೩) ಕದಿಯುವುದು,(೪) ಅತಿಯಾದ ಕಾಮ ಮತ್ತು (೫) ಇನ್ನೊಬ್ಬರ ಮುಂದೆ ಕೈಚಾಚುವುದು. ಭಗವಂತನ ಉಪಾಸನೆಯ ಮಾರ್ಗದಲ್ಲಿ ಬಿಡಬೇಕಾದ ಈ ಐದು ನಿಯಮಗಳನ್ನು ಕೊಟ್ಟ ಭಗವಂತ ಯಮಃ. ಇಡೀ ಜಗತ್ತನ್ನು ನಿಯಂತ್ರಿಸುವ, ಯಮಧರ್ಮನನ್ನೂ ನಿಯಂತ್ರಿಸುವ ಭಗವಂತ ಯಮಃ. ಇಂತಹ ಭಗವಂತನಿಗೆ ಇನ್ನೊಬ್ಬ ಯಮನಿಲ್ಲ ಆದ್ದರಿಂದ ಆತ ಅಯಮಃ.

ಸತ್ತ್ವವಾನ್ ಸಾತ್ತ್ವಿಕಃ ಸತ್ಯಃ ಸತ್ಯಧರ್ಮಪರಾಯಣಃ ।
ಅಭಿಪ್ರಾಯಃ ಪ್ರಿಯಾರ್ಹೋSರ್ಹಃ ಪ್ರಿಯಕೃತ್ ಪ್ರೀತಿವರ್ಧನಃ ॥೧೦೬॥

೮೭೧) ಸತ್ವವಾನ್

ಸತ್ವ ಎಂದರೆ ಸಾಮರ್ಥ್ಯ. ಒಂದು ದೈಹಿಕ ಸಾಮರ್ಥ್ಯವಾದ ಬಲ, ಇನ್ನೊಂದು ಭೌದ್ಧಿಕ ಸಾಮರ್ಥ್ಯವಾದ ಜ್ಞಾನ. ಪೂರ್ಣವಾದ ಜ್ಞಾನ ಹಾಗೂ ಬಲವುಳ್ಳ ಭಗವಂತ ಸತ್ವವಾನ್.

೮೭೨) ಸಾತ್ವಿಕಃ

ಯಾರಲ್ಲಿ ಜ್ಞಾನ ಬಲವಿದೆಯೋ ಅವರಲ್ಲಿ ಭಗವಂತನ ವಿಶೇಷ ಸನ್ನಿಧಾನವಿರುತ್ತದೆ. ಬಲದಲ್ಲಿ ಭೀಮ, ಆಂಜನೇಯ, ಲಕ್ಷ್ಮಣ, ಅರ್ಜುನ, ಇವರೆಲ್ಲರ ಒಳಗೆ ಸನ್ನಿಹಿತನಾಗಿದ್ದ ಭಗವಂತ ಸ್ವಯಂ ವೇದವ್ಯಾಸನಾಗಿ ಜ್ಞಾನಾರ್ಜನೆ ಮಾಡಿದ ಸಾತ್ವಿಕಃ. ಸಾತ್ವಿಕರಲ್ಲಿ ನೆಲೆನಿಂತು ಅಲ್ಲಿ ಸಾತ್ವಿಕತೆಯನ್ನು ನೆಲೆಗೊಳಿಸುವ ಭಗವಂತ ಸಾತ್ವಿಕಃ.

೮೭೩) ಸತ್ಯಃ

ಸತ್ತಂ ಯಾಪಯತಿ ಇತೀ ಸತ್ಯಃ. ಸತ್ ಎಂದರೆ ಇರುವಿಕೆ; ಸತ್ ಎಂದರೆ ನಾಶ; ಸತ್ ಎಂದರೆ ನಿಯಮನ; ಸತ್ ಎಂದರೆ ಜ್ಞಾನ; ಸತ್ ಎಂದರೆ ಅಜ್ಞಾನ; ಸತ್ ಎಂದರೆ ವಿಷಾದ ರೂಪದ ಸಂಸಾರ; ಸತ್ ಎಂದರೆ ಮೋಕ್ಷ. ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳನ್ನು ಕೊಡತಕ್ಕ ಭಗವಂತ ಸತ್ಯಃ.

೮೭೪) ಸತ್ಯಧರ್ಮಪರಾಯಣಃ

ಪರಂ ಅಯನಂ-ಪರಾಯಣಂ; ಅಂದರೆ ಪೂರ್ಣ ಪ್ರಮಾಣದ ರಕ್ಷಣೆ. ಭಗವಂತ ಸತ್ಯ ಮತ್ತು ಧರ್ಮದ ದಾರಿಯಲ್ಲಿ ನಡೆಯುವವರಿಗೆ ಪೂರ್ಣ ಪ್ರಮಾಣದ ರಕ್ಷಕ.

೮೭೫) ಅಭಿಪ್ರಾಯಃ

ಸಮಸ್ತ ವೇದಗಳ ಅಭಿಪ್ರಾಯ ಭಗವಂತ. ಒಂದು ಸೂಕ್ತದಲ್ಲಿ ಅಗ್ನಿ, ಒಂದು ಸೂಕ್ತದಲ್ಲಿ ಕರ್ಮ, ಒಂದು ಸೂಕ್ತದಲ್ಲಿ ಇಂದ್ರ ಆದರೂ ಕೂಡಾ, ಎಲ್ಲಾ ವೇದಗಳ ಏಕ ಅಭಿಪ್ರಾಯ ಭಗವಂತನೊಬ್ಬನೇ. ಭಾಗವತದ ೧೧ನೇ ಸ್ಕಂದದಲ್ಲಿ ಬರುವ ಉದ್ಧವ ಗೀತೆಯಲ್ಲಿ ಶ್ರೀ ಕೃಷ್ಣ ಈ ರೀತಿ ಹೇಳಿದ್ದಾನೆ:

ಮಾಂ ವಿಧತ್ತೇ ಅಭಿಧತ್ತೇ ಮಾಂ ವಿಕಲ್ಪ್ಯಾ ಪೋಹ್ಯ ಇತ್ಯಹಮ್ ।
ಇತ್ಯಸ್ಯಾ ಹೃದಯಂ ಸಾಕ್ಷಾತ್ ನಾನ್ಯೋ ಮದ್ವೇದ ಕಶ್ಚನ ॥೧೧-೨೧-೪೩॥

ಅಂದರೆ "ಸಮಸ್ತ ವೇದವೂ ನನಗೋಸ್ಕರ ಇದೆ. ಅದು ನನ್ನನ್ನು ಹೇಳುತ್ತದೆ. ಇನ್ಯಾವುದನ್ನೋ ಹೇಳಿದರೆ ಅದು ನನ್ನ ಹಿರಿಮೆಯನ್ನು ಸಾರುವುದಕ್ಕೋಸ್ಕರ ಹೇಳುತ್ತದೆ".

ವೇದವ್ಯಾಸರು ಇದನ್ನು ಹೀಗೆ ಹೇಳಿದ್ದಾರೆ:

“ವೇದೇ ರಾಮಾಯಣಂಚೈವ ಪುರಾಣೇ ಭಾರತೇ ತಥಾ,
ಆದೌ ಅಂತೇ ಚ ಮಧ್ಯೆ ಚ, ವಿಷ್ಣುಃ ಸರ್ವತ್ರಗೀಯತೆ ”

ಸರ್ವ ವೇದದ ಅಭಿಪ್ರಾಯ ಭಗವಂತ. ಆದ್ದರಿಂದ ಅಭಿಪ್ರಾಯಃ ಆತನ ಅನ್ವರ್ಥನಾಮ.

೮೭೬) ಪ್ರಿಯಾರ್ಹಃ

ಎಲ್ಲರ ಪ್ರೀತಿಗೆ ಅರ್ಹವಾದ, ಎಲ್ಲರೂ ಪ್ರೀತಿಸುವ ಅತ್ಯಂತ ಯೋಗ್ಯವಾದ ವಸ್ತು ಭಗವಂತ ಪ್ರಿಯಾರ್ಹಃ.

೮೭೭) ಅರ್ಹಪ್ರಿಯಕೃತ್

ಅತ್ಯಂತ ಪ್ರಿಯಾರ್ಹವಾದ, ಎಲ್ಲರಿಂದ ಪೂಜಿಸಲ್ಪಡುವ, ಎಲ್ಲರ ಪ್ರೀತಿಗೆ ಯೋಗ್ಯವಾದ, ಎಲ್ಲರಿಗೂ ಪ್ರಿಯವಾದದ್ದನ್ನು ಮಾಡುವ ಭಗವಂತ ಅರ್ಹಪ್ರಿಯಕೃತ್.

೮೭೮) ಪ್ರೀತಿವರ್ಧನಃ

ಪ್ರೀತಿ ಹುಟ್ಟಿಸುವ ಹಾಗೂ ಅದಕ್ಕೆ ವ್ಯತಿರಿಕ್ತವಾಗಿ ಪ್ರೀತಿ ಕುಗ್ಗಿಸುವ ಭಗವಂತ ಪ್ರೀತಿವರ್ಧನಃ. ನಮಗೆ ಕೆಲವರನ್ನು ನೋಡಿದಾಗ ಪ್ರೀತಿಸಬೇಕು ಎನ್ನಿಸುತ್ತದೆ. ಆದರೆ ಇನ್ನು ಕೆಲವರನ್ನು ನೋಡಿದರೆ ಅಸಹ್ಯವೆನಿಸುತ್ತದೆ. ಪ್ರೀತಿಯನ್ನು ಸೆಳೆಯುವ ವ್ಯಕ್ತಿತ್ವವನ್ನು ಕೊಡುವ ಅಥವಾ ಕಸಿದುಕೊಳ್ಳುವ ಭಗವಂತ ಪ್ರೀತಿವರ್ಧನಃ.

**ವಿಹಾಯಸಗತಿರ್ಜ್ಯೋತಿಃ ಸುರುಚಿರ್ಹುತಭುಗ್ವಿಭುಃ ।**

**ರವಿರ್ವಿರೋಚನಃ ಸೂರ್ಯಃ ಸವಿತಾ ರವಿಲೋಚನಃ ॥೧೦೭॥**

ವಿಷ್ಣು ಸಹಸ್ರನಾಮದ ಈ ಶ್ಲೋಕ ಪ್ರಮುಖವಾಗಿ ವಿಶ್ವದಲ್ಲಿನ ಬೆಳಕಿಗೆ ಸಂಬಂಧಪಟ್ಟದ್ದು. ಇಲ್ಲಿ ಬರುವ ನಾಮಗಳನ್ನು ವಿವರವಾಗಿ ವಿಶ್ಲೇಷಿಸುವ ಮೊದಲು ಜಗತ್ತಿನಲ್ಲಿ ನಮಗೆ ಬೆಳಕನ್ನು ಕೊಡುವ ಬೆಳಕಿನ ಮೂಲದ ಬಗ್ಗೆ ಸ್ವಲ್ಪ ವಿವರವನ್ನು ನೋಡೋಣ. ನಮಗೆ ತಿಳಿದಿರುವ ಬೆಳಕಿನ ಮೂಲಗಳೆಂದರೆ ಸೂರ್ಯ, ಚಂದ್ರ, ನಕ್ಷತ್ರ, ಮಿಂಚು ಹಾಗೂ ಅಗ್ನಿ. ಸೂರ್ಯನನ್ನು ರವಿ, ಸವಿತಾ ಇತ್ಯಾದಿ ಅನೇಕ ಹೆಸರಿನಿಂದ ಕರೆಯುತ್ತಾರೆ. ಈ ಎಲ್ಲಾ ಬೆಳಕಿನ ಪುಂಜಗಳಿಗೆ ಬೆಳಕನ್ನು ಕೊಟ್ಟವನು ಭಗವಂತ.

ಕಠೋಪನಿಷತ್ತಿನಲ್ಲಿ ನಚಿಕೇತನಿಗೆ ಯಮಧರ್ಮ ಈ ರೀತಿ ಹೇಳುತ್ತಾನೆ:

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।

ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥೫-೧೫॥

ಅಂದರೆ "ಸೂರ್ಯನಿಂದಹಿಡಿದು, ಚಂದ್ರ ತಾರೆಗಳಾಗಲೀ, ಆಕಾಶದಲ್ಲಿ ಬೆಳಗುವ ಮಿಂಚಿರಲೀ ಅಥವಾ ಉರಿಯುವ ಅಗ್ನಿಯಾಗಲೀ, ಈ ಎಲ್ಲಾ ಬೆಳಕಿನ ಪುಂಜಗಳು ಬೆಳಗುವುದು ಭಗವಂತನೆಂಬ ಮೂಲ ಬೆಳಕಿನಿಂದ. "ಇದನ್ನೇ ಶ್ರೀಕೃಷ್ಣ ಗೀತೆಯಲ್ಲಿ ಹೀಗೆ ಹೇಳಿದ್ದಾನೆ:

ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।

ಯಚ್ಚನ್ದ್ರಮಸಿ ಯಚ್ಚಾಗ್ನೌ ತತ್ ತೇಜೋ ವಿದ್ಧಿ ಮಾಮಕಮ್ ॥ಅ-೧೫, ಶ್ಲೋ-೧೨॥

ಅಂದರೆ "ಸೂರ್ಯನಲ್ಲಿದ್ದು ವಿಶ್ವವನ್ನೆಲ್ಲಾ ಬೆಳಗುವ ಬೆಳಕು, ಚಂದ್ರನಲ್ಲಿ, ಬೆಂಕಿಯಲ್ಲಿ ಕೂಡಾ, ಅದು ನನ್ನದೇ ಬೆಳಕೆಂದು ತಿಳಿ". ಆದ್ದರಿಂದ ಸ್ವಂತ ಬೆಳಕು ಯಾವುದಕ್ಕೂ ಇಲ್ಲ. ಎಲ್ಲಾ ಬೆಳಕುಗಳು ಭಗವಂತನ ಪ್ರತಿಫಲನ. ಈ ಹಿನ್ನೆಲೆಯಲ್ಲಿ ಇಲ್ಲಿ ಬರುವ ನಾಮಗಳ ಅರ್ಥವನ್ನು ಇನ್ನೂ ವಿವರವಾಗಿ ನೋಡೋಣ.

೮೭೯) ವಿಹಾಯಸಗತಿಃ

ವಿಹಾಯಸನ್ ಅಂದರೆ ಆಕಾಶ; ವಿಹಾಯಸಗತಿಃ ಎಂದರೆ ಆಕಾಶದಲ್ಲಿ ಚಲಿಸುವವ. ಉಪನಿಷತ್ತಿನಲ್ಲಿ ಹೇಳಿದಂತೆ ಭಗವಂತ ಸೃಷ್ಟಿ ಪೂರ್ವದಲ್ಲಿ ತನಗೊಬ್ಬ ಆತ್ಮೀಯ ಜೊತೆಗಾರ ಬೇಕು ಎಂದು ನಿರ್ಧರಿಸಿದನಂತೆ. ಹಾಗೆ ನಿರ್ಧರಿಸಿ ಪ್ರಾಣದೇವರ ಸೃಷ್ಟಿ ಮಾಡಿದನಂತೆ. ಭಗವಂತ ಸದಾ ಪ್ರಾಣದೇವರ ಜೊತೆಗಾರ. ಪ್ರಾಣನಿದ್ದಲ್ಲಿ ಭಗವಂತ, ಭಗವಂತನಿದ್ದಲ್ಲಿ ಪ್ರಾಣ. ಆದ್ದರಿಂದ ವಾಯುದೇವರು ಭಗವಂತನ ಜೊತೆಗಿರುವ ಜೊತೆಗಾರ. ವಾಯು ಅಂದರೆ ಸದಾ ಆಕಾಶದಲ್ಲಿ ಸಂಚರಿಸುವ ಗಾಳಿ. ಇಂತಹ ಪ್ರಾಣಶಕ್ತಿಯೊಳಗಿದ್ದು, ಆಕಾಶದಲ್ಲಿ ಚಲಿಸುವ ಭಗವಂತ ವಿಹಾಯಸಗತಿಃ.

ಇನ್ನು ಈ ನಾಮವನ್ನು ಒಡೆದು ನೋಡಿದಾಗ ವಿಹಾ+ಯಸ+ಗತಿಃ; 'ವಿಹಾ' ಎಂದರೆ ಸರ್ವ ಗುಣಗಳಿಂದ ಪೂರ್ಣವಾದ, ಸರ್ವ ದೋಷಗಳಿಂದ ದೂರವಾದ ತತ್ವ. 'ಯಸ' ಎಂದರೆ ಜ್ಞಾನಾನಂದ ಸ್ವರೂಪ. 'ಗತಿಃ' ಎಂದರೆ 'ಗಚ್ಛತಿ',. ಭಗವಂತ ಸರ್ವಾಂತರ್ಯಾಮಿ, ಎಲ್ಲಾ ಕಡೆಯಲ್ಲೂ ಇರುವ, ಇಡೀ ವಿಶ್ವಕ್ಕೆ ಆಶ್ರಯ ಕೊಡುವ ನಿಲುದಾಣ.

೮೮೦) ಜ್ಯೋತಿಃ

ಸೂರ್ಯನಿಗಿಂತಲೂ ಪ್ರಖರವಾದ ಬೆಳಕುಳ್ಳವನು. ಆತ ಸೂರ್ಯನಿಗಿಂತಲೂ ಪ್ರಖರ ಆದರೆ ಚಂದ್ರನಿಗಿಂತ ತಂಪು. ಗೂಬೆ ಹೇಗೆ ಸೂರ್ಯನನ್ನು ನೋಡಲಾರದೋ ಹಾಗೇ ಇಂತಹ ಬೆಳಕನ್ನು ನಾವು ನಮ್ಮ ಹೊರಗಣ್ಣಿನಿಂದ ಎಂದೂ ನೋಡಲಾರೆವು. ಆತನನ್ನು ನಮ್ಮ ಸ್ವರೂಪದ ಕಣ್ಣಿನಿಂದ ಮಾತ್ರ ಕಾಣಲು ಸಾಧ್ಯ.

ಜ್ಯಾ+ಊತಿ-ಜ್ಯೋತಿ, ಇಲ್ಲಿ 'ಜ್ಯಾ' ಎಂದರೆ ಭೂಮಿ.'ಊತಿ' ಎಂದರೆ ರಕ್ಷಣೆ.ಈ ಭೂಮಿ ಆಕಾಶದಲ್ಲಿ ನಿರಾಲಂಭವಾಗಿ ನಿಲ್ಲುವಂತೆ ಮಾಡಿದ ಸಂಕರ್ಷಣ ಶಕ್ತಿಯ ಅಂತರ್ಯಾಮಿ ಭಗವಂತ ಜ್ಯೋತಿಃ

೮೮೧) ಸುರುಚಿಃ

ಇಲ್ಲಿ ರುಚಿ ಎಂದರೆ 'ಬೆಳಕು'. ಸುರುಚಿ ಎಂದರೆ ಸುಖಕರವಾದ ಬೆಳಕು. ನಮಗೆ ಆನಂದದ ಬೆಳಕನ್ನು ಕೊಟ್ಟು ಎತ್ತರಕ್ಕೆ ಕೊಂಡೊಯ್ಯುವ ಭಗವಂತ ಸುರುಚಿಃ.

೮೮೨) ಹುತಭುಗ್ವಿಭುಃ

ಬೆಂಕಿಗೆ ಹಾಕಿದ ಆಹುತಿಯನ್ನು ಸ್ವೀಕರಿಸುವ ಅಗ್ನಿಯ ಒಡೆಯ.

೮೮೩) ರವಿಃ

ಸೂರ್ಯನೊಳಗಿದ್ದು ರವಿ ಎನಿಸಿಕೊಂಡವನು. ರವ+ಇ-ರವಿ. ಮಂತ್ರದ ನಾದದಿಂದ ಸೂರ್ಯ ಮಂಡಲದಲ್ಲಿರುವ ರವಿ ನಾಮಕ ಭಗವಂತನ ಉಪಾಸನೆಯಲ್ಲಿ ಭಗವಂತನ ಈ ನಾಮ ಬಳಕೆಯಾಗಿದೆ. ಹಿಂದೆ ಬೆಳಿಗ್ಗೆ ಸುಮಾರು ನಾಲ್ಕು ಗಂಟೆಗೆ ಎದ್ದು ಸ್ನಾನ ಮಾಡಿ ಮುಖ್ಯವಾಗಿ ಗಾಯತ್ರಿ ಜಪ ಮಾಡುತ್ತಿದ್ದರು. ಅದೇ ರೀತಿ ಸಂಜೆ ಸೂರ್ಯಾಸ್ತಕ್ಕೆ ಮೊದಲು ಕೂಡಾ ಧ್ಯಾನದಲ್ಲಿ ತೊಡಗುತ್ತಿದ್ದರು. ಕಾರಣವೆಂದರೆ, ಮುಂಜಾವಿನ ಹಾಗೂ ಸಂಜೆಯ ಕೆಂಪಾದ ಸೂರ್ಯ ಕಿರಣದಲ್ಲಿ ನಮ್ಮ ಬುದ್ಧಿ ಶಕ್ತಿಯನ್ನು ಕುಂದಿಸುವ ಶಕ್ತಿ ಇರುತ್ತದೆ. ಅಂತಹ ಕೆಟ್ಟ ಶಕ್ತಿಯ ನಿರೋಧಕ್ಕಾಗಿ ಈ ರೀತಿ ಧ್ಯಾನ ಮಾಡುತ್ತಿದ್ದರು. ಸೂರ್ಯನ ಮುಂಜಾವಿನ ಹಾಗೂ ಸಂಜೆಯ ಕಿರಣ, ಗ್ರಹಣ ಕಾಲದ ಕಿರಣ ಮತ್ತು ನೀರಿನಿಂದ ಪ್ರತಿಫಲಿಸಿ ಕಾಣುವ ಸೂರ್ಯ ಕಿರಣ ವಿಷಕಾರಿ. ಮುಂಜಾವಿನ ಮತ್ತು ಸಂಜೆಯ ಕಿರಣ ಮಾನಸಿಕವಾಗಿ ಪರಿಣಾಮ ಬೀರಿದರೆ, ಗ್ರಹಣದ ಕಿರಣ ನಮಗೆ ದೈಹಿಕವಾಗಿ ಕೆಟ್ಟದ್ದು. ಆದರೆ ಗ್ರಹಣ ಕಾಲದಲ್ಲಿ ನಮ್ಮ ಮೆದುಳು ಅತ್ಯಂತ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ. ಅದಕ್ಕಾಗಿ ಹಿಂದೆ ಗ್ರಹಣ ಕಾಲದಲ್ಲಿ ಉಪವಾಸವಿದ್ದು ಪಾರಾಯಣ ಮಾಡುತ್ತಿದ್ದರು. ಗ್ರಹಣ ಕಾಲದಲ್ಲಿ ಒಂದು ಬಾರಿ ಮಾಡುವ ಪಾರಾಯಣ ಬೇರೆ ಸಮಯದ ನೂರಕ್ಕೂ ಹೆಚ್ಚು ಪಾರಾಯಣಕ್ಕೆ ಸಮನಾಗಿರುತ್ತದೆ. ಹೊಟ್ಟೆ ಖಾಲಿಯಿದ್ದು ಪಾರಾಯಣ ಮಾಡಿದರೆ ಇದರ ಪರಿಣಾಮ ಇನ್ನೂ ಹೆಚ್ಚು. ಅದಕ್ಕಾಗಿ ಉಪವಾಸವಿದ್ದು ಪಾರಾಯಣ ಮಾಡುತ್ತಿದ್ದರು. ಹೀಗೆ ಸೂರ್ಯ ಮಂಡಲದಲ್ಲಿ ಅಡಗಿರುವ ಅಪೂರ್ವ ಶಕ್ತಿ ಭಗವಂತ ರವಿಃ.

೮೮೪) ವಿರೋಚನಃ

ರೋಚನ ಎಂದರೆ ಬೆಳಗಿಸುವ ವಸ್ತು. ವಿಶಿಷ್ಟವಾದ ಬೆಳಕನ್ನು ಜಗತ್ತಿಗೆ ನೀಡುವ ಭಗವಂತ ವಿರೋಚನಃ. ನಮ್ಮ ಹೃದಯ ಗುಹೆಯಲ್ಲಿ ಕುಳಿತು ನಮಗೆ ಜ್ಞಾನದ ಬೆಳಕನ್ನು ನೀಡುವ ಜ್ಯೋತಿರ್ಮಯರೂಪಿ ಭಗವಂತ ವಿರೋಚನಃ.

೮೮೫) ಸೂರ್ಯಃ

ಸೂರಿಭಿಃ ಈಯತೇ ಇತಿ ಸೂರ್ಯಃ; ಅಂದರೆ ಸೂರಿಗಳಿಗೆ(ಜ್ಞಾನಿಗಳಿಗೆ) ಗೋಚರವಾಗುವ, ಸೂರ್ಯನೊಳಗಿದ್ದು ಸೂರ್ಯನೆನಿಸಿಕೊಂಡ ಭಗವಂತ ಸೂರ್ಯಃ

೮೮೬) ಸವಿತಾ

ಸೂತೇ ಇತಿ ಸವಿತಾ; ಇಡೀ ಜಗತ್ತನ್ನು ತನ್ನ ಒಡಲಲ್ಲಿ ಹೊತ್ತು, ಸೃಷ್ಟಿ ಕಾಲದಲ್ಲಿ ತನ್ನ ನಾಭಿ ಕಮಲದಿಂದ ಹೆತ್ತ ಜಗತ್ತಿನ ತಂದೆ ಸವಿತಾ; ಗಾಯತ್ರಿ ಪ್ರತಿಪಾದ್ಯನಾದ ಸೂರ್ಯನಲ್ಲಿ ಸನ್ನಿಹಿತನಾಗಿರುವ ಸವಿತಾ ನಾಮಕ ಭಗವಂತ ಸವಿತಾ.

೮೮೭) ರವಿಲೋಚನಃ

ಭಗವಂತನ ಕಿಡಿನೋಟದ ಒಂದು ಚಿಕ್ಕ ಕಿಡಿ ಆ ಸೂರ್ಯ. ಯಾರಿಂದ ಆ ಸೂರ್ಯ ಹುಟ್ಟಿ ಬಂದನೋ, ಯಾರಲ್ಲಿ ಸೇರಿ ಕಣ್ಮರೆಯಾಗುತ್ತಾನೋ ಅವನು ರವಿಲೋಚನಃ.

ಅನಂತೋ ಹುತಭುಗ್ಭೋಕ್ತಾ ಸುಖದೋ ನೈಕಜೋಗ್ರಜಃ ।
ಅನಿರ್ವಿಣ್ಣಃ ಸದಾಮರ್ಷೀ ಲೋಕಾಧಿಷ್ಠಾನಮದ್ಭುತಃ ॥೧೦೮॥

೮೮೮) ಅನಂತಃ

ಎಲ್ಲವುದರ ಕೊನೆಯಾದಾಗಲೂ ಕೊನೆಯಾಗದೇ ಉಳಿಯುವ ಏಕೈಕ ತತ್ವ ಭಗವಂತ ಅನಂತಃ. ಅನಂತ ಅಂದರೆ 'ಶೇಷ'. ಶೇಷನ ಅಂತರ್ಯಾಮಿಯಾಗಿರುವ ಅನಂತಶಯನ ಭಗವಂತ ಅನಂತಃ.

೮೮೯) ಹುತಭುಗ್ಭೋಕ್ತಾ

ನಾವು ಅಕ್ಕರೆಯಿಂದ ಆಪ್ತನಾಗಿ, ಮನಃಪೂರ್ವಕವಾಗಿ, ಶರಣಾಗತಿಯಿಂದ ಘಜೇಂದ್ರನಂತೆ ಮೊರೆಯಿಟ್ಟಾಗ ಬಂದು ನಮ್ಮನ್ನು ರಕ್ಷಿಸುವ ಭಗವಂತನ ಕಾಣದ ಕೈ ಸದಾ ನಮ್ಮನ್ನು ಕಾಪಾಡುತ್ತಿರುತ್ತದೆ. ಪ್ರೀತಿಯಿಂದ ನಾವು ಅಗ್ನಿಮುಖೇನ ಕೊಡುವ ಆಹುತಿಯನ್ನು ಸ್ವೀಕರಿಸಿ ರಕ್ಷಿಸುವ, ಜಗತ್ತಿನ ಸಮಸ್ತ ವಿಷಯವನ್ನು ಭೋಗಿಸುವ ಹಾಗೂ ಎಲ್ಲರಿಗೂ ಸುಖ-ದುಃಖವನ್ನು ಕೊಟ್ಟು ಪಾಲಿಸುವ ಭಗವಂತ ಹುತಭುಗ್ಭೋಕ್ತಾ

೮೯೦) ಸುಖದಃ

ನಮಗೆ ಸುಖವನ್ನು ಕೊಡುವವನು, ನಮ್ಮ ಸುಖವನ್ನು ಕಸಿದುಕೊಳ್ಳುವವನು ಭಗವಂತ! ಇಲ್ಲಿ ಕಸಿದುಕೊಳ್ಳುವುದು ಎಂದರೆ ಹೊಟ್ಟೆಕಿಚ್ಚಿನಿಂದ ಹಿಂದೆ ಪಡೆಯುವುದಲ್ಲ. ತಾಯಿ ತನ್ನ ಮಗುವಿಗೆ ಶಿಕ್ಷೆ ಕೊಟ್ಟು ಒಳ್ಳೆಯವನಾಗಿ ಹೇಗೆ ಬೆಳೆಸುತ್ತಾಳೋ ಹಾಗೇ ಭಗವಂತ ನಾವು ದಾರಿ ತಪ್ಪಿದಾಗ ನಮಗೆ ದುಃಖ ಕೊಟ್ಟು ಉದ್ಧರಿಸುತ್ತಾನೆ.

೮೯೧) ನೈಕಜಃ

ಅನಂತ ರೂಪದಲ್ಲಿ ಅನಂತ ಜೀವರಲ್ಲಿ ತುಂಬಿರುವ ಭಗವಂತ ಏಕ ತತ್ವ. ಹಲವು ಅವತಾರ ತಾಳಿದ ಭಗವಂತ ನೈಕಜ.

೮೯೨) ಅಗ್ರಜಃ

ಎಲ್ಲಕ್ಕಿಂತ ಮೊದಲು ಚತುರ್ಮೂರ್ತಿಯಾಗಿ ಅವತರಿಸಿ ಈ ಪ್ರಪಂಚ ಸೃಷ್ಟಿ ಮಾಡಿದ ಭಗವಂತ, ಎಲ್ಲರ ಹಿರಿಯಣ್ಣ.

೮೯೩) ಅನಿರ್ವಿಣ್ಣಃ

ಭಗವಂತ ಎಂದೂ ಬೇಸರಗೊಳ್ಳದವನು. ಆತನಿಗೆ ಎಂದೂ ವೈರಾಗ್ಯವಿಲ್ಲ. ಸಾಮಾನ್ಯವಾಗಿ ನಮಗೆ ವೈರಾಗ್ಯ ಬರುವುದು ಕೊರತೆಯಿಂದ. ಭಗವಂತನಿಗೆಲ್ಲಿಯ ಕೊರತೆ? ಭಗವಂತನ ಈ ಗುಣವನ್ನು ನಾವು ಆತನ ಕೃಷ್ಣಾವತಾರದಲ್ಲಿ ಕಾಣಬಹುದು. ಗಾಂಧಾರಿ ಕೃಷ್ಣನಿಗೆ “ನಿನ್ನ ಯಾದವ ವಂಶ ನಾಶವಾಗಿ ಹೋಗಲಿ” ಎಂದು ಶಾಪ ಕೊಟ್ಟಾಗ; ಯಾದವರೆಲ್ಲರು ಹೊಡೆದಾಡಿಕೊಂಡು ಸಾಯುತ್ತಿರುವಾಗಲೂ ಸಹ ಕೃಷ್ಣ ನಗುತ್ತಾ ನಿಂತಿದ್ದ! ಭಗವಂತ ಉತ್ಸಾಹದ ಚಿಲುಮೆ. ಆತ ಅನಿರ್ವಿಣ್ಣಃ.

೮೯೪) ಸದಾಮರ್ಷೀ

ಮರ್ಷ ಎಂದರೆ ತಡೆದುಕೊಳ್ಳುವುದು(tolerate). ಭಗವಂತ ಸದಾ 'ಮರ್ಷಿ'. ಸಾತ್ವಿಕರಿಂದ ತಿಳಿಯದೇ ತಪ್ಪಾದಾಗ ಅದನ್ನು ಆತ ಕ್ಷಮಿಸುತ್ತಾನೆ. ಆದರೆ ಆತ ಸದಾ 'ಅಮರ್ಷಿ' ಕೂಡಾ ಹೌದು. ಆತ ದುಷ್ಟತನವನ್ನು ಎಂದೂ ತಾಳಿಕೊಳ್ಳುವುದಿಲ್ಲ. ಆತನ ಮೂಲ ಉದ್ದೇಶ ದುಷ್ಟ ನಾಶನ ಶಿಷ್ಟ ರಕ್ಷಣ.

೮೯೫) ಲೋಕಾಧಿಷ್ಠಾನಮ್

ಭಗವಂತ ಇಡಿಯ ಲೋಕಕ್ಕೆ ಮೂಲಾಧಾರ. ಆತ ಇಡಿಯ ಜಗತ್ತನ್ನು ಧಾರಣೆ ಮಾಡಿರುವ ಏಕೈಕ ಕೊನೇಯ ಆಸರೆ.

೮೯೬) ಅದ್ಭುತಃ

ಭಗವಂತ ಎಲ್ಲಕ್ಕಿಂತ ವಿಸ್ಮಯ. ಆತನನ್ನು ನೋಡಿದವರಿಗೂ ಕೂಡಾ ಆತನ ವರ್ಣನೆ ಸಾಧ್ಯವಿಲ್ಲ. ಏಕೆಂದರೆ ಆತ ಅಚ್ಚರಿಯೊಳಚ್ಚರಿ. ಇದನ್ನು ಗೀತೆಯಲ್ಲಿ ಹೀಗೆ ಹೇಳಿದ್ದಾರೆ:

ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾऽಪ್ಯೇನಂ ವೇದ ನಚೈವ ಕಶ್ಚಿತ್ ॥ಅ-೨, ಶ್ಲೋ-೨೯॥

ಅಂದರೆ "ಯಾರೋ ಒಬ್ಬ ಭಗವಂತನನ್ನು ಅಚ್ಚರಿಯಿಂದ ನೋಡುತ್ತಾನೆ, ಯಾರೋ ಒಬ್ಬ ಅಚ್ಚರಿಗೊಂಡು ಆಡುತ್ತಾನೆ , ಯಾರೋ ಒಬ್ಬ ಅವನನ್ನು ಅಚ್ಚರಿಗೊಂಡು ಕೇಳುತ್ತಾನೆ. ಎಷ್ಟು ಕೇಳಿದರೂ ಅವನನ್ನು ಸರಿಯಾಗಿ ಅರಿತವರು ಯಾರೂ ಇಲ್ಲ" ಆತ ಅದ್ಭುತಃ.

ಸನಾತ್ಸನಾತನತಮಃ ಕಪಿಲಃ ಕಪಿರಪ್ಯಯಃ ।
ಸ್ವಸ್ತಿದಃ ಸ್ವಸ್ತಿಕೃತ್ ಸ್ವಸ್ತಿ ಸ್ವಸ್ತಿಭುಕ್ ಸ್ವಸ್ತಿದಕ್ಷಿಣಃ ॥೧೦೯॥

೮೯೭) ಸನಾತ್

ಕೆಲವರು ಹೇಳುವುದಿದೆ "ದೇವರು ಎನ್ನುವುದು ಮನುಷ್ಯನ ಮಾನಸಿಕ ಕಲ್ಪನೆ" ಎಂದು. ಇಂತಹ ಪೊಳ್ಳು ವಾದಕ್ಕೆ ಭಗವಂತನ ಈ ನಾಮ ಉತ್ತರ. ಭಗವಂತ ಎನ್ನುವ ತತ್ವ ನಮ್ಮ ನಂಬಿಕೆಯನ್ನವಲಂಬಿಸಿ ಇರುವುದಲ್ಲ. ಅದು ಯಾವಾಗಲೂ ಎಂದೆಂದೂ ಇರುವ ಶಕ್ತಿ. ಆತ ಸನಾತ್.

೮೯೮) ಸನಾತನತಮಃ

ಭಗವಂತ ಸನಾತನತಮಃ. 'ಸನ' ಎಂದರೆ ಎಲ್ಲಾ ಕಾಲದಲ್ಲಿ, 'ತನ' ಎಂದರೆ ಇರುವಂತಹದ್ದು. 'ತಮ' ಎಂದರೆ ನಿಯಂತ್ರಿಸುವುದು. ಭಗವಂತ ಎಲ್ಲರಿಗಿಂತ ಪುರಾತನ. ಆತ ಅನಾದಿನಿತ್ಯ.

ಎಲ್ಲಾ ಕಾಲದಲ್ಲಿ ಇರುವಂತಹ ಇತರ ತತ್ವಗಳೆಂದರೆ ಜೀವರು, ಪ್ರಕೃತಿ , ಆಕಾಶ, ಕಾಲ ಇತ್ಯಾದಿ. ಭಗವಂತ ಎಲ್ಲಾ ಸನಾತನವನ್ನು ನಿಯಂತ್ರಿಸುವ, ಪರಿಪೂರ್ಣವಾದ, ನಿರ್ವಿಕಾರ ಸ್ವರೂಪ.

೮೯೯) ಕಪಿಲಃ

ಕಪಿಲ ಎನ್ನುವುದು ಭಗವಂತನ ಒಂದು ಅವತಾರದ ಹೆಸರು. ಸ್ವಾಯಂಭುವ ಮನುವಿನ ಕಾಲದಲ್ಲಿ ದೇವಭೂತಿ ಹಾಗೂ ಕರ್ಧಮ ಪ್ರಜಾಪತಿಯ ದಾಂಪತ್ಯ ಫಲದಲ್ಲಿ ಮೂಡಿಬಂದ ಭಗವಂತನ ಅವತಾರ ಕಪಿಲ. ಇದಲ್ಲದೆ ಜಗತ್ತಿಗೆ ಸಂಖ್ಯಾಶಾಸ್ತ್ರವನ್ನು ಕೊಟ್ಟ ಭಗವಂತ ಕಪಿಲಃ.

ಸಹಸ್ರನಾಮ ವಿವರಣೆ-೯೦೦

೯೦೦) ಕಪಿಃ

ಕಂ ಎಂದರೆ ಸುಖ. ಸದಾ ಆನಂದದ ಸ್ಥಿತಿಯಲ್ಲಿರುವ ಭಗವಂತ ಕಪಿಃ. ಕಂಪಯತೀತಿ ಇತಿ ಕಪಿಃ. ತನ್ನ ನೀತಿಗೆ ಬದ್ಧವಾಗದೇ ಇರುವ ದುಷ್ಟರನ್ನು ನಡುಗಿಸುವ ಭಗವಂತ ಕಪಿಃ.

೯೦೧) ಅಪ್ಯಯಃ

ಪ್ರಳಯ ಕಾಲದಲ್ಲಿ ಎಲ್ಲವನ್ನೂ ತನ್ನ ಒಡಲಲ್ಲಿ ಅಡಗಿಸಿಟ್ಟು ರಕ್ಷಿಸುವ ಭಗವಂತ ಅಪ್ಯಯಃ

೯೦೨) ಸ್ವಸ್ತಿದಃ

ಸದಾ ಸಂಕಟ-ದುಃಖವಿಲ್ಲದ ಆನಂದಮಯವಾದ ಸ್ಥಿತಿಯನ್ನು ಸಜ್ಜನರಿಗೆ ಕೊಡುವ ಭಗವಂತ ಸ್ವಸ್ತಿದಃ. ಯಾರು ಅಧರ್ಮದ ಹಾದಿಯಲ್ಲಿರುತ್ತಾರೋ ಅವರ ಸುಖದ ಇರವನ್ನು ನಾಶಮಾಡುವ ಭಗವಂತ ಸ್ವಸ್ತಿದಃ.

೯೦೩) ಸ್ವಸ್ತಿಕೃತ್

ಬದುಕಿನಲ್ಲಿ ಆನಂದದ ಇರವನ್ನು ಸೃಷ್ಟಿಮಾಡುವ(ಕೃತ) ಭಗವಂತ, ಇದ್ದ ಆನಂದವನ್ನು ಕತ್ತರಿಸಿ ತೆಗೆಯುತ್ತಾನೆ(ಕೃಂತತಿ). ಇದು ಆತನ ಶಿಕ್ಷಣ ಕ್ರಮ ಹಾಗೂ ದುಷ್ಟ ನಿಗ್ರಹದ ಜಾಲ.

೯೦೪) ಸ್ವಸ್ತಿ

ಸದಾ ಆನಂದಮಯ ಸ್ವರೂಪನಾಗಿರುವ ಸಚ್ಚಿದಾನಂದ ಸ್ವರೂಪ ಭಗವಂತ ಸ್ವಸ್ತಿ. ಈ ಕಾರಣಕ್ಕಾಗಿ ಸದಾ ಮನೆಯಲ್ಲಿ ಸಂತೋಷವಿರಲಿ ಎನ್ನುವ ಉದ್ದೇಶದಿಂದ, ಮನೆ ಮುಂದೆ ಸ್ವಸ್ತಿ ಎಂದು ಬರೆಯುತ್ತಾರೆ. ಭಗವಂತ ಮಂಗಳಸ್ವರೂಪ ಹಾಗೂ ಆನಂದ ಸ್ವರೂಪ.

೯೦೫) ಸ್ವಸ್ತಿಭುಕ್

ನಿರಂತರ ಆನಂದ ಭೋಗಿಸುವ ಭಗವಂತ ಸ್ವಸ್ತಿಭುಕ್. ಆತ ಜಗತ್ತಿನ ಸಮಸ್ತ ಆನಂದವನ್ನು ಅನುಭವಿಸುತ್ತಿರುತ್ತಾನೆ.

೯೦೬) ಸ್ವಸ್ತಿದಕ್ಷಿಣಃ

ಭಗವಂತನನ್ನು ನಿರಂತರ ಆರಾಧನೆ ಮಾಡುವ ಭಕ್ತರಿಗೆ ನಿರಂತರ ಆನಂದವನ್ನುಕೊಡುವ, ಲಕ್ಷ್ಮಿಯನ್ನು ಸದಾ ತನ್ನ ಎಡಭಾಗದಲ್ಲಿ ಧರಿಸಿರುವ ಆನಂದ ಸ್ವರೂಪ ಭಗವಂತ ಸ್ವಸ್ತಿದಕ್ಷಿಣಃ.

**ಅರೌದ್ರಃ ಕುಂಡಲೀ ಚಕ್ರೀ ವಿಕ್ರಮ್ಯೂರ್ಜಿತಶಾಸನಃ ।**
**ಶಬ್ದಾತಿಗಃ ಶಬ್ದಸಹಃ ಶಿಶಿರಃ ಶರ್ವರೀಕರಃ ॥೧೧೦ ॥**

೯೦೭) ಅರೌದ್ರಃ

'ರೌದ್ರ' ಎಂದರೆ ಉಗ್ರ ಸ್ವಭಾವ. ಭಗವಂತ ಅರೌದ್ರಃ. ಅಂದರೆ ಆತ ಮಹಾ ಕರುಣಾಳು. ಪರಮಸೌಮ್ಯ ಸ್ವಭಾವದವನು. ಇಂತಹ ಭಗವಂತ ಜ್ಞಾನದ, ಧರ್ಮದ ದ್ವೇಷಿಗಳಿಗೆ(ಅರಿಗಳಿಗೆ) ಪರಮ ನಿಷ್ಠುರ (ಅರಿ ದ್ರವತಿ ಇತಿ ಅರೌದ್ರಃ)

೯೦೮) ಕುಂಡಲೀ

ಕುಂಡಲೀ ಎಂದರೆ ಕಿವಿಯಲ್ಲಿ ಧರಿಸುವ ಆಭರಣ. ಸೂರ್ಯನಲ್ಲಿ ಸನ್ನಿಹಿತನಾದ ಗಾಯತ್ರಿ ಪ್ರತಿಪಾದ್ಯ ಭಗವಂತನನ್ನು ಧ್ಯಾನ ಮಾಡುವಾಗ ಈ ರೀತಿ ಹೇಳುತ್ತಾರೆ:

ದೇಹ್ಯಸದಾ ಸವಿತ್ರಮಂಡಲ ಮಧ್ಯವರ್ತೀ
ನಾರಾಯಣಃ ಸರಸಿಜಾಸನ ಸನ್ನಿವಿಷ್ಟಃ
ಕೇಯೂರವಾನ್ ಮಕರಕುಂಡಲವಾನ್
ಕಿರೀಟೀಹಾರಿ ಹಿರಣ್ಮಯವಪುಹುಃ ದೃತ ಶಂಖ ಚಕ್ರಃ.

ಇದು ಋಗ್ವಿದಾನದಲ್ಲಿದೆ. ಈ ಶ್ಲೋಕ ನರಸಿಂಹ ಪುರಾಣದಲ್ಲಿದೆ. ಇದು ಗಾಯತ್ರಿಯ ಧ್ಯಾನ ಶ್ಲೋಕ. ಇಲ್ಲಿ ಹೇಳುವಂತೆ ಧ್ಯಾನ ಮಾಡುವಾಗ ಭಗವಂತನನ್ನು ಈ ರೀತಿ ಕಲ್ಪಿಸಿಕೊಳ್ಳುತ್ತಾರೆ: " ಸೂರ್ಯ ಮಂಡಲದ ಮಧ್ಯದಲ್ಲಿ ಸರ್ವಾಭರಣಭೂಷಿತನಾಗಿ ಪದ್ಮಾಸನದಲ್ಲಿ ಭಗವಂತ ಕುಳಿತಿದ್ದಾನೆ. ಆತ ತನ್ನ ಕೈಗೆ ತೋಳ್ಬಂದಿ ಕಿವಿಯಲ್ಲಿ ಕರ್ಣ ಕುಂಡಲ ಧರಿಸಿದ್ದಾನೆ. ಎರಡು ಕೈಯಲ್ಲಿ ಶಂಖ ಚಕ್ರ ಹಿಡಿದು ಕಿರೀಟ ತೊಟ್ಟು ಸರ್ವಾಭರಣ ಭೂಷಿತನಾಗಿದ್ದಾನೆ"

ಎಂದು. ಇಲ್ಲಿ ಭಗವಂತ ಮಕರ ಕುಂಡಲ ಧರಿಸಿದ್ದಾನೆ ಎನ್ನುತ್ತಾರೆ. ಮಕರ ಎಂದರೆ ಮೊಸಳೆ. ಮೊಸಳೆಯ ಬಾಲ ಮತ್ತು ಬಾಯಿಯನ್ನು ಜೋಡಿಸಿ ಮಾಡುವ ಆಭರಣ ಮಕರಕುಂಡಲ. ಮಕರ ಕಾಮದೇವ ಮನ್ಮಥನ ವಾಹನ ಕೂಡಾ ಹೌದು(ಇಲ್ಲಿ ಕಾಮ(Desire) ಎಷ್ಟು ಪವಿತ್ರವೋ ಅಷ್ಟೇ ಅಪಾಯಕಾರಿ ಎನ್ನುವುದನ್ನು ಮನ್ಮಥನ ವಾಹನ ಮಕರ ಪ್ರತಿನಿಧಿಸುತ್ತದೆ). ಈ ರೀತಿ ಕುಂಡಲಿ ಭಗವಂತ ಧರಿಸುವ ಆಭರಣದ ಒಂದು ಮುಖ.

ಅಗ್ನಿ ಕುಂಡದಲ್ಲಿ ಲೀನವಾಗಿರುವ ಅಗ್ನಿಯ ಅಂತರ್ಯಾಮಿ ಭಗವಂತ ಕುಂಡಲೀ.

೯೦೯) ಚಕ್ರೀ

ಭಕ್ತರ ರಕ್ಷಣೆಗೋಸ್ಕರ ಅಧರ್ಮದ ನಾಶಕ್ಕೋಸ್ಕರ ಚಕ್ರಧಾರಿಯಾಗಿ ಭೂಮಿಗೆ ಇಳಿದು ಬರುವ ಭಗವಂತ ಚಕ್ರೀ. ಈ ಬ್ರಹ್ಮಾಂಡವೆಂಬ ವಿಶ್ವ ಚಕ್ರವನ್ನು ತನ್ನ ಹಿಡಿತದಲ್ಲಿಟ್ಟುಕೊಂಡ ಭಗವಂತ ಚಕ್ರೀ. ಸರ್ವ ಆಕಾಶ ಕಾಯಗಳನ್ನು ಧ್ರುವ ಮಂಡಲ ಮಧ್ಯದಲ್ಲಿದ್ದು ನಿರ್ವಹಿಸುವ ಭಗವಂತ ಚಕ್ರೀ.

೯೧೦) ವಿಕ್ರಮೀ

ಎಲ್ಲವನ್ನೂ ಮಣಿಸುವ ಪರಾಕ್ರಮವುಳ್ಳ, ವಿಶಿಷ್ಟವಾದ ಮೂರು ಹೆಜ್ಜೆಗಳುಳ್ಳ, ಇಡೀ ವಿಶ್ವವನ್ನು ಕ್ಷಣಮಾತ್ರದಲ್ಲಿ ಕಬಳಿಸಬಲ್ಲ ಭಗವಂತ ವಿಕ್ರಮೀ.

೯೧೧) ಊರ್ಜಿತಶಾಸನಃ

ಭಗವಂತನ ಶಾಸನ ಎಂದೂ ಅನೂರ್ಜಿತವಾಗುವುದಿಲ್ಲ. ಆತನ ಆಜ್ಞೆಯನ್ನು ಉಲ್ಲಂಗಿಸುವುದು ಅಸಾಧ್ಯ. ಆತನ ಆಣತಿಯಂತೆ ಸರ್ವ ದೇವತೆಗಳೂ ಕ್ರಮಬದ್ಧವಾಗಿ ಕಾರ್ಯ ನಿರ್ವಹಿಸುತ್ತಾರೆ. ಇಂತಹ ಅಭೇಧ್ಯ ಶಾಸನದಿಂದ ಲೋಕರಕ್ಷಣೆ ಮಾಡುವ ಭಗವಂತ ಊರ್ಜಿತಶಾಸನಃ.

೯೧೨) ಶಬ್ದಾತಿಗಃ

ಭಗವಂತನನ್ನು ಹೀಗೇ ಎಂದು ಯಾವ ಒಂದು ಶಬ್ದದಿಂದ ಹೇಳಲು ಅಸಾಧ್ಯ. ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳುವಂತೆ: ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । (ಬ್ರಹ್ಮಾನಂದ ವಲ್ಲಿ, ನಾಲ್ಕನೇ ಅನುವಾಕ) ಅಂದರೆ ಭಗವಂತ ಮಾತು ಮತ್ತು ಮನಸ್ಸಿಗೆ ಮುಟ್ಟದ, ಶಬ್ದಕ್ಕೆ ಎಟುಕದ ಸ್ವರೂಪ. ಇಂತಹ ಭಗವಂತನಿಗೆ ಶಬ್ದಾತಿಗಃ ಅನ್ವರ್ಥನಾಮ.

೯೧೩) ಶಬ್ದಸಹಃ

ಯಾವ ಶಬ್ದಕ್ಕೂ ಸಿಗದ ಭಗವಂತ, ನಾವು ಯಾವ ಶಬ್ದದಿಂದ ಕರೆದರೂ ಅದನ್ನು ಸಹಿಸಿಕೊಳ್ಳುತ್ತಾನೆ. ಇಂತಹ ಸರ್ವ ಶಬ್ದವಾಚ್ಯ ಭಗವಂತ ಶಬ್ದಸಹಃ. ಆದ್ದರಿಂದ ಆತನನ್ನು ಯಾವ ಹೆಸರಿನಿಂದ ಕೂಡಾ ಕರೆಯಬಹುದು.

೯೧೪) ಶಿಶಿರಃ

'ಶ' ಎಂದರೆ ಆನಂದ. ಅತಿಶಯವನ್ನು ವ್ಯಕ್ತಪಡಿಸುವಾಗ ನಾವು ಸಾಮಾನ್ಯವಾಗಿ ಮೂರನೇ ಪದವನ್ನು ಬಳಸುತ್ತೇವೆ (ಶ, ಶಾ, ಶಿ). ಇಲ್ಲಿ 'ಶಿ' ಎಂದರೆ ಅತಿಶಯವಾದ ಆನಂದ. 'ರ' ಎಂದರೆ ಕೊಡುವವನು, ರಮಿಸುವವನು. ಶಿಶಿರಃ ಎಂದರೆ ಅತಿಶಯವಾದ ಮಹದಾನಂದವನ್ನು ಕೊಡುವ, ಭೂಮಿಗೆ ತಂಪನ್ನು ಸುರಿಸುವ ಆನಂದದ ಪರಾಕಾಷ್ಠೆಯಲ್ಲಿ ರಮಿಸುವ ಭಗವಂತ.

೯೧೫) ಶರ್ವರೀಕರಃ

ಶರ್ವರೀಕರಃ ಎಂದರೆ ರಾತ್ರಿಯನ್ನು ಮಾಡುವವನು ! ಚಂದ್ರನೊಳಗಿದ್ದು ಈ ಭೂಮಿಗೆ ಅದ್ಭುತವಾದ ಬೆಳದಿಂಗಳನ್ನು ಉಣಿಸುವ ಭಗವಂತ ಶರ್ವರೀಕರಃ. ರಾತ್ರಿಯಲ್ಲಿ ಕ್ರಿಯಾತ್ಮಕವಾಗಿರುವ ಪ್ರಾಣಿ-ಪಕ್ಷಿಗಳಿಗೆ, ಗಿಡ-ಗಂಟಿಗಳಿಗೆ ಚೈತನ್ಯವನ್ನು ಕೊಡುವ ಭಗವಂತ ಶರ್ವರೀಕರಃ.

**ಅಕ್ರೂರಃ ಪೇಶಲೋ ದಕ್ಷೋ ದಕ್ಷಿಣಃ, ಕ್ಷಮಿಣಾಂವರಃ ।**
**ವಿದ್ವತ್ತಮೋ ವೀತಭಯಃ ಪುಣ್ಯಶ್ರವಣಕೀರ್ತನಃ ॥೧೧೧॥**

೯೦೬) ಅಕ್ರೂರಃ

ಭಗವಂತ ಎಂದೂ ಕ್ರೂರನಲ್ಲ. ಸಮಾಜದಲ್ಲಿ ಅನೇಕ ಕ್ರೂರ ಘಟನೆಗಳು ನಡೆಯುತ್ತವೆ. ಅದಕ್ಕೆ ಮೂಲ ಕಾರಣ ಮನುಷ್ಯನಲ್ಲಿರುವ ದುರಾಸೆ. ತನ್ನ ಆಸೆ ಈಡೇರದಿದ್ದಾಗ, ತಾನು ಅಂದುಕೊಂಡಂತೆ ಆಗದಿದ್ದಾಗ, ತನ್ನ ಕೆಲಸಕ್ಕೆ ಇನ್ಯಾರೋ ಅಡ್ಡಿಬಂದಾಗ ಮನುಷ್ಯ ಕ್ರೂರಿಯಾಗಿ ವರ್ತಿಸುತ್ತಾನೆ. ಆದರೆ ಭಗವಂತನಿಗೆ ಈಡೇರದ ಬಯಕೆ ಎನ್ನುವುದೊಂದಿಲ್ಲ. ಅವನು ಸತ್ಯಕಾಮ, ಸತ್ಯಸಂಕಲ್ಪ, ಪೂರ್ಣಕಾಮ. ಇಂತಹ ಭಗವಂತನಿಗೆ ಕೋಪವಿಲ್ಲ. ನಮಗೆ ಕ್ರೌರ್ಯವಾಗಿ ಕಾಣುವುದು ನಿಜವಾಗಿ ಕ್ರೂರತನವಲ್ಲ. ಅದರ ಹಿಂದೆ ಯಾವಾಗಲೂ ಪ್ರೀತಿ ಅಡಗಿರುತ್ತದೆ. ಭಗವಂತ ಎಂದೂ ನಿರ್ದಯನಲ್ಲ. ಅವನಿಗೆ ಯಾರ ಮೇಲೂ ಹಗೆ ಇಲ್ಲ. ಆತ ಅಕ್ರೂರಃ.

೯೦೭) ಪೇಶಲಃ

ಸರ್ವಾಂಗ ಸುಂದರ, ಚೆಲುವ, ಮುದ್ದು ಮುದ್ದಾದ ರೂಪವುಳ್ಳ ಭಗವಂತ ಪೇಶಲಃ. ಭಗವಂತನ ಈ ಅಪೂರ್ವ ಸುಂದರವನ್ನು ಆತನ ಕೃಷ್ಣಾವತಾರದಲ್ಲಿ ಕಾಣುತ್ತೇವೆ. ಗುಣದ ಸೌಂದರ್ಯದ ಪರಾಕಾಷ್ಠೆಯನ್ನು ಶ್ರೀರಾಮ ನಮಗೆ ತೋರಿಸಿಕೊಟ್ಟಿದ್ದಾನೆ. ಇಂದ್ರಾದಿ ದೇವತೆಗಳಿಗೆ ಈಶನಾಗಿ ಪಾಲನೆ ಮಾಡುವ ಲಾವಣ್ಯಮೂರ್ತಿ ಭಗವಂತ ಪೇಶಲಃ.

೯೦೮) ದಕ್ಷಃ

ಜಗತ್ತಿನಲ್ಲಿ ಯಾವ-ಯಾವ ಕಾರ್ಯ ಯಾವ-ಯಾವ ಕಾಲದಲ್ಲಿ ಹೇಗೆ ಆಗಬೇಕೋ ಹಾಗೇ ಅದೇ ಕಾಲದಲ್ಲಿ ನಿಯಮಬದ್ಧವಾಗಿ ಮಾಡುವ ಸಾಮರ್ಥ್ಯವಿರುವ ಏಕೈಕ ಸ್ವರೂಪ ಭಗವಂತ ದಕ್ಷಃ.

೯೦೯) ದಕ್ಷಿಣಃ

ದಕ್ಷತೆಯ ಜೊತೆಗೆ ದಾಕ್ಷಿಣ್ಯ(ಸೌಜನ್ಯ) ಸೇರಿದಾಗ ಅದು ದಕ್ಷಿಣಃ. ಭಗವಂತ ಸೌಜನ್ಯದ ಖನಿ. ಆದ್ದರಿಂದ ಆತ ದಕ್ಷಿಣಃ.

೯೧೦) ಕ್ಷಮಿಣಾಂವರಃ

ಭಗವಂತ ಕ್ಷಮಾಶೀಲರಲ್ಲಿ ಶ್ರೇಷ್ಠ. ನಾವು ಒಂದೊಂದು ಜನ್ಮದಲ್ಲಿ ಮಾಡುವ ಪಾಪ ನಮ್ಮ ಹತ್ತು ಜನ್ಮದಲ್ಲೂ ತೊಳೆಯಲು ಸಾಧ್ಯವಾಗದು. ಪ್ರತೀ ಜನ್ಮದಲ್ಲಿ ಪಾಪದ ಹೊರೆಯನ್ನು ಹೊತ್ತು ಸಾಗುವ ನಮ್ಮನ್ನು ಕ್ಷಮಿಸಿ, ಪಾಪದ ಹೊರೆಯಿಂದ ನಮ್ಮನ್ನು ಪಾರುಮಾಡುವ ಭಗವಂತ ಕ್ಷಮಾಮೂರ್ತಿ. ಆತ ಕ್ಷಮಿಣಾಂವರಃ

೯೧೧) ವಿದ್ವತ್ತಮಃ

ವಿದ್ವಾನ್ ಎಂದರೆ ತಿಳುವಳಿಕೆ ಉಳ್ಳವರು, ಜ್ಞಾನಿಗಳು. ಜ್ಞಾನಿಗಳಲ್ಲೆಲ್ಲಾ ಅತ್ಯಂತ ಉತ್ತಮ ಹಾಗೂ ಮಹಾ ಜ್ಞಾನಿ ಭಗವಂತ ವಿದ್ವತ್ತಮಃ.

೯೧೨) ವೀತಭಯಃ

ನಮ್ಮ ಭಯಕಳೆಯುವ, ಎಂದೂ ಭಯವಿರದ ಸರ್ವಸಮರ್ಥ ಭಗವಂತ ವೀತಭಯಃ

೯೨೩) ಪುಣ್ಯಶ್ರವಣಕೀರ್ತನಃ

ಪುಣ್ಯಪ್ರದವಾದ ಶ್ರವಣ ಕೀರ್ತನಗಳವನು.ಭಗವಂತನ ಬಗ್ಗೆ ಕೇಳುವುದು, ಅವನ ಬಗ್ಗೆ ಮಾತನಾಡುವುದು, ಅವನತ್ತ ಮುಖ ಹಾಕಿ ನಡೆಯುವುದು ನಮ್ಮ ಬದುಕಿನ ಮಹಾ ಪಾವಿತ್ರ್ಯವಾದ ಕರ್ಮ. ಇದಕ್ಕಿಂತ ಉತ್ತಮವಾದದ್ದು ಇನ್ನೊಂದಿಲ್ಲ.

ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಃಸ್ವಪ್ನನಾಶನಃ ।
ವೀರಹಾ ರಕ್ಷಣಸ್ಸಂತೋ ಜೀವನಃ ಪರ್ಯವಸ್ಥಿತಃ ॥೧೧೨॥

೯೨೪) ಉತ್ತಾರಣಃ

ಸಂಸಾರದಿಂದ ನಮ್ಮನ್ನು ಮೇಲೆತ್ತಿ ಪಾರುಮಾಡುವ ಭಗವಂತ ಉತ್ತಾರಣಃ. ಸಂಸಾರವೆಂಬ ಈ ಮಹಾ ಕಡಲಿನಲ್ಲಿ ದಡಸಿಗದೆ ಒದ್ದಾಡುತ್ತಿರುವ ನಮ್ಮನ್ನು ದಡಸೇರಿಸುವ ಏಕೈಕ ಶಕ್ತಿ.

೯೨೫) ದುಷ್ಕೃತಿಹಾ

ನಮ್ಮ ಪಾಪಗಳನ್ನು ಪರಿಹರಿಸುವವನು. ದುಷ್ಟರನ್ನು, ಪಾಪಿಗಳನ್ನು ಕೊಲ್ಲುವವನು.

೯೨೬) ಪುಣ್ಯಃ

ಪುಣ್ಯ ಎಂದರೆ ಪಾವನ ಅಥವಾ ಪರಮ ಸುಂದರ. ಭೀಷ್ಮಾಚಾರ್ಯರು ವಿಷ್ಣು ಸಹಸ್ರನಾಮವನ್ನು ಧರ್ಮರಾಯನಿಗೆ ಹೇಳುವ ಮೊದಲು ಈ ರೀತಿ ಹೇಳುತ್ತಾರೆ: "ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಮ್" ಎಂದು. ಭಗವಂತನ ನಾಮಕ್ಕೇ ಅಷ್ಟೊಂದು ಬಲವಿರುವಾಗ ಇನ್ನು ಆತನನ್ನು ನಾವು ಊಹಿಸುವುದೂ ಕಷ್ಟ. ಆತ ಪವಿತ್ರ ಹಾಗೂ ಪರಮ ಸುಂದರ. ಆತ ಪುಣ್ಯಃ. ಅಗ್ನಿ ಮತ್ತು ತೀರ್ಥಗಳಲ್ಲಿ ಶುದ್ಧಿಕಾರಕನಾಗಿ, ಪಾವನನಾಗಿ ತುಂಬಿದ ಭಗವಂತ ಪುಣ್ಯಃ. ನಮ್ಮೊಳಗೆ ನಿಂತು ನಮ್ಮಿಂದ ಪುಣ್ಯ ಕರ್ಮಗಳನ್ನು ಮಾಡಿಸಿ ಮೋಕ್ಷ ಕೊಡುವ ಭಗವಂತ ಪುಣ್ಯಃ.

೯೨೭) ದುಃಸ್ವಪ್ನನಾಶನಃ

ನಮಗೆ ಕನಸು ಬೀಳುತ್ತದೆ. ಕನಸಿಗೊಂದು ಅರ್ಥವಿದೆ ಎಂದರೂ ಕೂಡಾ ಎಲ್ಲಾ ಕನಸುಗಳಿಗೆ ಅರ್ಥವಿದೆ ಎಂದು ಹೇಳುವುದಕ್ಕೆ ಬರುವುದಿಲ್ಲ. ಆದರೆ ಅಪರೂಪಕ್ಕೆ ಬೀಳುವ ಕನಸು, ಬೆಳಗಿನಜಾವದ ಕನಸು ಅರ್ಥಪೂರ್ಣವಾಗಿರುತ್ತದೆ. ಕೆಲವರು ರಾತ್ರಿಯಿಂದ ಬೆಳಗಿನತನಕ ಕನಸಿನಲ್ಲೇ ಇರುತ್ತಾರೆ. ಇದು ಕೇವಲ ಮಾನಸಿಕ ಸಮಸ್ಯೆ. ಕೆಲವು ಅರ್ಥಪೂರ್ಣ ಕನಸು ನಮಗೆ ನಮ್ಮ ಜೀವನದಲ್ಲಿ ಮುಂದೆ ಆಗತಕ್ಕಂತಹ ಒಳಿತು ಕೆಡುಕುಗಳ ಬಗ್ಗೆ ಮುನ್ಸೂಚನೆ ಕೊಡುತ್ತವೆ. ಇನ್ನು ಕೆಲವೊಮ್ಮೆ ನಮಗೆ ಕನಸಿನ ಮುಖೇನ ದೈವವಾಣಿ **(Divine message)** ಕೂಡಾ ಬರುತ್ತದೆ. ಕನಸಿಗೆ ಅದರದ್ದೇ ಆದ ಭಾಷೆ ಇದೆ. ಇದನ್ನು ಕನಸಿನ ಮನಃಶಾಸ್ತ್ರ **(Dream Psychology)** ಎನ್ನುತ್ತಾರೆ. ಇದನ್ನು ಪುರಾಣಗಳಲ್ಲಿ, ಉಪನಿಷತ್ತಿನಲ್ಲಿ ವಿವರವಾಗಿ ಹೇಳಿದ್ದಾರೆ. ಕನಸಿನಲ್ಲಿ ಬಣ್ಣಕ್ಕೆ ವಿಶೇಷ ಅರ್ಥವಿದೆ. ಉದಾಹರಣೆಗೆ ಕನಸಿನಲ್ಲಿ ಬಿಳಿ ಬಣ್ಣದ ಯಾವ ವಸ್ತುವನ್ನು ಕಂಡರೂ ಅದು ಮುಂದೆ ಆಗತಕ್ಕ ಶುಭವನ್ನು ಸೂಚಿಸುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಕೆಂಪುಬಣ್ಣದ ಯಾವ ವಸ್ತುವನ್ನು ಕಂಡರೂ ಕೆಟ್ಟದ್ದು. ಕನಸಿನ 'ಕೆಂಪು' ಸಾವಿನ ಸಂಕೇತ. ಕೆಂಪು ತಾವರೆಯ ಒಂದೇ ಹೂ ಕನಸಿನಲ್ಲಿ ಯಾವಾಗಲೂ ಬಂದರೆ ಖಂಡಿತವಾಗಿಯೂ ಅದು ಸಾವಿನ ಸಂಕೇತ. ಎಣ್ಣೆ ಹಾಕಿ ಅಭ್ಯಂಜನ ಸ್ನಾನಮಾಡಿದಂತೆ ಕನಸು ಬಿದ್ದರೆ ಒಳ್ಳೆಯದು. ಮೈತುಂಬ ಎಣ್ಣೆ ಹಚ್ಚಿದಂತೆ ಕನಸುಬಿದ್ದರೆ ಅದು ರೋಗದ ಮುನ್ಸೂಚನೆ. ಇನ್ನು 'ದಿಕ್ಕು'; ಕನಸಿನಲ್ಲಿ ಪೂರ್ವಕ್ಕೆ ಅಥವಾ ಉತ್ತರಕ್ಕೆ ನಡೆದುಕೊಂಡು ಹೋದಂತೆ ಕನಸುಬಿದ್ದರೆ ಒಳ್ಳೆಯದು. ಆದರೆ ಒಂದುವೇಳೆ ದಕ್ಷಿಣ ದಿಕ್ಕಿಗೆ ನಡೆದುಕೊಂಡು ಹೋದಂತೆ ಕನಸುಬಿದ್ದರೆ ಅದು ಪರಲೋಕ ಯಾತ್ರೆಯ ಸಂಕೇತ! ಬಿಳಿ ಆನೆ ಒಳ್ಳೆಯದು, ಕಪ್ಪು ಆನೆ ಕೆಟ್ಟದ್ದು. ಇನ್ನು ಕೆಲವೊಮ್ಮೆ ಮುಂದೆ

ಆಗುವ ಯಥಾಸ್ಥಿತಿ ಕನಸಿನಲ್ಲಿ ಬರುತ್ತದೆ. ಹೀಗೆ ಕನಸು ನಮಗೆ ಮುಂದೆ ಆಗುವ ಅನಿಷ್ಟದ ಎಚ್ಚರಿಕೆ ಕೂಡಾ ಹೌದು; ಅದಕ್ಕೆ ಸರಿಯಾದ ಪರಿಹಾರ ಕಂಡುಕೊಳ್ಳಲು ಅವಕಾಶ ಕೂಡಾ ಹೌದು. ಈ ರೀತಿ ದುಃಸ್ವಪ್ನ ಬಿದ್ದಾಗ ಆ ಬಗ್ಗೆ ಎಂದೂ ಭಯಪಡಬೇಕಾಗಿಲ್ಲ. ಏಕೆಂದರೆ ಇದು ಭಗವಂತ ನಮಗೆ ಕೊಟ್ಟ ಮುನ್ಸೂಚನೆ. ಇಂತಹ ಸಂಧರ್ಭದಲ್ಲಿ ಆ ಭಗವಂತನಲ್ಲಿ ಸಂಪೂರ್ಣ ಶರಣಾದರೆ ಆತ ಖಂಡಿತವಾಗಿ ನಮಗೆ ಪರಿಹಾರವನ್ನು ತೋರಿಸುತ್ತಾನೆ. ಮುಂದೆ ಆಗತಕ್ಕಂತಹ ಅನಿಷ್ಟದಿಂದ ನಮ್ಮನ್ನು ಪಾರು ಮಾಡುತ್ತಾನೆ. ಇಂತಹ ಭಗವಂತನಿಗೆ ದುಃಸ್ವಪ್ನನಾಶನಃ ಅನ್ವರ್ಥನಾಮ.

೯೨೮) ವೀರಹಾ

ವೀರ+ಹಾ-ವೀರಹಾ; ಯಾರ ಪೌರುಷ ಸಮಾಜಭಾದಕವೋ ಅಂತಹ ಲೋಕಕಂಟಕರನ್ನು ನಾಶ ಮಾಡುವ ಭಗವಂತ ವೀರಹಾ. ಇಷ್ಟೇ ಅಲ್ಲ, ಲೋಕಕಂಟಕರಿಗೆ ಸಹಾಯಕನಾಗಿ ನಿಲ್ಲುವವರನ್ನೂ ಕೂಡಾ ಭಗವಂತ ನಿಗ್ರಹ ಮಾಡುತ್ತಾನೆ. ಕೆಲವೊಮ್ಮೆ ಕಾರುಣ್ಯದಿಂದ, ಇನ್ನು ಕೆಲವೊಮ್ಮೆ ಧರ್ಮ ರಕ್ಷಣೆಗಾಗಿ. ಶ್ರೀ ಕೃಷ್ಣ - ಭೀಷ್ಮ, ದ್ರೋಣರನ್ನು ಕೊಲ್ಲುವ ಮುಖೇನ ಅಂತಹ ದಿವ್ಯ ಚೇತನ ಮತ್ತೆ ತಪ್ಪು ಮಾಡಿ ಪಾಪ ಕಟ್ಟಿಕೊಳ್ಳದಂತೆ ತಡೆದ.

"ವೀರೇಶು ಹಂತಿ ಗಚ್ಛತಿ"- ವೀರರಲ್ಲಿ ಸನ್ನಿಹಿತನಾಗಿರುವ ಭಗವಂತ ವೀರಹಾ.

೯೨೯) ರಕ್ಷಣಃ

ಇಡೀ ಜಗತ್ತಿನ ಸಂರಕ್ಷಕ ಭಗವಂತ ರಕ್ಷಣಃ.

೯೩೦) ಸಂತಃ

ಅನೇಕ ರೂಪದಲ್ಲಿ ಸಜ್ಜನರೊಳಗೆ ತುಂಬಿ ಪಾಲನೆ ಮಾಡುವ ಭಗವಂತ ಸಂತಃ. ಆತ "ಸಮ್ಯಕ್ ತತಃ" ಎಲ್ಲೆಡೆಯೂ ವ್ಯಾಪ್ತನಾದವನು.

೯೩೧) ಜೀವನಃ

ಪ್ರತಿಯೊಬ್ಬರಿಗೂ ಬದುಕು ಕೊಡುವವ. ಜಗತ್ತಿನ ಸಮಸ್ತ ಜೀವಜಾತಕ್ಕೆ ಬದುಕು ಕೊಡುವ, ಪ್ರತಿಯೊಂದು ಜೀವವನ್ನು ನಿಯಂತ್ರಿಸುವ ಭಗವಂತ ಜೀವನಃ.

೯೩೨) ಪರ್ಯವಸ್ಥಿತಃ

ಎಲ್ಲೆಡೆ ನೆಲೆಸಿರುವವನು, ನಮ್ಮ ಪಂಚ ಕೋಶದಲ್ಲಿ, ಪಂಚ ಜ್ಞಾನೇಂದ್ರಿಯದಲ್ಲಿ, ಪಂಚಪ್ರಾಣದಲ್ಲಿ, ಪಂಚಭೂತದಲ್ಲಿ ಪಂಚ ರೂಪದಲ್ಲಿ ಅನಂತರೂಪದಲ್ಲಿ ತುಂಬಿರುವ ಭಗವಂತ ಪರ್ಯವಸ್ಥಿತಃ.

ಅನಂತರೂಪೋಽನಂತಶ್ರೀರ್ಜಿತಮನ್ಯುರ್ಭಯಾಪಹಃ ।
ಚತುರಶ್ರೋ ಗಭೀರಾತ್ಮಾ ವಿದಿಶೋ ವ್ಯಾದಿಶೋ ದಿಶಃ ॥೧೦೩॥

೯೩೩) ಅನಂತರೂಪಃ

ಭಗವಂತ ಒಬ್ಬನೇ, ಆದರೆ ಆತನ ರೂಪ ಹಲವು. ಅನೇಕ ರೂಪದಲ್ಲಿ ಜಗತ್ತಿನಾದ್ಯಂತ ತುಂಬಿರುವ ಭಗವಂತ ಅನಂತರೂಪಃ. ನಮ್ಮ ದೇಹದಲ್ಲಿ ಕೂಡಾ ಆತ ಅನೇಕ ರೂಪದಲ್ಲಿ ತುಂಬಿ ನಡೆಸುತ್ತಿದ್ದಾನೆ.

೯೩೪) ಅನಂತಶ್ರೀಃ

ಶ್ರೀ ಎಂದರೆ ಸಂಪತ್ತು. ಅಚಲವೂ ಅನಂತವೂ ಆದ ಹಿರಿಯ ತತ್ವ ಭಗವಂತ ಅನಂತಶ್ರೀಃ.

೯೩೫) ಜಿತಮನ್ಯುಃ

ಭಗವಂತನಿಗೆ ಅಹಂಕಾರವಾಗಲೀ, ಕೋಪವಾಗಲೀ, ಆಕ್ರೋಶವಾಗಲೀ ಇಲ್ಲ. ಇಲ್ಲಿ 'ಮನ್ಯು' ಎನ್ನುವ ಪದಕ್ಕೆ ಸಿಟ್ಟು ಎನ್ನುವುದು ಒಂದು ಅರ್ಥವಾದರೆ, ಇನ್ನೊಂದು ಮುಖದಲ್ಲಿ 'ಮನ್ಯು' ಎನ್ನುವುದಕ್ಕೆ ಯಜ್ಞ ಹಾಗೂ ಜ್ಞಾನ ಎನ್ನುವ ಇತರ ಅರ್ಥವಿದೆ. 'ಮನ್ಯುಸೂಕ್ತ' ಭಗವಂತನ ಮಾಂಗಲಿಕ ಕೋಪವನ್ನು ಹೊಗಳುವ ಸೂಕ್ತ. ಭಗವಂತ ಜ್ಞಾನಸ್ವರೂಪನಾಗಿ ಎಲ್ಲಾ ಯಜ್ಞಗಳನ್ನು ಸ್ವೀಕರಿಸುವ ಕೋಪವೇ ಇಲ್ಲದ ಯಜ್ಞಗಳ ಸ್ವಾಮಿ.

೯೩೬) ಭಯಾಪಹಃ

ನಮ್ಮನ್ನು ಭಯದಿಂದ ಪಾರು ಮಾಡುವ ಭಗವಂತ ಭಯಾಪಹಃ. ದೇವರಿದ್ದಾನೆ, ಆತ ನಮ್ಮನ್ನು ಎಂದೂ ಕೈಬಿಡುವುದಿಲ್ಲ ಎಂದು ಸಂಪೂರ್ಣ ನಂಬಿದರೆ ನಾವು ಎಂದೂ ಯಾವುದಕ್ಕೂ ಭಯಪಡುವ ಅಗತ್ಯವಿಲ್ಲ. ಆತ ಭಯಾಪಹಃ. ಆತ ನಮ್ಮನ್ನು ಭಯದಿಂದ ಪಾರುಮಾಡುತ್ತಾನೆ. ಉದಾಹರಣೆಗೆ ಒಂದು ಪುಟ್ಟ ಮಗು. ಅದು ಒಂಟಿಯಾಗಿದ್ದಾಗ ಒಂದು ಚಿಕ್ಕ ಹುಳವನ್ನು ಕಂಡರೂ ಭಯಪಡುತ್ತದೆ. ಆದರೆ ಅದೇ ಮಗು ತಾಯಿಯ ಮಡಿಲಲ್ಲಿದ್ದಾಗ ಎದುರಿಗೆ ಹುಲಿ ಚಿರತೆ ಬಂದರೂ ನಗುತ್ತಿರುತ್ತದೆ! ಹೀಗೆ ನಾವು ಮಗುವಿನಂತೆ ಭಗವಂತನ ಮಡಿಲಲ್ಲಿ ಆಸರೆ ಕೋರಿದರೆ ಆತ ನಮಗೆ ರಕ್ಷಾ ಕವಚವಾಗುತ್ತಾನೆ.

೯೩೭) ಚತುರಶ್ರಃ

ಸಾಮಾನ್ಯವಾಗಿ ಒಂದು ಕೆಲಸ ತುಂಬಾ ಚೊಕ್ಕವಾಗಿ ಅಚ್ಚುಕಟ್ಟಾಗಿ ಆದರೆ ನಾವು 'ಸರ್ವಂ ಚತುರಶ್ರಮ್' ಎನ್ನುತ್ತೇವೆ. ಆದರೆ ನಾವು ಮಾಡುವ ಯಾವುದೇ ಕೆಲಸ ನೂರಕ್ಕೆ ನೂರು ಚೊಕ್ಕವಾಗಿ ಅಚ್ಚುಕಟ್ಟಾಗಿ ಆಗುವುದೇ ಇಲ್ಲ. ಅಲ್ಲಿ ಯಾವುದಾದರೂ ಒಂದು ದೋಷ ಇದ್ದೇ ಇರುತ್ತದೆ. ಇದನ್ನು ಗೀತೆಯಲ್ಲಿ ಶ್ರೀಕೃಷ್ಣ ಹೀಗೆ ಹೇಳಿದ್ದಾನೆ:

ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।

ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾ ಽವೃತಾಃ ॥ಅ-೧೮, ಶ್ಲೋ-೪೮॥

ಅಂದರೆ " ಬೆಂಕಿಯಿದ್ದಲ್ಲಿ ಹೊಗೆ ಇದ್ದಂತೆ ಸಕಲ ಕರ್ಮಗಳಲ್ಲಿ ದೋಷವಿದ್ದೇ ಇರುತ್ತದೆ. ಆದರೆ ನಾವು ಸಹಜವಾದ ಕರ್ಮವನ್ನು ಎಂದೂ ಬಿಡಬಾರದು"

ನಮ್ಮ ಪ್ರತಿಯೊಂದು ಕರ್ಮದಲ್ಲಿ ದೋಷವಿದ್ದಂತೆ ಭಗವಂತನ ಕರ್ಮದಲ್ಲಿ ದೋಷವಿರುವುದಿಲ್ಲ. ಆತ ಚತುರಶ್ರಃ.

ಅನಿರುದ್ಧ, ಸಂಕರ್ಷಣ ಪ್ರದ್ಯುಮ್ನ ಮತ್ತು ವಾಸುದೇವ ಎನ್ನುವ ನಾಲ್ಕು ರೂಪದಲ್ಲಿದ್ದು, ಚತುರತೆಯಿಂದ ಲೋಕದ ಸೃಷ್ಟಿಮಾಡಿ, ನಾಲ್ಕು ಅವಸ್ಥೆಗಳನ್ನು(ಎಚ್ಚರ, ಕನಸು, ನಿದ್ದೆ ಹಾಗೂ ತುರಿಯ), ದೇಹವೆಂಬ ಹನ್ನೊಂದು ಬಾಗಿಲಿನ ನಗರವನ್ನು(ನವರಂಧ್ರಗಳು, ಹೊಕ್ಕುಳು ಮತ್ತು ನೆತ್ತಿಯಲ್ಲಿನ ಬ್ರಹ್ಮರಂಧ್ರ) ಅಚ್ಚುಕಟ್ಟಾಗಿ ನಿಯಂತ್ರಿಸುವ ಭಗವಂತ, ಜೀವನಿಗೆ ಮೋಕ್ಷದ ಮಾರ್ಗವನ್ನು ತೋರುವ ಕಾರುಣ್ಯಮೂರ್ತಿ.

೯೩೮) ಗಭೀರಾತ್ಮಾ

ಸರ್ವಾಂತರ್ಯಾಮಿ; ನಮ್ಮ ದೇಹದಲ್ಲಿ ಗುಪ್ತವಾಗಿ, ಅಳೆಯಲು ಅಸಾಧ್ಯವಾದ ಆಳದಲ್ಲಿ ಅಡಗಿರುವ ಸ್ವರೂಪಭೂತವಾದ ಮಹಾತತ್ವ ಭಗವಂತ ಗಭೀರಾತ್ಮಾ.

೯೩೯) ವಿದಿಶಃ

ವಿವಿಧವಾದ ಸಂದೇಶಗಳನ್ನು, ವಿವಿಧ ಮಾಧ್ಯಮದ ಮೂಲಕ ನಿರಂತರ ಕಳುಹಿಸುವ ಭಗವಂತ ವಿದಿಶಃ. ಭಗವಂತನ ಅವತಾರದಲ್ಲಿ ಕೂಡಾ ಇದನ್ನು ಕಾಣಬಹುದು. ಶ್ರೀಕೃಷ್ಣ ತನ್ನ ಅವತಾರ ಕಾಲದಲ್ಲಿ ನಮಗೆ ಕೊಟ್ಟ ಸಂದೇಶ ಅಪರಿಮಿತ. ಯುದ್ಧ ಭೂಮಿಯಲ್ಲಿ ಆತ ಕೊಟ್ಟ ಸಂದೇಶ-'ಭಗವದ್ಗೀತೆ'; ಆನಂತರ ಅರ್ಜುನನಿಗೆ ಏಕಾಂತದಲ್ಲಿ ಭೋದಿಸಿದ್ದು- 'ಅನುಗೀತೆ'. ಇಷ್ಟೇ ಅಲ್ಲದೆ, ತನ್ನ ಅವತಾರ ಸಮಾಪ್ತಿಯ ನಂತರ ತನ್ನ ಸಂದೇಶವನ್ನು

ದೇಶದ ಮೂಲೆ-ಮೂಲೆಗೆ ತಲುಪಿಸುವಂತೆ ಉದ್ಧವನಿಗೆ ಭೋದಿಸಿದ 'ಉದ್ಧವಗೀತೆ'. ಹೀಗೆ ಆತ ಕೆಲವೊಮ್ಮೆ ಸ್ವಯಂ ಸಂದೇಶವನ್ನು ಸಾರಿದರೆ, ಇನ್ನು ಕೆಲವೊಮ್ಮೆ ತನ್ನ ಪ್ರತಿನಿಧಿಗಳನ್ನು ಕಳುಹಿಸಿ ಸಂದೇಶವನ್ನು ತಲುಪಿಸುತ್ತಾನೆ.

೯೪೦) ವ್ಯಾದಿಶಃ

ನಿರಂತರ ಸಂದೇಶವನ್ನು ಕಳುಹಿಸುವ ಭಗವಂತ ಕೆಲವೊಮ್ಮೆ ತನ್ನ ಆದೇಶವನ್ನು ಕೂಡಾ ರವಾನಿಸುತ್ತಾನೆ. ವಿವಿಧ ಆಜ್ಞೆಗಳನ್ನೀಯುವ ಭಗವಂತ ವ್ಯಾದಿಶಃ

೯೪೧) ದಿಶಃ

ಭಗವಂತನ ಸಂದೇಶ, ಆಜ್ಞೆ ಕೇವಲ ಒಂದು ಪ್ರದೇಶಕ್ಕೆ , ಒಂದು ದೇಶಕ್ಕೆ ಮೀಸಲಾಗಿಲ್ಲ. ಆತ ದಿಕ್ಕು ದಿಕ್ಕಿನಲ್ಲಿ ತುಂಬಿದ್ದಾನೆ. ಸರ್ವರಿಗೂ ಫಲವನ್ನೀಯುವ, ಉಪದೇಶಿಸುವ ಭಗವಂತ ದಿಶಃ.

ಅನಾದಿರ್ಭೂರ್ಭುವೋ ಲಕ್ಷ್ಮೀಸ್ಸುವೀರೋ ರುಚಿರಾಂಗದಃ ।
ಜನನೋ ಜನಜನ್ಮಾದಿರ್ಭೀಮೋ ಭೀಮಪರಾಕ್ರಮಃ ॥೧೧೪॥

೯೪೨) ಅನಾದಿಃ

ಭಗವಂತ ಆದಿ-ಅಂತ ಇಲ್ಲದವನು. ಆತನ ಸೃಷ್ಟಿ ಅನಾದಿನಿತ್ಯ.

೯೪೩) ಭೂರ್ಭುವೋಲಕ್ಷ್ಮೀಃ

ಈ ನಾಮವನ್ನು ಅನೇಕರೀತಿಯಲ್ಲಿ ಒಡೆದು ಬೇರೆಬೇರೆ ಅರ್ಥವನ್ನು ಕಾಣಬಹುದು. ಭೂಃ, ಭುವಃ, ಲಕ್ಷ್ಮೀಃ, ಭೂರ್ಭುವಃ, ಭುವೋ ಲಕ್ಷ್ಮೀಃ, ಭೂರ್ಭುವೋ ಲಕ್ಷ್ಮೀಃ ಇತ್ಯಾದಿ. ಭೂಃ ಎಂದರೆ ಸದಾ ಭವತಿ, ಎಂದೆಂದೂ ಆನಂದಮಯನಾಗಿರುವ ಪರಿಪೂರ್ಣ ಸ್ವರೂಪ. ಭುವಃ ಎಂದರೆ ಜಗತ್ತಿನಲ್ಲಿರುವ ಸರ್ವ ಉನ್ನತಿಕೆಯ ಉನ್ನತಿಯಲ್ಲಿರುವವನು. ಅದಕ್ಕಿಂತ ಮೇಲಿರುವ ಇನ್ನೊಂದು ವಸ್ತುವಿಲ್ಲ. ಲಕ್ಷ್ಮೀಃ ಎಂದರೆ ಸರ್ವ ಲಕ್ಷಣಗಳ ಸಾಕಾರ ಮೂರ್ತಿ. ಭೂರ್ಭುವೋ ಲಕ್ಷ್ಮೀಃ ಎಂದರೆ ಭೂಃ, ಭುವಃ ಸುವಃ -ಈ ಮೂರು ಲೋಕಗಳ ಸಂಪತ್ತಿನ ಒಡೆಯ.

೯೪೪) ಸವೀರಃ

ಪ್ರತಿಯೊಬ್ಬರೊಳಗಿದ್ದು, ಒಬ್ಬೊಬ್ಬರಲ್ಲಿ ಅವರವರ ಚೇತನದ ಸ್ಥಿತಿ-ಗತಿಗೆ ತಕ್ಕಂತೆ ಪ್ರೇರಣೆಯನ್ನು ಕೊಟ್ಟು ಆನಂದವನ್ನು ಕೊಡುವವನು ಸವೀರಃ. ಇಂತಹ ಸುಖ ಕಾರ್ಯಕ್ಕೆ ಅಡ್ಡಗಾಲಾಗಿ ಬರುವ ದುಷ್ಟ ಶಕ್ತಿಯನ್ನು ದಮನಮಾಡುವ ವೀರ ಭಗವಂತ ಸವೀರಃ. ಮಹಾ ವೀರರಾದ ಗರುಡ(ವಿ) ಮತ್ತು ಪ್ರಾಣ(ಈರ) ದೇವರಿಂದ ಸದಾ ಸುತ್ತುವರಿದಿರುವ ಭಗವಂತ ಸವೀರಃ.

೯೪೫) ರುಚಿರಾಂಗದಃ

ಸುಂದರವಾದ ತೋಳ್ಬಂದಿ ತೊಟ್ಟವನು. ಸದಾ ಬೆಳಕನ್ನು ಕೊಡುವ ಜ್ಞಾನಾನಂದಮಯವಾದ ಆಭರಣ ತೊಟ್ಟ ಭಗವಂತ ರುಚಿರಾಂಗದಃ. ಹೀಗೆ ಆನಂದಮಯವಾದ ಸ್ವರೂಪಭೂತವಾದ ಅಂಗವುಳ್ಳ ಭಗವಂತ ನಮಗೆ ಮೋಕ್ಷದಲ್ಲಿ ಸ್ವರೂಪಭೂತ ಶರೀರವನ್ನು ಕರುಣಿಸುವ ಕರುಣಾಮೂರ್ತಿ.

೯೪೬) ಜನನಃ

ಜನಯತೀತಿ ಜನನಃ; ಇಡೀ ಜಗತ್ತಿನ ಸೃಷ್ಟಿಗೆ ಕಾರಣನಾದ ಭಗವಂತ ಜನನಃ. ಅದೇ ರೀತಿ ಆತ ನಜನಯತಿ ಕೂಡಾ ಹೌದು. ಅಂದರೆ ನಮಗೆ ಹುಟ್ಟು ಇಲ್ಲದ ಮೋಕ್ಷ ಸ್ಥಿತಿಯನ್ನು ದಯಪಾಲಿಸುವವನು.

೯೪೭) ಜನಜನ್ಮಾದಿಃ

ಜೀವದ ಹುಟ್ಟಿಗೆ ಮೂಲ ಕಾರಣ ಭಗವಂತ-ಜನಜನ್ಮಾದಿಃ. ಪ್ರತಿಯೊಂದು ಜೀವಕ್ಕೆ ಒಂದು ಜನ್ಮವಿದೆ. ಈ ಜನ್ಮಕ್ಕೆ ಆದಿ ಕಾರಣ ಭಗವಂತ. ಜೀವದ ಹುಟ್ಟನ್ನು ಸ್ವೀಕಾರಮಾಡಿ ಮುಂದೆ ಹುಟ್ಟಿಲ್ಲದ ಮೋಕ್ಷವನ್ನು ಕರುಣಿಸುವ ಭಗವಂತ ಜನಜನ್ಮಾದಿಃ.

೯೪೮) ಭೀಮಃ

ತಪ್ಪು ಮಾಡಿದವರಿಗೆ ಭಯಂಕರ ಹಾಗೂ ಸಜ್ಜನರಿಗೆ ಅಭಯಂಕರನಾದ ಭಗವಂತ ಭೀಮಃ

೯೪೯) ಭೀಮಪರಾಕ್ರಮಃ

ಭಗವಂತನ ಪೌರುಷಕ್ಕೆ ಸಾಟಿ ಇಲ್ಲ. ಭಯ ಬರಿಸುವ ಪೌರುಷವುಳ್ಳ, ಸಜ್ಜನರಿಗೆ ಅಭಯಪ್ರದನಾದ ಭಗವಂತ ಭೀಮಪರಾಕ್ರಮಃ

ಆಧಾರನಿಲಯೋಧಾತಾ ಪುಷ್ಪಹಾಸಃ ಪ್ರಜಾಗರಃ ।
ಊರ್ಧ್ವಗಸ್ಸತ್ಪಥಾಚಾರಃ ಪ್ರಾಣದಃ ಪ್ರಣವಃ ಪಣಃ ॥೧೧೫॥

೯೫೦) ಆಧಾರನಿಲಯಃ

ಇಡೀ ಜಗತ್ತಿನ ಆಧಾರ ಭಗವಂತ. ಆತ ಜಗತ್ತಿಗೆ ಶಾಶ್ವತ ನೆಲೆಕೂಡಾ ಹೌದು.

೯೫೧) ಧಾತಾ(ಅಧಾತಾ)

ಜಗತ್ತನ್ನು ಧರಿಸಿ ಪೋಷಣೆ ಮಾಡುವ ಭಗವಂತ ಧಾತಾ. ಸಂಸಾರದಲ್ಲಿ ಜೀವರನ್ನು ಧರಿಸಿ, ಮುಕ್ತಿಯಲ್ಲಿ ಪೋಷಿಸುವ ಭಗವಂತ ಅಧಾತ ಕೂಡಾ ಹೌದು. ಏಕೆಂದರೆ ಆತನನ್ನು ಧರಿಸಿದ ಇನ್ನೊಂದು ಶಕ್ತಿ ಇಲ್ಲ. ತಾನೇ ತಾನಾಗಿ ನಿಂತು ವಿಶ್ವಧಾರಣೆ ಮಾಡಿದ ಭಗವಂತ ಅಧಾತ.

೯೫೨) ಪುಷ್ಪಹಾಸಃ

ಈ ನಾಮವನ್ನು ಕೇಳಿದ ತಕ್ಷಣ ಹೊಳೆಯುವುದು 'ಹೂವಿನಂತಹ ನಗುಮೊಗದವನು' ಎನ್ನುವ ಅರ್ಥ. ಭಗವಂತನ ಮುಖದಲ್ಲಿ ಸದಾ ತುಂಬಿದ ಮಂದಹಾಸವಿರುತ್ತದೆ. ನೋಡಿದವರ ಹೃದಯವನ್ನು ಸೂರೆಗೊಳ್ಳುವ ಚೆಲುನಗು ಆತನದು. ಭಗವಂತನ ಮೊಗದಲ್ಲಿ ನಗುವಿರದ ಕ್ಷಣವಿಲ್ಲ. ಮಹಾಭಾರತದ ಘೋರಯುದ್ಧದ ಮೊದಲು ಅರ್ಜುನ ಕುಸಿದುಬಿದ್ದಾಗಲೂ ಸಹ ಕೃಷ್ಣ ನಗುತ್ತಿದ್ದ! ಆತನ ನಗು ಎಲ್ಲರನ್ನೂ ಮರುಳುಗೊಳಿಸುವ, ನಮ್ಮನ್ನು ಪರಿಪುಷ್ಟರನ್ನಾಗಿ ಮಾಡುವ ಮಾಂಗಲಿಕ ನಗು. ಇಂತಹ ನಗುವಿನ ಮೂರ್ತಿಯನ್ನು ನಮ್ಮ ಧ್ಯಾನದಲ್ಲಿ ಕಾಣುವ ಪ್ರಯತ್ನಮಾಡಬೇಕು.

೯೫೩) ಪ್ರಜಾಗರಃ

ಭಕ್ತ ಜನರ ಭಕ್ತಿಯ ಕರೆಗೆ ಸದಾ ಎಚ್ಚರದಲ್ಲಿದ್ದು ಕಾಯುವ ಭಗವಂತ ಎಂದೂ ನಿದ್ರಿಸುವುದಿಲ್ಲ. ಆತನ ನಿದ್ರೆ ಎಂದರೆ ಕೇವಲ ಯೋಗನಿದ್ರೆ. ಸೃಷ್ಟಿ-ಸ್ಥಿತಿಯಲ್ಲಿ ಜನರಕ್ಷಕನಾಗಿದ್ದು, ಪ್ರಳಯ ಕಾಲದಲ್ಲಿ ಪ್ರಜಾ 'ಗರಣ' ಮಾಡುವ ಭಗವಂತ ಮೋಕ್ಷಪ್ರದ.

೯೫೪) ಊರ್ಧ್ವಗಃ

ಭಗವಂತ ಎಲ್ಲಕ್ಕಿಂತ ಮೇಲಿರುವವನು. ಗೀತೆಯಲ್ಲಿ ಹೇಳುವಂತೆ:

ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।
ಛನ್ದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ಅ-೧೫, ಶ್ಲೋ-೧॥

ಸಂಸಾರ ವೃಕ್ಷದ ಬುಡ ಭಗವಂತ. ಆತ ಸದಾ ಉನ್ನತಿಯಲ್ಲಿರುತ್ತಾನೆ.ನಾವು ಎತ್ತರಕ್ಕೇರಿದಾಗ(ಮುಕ್ತಿ), ಅಲ್ಲಿಯೂ ಕೂಡಾ ಆತ ಎತ್ತರದಲ್ಲಿದ್ದು ನಮ್ಮನ್ನು ಪೋಷಿಸುತ್ತಾನೆ. ಇಂತಹ ಭಗವಂತ. ಊರ್ಧ್ವಗಃ.

೯೫೫) ಸತ್ಪಥಾಚಾರಃ

ಸತ್+ಪಥ ಎಂದರೆ ಪ್ರಾಚೀನ ಸಂಸ್ಕೃತದಲ್ಲಿ 'ನಕ್ಷತ್ರ-ಪಥ'. ನಕ್ಷತ್ರ ಪಥದಲ್ಲಿ ನೆಲೆಸಿದವನು, ನಕ್ಷತ್ರಪಥದ ಕೇಂದ್ರಬಿಂದು ಭಗವಂತ ಸತ್ಪಥಾಚಾರಃ. ಧ್ರುವ ನಕ್ಷತ್ರದಲ್ಲಿ ನೆಲೆಸಿರುವ ಶಿಂಶುಮಾರ ನಾಮಕ ಭಗವಂತ ನಕ್ಷತ್ರ ಪಥದ ಕೇಂದ್ರ.

'ಸತ್ಪಥ' ಎಂದರೆ ಸಜ್ಜನರು ನಡೆಯುವ ದಾರಿ. ಇಂತಹ ಸತ್ಪಥದ ನಡೆಯನ್ನು ನಡೆಸುವ ಭಗವಂತ ಸತ್ಪಥಾಚಾರಃ.

೯೫೬) ಪ್ರಾಣದಃ

ನಿಷ್ಕ್ರೀಯವಾದ ಜಡ ಪ್ರಪಂಚಕ್ಕೆ ಚಲನೆ ಕೊಟ್ಟ ಭಗವಂತ ಪ್ರಾಣದಃ. ಆತ ಈ ಜಗತ್ತಿನ ಸಮಸ್ತ ಚಲನೆಯ ಮೂಲಶಕ್ತಿ. "ಅಗ್ನಿಮೀಳೇ ಪುರೋಹಿತಂ" ಸ್ವತಃ ಚಲಿಸಲಾಗದ ಪ್ರಪಂಚಕ್ಕೆ ಚಲನೆ ಕೊಡುವ ಶಕ್ತಿ ಭಗವಂತ ಪ್ರಾಣದಃ.

೯೫೭) ಪ್ರಣವಃ

ಸರ್ವ ಶಬ್ದಗಳಿಂದ ಸ್ತುತಿಸಲ್ಪಡುವವನು. ಮೂರು ಅವಸ್ಥೆಗಳಲ್ಲಿ(ಎಚ್ಚರ, ಕನಸು ಹಾಗೂ ನಿದ್ದೆ), ಮೂರು ರೀತಿಯ ಅನುಭೂತಿಯನ್ನು ಕೊಡುವ ಓಂಕಾರ ವಾಚ್ಯ ಭಗವಂತ ಪ್ರಣವಃ.

೯೫೮) ಪಣಃ

ಜಗತ್ತಿನ ಸಮಸ್ತ ವ್ಯವಹಾರವನ್ನು ನಡೆಸುವವನು ಹಾಗೂ ಸಮಸ್ತ ಶಾಸ್ತ್ರಗಳಿಂದ ಸ್ತುತಿಸಲ್ಪಡುವ ಭಗವಂತ ಪಣಃ.

ಪ್ರಮಾಣಂ ಪ್ರಾಣನಿಲಯಃ ಪ್ರಾಣಭೃತ್ ಪ್ರಾಣಜೀವನಃ ।
ತತ್ತ್ವಂ ತತ್ತ್ವವಿದೇಕಾತ್ಮಾ ಜನ್ಮಮೃತ್ಯುಜರಾತಿಗಃ ॥೧೧೬॥

೯೫೯) ಪ್ರಮಾಣಮ್

ಭಗವಂತ ಸರ್ವ ಪ್ರಮಾಣಗಳ ನೆಲೆ. ಎಲ್ಲವನ್ನೂ ಹುಟ್ಟಿಸುವವನು, ಎಲ್ಲವನ್ನೂ ಮುಗಿಸುವವನು ಆದ, ಎಲ್ಲಾ ಯಥಾರ್ಥಜ್ಞಾನದ ಕಡಲಾದ ಭಗವಂತ ಪ್ರಮಾಣಮ್. ನಚಿಕೇತನಿಗೆ ಯಮ- ಎಲ್ಲಾ ಪ್ರಶ್ನೆಗಳಿಗೆ ಉತ್ತರವಿರುವ, ಪ್ರಪಂಚದ ಸಾರ ಸಂಗ್ರಹವಾದ ಬೀಜಾಕ್ಷರವನ್ನು ಹೇಳುವಾಗ ಭಗವಂತನನ್ನು ಕುರಿತು ಈ ರೀತಿ ಹೇಳುತ್ತಾನೆ:

ಸರ್ವೇ ವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ್ ॥೧-೨-೧೫॥

ಅಂದರೆ " ಸಮಸ್ತ ವೇದದ ಸಮಸ್ತ ಮಂತ್ರ, ವೇದದ ಪ್ರತಿಯೊಂದು ವಾಕ್ಯ, ಪ್ರತಿಯೊಂದು ಶಬ್ದ, ಈ ಪ್ರಪಂಚದಲ್ಲಿರುವ ಪ್ರತಿಯೊಂದು ನಾದ ಅಂತತಃ ಭಗವಂತನನ್ನು ಹೇಳುತ್ತದೆ. ಸರ್ವ ತಪಗಳು(ಆಲೋಚನೆಗಳು), ಭಗವಂತನನ್ನೇ ಹೇಳುತ್ತವೆ. ಇಂತಹ ಭಗವಂತನ ಅರಿವು ಬಂದಾಗ ಈ ಪ್ರಪಂಚದಲ್ಲಿರುವ ಪ್ರತಿಯೊಂದು ತರ್ಕಗಳು ಆ ಭಗವಂತನನ್ನೇ ಪ್ರಮಾಣಿಕರಿಸುತ್ತವೆ".

೯೬೦) ಪ್ರಾಣನಿಲಯಃ.

ಭಗವಂತ ಇರುವುದು ಪ್ರಾಣತತ್ವದಲ್ಲಿ. ಭಗವಂತನನ್ನು ಅರಿಯಬೇಕಾದರೆ ಮೊದಲು ಪ್ರಾಣತತ್ವದ ಅರಿವು ಬೇಕು. ನಮಗೆ ಉಸಿರಾಡಿಸುವ ಪ್ರಾಣದೇವರೊಳಗೂ ಭಗವಂತನಿದ್ದಾನೆ. ಆತ ಪ್ರಾಣನಿಲಯಃ.

೯೬೧) ಪ್ರಾಣಭೃತ್

ನಮ್ಮನ್ನು ಧರಿಸಿದವನು ಪ್ರಾಣನಾದರೆ, ಪ್ರಾಣದೇವರನ್ನು ಧರಿಸಿದವನು ಭಗವಂತ. ಆತ ಪ್ರಾಣಭೃತ್.

೯೬೨) ಪ್ರಾಣಜೀವನಃ

ಪ್ರಾಣಶಕ್ತಿಯ ಮೂಲಕ ನಮಗೆಲ್ಲಾ ಬದುಕು ಕೊಟ್ಟವ, ಪ್ರಾಣ ದೇವರಿಗೂ ಕೂಡಾ ಬದುಕು ಕೊಟ್ಟವ ಭಗವಂತ. ಪ್ರಾಣ ದೇವರು ನಮ್ಮನ್ನು ಉಸಿರಾಡಿಸಿದರೆ, ಪ್ರಾಣದೇವರನ್ನು ಉಸಿರಾಡಿಸುವವನು ಪ್ರಾಣಜೀವನಃ ನಾಮಕ ಭಗವಂತ.

೯೭೩) ತತ್ವಮ್

ಭಗವಂತ ತತವಾದ 'ವಾ'. ವಾ ಎಂದರೆ ವಿಜ್ಞಾನ. ಭಗವಂತ ಜ್ಞಾನದ ಕಡಲು. ಅಂತಹ ಭಗವಂತನನ್ನು ಹುಡುಕಿ ಅನುಭವಿಸಬೇಕು. ಅದು ಕಣ್ಣಿಗೆ ಕಾಣುವ ವಸ್ತುವಲ್ಲ. ಅಪರಂಪಾರವಾದ ಜ್ಞಾನದ ಕಡಲನ್ನು ನಾವು ಸ್ವರೂಪಭೂತವಾಗಿ ಅನುಭವಿಸಬೇಕು.

೯೭೪) ತತ್ವವಿತ್

ಜ್ಞಾನದ ಕಡಲಾದ ಭಗವಂತನನ್ನು ಸಂಪೂರ್ಣ ತಿಳಿದವರಿಲ್ಲ. ಅದನ್ನು ಸಂಪೂರ್ಣ ಬಲ್ಲವನು ಅವನೊಬ್ಬನೇ. ತನ್ನ ಸ್ವರೂಪವನ್ನು ತಾನೊಬ್ಬನೇ ಬಲ್ಲ ಭಗವಂತ ತತ್ವವಿತ್.

೯೭೫) ಏಕಾತ್ಮಾ

ಭಗವಂತನೊಬ್ಬನೇ ಆತ್ಮ ಶಬ್ದವಾಚ್ಯ. ಸರ್ವ ಆತ್ಮಗಳ ಪ್ರಧಾನ. ಅನಂತ ಸುಖವನ್ನು ಕೊಡಬಲ್ಲ, ಜ್ಞಾನಾನಂದಮಯವಾದ ಏಕೈಕ ತತ್ವ ಭಗವಂತ ಏಕಾತ್ಮಾ.

೯೭೬) ಜನ್ಮಮೃತ್ಯುಜರಾತಿಗಃ

ಜನ್ಮ-ಮೃತ್ಯು-ಷಡಾತ್ಮಗಳನ್ನು ದಾಟಿದವನು. ಇಲ್ಲಿ ಜರಾ ಷಡಾತ್ಮವನ್ನು ಸೂಚಿಸುತ್ತದೆ. ಅವುಗಳೆಂದರೆ ಮೋಹ , ಶೋಕ, ಕ್ಷುತ್(ಹಸಿವು), ಪಿಪಾಸು(ಬಾಯಾರಿಕೆ) , ಜರ(ಅಜ್ಞಾನ) ಮತ್ತು ವ್ಯಾಧಿ. ಭಗವಂತ ಇವುಗಳೆಲ್ಲವುದರ ಆಚೆಗಿರುವವನು ಹಾಗೂ ನಮ್ಮನ್ನು ಇದರಿಂದ ಪಾರುಮಾಡುವವನು. ನಮ್ಮೊಳಗೆ ಇರುವ ಭಗವಂತನಿಗೆ ಎಂದೂ ಇದರ ಲೇಪವಿಲ್ಲ. ಆತ ಸರ್ವವನ್ನೂ ಮೀರಿನಿಂತ ಜನ್ಮಮೃತ್ಯುಜರಾತಿಗಃ.

ಭೂರ್ಭುವಃಸ್ವಸ್ತರುಸ್ತಾರಃ ಸವಿತಾ ಪ್ರಪಿತಾಮಹಃ ।
ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂಗೋ ಯಜ್ಞವಾಹನಃ ॥೧೦೭॥

೯೭೭) ಭೂರ್ಭುವಃಸ್ವಸ್ತರುಃ

ಭೂಃ+ಭುವಃ+ಸುವಃ+ಸ್ತರುಃ; ಈ ನಾಮವನ್ನು ನಾಲ್ಕು ನಾಮವಾಗಿ ಕಾಣಬಹುದು. ಭೂಮಿ,ಆಕಾಶ ಹಾಗೂ ಸ್ವರ್ಗದಲ್ಲಿ ತುಂಬಿ ನಿಂತಿರುವ ಭಗವಂತನ ವಿಶ್ವರೂಪದ ವಿರಾಟ ಸ್ವರೂಪದ ಕಲ್ಪನೆಯನ್ನು ಈ ನಾಮ ಕೊಡುತ್ತದೆ. ಭೂಮಿ ಆಕಾಶ ಹಾಗೂ ಸ್ವರ್ಗದಲ್ಲಿ ತುಂಬಿರುವ, ಜ್ಞಾನಾನಂದದಿಂದ ಪರಿಪೂರ್ಣನಾದ ಭಗವಂತ ನಮ್ಮನ್ನು ಸಂಸಾರ ಸಾಗರದಿಂದ ಪಾರು ಮಾಡುವವನು.

೯೭೮) ತಾರಃ

ಎಲ್ಲರನ್ನೂ ಸಂಸಾರ ದುಃಖದಿಂದ, ಸಮಸ್ಯೆಯಿಂದ ಪಾರುಮಾಡುವ, ಸಂಸಾರದಿಂದ ದಾಟಿಸಿ ನಮಗೆ ಸಂಪೂರ್ಣವಾದ ಸ್ವರೂಪಾನಂದವನ್ನು ಕೊಡುವ ಭಗವಂತ ತಾರಃ.

೯೭೯) ಸವಿತಾ

ಜಗತ್ತಿನ ಜನಕ ಭಗವಂತ ಸವಿತಾ. ಸೂರ್ಯನಾರಾಯಣನಲ್ಲಿ ಸನ್ನಿಹಿತನಾಗಿರುವ ಗಾಯತ್ರಿ ಪ್ರತಿಪಾದ್ಯ ಭಗವಂತ ಈ ಜಗತ್ತನ್ನು ಹೆತ್ತ ತಂದೆ. ಈ ಲೋಕದ ತಂದೆ-ತಾಯಿಯೂ ಅವನೇ .

೯೮೦) ಪ್ರಪಿತಾಮಹಃ

ಎಲ್ಲರಿಗೂ ಮೂಲ ಕಾರಣನಾದ ಭಗವಂತ ಜಗದ ಮುತ್ತಜ್ಜ.

೯೭೧) ಯಜ್ಞಃ

ಜ್ಞಾನರೂಪಿಯಾಗಿ ಎಲ್ಲೆಡೆ ಇರುವ ಭಗವಂತ, ಎಲ್ಲಾ ಕ್ರಿಯೆಗಳಿಂದ ಎಲ್ಲರೂ ಆರಾಧಿಸಬೇಕಾದ, ಯಜ್ಞದ ಅಂತರ್ಯಾಮಿ.

೯೭೨) ಯಜ್ಞಪತಿಃ

ಯಜ್ಞಗಳ ಸ್ವಾಮಿ ಹಾಗೂ ಪಾಲಕ ಭಗವಂತ ಯಜ್ಞಪತಿಃ. ಯಜ್ಞವನ್ನು ಸ್ವೀಕರಿಸಿ ಫಲ ಕೊಡುವವನು.

೯೭೩) ಯಜ್ವಾ

ನಮ್ಮಿಂದ ಯಜ್ಞ ಮಾಡಿಸುವ ಭಗವಂತ ಯಜ್ವಾ. ಯಜ್ಞ ಮಾಡುವ ಯಜಮಾನನೊಳಗೆ ಅಂತರ್ಯಾಮಿಯಾಗಿದ್ದು ಯಜ್ಞ ಮಾಡಿಸುವವನೂ ಅವನೇ!

೯೭೪) ಯಜ್ಞಾಂಗಃ

ಯಜ್ಞದಲ್ಲಿ ಬಳಸುವ ಹವಿಸ್ಸುಗಳನ್ನು ತನ್ನ ಅಂಗಗಳಿಂದ ಸೃಷ್ಟಿಸಿದ ಭಗವಂತ ಯಜ್ಞಾಂಗಃ.

೯೭೫) ಯಜ್ಞವಾಹನಃ

ಯಜ್ಞವನ್ನು ವಾಹನವಾಗಿಸಿಕೊಂಡು ಬರುವವ. ಎಲ್ಲಿ ಯಜ್ಞ ನೆಡೆಯುತ್ತಿರುತ್ತದೋ ಅಲ್ಲಿ ಭಗವಂತನ ವಿಶೇಷ ಸನ್ನಿಧಾನವಿರುತ್ತದೆ. ಇಲ್ಲಿ ಯಜ್ಞ ಅಂದರೆ ಅಗ್ನಿ ಮುಖೇನ ಮಾಡುವ ಯಜ್ಞ ಮಾತ್ರವಲ್ಲ, ಜ್ಞಾನಯಜ್ಞ ಕೂಡಾ ಒಂದು ವಿಶಿಷ್ಟವಾದ ಯಜ್ಞ.

ಯಜ್ಞಭೃದ್ಯಜ್ಞಕೃದ್ಯಜ್ಞೀ ಯಜ್ಞಭುಗ್ಯಜ್ಞಸಾಧನಃ ।
ಯಜ್ಞಾಂತಕೃದ್ಯಜ್ಞಗುಹ್ಯಮನ್ನಮನ್ನಾದ ಏವ ಚ ॥೧೧೮॥

೯೭೬) ಯಜ್ಞಭೃತ್

ಯಜ್ಞವನ್ನು ಹಾಗೂ ಯಜ್ಞಾಭಿಮಾನಿ ದೇವತೆಯನ್ನು ಧಾರಣೆ ಮಾಡಿದ ಭಗವಂತ ಯಜ್ಞಭೃತ್. ಭಗವಂತ ಯಜ್ಞ ಪಾಲಕ, ಇಂದ್ರ ಹಾಗೂ ಇಂದ್ರಪುತ್ರ (ಜಯಂತ ಅಥವಾ ಯಜ್ಞ)ನ ಪಾಲಕ.

೯೭೭) ಯಜ್ಞಕೃತ್

ಇಲ್ಲಿ 'ಕೃತ್' ಎಂದರೆ ಮಾಡಗೊಡುವವನು ಎನ್ನುವುದು ಒಂದು ಅರ್ಥವಾದರೆ, ಇನ್ನೊಂದು ಅರ್ಥದಲ್ಲಿ 'ಮಾಡದಂತೆ ಮಾಡುವವನು'; ಯಜ್ಞವನ್ನು ಮಾಡಗೊಡುವವನೂ ಭಗವಂತ, ಯಜ್ಞ ಮಾಡದಂತೆ ಮಾಡುವವನೂ ಅವನೇ!

೯೭೮) ಯಜ್ಞೀ

ಯಜ್ಞಉಳ್ಳವನು, ಯಜ್ಞಗಳ ಒಡೆಯ. ಯಜ್ಞದ ಎಲ್ಲಾ ಹೊಣೆಗಾರಿಕೆ, ಅದರ ಸ್ವಾತಂತ್ರ್ಯ, ಫಲವನ್ನು ಕೊಡುವವನು, ಯಜ್ಞವನ್ನು ಸ್ವೀಕರಿಸುವವನು, ನಮ್ಮ ಒಳಗೆ-ಹೊರಗೆ ಇದ್ದು ಯಜ್ಞದ ಒಂದೊಂದು ಕ್ರಿಯೆಯಲ್ಲಿ ತುಂಬಿ ಯಜ್ಞವನ್ನು ನಿರ್ವಹಣೆ ಮಾಡುವ ಭಗವಂತ ಯಜ್ಞೀ.

೯೭೯) ಯಜ್ಞಭುಕ್

ಹಿಂದೆ ಹೇಳಿದಂತೆ ಯಜ್ಞದಲ್ಲಿ ಯಾವ ಆಹುತಿಯನ್ನು ಯಾವ ದೇವತೆಯ ಹೆಸರಿನಲ್ಲಿ ಅರ್ಪಿಸಿದರೂ ಅದು ಮೊದಲು ಸೇರುವುದು ಭಗವಂತನನ್ನು. ಗೀತೆಯಲ್ಲಿ ಹೇಳಿದಂತೆ :

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥ಅ-೯, ಶ್ಲೋ-೨೪॥

ಯಜ್ಞದಲ್ಲಿ ಅರ್ಪಿಸುವ ಸರ್ವ ಹವಿಸ್ಸು ಭಗವಂತನ ಮುಖೇನವೇ ಇತರ ದೇವತೆಗಳನ್ನು ಸೇರುವುದು. ಆತ ಯಜ್ಞ ಪಾಲಕ; ಸರ್ವ ಯಜ್ಞ ಭೋಕ್ತಾರ. ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ. ನಾವು ಏನು ಮಾಡಿದರೂ ಅದು ನಾರಾಯಣನಿಗೆ ಅರ್ಪಿತ.

೯೮೦) ಯಜ್ಞಸಾಧನಃ

ನಿಯಮಿತವಾದ ಯಜ್ಞದಲ್ಲಿ ಒಟ್ಟು ಹದಿನೆಂಟು ಮಂದಿ ಸೇರಿ ಯಜ್ಞ ಮಾಡುತ್ತಾರೆ. ನಾಲ್ಕು ಮಂದಿ ಋಗ್ವೇದದವರು, ನಾಲ್ಕು ಮಂದಿ ಯಜುರ್ವೇದದವರು. ನಾಲ್ಕು ಮಂದಿ ಸಾಮ ವೇದದವರು, ಬ್ರಹ್ಮತ್ತ್ವಕ್ಕೆ ಒಬ್ಬ ಮುಖ್ಯಸ್ತ ಹಾಗೂ ಆತನಿಗೆ ಮೂರು ಮಂದಿ ಸಹಾಯಕರು. ಇನ್ನು ಯಜ್ಞ ಮಾಡಿಸುವ ಯಜಮಾನ ಹಾಗೂ ಆತನ ಪತ್ನಿ. ಒಟ್ಟಿಗೆ ಹದಿನೆಂಟು ಮಂದಿ. ಇಲ್ಲಿ ಬ್ರಹ್ಮತ್ತ್ವ ವಹಿಸಿರುವವನು ಯಾವ ಮಂತ್ರವನ್ನೂ ಹೇಳುವುದಿಲ್ಲ, ಆದರೆ ಯಜ್ಞದ ವಿಧಿ-ವಿಧಾನದಲ್ಲಿ ಯಾವುದೇ ಲೋಪವಾದರೂ ಸಹ ಆತ ಜವಾಬ್ದಾರ.

ಹಿಂದೆ ಪ್ರಮುಖವಾಗಿ ಎರಡು ವಿಧದ ಯಾಗ ಮಾಡುತ್ತಿದ್ದರು. ಒಂದು ಶುದ್ಧ ಶಾಖಾಹಾರಿಗಳ ಯಾಗ ಹಾಗೂ ಇನ್ನೊಂದು ಮಾಂಸಾಹಾರಿಗಳು ಮಾಡುವ ಯಾಗ. ಆಗಿನ ಕಾಲದಲ್ಲಿ ಪ್ರಮುಖವಾಗಿ ಯಾಗ ಮಾಡುತ್ತಿದ್ದವರು ಕ್ಷತ್ರಿಯರು. ಅವರು ಮಾಂಸಹಾರಿಗಳಾಗಿದ್ದರು. ನಾವು ಏನು ತಿನ್ನುತ್ತೆವೋ ಅದನ್ನು ದೇವರಿಗೆ ಅರ್ಪಿಸಿ ಯಜ್ಞಶೇಷವೆಂದು ತಿನ್ನುವುದು ಪ್ರಾಚೀನ ಸಂಪ್ರದಾಯವಾಗಿತ್ತು. ಕ್ಷತ್ರಿಯರು ಯಾಗದಲ್ಲಿ ಹದಿನೆಂಟು ಬಗೆಯ ಪ್ರಾಣಿಗಳನ್ನು (ಒಂಬತ್ತು ಸಾಕು ಪ್ರಾಣಿ ಹಾಗೂ ಒಂಬತ್ತು ಕಾಡು ಪ್ರಾಣಿ) ಭಗವಂತನಿಗೆ ಬಲಿಯಾಗಿ ಅರ್ಪಿಸಿ ಯಾಗ ಮಾಡುತ್ತಿದ್ದರು.

ಭಗವಂತ, ಯಜ್ಞ ಮಾಡುವವರಲ್ಲಿರುವವನೂ ಅವನೇ, ಹವಿಸ್ಸಿನಲ್ಲಿರುವವನೂ ಅವನೇ, ಯಜ್ಞವನ್ನು ಸ್ವೀಕಾರ ಮಾಡುವವನೂ ಅವನೇ. ಇಂತಹ ಭಗವಂತ ಯಜ್ಞ ಸಾಧನಃ.

೯೮೧) ಯಜ್ಞಾಂತಕೃತ್

ಯಾವುದು ನಿಜವಾದ ಯಜ್ಞ, ಯಾವುದು ತಪ್ಪು, ಯಾವುದು ಸರಿ, ಯಾವುದು ಯಜ್ಞವಲ್ಲ ಎಂದು ಕೊನೆಯದಾಗಿ ನಿರ್ಧರಿಸುವವನು ಭಗವಂತ. ಆತ ಮೆಚ್ಚದ ಯಾವುದೇ ಪೂಜೆ ಯಜ್ಞವಾಗದು. ಧರ್ಮಕ್ಕೆ ಚ್ಯುತಿಬರುವಂತಹ, ಸ್ವಾರ್ಥದಿಂದ, ಅಹಂಕಾರದಿಂದ ಮಾಡುವ ಯಜ್ಞವನ್ನು ಆತ ಸ್ವೀಕರಿಸದೇ ಧ್ವಂಸ ಮಾಡುತ್ತಾನೆ. ಇದಕ್ಕೆ ಉತ್ತಮ ಉದಾಹರಣೆ ದಕ್ಷಯಜ್ಞ. ದಕ್ಷ ನಿಯಮಿತವಾಗಿ ಯಜ್ಞ ಪ್ರಾರಂಭಿಸಿದ. ಆದರೆ ಅಹಂಕಾರದಿಂದ ಶಿವನನ್ನು ಅಪಮಾನ ಮಾಡಿದ. ಇಂತಹ ಅಹಂಕಾರಭರಿತ ಯಜ್ಞವನ್ನು ಭಗವಂತ ಸ್ವೀಕರಿಸದೇ ವೀರಭದ್ರನ ಮುಖೇನ ಸಂಪೂರ್ಣ ಧ್ವಂಸ ಮಾಡಿದ. ಹಿಂದೆ ಹೇಳಿದಂತೆ ಶಿವಶಕ್ತಿ-ವಿಷ್ಣುಶಕ್ತಿ ಹಾಲಿನಲ್ಲಿರುವ ಬೆಣ್ಣೆಯಂತೆ. ಇಲ್ಲಿ ನಾವು ಅಪಮಾನವಾಗುವಂತೆ ವರ್ತಿಸಿದರೆ ಅದನ್ನು ಭಗವಂತ ಎಂದೂ ಮೆಚ್ಚುವುದಿಲ್ಲ.

ಭಗವಂತನಿಗೆ ಅರ್ಪಿಸಿ ಮಾಡುವ ಪ್ರತಿಯೊಂದು ಕೆಲಸವೂ ಯಜ್ಞ. ಅಹಂಕಾರದಿಂದ ಮಾಡುವ ಯಾವ ಯಜ್ಞವೂ ಯಜ್ಞವಲ್ಲ. ಹೀಗೆ ಯಜ್ಞದ ಅಂತ್ಯವನ್ನು ನಿರ್ಧರಿಸುವ ಭಗವಂತ ಯಜ್ಞಾಂತಕೃತ್.

೯೮೨) ಯಜ್ಞಗುಹ್ಯಮ್

ಜಗತ್ತಿನಲ್ಲಿ ನಡೆಯುವ ಎಲ್ಲಾ ಯಜ್ಞದ ರಹಸ್ಯ ತಿಳಿದ, ಯಜ್ಞದಲ್ಲಿ ನಿಗೂಢವಾಗಿ ತುಂಬಿರುವ ಭಗವಂತ ಯಜ್ಞಗುಹ್ಯಮ್.

೯೮೩) ಅನ್ನಮ್

ಅನ್ನಮ್ ಅಂದರೆ ಭೋಜ್ಯ. ತೈತ್ತಿರೀಯ ಉಪನಿಷತ್ತಿನಲ್ಲಿ(ಭೃಗುವಲ್ಲಿ-ಹತ್ತನೆಯ ಅನುವಾಕ) ಬರುವ ಈ ಶ್ಲೋಕ ಈ ನಾಮವನ್ನು ಹಾಗೂ ಮುಂದಿನ ನಾಮವನ್ನು ಸ್ಪಷ್ಟವಾಗಿ ಹೇಳುತ್ತದೆ.

ಅಹಮನ್ನಮಹಮನ್ನಮಹಮನ್ನಮ್ ।
ಅಹಮನ್ನಾದೋಽಹಮನ್ನಾದೋಽಹಮನ್ನಾದಃ ॥

"ನಾನೇ ಅನ್ನ ನಾನೇ ಅನ್ನಾದ"; ಭೋಜ್ಯವಾಗಿ ಈ ಪ್ರಪಂಚದಲ್ಲಿ ತುಂಬಿರುವ ಸಮಸ್ತ ವಸ್ತುಗಳ ಒಳಗೆ ಚೈತನ್ಯವಾಗಿ ತುಂಬಿರುವ ಭಗವಂತ ಅನ್ನಮ್. ಅನ್ನದ ಅಭಿಮಾನಿ ದೇವತೆಯಾದ ಚತುರ್ಮುಖನಲ್ಲಿ ಸನ್ನಿಹಿತನಾಗಿರುವ ಭಗವಂತ ಅನ್ನಮ್.

೯೮೪) ಅನ್ನಾದ

ಸರ್ವ ಭೋಜ್ಯವನ್ನು ಜೀವದೊಳಗಿದ್ದು ಭೋಗಿಸುವ, ಅನ್ನದ ಅಭಿಮಾನಿ ದೇವತೆ ಚತುರ್ಮುಖನನ್ನೂ ಕೂಡಾ ಮಹಾ ಪ್ರಳಯದಲ್ಲಿ ಕಬಳಿಸುವ ಭಗವಂತ ಅನ್ನಾದ.

ಈ ಶ್ಲೋಕದಲ್ಲಿ ಪರಸ್ಪರ ವಿರುದ್ಧ ಅರ್ಥವನ್ನು ಕೊಡುವ 'ಏವ ಮತ್ತು ಚ' ಎನ್ನುವ ಎರಡು ಅವ್ಯಯಗಳಿವೆ. ಚ ಎಂದರೆ 'ಕೂಡಾ', ಏವ ಎಂದರೆ 'ಅವನದ್ದೇ'. ಅಂದರೆ "ಈ ಎಲ್ಲಾ ಹೆಸರುಗಳೂ ನಿನ್ನವೇ, ಆದರೂ ಕೂಡಾ ಬೇರೆಯವರದ್ದೂ ಹೌದು ಎಂದರ್ಥ". ಏಕೆಂದರೆ ಭಗವಂತನನ್ನು ಹೇಳದ ಶಬ್ದ ಈ ಪ್ರಪಂಚದಲ್ಲಿಲ್ಲ. ಸರ್ವ ಶಬ್ದವೂ ಕೂಡಾ ಮುಖ್ಯವಾಗಿ ಭಗವಂತನನ್ನು ಹೇಳುತ್ತವೆ -ನಂತರ ಇತರರನ್ನು ಹೇಳುತ್ತವೆ.

ಆತ್ಮಯೋನಿಃ ಸ್ವಯಂಜಾತೋ ವೈಖಾನಃ ಸಾಮಗಾಯನಃ ।
ದೇವಕೀನಂದನಃ ಸ್ರಷ್ಟಾ ಕ್ಷಿತೀಶಃ ಪಾಪನಾಶನಃ ॥೧೧೯॥

೯೮೫) ಆತ್ಮಯೋನಿಃ

ಆತ್ಮ ಎನ್ನುವುದಕ್ಕೆ ಅನೇಕ ಅರ್ಥಗಳಿವೆ. ಬೃಹದಾರಣ್ಯಕ ಉಪನಿಷತ್ತಿನಲ್ಲಿ(೨-೪-೫) ಯಾಜ್ಞವಲ್ಕ್ಯ ಹೇಳುವಂತೆ: 'ಆತ್ಮನಸ್ತು ಕಾಮಾಯ ಸರ್ವಮ್ ಪ್ರಿಯಮ್ ಭವತಿ' । "ಆತ್ಮಾ ವಾ ಅರೇ ದ್ರುಷ್ಟವ್ಯಃ-ಶ್ರೋತವ್ಯೋ ,ಮಂತವ್ಯೋ, ನಿದಿಧ್ಯಾಸಿತವ್ಯಃ". ಆತ್ಮ ಶಬ್ದ ಮೇಲ್ನೋಟಕ್ಕೆ ಶರೀರ, ಇನ್ನೂ ಆಳವಾಗಿ ಚಿಂತಿಸಿದರೆ ಮನಸ್ಸು, ಜೀವ, ಜೀವಾಭಿಮಾನಿ ದೇವತೆ ಚತುರ್ಮುಖ, ಗರುಡ-ಶೇಷರು, ಕೊನೆಗೆ ಪರಮಾತ್ಮ. ಪ್ರತಿಯೊಂದು ಜೀವಕ್ಕೆ ದೇಹವೆಂಬ ಮನೆಯನ್ನು ಕೊಟ್ಟು, ಅದರ ಮಧ್ಯದಲ್ಲಿ ಅನಾಹತ ಚಕ್ರವೆಂಬ ಶಕ್ತಿ ಕೇಂದ್ರ ನಿರ್ಮಿಸಿ, ಜೀವನನ್ನು ಅಲ್ಲಿ ಕುಳ್ಳಿರಿಸಿ, ಪ್ರಾಣದೇವರ ಸಮೇತನಾಗಿ ಹೃತ್ಕಮಲ ಮಧ್ಯ ನೆಲೆಸಿ ನಮ್ಮನ್ನು ನಡೆಸುವ ಭಗವಂತ ಆತ್ಮಯೋನಿಃ.

೯೮೬) ಸ್ವಯಂಜಾತಃ

ತಾನೇ ತಾನಾಗಿ ಆವಿರ್ಭೂತನಾಗುವ ಭಗವಂತ ಸ್ವಯಂಜಾತಃ. ಆತನಿಗೆ ಆತನೇ ತಂದೆ-ತಾಯಿ. ಆದರೆ ಭಕ್ತವತ್ಸಲನಾದ ಭಗವಂತನಿಗೆ ಹೆಸರಿಡುವ ತಂದೆ ಮಾತ್ರ ಜ್ಞಾನಿಗಳು ಅಥವಾ ಆತನ ಭಕ್ತರು!

೯೮೭) ವೈಖಾನಃ

ಈ ಸಂಸಾರ ಬಂಧದಿಂದ ಬಿಡುಗಡೆಹೊಂದಿದ 'ವಿಖನಸ'ರಿಗೂ ಕೂಡಾ ಆರಾಧ್ಯನಾದ ಮುಕ್ತಿ ನಿಯಾಮಕ ಭಗವಂತ ವೈಖಾನಃ.

೯೮೮) ಸಾಮಗಾಯನಃ

ಸೃಷ್ಟಿಯ ಆದಿಯಲ್ಲಿ ಎಲ್ಲಾ ವೇದವನ್ನು ಚತುರ್ಮುಖನಿಗೆ ಹೇಳಿದ ಭಗವಂತನಿಗೆ ಸಾಮವೇದವೆಂದರೆ ಬಹಳ ಪ್ರೀತಿ. ಕೃಷ್ಣಾವತಾರದಲ್ಲಿ ತನ್ನ ಕೊಳಲಿನಿಂದ ಸಾಮಗಾನವನ್ನು ನುಡಿಸಿದ ಭಗವಂತ, ಸಾಮಗ(ಸಾಮಗಾನವನ್ನು ಹಾಡುವವ)ರಿಗೆ ಅಯನ(ಆಸರೆ).

೯೮೯) ದೇವಕೀನಂದನಃ

ಕೊಳಲಿನ ನಾದದಿಂದ ಸಾಮವನ್ನು ಹಾಡುವ ಕೃಷ್ಣ ದೇವಕೀನಂದನನಾಗಿ ಅವತರಿಸಿ ಬಂದ ಸೌಂದರ್ಯಮೂರ್ತಿ ಎನ್ನುವುದು ಈ ನಾಮದ ಮೇಲ್ನೋಟದ ಅರ್ಥ. ಇಲ್ಲಿ 'ದೇವ' ಎಂದರೆ ದೇವತೆಗಳು, 'ಕಂ' ಎಂದರೆ ಆನಂದ. ದೇವತೆಗಳಿಗೆ ಆನಂದವನ್ನು ಕೊಡುವ ವೇದವಾಙ್ಮಯ(ದೇವಕೀ)ವನ್ನು ಕೇಳಿ ಕುಣಿದಾಡುವ ಭಗವಂತ, ವೈದಿಕ ಸಾಹಿತ್ಯವೆಂಬ ಗರುಡನನ್ನೇರಿ ನಮ್ಮ ಬಳಿಗೆ ಬರುವ ದೇವಕೀನಂದನಃ.

೯೯೦) ಸ್ರಷ್ಟಾ

ಎಲ್ಲವನ್ನೂ ಸೃಷ್ಟಿಮಾಡಿದ ಭಗವಂತ ಸ್ರಷ್ಟಾ.

೯೯೧) ಕ್ಷಿತೀಶಃ

ಕ್ಷಿತಿ ಎಂದರೆ ಭೂಮಿ, ಅಥವಾ ಸಮಸ್ತ ಬ್ರಹ್ಮಾಂಡ. ಇಂತಹ ಬ್ರಹ್ಮಾಂಡದ ಒಡೆಯ ಭಗವಂತ ಕ್ಷಿತೀಶಃ. ಪ್ರತಿಯೊಂದು ವಸ್ತುವಿನ ಅಳಿವು-ಉಳಿವು ಆತನ ಅಧೀನ. ಪ್ರತಿಯೊಂದು ಕ್ರಿಯೆಯನ್ನು ಮಾಡಿಸುವ ಪ್ರೇರಕ ಭಗವಂತ ಕ್ಷಿತೀಶಃ.

೯೯೨) ಪಾಪನಾಶನಃ

ನಮಗೆ ಪಾಪದ ಲೇಪ ಅಂಟುವುದು 'ನಾನು' ಎನ್ನುವ ಅಹಂಕಾರವಿದ್ದಾಗ ಮಾತ್ರ. ನಾನು ಏನೂ ಅಲ್ಲ, ನನ್ನೊಳಗಿರುವ ಭಗವಂತ ಸರ್ವ ನಿಯಾಮಕ ಎಂದು ಅರಿತಾಗ, ಭಗವಂತ ಸರ್ವ ಪಾಪಗಳನ್ನು ನಾಶ ಮಾಡುತ್ತಾನೆ. ಅಥವಾ ನಮಗೆ ಪಾಪದ ಲೇಪವಿಲ್ಲದಂತೆ ಮಾಡುತ್ತಾನೆ. ಇದೇ ಮಾತನ್ನು ಶ್ರೀಕೃಷ್ಣ ಪಾಪಪ್ರಜ್ಞೆಯಲ್ಲಿ ನಿಂತ ಅರ್ಜುನನಿಗೆ ಯುದ್ಧರಂಗದಲ್ಲಿ ಉಪದೇಶಿಸುತ್ತಾನೆ. ಆ ಕಾರಣಕ್ಕಾಗಿ ಅರ್ಜುನ ಮಾಡಿದ ಯುದ್ಧ ಧರ್ಮವಾಯಿತು, ಅಹಂಕಾರದಿಂದ ಯುದ್ಧ ಮಾಡಿದ ದುರ್ಯೋಧನನಿಗೆ ಯುದ್ಧದ ಸರ್ವ ಪಾಪವು ಅಂಟಿತು. ಹೀಗೆ ಅಹಂಕಾರವಿಲ್ಲದೆ ಭಗವಂತನಲ್ಲಿ ಶರಣಾದ ಭಕ್ತರ ಪಾಪವನ್ನು ಕಳೆದು, ಪಾಪಿಗಳ ಸಂಹಾರ ಮಾಡುವ ಭಗವಂತ ಪಾಪನಾಶನಃ.

ಶಂಖಭೃನ್ನಂದಕೀ ಚಕ್ರೀ ಶಾರ್ಙ್ಗಧನ್ವಾ ಗದಾಧರಃ ।
ರಥಾಂಗಪಾಣಿರಕ್ಷೋಭ್ಯಃ ಸರ್ವಪ್ರಹರಣಾಯುಧಃ ॥೧೨೦ ॥

ನಾಮಶ್ಲೋಕದ ಕೊನೇಯ ಶ್ಲೋಕವಾದ ಈ ಶ್ಲೋಕದಲ್ಲಿ- ದುಷ್ಟಶಕ್ತಿಯ ನಿರ್ನಾಮಕ್ಕಾಗಿ, ಪಾಪಿಗಳ ಸಂಹಾರಕ್ಕಾಗಿ, ಭಗವಂತ ಬಳಸುವ ಆಯುಧಕ್ಕೆ ಸಂಬಂಧಪಟ್ಟ ಹೆಸರುಗಳಿವೆ.

೯೯೩) ಶಂಖಭೃತ್

ಶಂಖ ಬಹಳ ದೊಡ್ಡ ದುಷ್ಟ ಸಂಹಾರಕ ಶಕ್ತಿ. ಹಿಂದಿನ ಕಾಲದಲ್ಲಿ ಬೆಳಿಗ್ಗೆ ಮತ್ತು ಸಂಜೆ ತಪ್ಪದೇ ಮನೆಯಲ್ಲಿ, ಮನೆಯ ಮೂಲೆ-ಮೂಲೆಯಿಂದ, ಅಷ್ಟ ದಿಕ್ಕುಗಳಿಗೂ ಕೇಳುವಂತೆ ಶಂಖನಾದ ಮಾಡುತ್ತಿದ್ದರು. ಇದಕ್ಕೆ ಕಾರಣ: ಶಂಖ ನಾದಕ್ಕೆ ದುಷ್ಟ ಶಕ್ತಿಯ ಎದೆಯೊಡೆಯುವ ಶಕ್ತಿ ಇದೆ. ಶಂಖದ ನಾದ ಎಲ್ಲಿಯವರೆಗೆ ಕೇಳಿಸುತ್ತದೋ, ಅಲ್ಲಿಯ ತನಕ ಯಾವ ದುಷ್ಟ ಶಕ್ತಿಗಳೂ ಸುಳಿಯಲಾರವು. ಇದೇ ಕಾರಣಕ್ಕಾಗಿ ದೇವಸ್ಥಾನಗಳಲ್ಲಿ ಘಂಟಾನಾದವನ್ನು ಮಾಡುತ್ತಾರೆ.

ಘಂಟೆಯನ್ನು ನಿಧಾನವಾಗಿ ಓಂ...ಓಂ ಎನ್ನುವ ನಾದ ಬರುವಂತೆ ಮೆಲ್ಲಗೆ ಹೊಡೆಯಬೇಕು, ಶಂಖವನ್ನು ಓ....ಮ್ ಎನ್ನುವಂತೆ ನಾದ ಮಾಡಬೇಕು. ಯುದ್ಧ ರಂಗದಲ್ಲಿ ಶಂಖನಾದ ಎದುರಿನ ಸೈನ್ಯಕ್ಕೆ ಸಿದ್ಧತೆಯ ಸಂಕೇತ ಹಾಗೂ ತಮ್ಮ ಸೇನೆಗೆ ಸಿದ್ಧವಿರುವಂತೆ ಆಜ್ಞೆ. ಶಂಖದ ಅಭಿಮಾನಿ ದೇವತೆ ಲಕ್ಷ್ಮಿ. ಆಕೆ ಸಂಪತ್ತಿನ ದೇವತೆಯಾದ ವೇದಮಾನಿನಿ. ಈ ಕಾರಣಕ್ಕಾಗಿ ಶಂಖ 'ಅರ್ಥ'ದ ಸಂಕೇತ ಕೂಡಾ ಹೌದು. ಶಂಖವನ್ನು ತೊಟ್ಟ ಭಗವಂತ ಶಂಖಭೃತ್.

೯೯೪) ನಂದಕೀ

ನಂದಕ ಎನ್ನುವ ಖಡ್ಗವನ್ನು ಹಿಡಿದ ಭಗವಂತ ನಂದಕೀ. ಖಡ್ಗದ ಅಭಿಮಾನಿ ದೇವತೆ ರಮೆ(ಭೂ ಮಾತೆ). ನಂದಕ ಎಂದರೆ ಆನಂದ. ದುಷ್ಟ ಶಕ್ತಿಯನ್ನು ಸಂಹಾರ ಮಾಡಿ ನಮಗೆ ಆನಂದ ಕೊಡುವ ಖಡ್ಗ ಹಿಡಿದ ಭಗವಂತ ನಂದಕೀ.

೯೯೫) ಚಕ್ರೀ

ಅಧರ್ಮ ನಾಶಕ್ಕಾಗಿ, ಧರ್ಮ ಸಂಸ್ಥಾಪನೆಗಾಗಿ ಚಕ್ರ ಹಿಡಿದ ಭಗವಂತ ಚಕ್ರೀ. ಚಕ್ರ ಧರ್ಮದ ಸಂಕೇತ. ಚಕ್ರದ ಅಭಿಮಾನಿ ದೇವತೆ ದುರ್ಗೆ.

೯೯೬) ಶಾರ್ಙ್ಗಧನ್ವಾ

ಶಾರ್ಙ್ಗವೆಂಬ ಬಿಲ್ಲನ್ನು ಹೊತ್ತ ಭಗವಂತ ಶಾರ್ಙ್ಗಧನ್ವಾ. ಬಿಲ್ಲಿನ ಅಭಿಮಾನಿ ದೇವತೆ ಬಲ ಸ್ವರೂಪಿ ಪ್ರಾಣದೇವರು. ಶಾರ್ಙ್ಗ ಎಂದರೆ ತುತ್ತ ತುದಿ. ಆಯುಧಗಳಲ್ಲೇ ಅತ್ಯಂತ ಹಿರಿದಾದ ಆಯುದ ಶಾರ್ಙ್ಗ.

೯೯೭) ಗದಾಧರಃ

ಸಂಯಮದ ಸಂಕೇತವಾದ ಗದೆಯನ್ನು ಧರಿಸಿದ ಭಗವಂತ ಗದಾಧರಃ. ಗದೆ ಸ್ವಚ್ಛಂದಕಾಮದ ನಿಯಂತ್ರಣದ ಸಂಕೇತ. ಗದೆಯ ಅಭಿಮಾನಿ ದೇವತೆ 'ಪ್ರಾಣ'.

೯೯೮) ರಥಾಂಗಪಾಣಿಃ

ಮಹಾಭಾರತ ಯುದ್ಧದಲ್ಲಿ ರಥದ ಗಾಲಿಯನ್ನು ಆಯುಧವಾಗಿ ಹಿಡಿದ ಭಗವಂತ ರಥಾಂಗಪಾಣಿಃ. ಇದು ಮಹಾಭಾರತ ಯುದ್ಧದಲ್ಲಿ ಅರ್ಜುನ ಮತ್ತು ಭೀಷ್ಮ ಪಿತಾಮಹರ ನಡುವೆ ಯುದ್ಧ ಪ್ರಾರಂಭವಾದಾಗ ನಡೆದ ಒಂದು ಘಟನೆ. ಅರ್ಜುನ ತನ್ನನ್ನು ಮುದ್ದಿಸಿ ಆಡಿಸಿ ಬೆಳೆಸಿದ ಪಿತಾಮಹನೊಂದಿಗೆ ಮನಸ್ಸಿಲ್ಲದ ಮನಸ್ಸಿನಿಂದ ಯುದ್ಧ ಮಾಡುತ್ತಿರುತ್ತಾನೆ. ಇದನ್ನು ಗಮನಿಸಿದ ಸಾರಥಿ ಕೃಷ್ಣ ಕೋಪಗೊಳ್ಳುತ್ತಾನೆ. ಮಹಾಭಾರತ ಯುದ್ಧದ ಮೊದಲು ತಾನು ಶಸ್ತ್ರ ಹಿಡಿಯುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ್ದ ಕೃಷ್ಣ, ಕೋಪಾವೇಶದಿಂದ ಭೀಷ್ಮನನ್ನು ಸಾಯಿಸಲೆಂಬಂತೆ ರಥದಚಕ್ರವೊಂದನ್ನು ಹಿಡಿದು ಮುಂದೊತ್ತಿ ಬರುತ್ತಾನೆ! ಇದನ್ನು ನೋಡಿದ ಬೀಷ್ಮ ತನ್ನ ಎರಡೂ ಕೈಗಳನ್ನು ಜೋಡಿಸಿ ಹೀಗೆ ಹೇಳುತ್ತಾನೆ: " ಓ ಭಗವಂತ; ನಿನ್ನ ಕೈಯಲ್ಲಿ ಚಕ್ರ ಹಿಡಿಸುತ್ತೇನೆ, ಹಾಗೆ ಯುದ್ಧ ಮಾಡುತ್ತೇನೆ ಎಂದು ನಾನು ಪ್ರತಿಜ್ಞೆ ಮಾಡಿದ್ದೆ. ಚಕ್ರ ಹಿಡಿಯುವುದಿಲ್ಲ ಎಂದಿದ್ದೆ ನೀನು. ಆದರೆ ಈಗ ನನ್ನ ಪ್ರತಿಜ್ಞೆಯನ್ನು ಈಡೇರಿಸಲು ನೀನು ಚಕ್ರ ಹಿಡಿದಿರುವೆ. ನಿನ್ನನ್ನೇ ನೀನು ಮರೆತಿರುವೆ, ಆದರೆ ನಿನ್ನ ಭಕ್ತನನ್ನು ಮರೆತಿಲ್ಲ; ನೀನಲ್ಲದೆ ನಮಗೆ ಗತಿ ಇನ್ನ್ಯಾರು? " ಎಂದು. ಈ ಘಟನೆಯಲ್ಲಿ ಲೋಕಕಲ್ಯಾಣಕ್ಕಾಗಿ ಭಗವಂತನ ಕೋಪ ಮತ್ತು ಅದರ ಹಿಂದಿರುವ ಕರುಣೆ ವ್ಯಕ್ತವಾಗಿದೆ.

ರಥಾಂಗರು ಎಂದರೆ ಪಾಂಡವರು ಅಥವಾ ಧರ್ಮ ಯುದ್ಧ ಮಾಡುವವರು. ಅಂತವರಿಗೆ 'ಆಣಿ' ಅಂದರೆ ಆಧಾರವಾಗಿ ನಿಲ್ಲುವ ಭಗವಂತ ರಥಾಂಗಪಾಣಿಃ.

೯೯೯) ಅಕ್ಷೋಭ್ಯಃ

ಯಾರೂ ಮಣಿಸಲಾಗದ, ಕಂಗೆಡಿಸಲಾಗದ, ಯಾವ ಸಂಧರ್ಭದಲ್ಲೂ ಎದೆಗೆಡದ, ಎಂದೂ ನಿರ್ಧಾರ ಬದಲಿಸದ ಸರ್ವಸಮರ್ಥ ಭಗವಂತ ಅಕ್ಷೋಭ್ಯಃ.

೧೦೦೦) ಸರ್ವಪ್ರಹರಣಾಯುಧಃ

ದುಷ್ಟರ ದಮನಕ್ಕಾಗಿ ಎಲ್ಲಾ ಶಸ್ತ್ರಾಸ್ತ್ರಗಳನ್ನು ಆಯುಧವಾಗಿ ತೊಟ್ಟ ಭಗವಂತ ಸರ್ವಪ್ರಹರಣಾಯುಧಃ.

॥ ಸರ್ವಪ್ರಹರಣಾಯುಧೋಂ ನಮ ಇತಿ ॥

ಎಲ್ಲಾ ಶಸ್ತ್ರಾಸ್ತ್ರಗಳನ್ನು ಆಯುಧವನ್ನಾಗಿ ತೊಟ್ಟವನೇ ಓಂಕಾರವಾಚ್ಯನಾದವನು ಎನ್ನುತ್ತಾ ಇದು ಅವನಿಗೆ ಅರ್ಪಿತವಾಗಿದೆ

# ಫಲಶ್ರುತಿ ವಿವರಣೆ

ವಿಷ್ಣು ಸಹಸ್ರನಾಮ ಪಠಿಸುವುದರ ಮಹತ್ವ ಹಾಗೂ ಅದರ ಉಪಯೋಗವನ್ನು ಇಲ್ಲಿ ವಿವರಿಸಲಾಗಿದೆ:

**ಇತೀದಂ ಕೀರ್ತನೀಯಸ್ಯ ಕೇಶವಸ್ಯ ಮಹಾತ್ಮನಃ ।**

**ನಾಮ್ನಾಂ ಸಹಸ್ರಂ ದಿವ್ಯಾನಾಮಶೇಷೇಣ ಪ್ರಕೀರ್ತಿತಮ್ ॥೧೨೧॥**

ಜಗತ್ತಿನ ಸೃಷ್ಟಿ-ಸ್ಥಿತಿ-ಸಂಹಾರ -ನಿಯಮನಕ್ಕೆ ಕಾರಣನಾದ ಕೇಶವ ನಾಮಕ ಭಗವಂತನನ್ನು ಅವನ ಕೀರ್ತಿಯನ್ನು ಕೊಂಡಾಡುವ ಶ್ರೇಷ್ಠವಾದ ಸಹಸ್ರ ನಾಮ ವಿಷ್ಣು ಸಹಸ್ರನಾಮ. ಇದೊಂದು ಮಹಾಮಂತ್ರ. ಮಾನವನಿಂದ ಹಿಡಿದು ಚತುರ್ಮುಖನವರೆಗಿನ ಸಮಸ್ತ ಜೀವ ಜಾತಗಳಿಗೂ ಹಿರಿಯ ಶಕ್ತಿಯಾದ ಪರಮಾತ್ಮನ ಹೆಸರಿದು.

ನಾಮಗಳಲ್ಲಿ ಎರಡು ವಿಧ. ಒಂದು ಲೌಕಿಕ ನಾಮ, ಇನ್ನೊಂದು ದಿವ್ಯನಾಮ. ಉದಾಹರಣೆಗೆ ವಸುದೇವನ ಮಗ ವಾಸುದೇವ ಎನ್ನುವುದು ಲೌಕಿಕ ನಾಮ. ಆದರೆ ಇಲ್ಲಿ ಬರುವ ಈ ಎಲ್ಲಾ ಭಗವಂತನ ನಾಮಗಳು ದಿವ್ಯ ನಾಮಗಳು; ಅನಾಧಿನಿತ್ಯ, ಅಪ್ರಾಕೃತ(divine)ವಾದ ದಿವ್ಯ ನಾಮಗಳಿವು. ಇದು ಕೇವಲ ಸಾವಿರ ನಾಮವಷ್ಟೇ ಅಲ್ಲ, ಅನಂತನಾದ ಭಗವಂತನನ್ನು ಈ ಸಾವಿರ ನಾಮದಲ್ಲಿ ಚಿಂತನೆ ಮಾಡಬಹುದು. ಸಹಸ್ರ ಎಂದರೆ ಸಹ-ಸರಣ, ಭಗವಂತನ ಜೊತೆಗೆ/ಒಟ್ಟಿಗೆ ಆತನ ಅನಂತಗುಣಗಾನ ಈ ಸಹಸ್ರನಾಮ.

**ಯ ಇದಂ ಶೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ ।**

**ನಾಶುಭಂ ಪ್ರಾಪ್ನುಯಾತ್ ಕಿಂಚಿತ್ ಸೋಮುತ್ರೇಹ ಚ ಮಾನವಃ ॥೧೨೨॥**

ಯಾರು ಇದನ್ನು ಕೇಳುತ್ತಾರೋ(He who listen to it), ಯಾರು ಇದನ್ನು ಭಕ್ತಿಯಿಂದ ಪಠಿಸುತ್ತಾರೋ, ಅವರಿಗೆ ಎಂದೂ ಕೂಡಾ ಕೆಡುಕಾಗುವುದಿಲ್ಲ. ವಿಷ್ಣು ಸಹಸ್ರನಾಮವನ್ನು ಯಾರು ಬೇಕಾದರೂ ಪಠಿಸಬಹುದು. ಸಮಾಜದಲ್ಲಿ "ಹೆಂಗಸರು ವಿಷ್ಣು ಸಹಸ್ರನಾಮವನ್ನು ಪಠಿಸಬಾರದು ಎನ್ನುವ ಮೂಢನಂಬಿಕೆ ಇದೆ. ಆದರೆ ಇಂತಹ ನಿರ್ಬಂಧವಿಲ್ಲ. ವಿಷ್ಣುಸಹಸ್ರನಾಮವನ್ನು ಯಾರು ಬೇಕಾದರೂ ಏಲ್ಲಿ ಬೇಕಾದರೂ ಪಠಿಸಬಹುದು. ಇದಕ್ಕೆ ಬೇಕಾಗಿರುವುದು ಕೇವಲ ಭಕ್ತಿಮಾತ್ರ. ಅದರಿಂದ ಎಂದೂ ಕೆಡುಕಾಗುವುದಿಲ್ಲ. ದೇವರ ನಾಮ ಇರುವುದೇ ನಮಗೆ, ನಮ್ಮ ಬದುಕಿನಲ್ಲಿ ಧೈರ್ಯ-ಆತ್ಮ ವಿಶ್ವಾಸ ತುಂಬಲು, ಭಯ ಪರಿಹರಿಸಲು. ಯಾರು ದೇವರನ್ನು ನಂಬುತ್ತಾನೋ ಅವನು ಎಂದೂ ಯಾವುದಕ್ಕೂ ಭಯಪಡಬೇಕಾಗಿಲ್ಲ. ಜಾತಿ-ಲಿಂಗ ಭೇದವಿಲ್ಲದೆ ಎಲ್ಲರೂ ಪಠಿಸಬಹುದಾದ ಸಹಸ್ರನಾಮ ವಿಷ್ಣುಸಹಸ್ರನಾಮ. ಯಾರು ಇದನ್ನು ಆಲಿಸುತ್ತಾನೋ ಮತ್ತು ಯಾರು ಇದನ್ನು ಪಠಿಸುತ್ತಾರೋ ಆ ಮಾನವನು ಇಹ-ಪರದಲ್ಲಿ ಕೆಡುಕನ್ನು ಹೊಂದಲಾರ.

**ವೇದಾಂತಗೋ ಬ್ರಾಹ್ಮಣಃ ಸ್ಯಾತ್ ಕ್ಷತ್ರಿಯೋ ವಿಜಯೀ ಭವೇತ್ ।**

**ವೈಶ್ಯೋ ಧನಸಮೃದ್ಧಃ ಸ್ಯಾತ್ ಶೂದ್ರಸ್ಸುಖಮವಾಪ್ನುಯಾತ್ ॥೧೨೩ ॥**

ವಿಷ್ಣು ಸಹಸ್ರನಾಮವನ್ನು ಎಲ್ಲಾ ವರ್ಣದವರೂ ಪಠಿಸಬಹುದು. ಇಲ್ಲಿ ವರ್ಣ ಎಂದರೆ ಜಾತಿ ಅಲ್ಲ. ಹಿಂದೆ ಹೇಳಿದಂತೆ ಮಾನವನ ಸ್ವಭಾವಕ್ಕೆ ಅನುಗುಣವಾಗಿ ಪ್ರಾಚೀನರು ನಾಲ್ಕು ವರ್ಣವನ್ನು ಗುರುತಿಸಿದರು. ಜ್ಞಾನಾರ್ಜನೆ, ಅಧ್ಯಯನ ಮತ್ತು ಚಿಂತನೆಯಲ್ಲಿ ಆಸಕ್ತಿ ಉಳ್ಳವ ಬ್ರಾಹ್ಮಣ(ಬೃಹತ್ ಆದದ್ದನ್ನು ಅನ್ವೇಷಣೆ ಮಾಡುವವ-Intelligence); ಇನ್ನೊಬ್ಬರು ತೊಂದರೆಯಲ್ಲಿದ್ದಾಗ ರಕ್ಷಣೆ(Protection) ಮಾಡುವವ ಕ್ಷತ್ರಿಯ. ಆತನಲ್ಲಿ ಆಡಳಿತ(Administration) ಗುಣವಿರುತ್ತದೆ. ವೈಶ್ಯ-ಹೊಟ್ಟೆಗೆ ಬೇಕಾದುದ್ದನ್ನು ಕೊಡುವ ವ್ಯಾಪಾರ ಮನೋವೃತ್ತಿ ಇರುವವ(Production).

ಆಹಾರ ಉತ್ಪತ್ತಿ, ಗೋವುಗಳನ್ನು ಸಾಕಿ ಹಾಲು ಮಾರುವುದು ಇತ್ಯಾದಿ ಇವರ ವೃತ್ತಿ. ಶೂದ್ರ ಅಂದರೆ ಇನ್ನೊಬ್ಬರ ಕಷ್ಟಕ್ಕೆ ಕರಗುವವ **(Service)**. ಯಾರು ಶೂದ್ರನಲ್ಲವೋ ಅವನು ಮನುಷ್ಯನೇ ಅಲ್ಲ. ಈ ವರ್ಣ ಪದ್ಧತಿ ಪ್ರಪಂಚದ ಎಲ್ಲಾ ಭಾಗದಲ್ಲೂ ಇದೆ. ಬ್ರಾಹ್ಮಣನ ಮಗ ಕ್ಷತ್ರಿಯನಾಗಬಹುದು, ಇಲ್ಲಿ ಜೀವ ಸ್ವಭಾವ ಮುಖ್ಯ. ತಂದೆ-ತಾಯಿ ಜಾತಿ ಅಲ್ಲ! ಯಾರೂ ಏಕವರ್ಣದವನಲ್ಲ. ಎಲ್ಲರಲ್ಲೂ ಎಲ್ಲಾ ಸ್ವಭಾವವಿರುತ್ತದೆ. ಯಾವ ಸ್ವಭಾವ ನಮ್ಮಲ್ಲಿ ಹೆಚ್ಚಾಗಿದೆಯೋ ನಾವು ಆ ವರ್ಣಕ್ಕೆ ಸೇರುತ್ತೇವೆ. ಸ್ವಭಾವ ನೈಸರ್ಗಿಕ.

ವಿಷ್ಣು ಸಹಸ್ರನಾಮ ಕೇಳುವುದರಿಂದ, ಪಠಿಸುವುದರಿಂದ: ಬ್ರಾಹ್ಮಣನ ಜ್ಞಾನ ವೃದ್ಧಿಯಾಗುತ್ತದೆ; ವೈಶ್ಯನ ವ್ಯಾಪಾರ ಹೆಚ್ಚುತ್ತದೆ; ಕ್ಷತ್ರಿಯನ ಶತ್ರು ನಿಗ್ರಹಕ್ಕೆ ಬೇಕಾದ ಬಲವೃದ್ಧಿಯಾಗುತ್ತದೆ; ಶೂದ್ರ ಸುಖವಾಗಿ ಬದುಕುತ್ತಾನೆ. ಹೀಗೆ ದೇವರ ನಾಮ ಪಠಿಸಲು ಯಾವ ವರ್ಣ ಭೇದವಿಲ್ಲ.

ಬ್ರಾಹ್ಮಣನು ವೇದಗಳ ನಿರ್ಣಯವನ್ನು ಬಲ್ಲವನಾದಾನು; ಕ್ಷತ್ರಿಯನು ಗೆಲುವನ್ನು ಪಡೆದಾನು; ವೈಶ್ಯನು ತುಂಬು ಸಿರಿವಂತನಾದಾನು; ಶೂದ್ರನು ಸುಖವನ್ನು ಪಡೆದಾನು.

**ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮಂ ಅರ್ಥಾರ್ಥೀ ಚಾರ್ಥಮಾಪ್ನುಯಾತ್ ।**
**ಕಾಮಾನವಾಪ್ನುಯಾತ್ ಕಾಮೀ ಪ್ರಜಾರ್ಥೀ ಚಾಪ್ನುಯಾತ್ ಪ್ರಜಾಮ್ ॥೧೨೪॥**

ಮನುಷ್ಯ ಪಡೆಯಲಿಕ್ಕೆ ಬಯಸುವುದು ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕನ್ನು. ಇದರಲ್ಲಿ ಕಾಮ ಮತ್ತು ಅರ್ಥ ಲೌಕಿಕವಾದದ್ದು. ಸಾಮಾನ್ಯವಾಗಿ ಧಾರ್ಮಿಕ ಪ್ರವೃತ್ತಿಯುಳ್ಳ**(Elevated Souls)**ವರು ಲೌಕಿಕವಾದದ್ದನ್ನು ಬಯಸದೇ ದೇವರನ್ನು ತಿಳಿಯುವ ಧರ್ಮ ಹಾಗೂ ಅದರಾಚೆಗಿನ ಮೋಕ್ಷವನ್ನು ಸುಖವೆಂದು ತಿಳಿದಿರುತ್ತಾರೆ. ಬಯಕೆಗಳೇ ಇಲ್ಲದಿರುವುದು ನಿಜವಾದ ಸುಖ.

ವಿಷ್ಣು ಸಹಸ್ರನಾಮ ಪಠಿಸುವುದು ಅಂದರೆ ಪ್ರತೀ ನಾಮದ ಉಚ್ಚಾರ ಹಾಗೂ ಅದರ ಹಿಂದಿನ ಅರ್ಥ ಸ್ಮರಣೆ. ಒಂದು ನಾಮ ಸ್ಮರಣೆ ಮಾಡಿದರೂ ಸಾಕು, ನಮ್ಮ ಬದುಕು ಪಾವನವಾಗುತ್ತದೆ, ಧರ್ಮಮಯವಾಗುತ್ತದೆ . ಒಂದು ವೇಳೆ ನಮಗೆ ಅತೀ ಕಷ್ಟವಿದ್ದು ದುಡ್ಡಿನ ಅಗತ್ಯ ಇದ್ದಲ್ಲಿ ವಿಷ್ಣು ಸಹಸ್ರನಾಮವನ್ನು ಯಾವುದೇ ಲೋಭವಿಲ್ಲದೆ ನಿರ್ಮಲ ಮನಸ್ಸಿನಿಂದ ಭಕ್ತಿ ಪೂರ್ವಕವಾಗಿ ಚಿಂತನೆ ಮಾಡಿದರೆ ಖಂಡಿತ ನಾವು ಆ ಚಿಂತೆಯಿಂದ ಪಾರಾಗುತ್ತೇವೆ. ಆದರೂ ನಾವು ಏನನ್ನೂ ಬಯಸದೇ ದೇವರ ಸ್ಮರಣೆ ಮಾಡುವುದು ಅತೀ ಶ್ರೇಷ್ಠ. ಬಯಕೆಗಳಿಲ್ಲದೇ ಸ್ಮರಿಸಿದರೆ ನಾವು ಮಹಾಫಲವನ್ನು ಪಡೆಯುತ್ತೇವೆ; ಅರಿವನ್ನು ಪಡೆದು ಮೋಕ್ಷವನ್ನು ಪಡೆಯುತ್ತೇವೆ.

ಧರ್ಮ ಬೇಕೆನ್ನುವವನು ಪಡೆದಾನು ಧರ್ಮವನ್ನು; ಅರ್ಥ ಬೇಕೆನ್ನುವವನು ಪಡೆದಾನು ಅರ್ಥವನ್ನು. ಕಾಮಗಳನ್ನು ಪಡೆದಾನು-ಕಾಮ ಬೇಕೆನ್ನುವವನು. ಪ್ರಜ್ಞೆ ಬೇಕೆನ್ನುವವನು ಪಡೆದಾನು ಪ್ರಜ್ಞೆಯನ್ನು.

**ಭಕ್ತಿಮಾನ್ ಯಃ ಸದೋತ್ಥಾಯ ಶುಚಿಸ್ತದ್ಗತಮಾನಸಃ ।**
**ಸಹಸ್ರಂ ವಾಸುದೇವಸ್ಯ ನಾಮ್ನಾಮೇತತ್ ಪ್ರಕೀರ್ತಯೇತ್ ॥೧೨೫॥**

ವಿಷ್ಣು ಸಹಸ್ರನಾಮ ಯಾವಾಗ ಪಠಿಸಬೇಕು ಎನ್ನುವ ಪ್ರಶ್ನೆಯನ್ನು ಎಲ್ಲರೂ ಕೇಳುತ್ತಾರೆ. ಈ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ವಿಷ್ಣು ಸಹಸ್ರನಾಮ ಪಾರಾಯಣಕ್ಕೆ ಬೇಕಾಗಿರುವುದು ಸಮಯ ಅಥವಾ ಗಳಿಗೆ ಅಲ್ಲ. ಬೇಕಾಗಿರುವುದು ಒಂದೇ ಒಂದು-ಅದು ಭಕ್ತಿ. ಬೆಳಿಗ್ಗೆ ಎದ್ದ ತಕ್ಷಣ ನಿರ್ಮಲವಾದ ಮನಸ್ಸಿನಿಂದ ಭಕ್ತಿಪೂರ್ವಕವಾಗಿ ಪಠಿಸಬಹುದು. ಇಲ್ಲಿ ಮನ ಶುದ್ಧಿ ಮುಖ್ಯ, ಅದೇ ಮಡಿ. ಭಕ್ತಿಯಿಂದ ಯಾರು ದಿನವೂ ಮುಂಜಾನೆ ಎದ್ದು ನಿರ್ಮಲನಾಗಿ ಭಗವಂತನಲ್ಲಿ ಸಂಪೂರ್ಣ ಮನಸ್ಸಿಟ್ಟು ವಾಸುದೇವನ ಈ ಸಾವಿರ ಹೆಸರನ್ನು ಹೇಳುತ್ತಾನೋ ಅವನು ಯಶವನ್ನೂ ಕೀರ್ತಿಯನ್ನೂ ಗಳಿಸುತ್ತಾನೆ ಎನ್ನುವುದನ್ನು ಮುಂದಿನ ಶ್ಲೋಕ ಹೇಳುತ್ತದೆ.

ಯಶಃ ಪ್ರಾಪ್ನೋತಿ ವಿಪುಲಂ ಯಾತಿ ಪ್ರಾಧಾನ್ಯಮೇವ ಚ ।
ಅಚಲಾಂ ಶ್ರಿಯಮಾಪ್ನೋತಿ ಶ್ರೇಯಃ ಪ್ರಾಪ್ನೋತ್ಯನುತ್ತಮಮ್ ॥೧೨೮॥

ಈ ಸಹಸ್ರನಾಮ ಜಪದಿಂದ ಕೀರ್ತಿ ಬರುತ್ತದೆ. ಇಲ್ಲಿ ಕೀರ್ತಿ ಎಂದರೆ ಭಗವಂತನ ಅರಿವು. ಇದರಿಂದ ಸಮುದಾಯದಲ್ಲಿ ಹಿರಿಯನಾಗಿ ಎಲ್ಲರೂ ಗೌರವದಿಂದ ಕಾಣುವಂತಾಗುತ್ತದೆ. ಎಂದೂ ಕರಗದ ಜ್ಞಾನ ಸಂಪತ್ತನ್ನು ಪಡೆದು ಶ್ರೇಯಸ್ಸನ್ನು ಪಡೆಯುತ್ತೇವೆ.

ಹಬ್ಬಿದ ಜಸವನ್ನು ಗಳಿಸುತ್ತಾನೆ; ಬಂಧುಗಳಲ್ಲಿ ಮುಂದಾಳುತನ ಪಡೆಯುತ್ತಾನೆ; ಅಳಿಯದ ಸಿರಿಯನ್ನು ಪಡೆಯುತ್ತಾನೆ; ಮುಗಿಲಿಲ್ಲದ ಶ್ರೇಯಸ್ಸನ್ನು (ಮುಕ್ತಿಯನ್ನು) ಪಡೆಯುತ್ತಾನೆ.

ನ ಭಯಂ ಕ್ವಚಿದಾಪ್ನೋತಿ ವೀರ್ಯಂ ತೇಜಶ್ಚ ವಿಂದತಿ ।
ಭವತ್ಯರೋಗೋ ದ್ಯುತಿಮಾನ್ ಬಲರೂಪಗುಣಾನ್ವಿತಃ ॥೧೨೭॥

ವಿಷ್ಣು ಸಹಸ್ರನಾಮ ಪಠಿಸುವ ಭಕ್ತರಿಗೆ ಎಂದೂ ಭಯವಿಲ್ಲ. ನನ್ನನ್ನು ನಿರಂತರವಾಗಿ ಕಾಯುವ ಪರಶಕ್ತಿಯೊಂದಿದೆ ಎನ್ನುವ ಆತ್ಮವಿಶ್ವಾಸ ಅವರಲ್ಲಿರುತ್ತದೆ. ಇದರಿಂದ ವಿಶೇಷ ಕಾಂತಿ, ವರ್ಚಸ್ಸು, ಮನೋಬಲ, ದೇಹಬಲ, ಇಂದ್ರಿಯಬಲ ಬರುತ್ತದೆ. ಅವರು ಎಂದೂ ಯಾವುದಕ್ಕೂ ಹೆದರುವುದಿಲ್ಲ; ಬೀರವನ್ನು ಗಳಿಸುತ್ತಾರೆ; ತೇಜಸ್ವಿಯಾಗುತ್ತಾರೆ; ಆರೋಗ್ಯವಂತರಾಗಿ ಕಾಂತಿಯನ್ನು ಪಡೆಯುತ್ತಾರೆ. ಬಲ-ರೂಪ-ಗುಣಗಳಿಂದ ಕೂಡಿದವರಾಗುತ್ತಾರೆ.

ರೋಗಾರ್ತೋ ಮುಚ್ಯತೇ ರೋಗಾದ್ಬದ್ಧೋ ಮುಚ್ಯೇತ ಬಂಧನಾತ್ ।
ಭಯಾನ್ಮುಚ್ಯೇತ ಭೀತಸ್ತು ಮುಚ್ಯೇತಾಪನ್ನ ಆಪದಃ ॥೧೨೮॥

ರೋಗ ಪೀಡಿತನು ರೋಗದಿಂದ ಪಾರಾದಾನು; ಸೆರೆಯಲ್ಲಿರುವವನು ಪಡೆದಾನು ಬಿಡುಗಡೆ ಸೆರೆಯಿಂದ; ಭಯದಿಂದ ಪಾರಾದಾನು ಹೆದರಿಕೊಂಡವನು; ಪಾರಾದಾನು ತೊಂದರೆಗೊಳಗಾದವನು ತೊಂದರೆಯಿಂದ.

ದುರ್ಗಾಣ್ಯತಿತರತ್ಯಾಶು ಪುರುಷಃ ಪುರುಷೋತ್ತಮಮ್ ।
ಸ್ತುವನ್ನಾಮಸಹಸ್ರೇಣ ನಿತ್ಯಂ ಭಕ್ತಿಸಮನ್ವಿತಃ ॥೧೨೯॥

ಸಾಧಕನಾದ ಜೀವಿ ಪುರುಷೋತ್ತಮನನ್ನು ಸ್ತುತಿಸುತ್ತಾ ಸಾವಿರ ಹೆಸರಿನಿಂದ, ಅನುದಿನ, ಭಕ್ತಿಯಿಂದ ಕೂಡಿದವನಾಗಿ, ಬಲು ಬೇಗನೆ ದುಗುಡವನ್ನು ದಾಟುತ್ತಾನೆ .

ವಾಸುದೇವಾಶ್ರಯೋ ಮರ್ತ್ಯೋ ವಾಸುದೇವಪರಾಯಣಃ ।
ಸರ್ವಪಾಪವಿಶುದ್ಧಾತ್ಮಾ ಯಾತಿ ಬ್ರಹ್ಮ ಸನಾತನಮ್ ॥೧೩೦ ॥

ವಾಸುದೇವನನ್ನು ಆಶ್ರಯಿಸಿದ ಮಾನವನು, ವಾಸುದೇವನೇ ಕೊನೆಯಾಸರೆ ಎಂದು ನಂಬಿದವನು, ಎಲ್ಲಾ ಪಾಪಗಳನ್ನು ತೊಡೆದು ಪರಿಶುದ್ಧ ಸ್ವರೂಪನಾಗಿ ಎಂದೆಂದೂ ಇರುವ ಪರತತ್ವವನ್ನು ಸೇರುತ್ತಾನೆ .

ನ ವಾಸುದೇವಭಕ್ತಾನಾಮಶುಭಂ ವಿದ್ಯತೇ ಕ್ವಚಿತ್ ।
ಜನ್ಮಮೃತ್ಯುಜರಾವ್ಯಾಧಿಭಯಂ ನೈವೋಪಜಾಯತೇ ॥೧೩೧॥

ವಾಸುದೇವನ ಭಕ್ತರಿಗೆ ಎಲ್ಲೂ ಕೇಡು ಎನ್ನುವುದು ಇರುವುದಿಲ್ಲ . ಹುಟ್ಟು-ಸಾವು-ಮುಪ್ಪು-ರುಜಿನ ಭಯ ಉಂಟಾಗುವುದೇ ಇಲ್ಲ.

ಇಮಂ ಸ್ತವಮಧೀಯಾನಃ ಶ್ರದ್ಧಾಭಕ್ತಿಸಮನ್ವಿತಃ ।
ಯುಜ್ಯೇತಾತ್ಮಾಸುಖಕ್ಷಾಂತಿಶ್ರೀಧೃತಿಸ್ಮೃತಿಕೀರ್ತಿಭಿಃ ॥೧೩೨॥

ಶ್ರದ್ಧೆ-ಭಕ್ತಿಗಳಿಂದೊಡಗೂಡಿ ಈ ಸ್ತೋತ್ರವನ್ನು ಅರಿತರೆ ; ಸುಖ, ಕ್ಷಮೆ, ಸಂಪತ್ತು, ಧೈರ್ಯ, ನೆನಪು ಮತ್ತು ಕೀರ್ತಿಗಳು ಲಭಿಸುತ್ತವೆ.

ನ ಕ್ರೋಧೋ ನ ಚ ಮಾತ್ಸರ್ಯಂ ನ ಲೋಭೋ ನಾಶುಭಾ ಮತಿಃ ।
ಭವಂತಿ ಕೃತಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೇ ॥೧೩೩॥

ಪುಣ್ಯವಂತರಿಗೆ, ಪುರುಷೋತ್ತಮನಲ್ಲಿ ಬಗೆಯನಿಟ್ಟವರಿಗೆ ಸಿಟ್ಟು ಬರದು, ಹೊಟ್ಟೆಕಿಚ್ಚೂ ಇರದು; ಆಸೆಬುರುಕತನ ಕಾಡದು; ಕೆಟ್ಟ ಬುದ್ಧಿ ಮೂಡದು . ಆದರೆ ಎಲ್ಲವುದಕ್ಕೂ ಭಕ್ತಿ ಮುಖ್ಯ.

ದ್ಯೌಸ್ಸಚಂದ್ರಾರ್ಕನಕ್ಷತ್ರಾ ಖಂ ದಿಶೋ ಭೂರ್ಮಹೋದಧಿಃ ।
ವಾಸುದೇವಸ್ಯ ವೀರ್ಯೇಣ ವಿಧೃತಾನಿ ಮಹಾತ್ಮನಃ ॥೧೩೪॥

ಸ್ವರ್ಗ, ಚಂದ್ರ-ಸೂರ್ಯ-ನಕ್ಷತ್ರಗಳೊಡನೆ, ಆಕಾಶ, ದಿಕ್ಕುಗಳು, ನೆಲ, ಕಡಲು ಎಲ್ಲಾ ಮಹಾತ್ಮನಾದ ವಾಸುದೇವನ ಸಾಮರ್ಥ್ಯದಿಂದ ಧರಿಸಲ್ಪಟ್ಟಿವೆ.

ಸಸುರಾಸುರಗಂಧರ್ವಂ ಸಯಕ್ಷೋರಗರಾಕ್ಷಸಮ್ ।
ಜಗದ್ವಶೇ ವರ್ತತೇದಂ ಕೃಷ್ಣಸ್ಯ ಸಚರಾಚರಮ್ ॥೧೩೫॥

ದೇವ-ದಾನವ-ಗಂಧರ್ವರೊಡನೆ, ಯಕ್ಷರು, ಹಾವುಗಳು, ರಕ್ಕಸರೊಡನೆ; ಚರ-ಅಚರಗಳೊಡನೆ ಈ ಎಲ್ಲಾ ಜಗತ್ತು ಆತನ ಅಂಕೆಯಲ್ಲಿದೆ.

ಇಂದ್ರಿಯಾಣಿ ಮನೋ ಬುದ್ಧಿಃ ಸತ್ತ್ವಂ ತೇಜೋ ಬಲಂ ಧೃತಿಃ ।
ವಾಸುದೇವಾತ್ಮಕಾನ್ಯಾಹುಃ, ಕ್ಷೇತ್ರಂ ಕ್ಷೇತ್ರಜ್ಞ ಏವ ಚ ॥೧೩೬॥

ಇಂದ್ರಿಯಗಳು, ಮನಸ್ಸು, ಬುದ್ಧಿ, ಸ್ವಭಾವ, ತೇಜಸ್ಸು, ಬಲ, ಧೈರ್ಯ, ಎಲ್ಲಾ ವಾಸುದೇವನ ಅಧೀನದಲ್ಲಿವೆ ; ಈ ಶರೀರ ಮತ್ತು ಇಲ್ಲಿರುವ ಜೀವ ಕೂಡಾ. ಇದನ್ನೆಲ್ಲಾ ಬಲ್ಲ ಅವನೇ ನಿಜವಾದ ಕ್ಷೇತ್ರಜ್ಞ ಕೂಡಾ.

ಸರ್ವಾಗಮಾನಾಮಾಚಾರಃ ಪ್ರಥಮಂ ಪರಿಕಲ್ಪತೇ ।
ಆಚಾರಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ॥೧೩೭॥

ಎಲ್ಲಾ ಶಾಸ್ತ್ರಗಳ ಮೂಲಕ ಒಳ್ಳೆಯ ನಡೆಯ ಕಲ್ಪನೆ ಮೊದಲು ಮೂಡುತ್ತದೆ. ಒಳ್ಳೆಯ ನಡೆಯಿಂದ ಸಿಗುವುದು ಧರ್ಮ. ಧರ್ಮದ ಒಡೆಯನೇ ಕುಂದಿರದ ನಾರಾಯಣ.

ಋಷಯಃ ಪಿತರೋ ದೇವಾ ಮಹಾಭೂತಾನಿ ಧಾತವಃ ।
ಜಂಗಮಾಜಂಗಮಂ ಚೇದಂ ಜಗನ್ನಾರಾಯಣೋದ್ಭವಮ್ ॥೧೩೮॥

ಋಷಿಗಳು, ಪಿತೃಗಳು ದೇವತೆಗಳು, ಮಣ್ಣು-ನೀರು-ಬೆಂಕಿ-ಗಾಳಿ-ಆಕಾಶ ಎಂಬ ಐದು ಮಹಾ ಭೂತಗಳು, ತ್ವಕ್, ಚರ್ಮ ಮಾಂಸ ರುದಿರ ಮಜ್ಜಾ ಮೇದಸ್ಸು ಅಸ್ಥಿಗಳೆಂಬ ಏಳು ಧಾತುಗಳು, ಚಲಿಸುವ, ಚಲಿಸದ ಈ ಎಲ್ಲಾ ವಿಶ್ವವೂ ನಾರಾಯಣನಿಂದ ಹುಟ್ಟಿ ಬಂದದ್ದು.

ಯೋಗೋ ಜ್ಞಾನಂ ತಥಾ ಸಾಂಖ್ಯಂ ವಿದ್ಯಾಃ ಶಿಲ್ಪಾದಿಕರ್ಮ ಚ ।
ವೇದಾಶ್ಶಾಸ್ತ್ರಾಣಿ ವಿಜ್ಞಾನಮೇತತ್ಸರ್ವಂ ಜನಾರ್ದನಾತ್ ॥೧೩೯॥

ಯೋಗ, ಜ್ಞಾನ ಮಾರ್ಗ; ಅಂತೇ ಆತ್ಮದ ಅರಿವು, ಲಲಿತ ವಿದ್ಯೆಗಳು, ಶಿಲ್ಪಿ ಮುಂತಾದ ಕುಸುರು ಕೆಲಸ, ವೇದಗಳು, ಶಾಸ್ತ್ರಗಳು, ವಿಜ್ಞಾನ, ಇದೆಲ್ಲವೂ ಜನಾರ್ದನನಿಂದ.

ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ।
ತ್ರೀನ್‌ಲೋಕಾನ್ವ್ಯಾಪ್ಯ ಭೂತಾತ್ಮಾ ಭುಂಕ್ತೇ ವಿಶ್ವಭುಗವ್ಯಯಃ ॥೧೪೦ ॥

ಒಬ್ಬನೇ ಒಬ್ಬ ವಿಷ್ಣು ಹಿರಿಯ ಚೇತನ; ಅಲ್ಪ ಚೇತನಗಳು ಹಲವಾರು. ಮೂರು ಲೋಕಗಳನ್ನು ತುಂಬಿದ, ಎಲ್ಲಾ ಜೀವರ ಅಂತರ್ಯಾಮಿ, ಅಳಿವಿರದ ನಾರಾಯಣ ಎಲ್ಲಾ ವಿಶ್ವವನ್ನು ಪಾಲಿಸುತ್ತಾನೆ. ಕೊನೆಗೆ ಕಬಳಿಸುತ್ತಾನೆ.

ಇಮಂ ಸ್ತವಂ ಭಗವತೋ ವಿಷ್ಣೋರ್ವ್ಯಾಸೇನ ಕೀರ್ತಿತಮ್ ।
ಪಠೇದ್ಯ ಇಚ್ಛೇತ್ಪುರುಷಃ ಶ್ರೇಯಃ ಪ್ರಾಪ್ತುಂ ಸುಖಾನಿ ಚ ॥೧೪೧॥

ಭಗವಾನ್ ವಿಷ್ಣುವಿನ ಈ ಸ್ತೋತ್ರವನ್ನು ಸ್ವತಃ ವ್ಯಾಸರೇ ನುಡಿದಿರುವುದು . ನಿಜವಾದ ಶ್ರೇಯಸ್ಸನ್ನು ಸುಖವನ್ನು ಸಾಧಕನು ಇದರಿಂದ ಪಡೆಯತ್ತಾನೆ.

ವಿಶ್ವೇಶ್ವರಮಜಂ ದೇವಂ ಜಗತಃ ಪ್ರಭವಾಪ್ಯಯಮ್ ।
ಭಜಂತಿ ಯೇ ಪುಷ್ಕರಾಕ್ಷಂ ನ ತೇ ಯಾಂತಿ ಪರಾಭವಮ್ ॥೧೪೨॥

ಜಗದೊಡೆಯನನ್ನು, ಹುಟ್ಟಿರದ ದೇವನನ್ನು, ಜಗದ ಹುಟ್ಟು-ಸಾವುಗಳಿಗೆ ಕಾರಣನಾದ ತಾವರೆಗಣ್ಣಿನ ನಾರಾಯಣನನ್ನು ಯಾರು ಭಜಿಸುತ್ತಾರೋ ಅವರು ಎಂದೆಂದೂ ಸೋಲನ್ನು ಕಾಣುವುದಿಲ್ಲ.

ಇತೀ ಶ್ರೀಮನ್ಮಹಾಭಾರತೇ ಅನುಶಾಸನಪರ್ವಣಿ ಶ್ರೀವಿಷ್ಣುಸಹಸ್ರನಾಮ ಸ್ತೋತ್ರಂ ಸಂಪೂರ್ಣಮ್.
ಹೀಗೆ ಮಹಾಭಾರತದ ಅನುಶಾಸನ ಪರ್ವದಲ್ಲಿ ದೇವರ ಸಾವಿರ ಹೆಸರಿನ ಹಾಡು ಮುಗಿಯಿತು.

॥ ಸರ್ವೇ ಜನಾಃ ಸುಖಿನೋ ಭವಂತು ॥
॥ ಶ್ರೀ ಕೃಷ್ಣಾರ್ಪಣಮಸ್ತು ॥

# ನಾಮಾವಳಿ

೧ - ವಿಶ್ವಾಯ ನಮಃ
೨ - ವಿಷ್ಣವೇ ನಮಃ
೩ - ವಷಟ್ಕಾರಾಯ ನಮಃ
೪ - ಭೂತಭವ್ಯಭವತ್ಪ್ರಭವೇ ನಮಃ
೫ - ಭೂತಕೃತೇ ನಮಃ
೬ - ಭೂತಭೃತೇ ನಮಃ
೭ - ಭಾವಾಯ ನಮಃ
೮ - ಭೂತಾತ್ಮನೇ ನಮಃ
೯ - ಭೂತಭಾವನಾಯ ನಮಃ
೧೦ - ಪೂತಾತ್ಮನೇ ನಮಃ
೧೧ - ಪರಮಾತ್ಮನೇ ನಮಃ
೧೨ - ಮುಕ್ತಾನಾಂ ಪರಮಾಯೈಗತಯೇ ನಮಃ
೧೩ - ಅವ್ಯಯಾಯ ನಮಃ
೧೪ - ಪುರುಷಾಯ ನಮಃ
೧೫ - ಸಾಕ್ಷಿಣೇ ನಮಃ
೧೬ - ಕ್ಷೇತ್ರಜ್ಞಾಯ ನಮಃ
೧೭ - ಅಕ್ಷರಾಯ ನಮಃ
೧೮ - ಯೋಗಾಯ ನಮಃ
೧೯ - ಯೋಗವಿದಾಂನೇತ್ರೇ ನಮಃ
೨೦ - ಪ್ರಧಾನಪುರುಷೇಶ್ವರಾಯ ನಮಃ
೨೧ - ನಾರಸಿಂಹವಪುಷೇ ನಮಃ
೨೨ - ಶ್ರೀಮತೇ ನಮಃ
೨೩ - ಕೇಶವಾಯ ನಮಃ
೨೪ - ಪುರುಷೋತ್ತಮಾಯ ನಮಃ
೨೫ - ಸರ್ವಾಯ ನಮಃ
೨೬ - ಶರ್ವಾಯ ನಮಃ
೨೭ - ಶಿವಾಯ ನಮಃ
೨೮ - ಸ್ಥಾಣವೇ ನಮಃ
೨೯ - ಭೂತಾದಯೇ ನಮಃ
೩೦ - ನಿಧಯೇಽವ್ಯಯಾಯ ನಮಃ
೩೧ - ಸಂಭವಾಯ ನಮಃ
೩೨ - ಭಾವನಾಯ ನಮಃ
೩೩ - ಭರ್ತ್ರೇ ನಮಃ
೩೪ - ಪ್ರಭವಾಯ ನಮಃ
೩೫ - ಪ್ರಭವೇ ನಮಃ
೩೬ - ಈಶ್ವರಾಯ ನಮಃ
೩೭ - ಸ್ವಯಂಭುವೇ ನಮಃ
೩೮ - ಶಂಭವೇ ನಮಃ
೩೯ - ಆದಿತ್ಯಾಯ ನಮಃ
೪೦ - ಪುಷ್ಕರಾಕ್ಷಾಯ ನಮಃ
೪೧ - ಮಹಾಸ್ವನಾಯ ನಮಃ
೪೨ - ಅನಾದಿನಿಧನಾಯ ನಮಃ
೪೩ - ಧಾತ್ರೇ ನಮಃ
೪೪ - ವಿಧಾತ್ರೇ ನಮಃ
೪೫ - ಧಾತುರುತ್ತಮಾಯ ನಮಃ
೪೬ - ಅಪ್ರಮೇಯಾಯ ನಮಃ
೪೭ - ಹೃಷೀಕೇಶಾಯ ನಮಃ
೪೮ - ಪದ್ಮನಾಭಾಯ ನಮಃ
೪೯ - ಅಮರಪ್ರಭವೇ ನಮಃ
೫೦ - ವಿಶ್ವಕರ್ಮಣೇ ನಮಃ
೫೧ - ಮನವೇ ನಮಃ
೫೨ - ತ್ವಷ್ಟ್ರೇ ನಮಃ
೫೩ - ಸ್ಥವಿಷ್ಠಾಯ ನಮಃ
೫೪ - ಸ್ಥವಿರಾಯ ಧ್ರುವಾಯ ನಮಃ
೫೫ - ಅಗ್ರಹ್ಯಾಯ ನಮಃ
೫೬ - ಶಾಶ್ವತಾಯ ನಮಃ
೫೭ - ಕೃಷ್ಣಾಯ ನಮಃ
೫೮ - ಲೋಹಿತಾಕ್ಷಾಯ ನಮಃ

೫೯ - ಪ್ರತರ್ದನಾಯ ನಮಃ
೬೦ - ಪ್ರಭೂತಾಯ ನಮಃ
೬೧ - ತ್ರಿಕಕುಬ್ಧಾಮ್ನೇ ನಮಃ
೬೨ - ಪವಿತ್ರಾಯ ನಮಃ
೬೩ - ಮಂಗಲಾಯ ಪರಾಯ ನಮಃ
೬೪ - ಈಶಾನಾಯ ನಮಃ
೬೫ - ಪ್ರಾಣದಾಯ ನಮಃ
೬೬ - ಪ್ರಾಣಾಯ ನಮಃ
೬೭ - ಜ್ಯೇಷ್ಠಾಯ ನಮಃ
೬೮ - ಶ್ರೇಷ್ಠಾಯ ನಮಃ
೬೯ - ಪ್ರಜಾಪತಯೇ ನಮಃ
೭೦ - ಹಿರಣ್ಯಗರ್ಭಾಯ ನಮಃ
೭೧ - ಭೂಗರ್ಭಾಯ ನಮಃ
೭೨ - ಮಾಧವಾಯ ನಮಃ
೭೩ - ಮಧುಸೂದನಾಯ ನಮಃ
೭೪ - ಈಶ್ವರಾಯ ನಮಃ
೭೫ - ವಿಕ್ರಮಿಣೇ ನಮಃ
೭೬ - ಧನ್ವಿನೇ ನಮಃ
೭೭ - ಮೇಧಾವಿನೇ ನಮಃ
೭೮ - ವಿಕ್ರಮಾಯ ನಮಃ
೭೯ - ಕ್ರಮಾಯ ನಮಃ
೮೦ - ಅನುತ್ತಮಾಯ ನಮಃ
೮೧ - ದುರಾಧರ್ಷಾಯ ನಮಃ
೮೨ - ಕೃತಜ್ಞಾಯ ನಮಃ
೮೩ - ಕೃತಯೇ ನಮಃ
೮೪ - ಆತ್ಮವತೇ ನಮಃ
೮೫ - ಸುರೇಶಾಯ ನಮಃ
೮೬ - ಶರಣಾಯ ನಮಃ
೮೭ - ಶರ್ಮಣೇ ನಮಃ
೮೮ - ವಿಶ್ವರೇತಸೇ ನಮಃ
೮೯ - ಪ್ರಜಾಭವಾಯ ನಮಃ
೯೦ - ಅಹ್ನೇ ನಮಃ
೯೧ - ಸಂವತ್ಸರಾಯ ನಮಃ
೯೨ - ವ್ಯಾಲಾಯ ನಮಃ
೯೩ - ಪ್ರತ್ಯಯಾಯ ನಮಃ
೯೪ - ಸರ್ವದರ್ಶನಾಯ ನಮಃ
೯೫ - ಅಜಾಯ ನಮಃ
೯೬ - ಸರ್ವೇಶ್ವರಾಯ ನಮಃ
೯೭ - ಸಿದ್ಧಾಯ ನಮಃ
೯೮ - ಸಿದ್ಧಯೇ ನಮಃ
೯೯ - ಸರ್ವಾದಯೇ ನಮಃ
೧೦೦ - ಅಚ್ಯುತಾಯ ನಮಃ
೧೦೧ - ವೃಷಾಕಪಯೇ ನಮಃ
೧೦೨ - ಅಮೇಯಾತ್ಮನೇ ನಮಃ
೧೦೩ - ಸರ್ವಯೋಗವಿನಿಃಸೃತಾಯ ನಮಃ
೧೦೪ - ವಸವೇ ನಮಃ
೧೦೫ - ವಸುಮನಸೇ ನಮಃ
೧೦೬ - ಸತ್ಯಾಯ ನಮಃ
೧೦೭ - ಸಮಾತ್ಮನೇ ನಮಃ
೧೦೮ - ಸಮ್ಮಿತಾಯ (ಅಸಮ್ಮಿತಾಯ) ನಮಃ
೧೦೯ - ಸಮಾಯ ನಮಃ
೧೧೦ - ಅಮೋಘಾಯ ನಮಃ
೧೧೧ - ಪುಂಡರೀಕಾಕ್ಷಾಯ ನಮಃ
೧೧೨ - ವೃಷಕರ್ಮಣೇ ನಮಃ
೧೧೩ - ವೃಷಾಕೃತಯೇ ನಮಃ
೧೧೪ - ರುದ್ರಾಯ ನಮಃ
೧೧೫ - ಬಹುಶಿರಸೇ ನಮಃ
೧೧೬ - ಬಭ್ರವೇ ನಮಃ
೧೧೭ - ವಿಶ್ವಯೋನಯೇ ನಮಃ
೧೧೮ - ಶುಚಿಶ್ರವಸೇ ನಮಃ
೧೧೯ - ಅಮೃತಾಯ ನಮಃ
೧೨೦ - ಶಾಶ್ವತಸ್ಥಾಣವೇ ನಮಃ
೧೨೧ - ವರಾರೋಹಾಯ ನಮಃ
೧೨೨ - ಮಹಾತಪಸೇ ನಮಃ

೧೨೩ - ಸರ್ವಗಾಯ ನಮಃ
೧೨೪ - ಸರ್ವವಿದ್ಭಾನವೇ ನಮಃ
೧೨೫ - ವಿಶ್ವಕ್ಸೇನಾಯ ನಮಃ
೧೨೬ - ಜನಾರ್ದನಾಯ ನಮಃ
೧೨೭ - ವೇದಾಯ ನಮಃ
೧೨೮ - ವೇದವಿದೇ ನಮಃ
೧೨೯ - ಅವ್ಯಂಗಾಯ ನಮಃ
೧೩೦ - ವೇದಾಂಗಾಯ ನಮಃ
೧೩೧ - ವೇದವಿದೇ ನಮಃ
೧೩೨ - ಕವಯೇ ನಮಃ
೧೩೩ - ಲೋಕಾಧ್ಯಕ್ಷಾಯ ನಮಃ
೧೩೪ - ಸುರಾಧ್ಯಕ್ಷಾಯ ನಮಃ
೧೩೫ - ಧರ್ಮಾಧ್ಯಕ್ಷಾಯ ನಮಃ
೧೩೬ - ಕೃತಾಕೃತಾಯ ನಮಃ
೧೩೭ - ಚತುರಾತ್ಮನೇ ನಮಃ
೧೩೮ - ಚತುರ್ವ್ಯೂಹಾಯ ನಮಃ
೧೩೯ - ಚತುರ್ದ್ರಂಷ್ಟ್ರಾಯ ನಮಃ
೧೪೦ - ಚತುರ್ಭುಜಾಯ ನಮಃ
೧೪೧ - ಭ್ರಾಜಿಷ್ಣವೇ ನಮಃ
೧೪೨ - ಭೋಜನಾಯ ನಮಃ
೧೪೩ - ಭೋಕ್ತ್ರೇ ನಮಃ
೧೪೪ - ಸಹಿಷ್ಣವೇ ನಮಃ
೧೪೫ - ಜಗದಾದಿಜಾಯ ನಮಃ
೧೪೬ - ಅನಘಾಯ ನಮಃ
೧೪೭ - ವಿಜಯಾಯ ನಮಃ
೧೪೮ - ಜೇತ್ರೇ ನಮಃ
೧೪೯ - ವಿಶ್ವಯೋನಯೇ ನಮಃ
೧೫೦ - ಪುನರ್ವಸವೇ ನಮಃ
೧೫೧ - ಉಪೇಂದ್ರಾಯ ನಮಃ
೧೫೨ - ವಾಮನಾಯ ನಮಃ
೧೫೩ - ಪ್ರಾಂಶವೇ ನಮಃ
೧೫೪ - ಅಮೋಘಾಯ ನಮಃ
೧೫೫ - ಶುಚಯೇ ನಮಃ
೧೫೬ - ಉರ್ಜಿತಾಯ ನಮಃ
೧೫೭ - ಅತೀಂದ್ರಾಯ ನಮಃ
೧೫೮ - ಸಂಗ್ರಹಾಯ ನಮಃ
೧೫೯ - ಸರ್ಗಾಯ ನಮಃ
೧೬೦ - ಧೃತಾತ್ಮನೇ ನಮಃ
೧೬೧ - ನಿಯಮಾಯ ನಮಃ
೧೬೨ - ಯಮಾಯ ನಮಃ
೧೬೩ - ವೇದ್ಯಾಯ ನಮಃ
೧೬೪ - ವೈದ್ಯಾಯ ನಮಃ
೧೬೫ - ಸದಾಯೋಗಿನೇ ನಮಃ
೧೬೬ - ವೀರಘ್ನೇ ನಮಃ
೧೬೭ - ಮಾಧವಾಯ ನಮಃ
೧೬೮ - ಮಧವೇ ನಮಃ
೧೬೯ - ಅತೀಂದ್ರಿಯಾಯ ನಮಃ
೧೭೦ - ಮಹಾಮಾಯಾಯ ನಮಃ
೧೭೧ - ಮಹೋತ್ಸಾಹಾಯ ನಮಃ
೧೭೨ - ಮಹಾಬಲಾಯ ನಮಃ
೧೭೩ - ಮಹಾಬುದ್ಧಯೇ ನಮಃ
೧೭೪ - ಮಹಾವೀರ್ಯಾಯ ನಮಃ
೧೭೫ - ಮಹಾಶಕ್ತಯೇ ನಮಃ
೧೭೬ - ಮಹಾದ್ಯುತಯೇ ನಮಃ
೧೭೭ - ಅನಿರ್ದೇಶ್ಯವಪುಷೇ ನಮಃ
೧೭೮ - ಶ್ರೀಮತೇ ನಮಃ
೧೭೯ - ಅಮೇಯತ್ಮನೇ ನಮಃ
೧೮೦ - ಮಹಾದ್ರಿಧೃಷೇ ನಮಃ
೧೮೧ - ಮಹೇಷ್ವಾಸಾಯ ನಮಃ
೧೮೨ - ಮಹೀಭರ್ತ್ರೇ ನಮಃ
೧೮೩ - ಶ್ರೀನಿವಾಸಾಯ ನಮಃ
೧೮೪ - ಸತಾಂಗತಯೇ ನಮಃ
೧೮೫ - ಅನಿರುದ್ಧಾಯ ನಮಃ
೧೮೬ - ಸುರಾನಂದಾಯ ನಮಃ

೧೮೭ - ಗೋವಿಂದಾಯ ನಮಃ
೧೮೮ - ಗೋವಿದಾಂಪತಯೇ ನಮಃ
೧೮೯ - ಮರೀಚಯೇ ನಮಃ
೧೯೦ - ದಮನಾಯ ನಮಃ
೧೯೧ - ಹಂಸಾಯ ನಮಃ
೧೯೨ - ಸುಪರ್ಣಾಯ ನಮಃ
೧೯೩ - ಭುಜಗೋತ್ತಮಾಯ ನಮಃ
೧೯೪ - ಹಿರಣ್ಯನಾಭಾಯ ನಮಃ
೧೯೫ - ಸುತಪಸೇ ನಮಃ
೧೯೬ - ಪದ್ಮನಾಭಾಯ ನಮಃ
೧೯೭ - ಪ್ರಜಾಪತಯೇ ನಮಃ
೧೯೮ - ಅಮೃತ್ಯವೇ ನಮಃ
೧೯೯ - ಸರ್ವದೃಶೇ ನಮಃ
೨೦೦ - ಸಿಂಹಾಯ ನಮಃ
೨೦೧ - ಸಂಧಾತ್ರೇ ನಮಃ
೨೦೨ - ಸಂಧಿಮತೇ ನಮಃ
೨೦೩ - ಸ್ಥಿರಾಯ ನಮಃ
೨೦೪ - ಅಜಾಯ ನಮಃ
೨೦೫ - ದುರ್ಮರ್ಷಣಾಯ ನಮಃ
೨೦೬ - ಶಾಸ್ತ್ರೇ ನಮಃ
೨೦೭ - ವಿಶ್ರುತಾತ್ಮನೇ ನಮಃ
೨೦೮ - ಸುರಾರಿಘ್ನೇ ನಮಃ
೨೦೯ - ಗುರುವೇ ನಮಃ
೨೧೦ - ಗುರುತಮಾಯ ನಮಃ
೨೧೧ - ಧಾಮ್ನೇ ನಮಃ
೨೧೨ - ಸತ್ಯಾಯ ನಮಃ
೨೧೩ - ಸತ್ಯಪರಾಕ್ರಮಾಯ ನಮಃ
೨೧೪ - ನಿಮಿಷಾಯ ನಮಃ
೨೧೫ - ಅನಿಮಿಷಾಯ ನಮಃ
೨೧೬ - ಸ್ರಗ್ವಿಣೇ ನಮಃ
೨೧೭ - ವಾಚಸ್ಪತಯೇ ನಮಃ
೨೧೮ - ಉದಾರಧಿಯೇ ನಮಃ
೨೧೯ - ಅಗ್ರಣ್ಯೇ ನಮಃ
೨೨೦ - ಗ್ರಾಮಣ್ಯೇ ನಮಃ
೨೨೧ - ಶ್ರೀಮತೇ ನಮಃ
೨೨೨ - ನ್ಯಾಯಾಯ ನಮಃ
೨೨೩ - ನೇತ್ರೇ ನಮಃ
೨೨೪ - ಸಮೀರಣಾಯ ನಮಃ
೨೨೫ - ಸಹಸ್ರಮೂರ್ಧ್ನೇ ನಮಃ
೨೨೬ - ವಿಶ್ವಾತ್ಮನೇ ನಮಃ
೨೨೭ - ಸಹಸ್ರಾಕ್ಷಾಯ ನಮಃ
೨೨೮ - ಸಹಸ್ರಪದೇ ನಮಃ
೨೨೯ - ಆವರ್ತನಾಯ ನಮಃ
೨೩೦ - ನಿವೃತ್ತಾತ್ಮನೇ ನಮಃ
೨೩೧ - ಸಂವೃತ್ತಾಯ ನಮಃ
೨೩೨ - ಸಂಪ್ರಮರ್ದನಾಯ ನಮಃ
೨೩೩ - ಅಹಃಸಂವರ್ತಕಾಯ ನಮಃ
೨೩೪ - ವಹ್ನಯೇ ನಮಃ
೨೩೫ - ಅನಿಲಾಯ ನಮಃ
೨೩೬ - ಧರಣೀಧರಾಯ ನಮಃ
೨೩೭ - ಸುಪ್ರಸಾದಾಯ ನಮಃ
೨೩೮ - ಪ್ರಸನ್ನಾತ್ಮನೇ ನಮಃ
೨೩೯ - ವಿಶ್ವಧೃಷೇ ನಮಃ
೨೪೦ - ವಿಶ್ವಭುಜೇ ನಮಃ
೨೪೧ - ವಿಭವೇ ನಮಃ
೨೪೨ - ಸತ್ಕರ್ತ್ರೇ ನಮಃ
೨೪೩ - ಸತ್ಕೃತಾಯ ನಮಃ
೨೪೪ - ಸಾಧವೇ ನಮಃ
೨೪೫ - ಜಹ್ನವೇ ನಮಃ
೨೪೬ - ನಾರಾಯಣಾಯ ನಮಃ
೨೪೭ - ನರಾಯ ನಮಃ
೨೪೮ - ಅಸಂಖ್ಯೇಯಾಯ ನಮಃ
೨೪೯ - ಅಪ್ರಮೇಯಾತ್ಮನೇ ನಮಃ
೨೫೦ - ವಿಶಿಷ್ಟಾಯ ನಮಃ

೧೫೧ - ಶಿಷ್ಟಕೃತೇ ನಮಃ
೧೫೨ - ಶುಚಯೇ ನಮಃ
೧೫೩ - ಸಿದ್ಧಾರ್ಥಾಯ ನಮಃ
೧೫೪ - ಸಿದ್ಧಸಂಕಲ್ಪಾಯ ನಮಃ
೧೫೫ - ಸಿದ್ಧಿದಾಯ ನಮಃ
೧೫೬ - ಸಿದ್ಧಿಸಾಧಾಯ ನಮಃ
೧೫೭ - ವೃಷಾಹಿಣೇ ನಮಃ
೧೫೮ - ವೃಷಭಾಯ ನಮಃ
೧೫೯ - ವಿಷ್ಣವೇ ನಮಃ
೧೬೦ - ವೃಷಪರ್ವಣೇ ನಮಃ
೧೬೧ - ವೃಷೋದರಾಯ ನಮಃ
೧೬೨ - ವರ್ಧನಾಯ ನಮಃ
೧೬೩ - ವರ್ಧಮಾನಾಯ ನಮಃ
೧೬೪ - ವಿವಿಕ್ತಾಯ ನಮಃ
೧೬೫ - ಶ್ರುತಿಸಾಗರಾಯ ನಮಃ
೧೬೬ - ಸುಭುಜಾಯ ನಮಃ
೧೬೭ - ದುರ್ಧರಾಯ ನಮಃ
೧೬೮ - ವಾಗ್ಮಿನೇ ನಮಃ
೧೬೯ - ಮಹೇಂದ್ರಾಯ ನಮಃ
೧೭೦ - ವಸುದಾಯ ನಮಃ
೧೭೧ - ವಸವೇ ನಮಃ
೧೭೨ - ನೈಕರೂಪಾಯ ನಮಃ
೧೭೩ - ಬೃಹದ್ರೂಪಾಯ ನಮಃ
೧೭೪ - ಶಿಪಿವಿಷ್ಟಾಯ ನಮಃ
೧೭೫ - ಪ್ರಕಾಶನಾಯ ನಮಃ
೧೭೬ - ಓಜಸ್ತೇಜೋದ್ಯುತಿಧರಾಯ ನಮಃ
೧೭೭ - ಪ್ರಕಾಶಾತ್ಮನೇ ನಮಃ
೧೭೮ - ಪ್ರತಾಪನಾಯ ನಮಃ
೧೭೯ - ಋದ್ಧಾಯ ನಮಃ
೧೮೦ - ಸ್ಪಷ್ಟಾಕ್ಷರಾಯ ಮಂತ್ರಾಯ ನಮಃ
೧೮೧ - ಚಂದ್ರಾಂಶವೇ ನಮಃ
೧೮೨ - ಭಾಸ್ಕರದ್ಯುತಯೇ ನಮಃ
೧೮೩ - ಅಮೃತಾಂಶೂದ್ಭವಾಯ ನಮಃ
೧೮೪ - ಭಾನವೇ ನಮಃ
೧೮೫ - ಶಶಬಿಂದವೇ ನಮಃ
೧೮೬ - ಸುರೇಶ್ವರಾಯ ನಮಃ
೧೮೭ - ಔಷಧಾಯ ನಮಃ
೧೮೮ - ಜಗತಃ ಸೇತವೇ ನಮಃ
೧೮೯ - ಸತ್ಯಧರ್ಮಪರಾಕ್ರಮಾಯ ನಮಃ
೧೯೦ - ಭೂತಭವ್ಯಭವನ್ನಾಥಾಯ ನಮಃ
೧೯೧ - ಪವನಾಯ ನಮಃ
೧೯೨ - ಪಾವನಾಯ ನಮಃ
೧೯೩ - ಅನಲಾಯ ನಮಃ
೧೯೪ - ಕಾಮಘ್ನೇ ನಮಃ
೧೯೫ - ಕಾಮಕೃತೇ ನಮಃ
೧೯೬ - ಕಾಂತಾಯ ನಮಃ
೧೯೭ - ಕಾಮಾಯ ನಮಃ
೧೯೮ - ಕಾಮಪ್ರದಾಯ ನಮಃ
೧೯೯ - ಪ್ರಭವೇ ನಮಃ
೨೦೦ - ಯುಗಾದಿಕೃತೇ ನಮಃ
೨೦೧ - ಯುಗಾವರ್ತಾಯ ನಮಃ
೨೦೨ - ನೈಕಮಾಯಾಯ ನಮಃ
೨೦೩ - ಮಹಾಶನಾಯ ನಮಃ
೨೦೪ - ಅದೃಶ್ಯಾಯ ನಮಃ
೨೦೫ - ವ್ಯಕ್ತರೂಪಾಯ(ಅವ್ಯಕ್ತರೂಪಾಯ) ನಮಃ
೨೦೬ - ಸಹಸ್ರಜಿತೇ ನಮಃ
೨೦೭ - ಅನಂತಜಿತೇ ನಮಃ
೨೦೮ - ಇಷ್ಟಾಯ ನಮಃ
೨೦೯ - (ಅ)ವಿಶಿಷ್ಟಾಯ ನಮಃ
೨೧೦ - ಶಿಷ್ಟೇಷ್ಟಾಯ ನಮಃ
೨೧೧ - ಶಿಖಂಡಿನೇ ನಮಃ
೨೧೨ - ನಹುಷಾಯ ನಮಃ
೨೧೩ - ವೃಷಾಯ ನಮಃ
೨೧೪ - ಕ್ರೋಧಾಘ್ನೇ ನಮಃ

೩೧೫ - ಕ್ರೋಧಕೃತೇ ನಮಃ
೩೧೬ –ಕರ್ತೇ ನಮಃ
೩೧೭ - ವಿಶ್ವಬಾಹವೇ ನಮಃ
೩೧೮ - ಮಹೀಧರಾಯ ನಮಃ
೩೧೯ - ಅಚ್ಯುತಾಯ ನಮಃ
೩೨೦ - ಪ್ರಥಿತಾಯ ನಮಃ
೩೨೧ - ಪ್ರಾಣಾಯ ನಮಃ
೩೨೨ - ಪ್ರಾಣದಾಯ ನಮಃ
೩೨೩ - ವಾಸವಾನುಜಾಯ ನಮಃ
೩೨೪ - ಅಪಾಂನಿಧಯೇ ನಮಃ
೩೨೫ - ಅಧಿಷ್ಠಾನಾಯ ನಮಃ
೩೨೬ - ಅಪ್ರಮತ್ತಾಯ ನಮಃ
೩೨೭ - ಪ್ರತಿಷ್ಠಿತಾಯ ನಮಃ
೩೨೮ - ಸ್ಕಂದಾಯ ನಮಃ
೩೨೯ - ಸ್ಕಂದಧರಾಯ ನಮಃ
೩೩೦ - ಧುರ್ಯಾಯ ನಮಃ
೩೩೧ - ವರದಾಯ ನಮಃ
೩೩೨ - ವಾಯುವಾಹನಾಯ ನಮಃ
೩೩೩ - ವಾಸುದೇವಾಯ ನಮಃ
೩೩೪ - ಬೃಹದ್ಭಾನವೇ ನಮಃ
೩೩೫ - ಆದಿದೇವಾಯ ನಮಃ
೩೩೬ - ಪುರಂದರಾಯ ನಮಃ
೩೩೭ - ಅಶೋಕಾಯ ನಮಃ
೩೩೮ - ತಾರಣಾಯ ನಮಃ
೩೩೯ - ತಾರಾಯ ನಮಃ
೩೪೦ - ಶೂರಾಯ ನಮಃ
೩೪೧ - ಶೌರಿಣೇ ನಮಃ
೩೪೨ - ಜನೇಶ್ವರಾಯ ನಮಃ
೩೪೩ - ಅನುಕೂಲಾಯ ನಮಃ
೩೪೪ - ಶತಾವರ್ತಾಯ ನಮಃ
೩೪೫ - ಪದ್ಮಿನೇ ನಮಃ
೩೪೬ - ಪದ್ಮನಿಭೇಕ್ಷಣಾಯ ನಮಃ
೩೪೭ - ಪದ್ಮನಾಭಾಯ ನಮಃ
೩೪೮ - ಅರವಿಂದಾಕ್ಷಾಯ ನಮಃ
೩೪೯ - ಪದ್ಮಗರ್ಭಾಯ ನಮಃ
೩೫೦ - ಶರೀರಭೃತೇ ನಮಃ
೩೫೧ - ಮಹರ್ದ್ಧಯೇ ನಮಃ
೩೫೨ - ಋದ್ಧಾಯ ನಮಃ
೩೫೩ - ವೃದ್ಧಾತ್ಮನೇ ನಮಃ
೩೫೪ - ಮಹಾಕ್ಷಾಯ ನಮಃ
೩೫೫ - ಗರುಡಧ್ವಜಾಯ ನಮಃ
೩೫೬ - ಅತುಲಾಯ ನಮಃ
೩೫೭ - ಶರಭಾಯ ನಮಃ
೩೫೮ - (ಅ)ಭೀಮಾಯ ನಮಃ
೩೫೯ - ಸಮಯಜ್ಞಾಯ ನಮಃ
೩೬೦ - ಹವಿರ್ಹರಯೇ ನಮಃ
೩೬೧ - ಸರ್ವಲಕ್ಷಣಲಕ್ಷಣ್ಯಾಯ ನಮಃ
೩೬೨ - ಲಕ್ಷ್ಮೀವತೇ ನಮಃ
೩೬೩ - ಸಮಿತಿಂಜಯಾಯ ನಮಃ
೩೬೪ - ವಿಕ್ಷರಾಯ ನಮಃ
೩೬೫ - ರೋಹಿತಾಯ ನಮಃ
೩೬೬ - ಮಾರ್ಗಾಯ ನಮಃ
೩೬೭ - ಹೇತವೇ ನಮಃ
೩೬೮ - ದಾಮೋದರಾಯ ನಮಃ
೩೬೯ - ಸಹಾಯ ನಮಃ
೩೭೦ - ಮಹೀಧರಾಯ ನಮಃ
೩೭೧ - ಮಹಾಭಾಗಾಯ ನಮಃ
೩೭೨ ವೇಗವತೇ ನಮಃ
೩೭೩ - ಅಮಿತಾಶನಾಯ ನಮಃ
೩೭೪ - ಉದ್ಭವಾಯ ನಮಃ
೩೭೫ - ಕ್ಷೋಭಣಾಯ ನಮಃ
೩೭೬ - ದೇವಾಯ ನಮಃ
೩೭೭ - ಶ್ರೀಗರ್ಭಾಯ ನಮಃ
೩೭೮ - ಪರಮೇಶ್ವರಾಯ ನಮಃ

೩೭೯ - ಕರಣಾಯ ನಮಃ
೩೮೦ - ಕಾರಣಾಯ ನಮಃ
೩೮೧ - ಕರ್ತ್ರೇ ನಮಃ
೩೮೨ ವಿಕರ್ತ್ರೇ ನಮಃ
೩೮೩ - ಗಹನಾಯ ನಮಃ
೩೮೪ - ಗುಹಾಯ ನಮಃ
೩೮೫ - ವ್ಯವಸಾಯಾಯ ನಮಃ
೩೮೬ - ವ್ಯವಸ್ಥಾನಾಯ ನಮಃ
೩೮೭ - ಸಂಸ್ಥಾನಾಯ ನಮಃ
೩೮೮- ಸ್ಥಾನದಾಯ ನಮಃ
೩೮೯ - ಧ್ರುವಾಯ ನಮಃ
೩೯೦ - ಪರರ್ದ್ಧಯೇ ನಮಃ
೩೯೧ - ಪರಮಸ್ಪಷ್ಟಾಯ ನಮಃ
೩೯೨ ತುಷ್ಟಾಯ ನಮಃ
೩೯೩ - ಪುಷ್ಟಾಯ ನಮಃ
೩೯೪ - ಶುಭೇಕ್ಷಣಾಯ ನಮಃ
೩೯೫ - ರಾಮಾಯ ನಮಃ
೩೯೬ - ವಿರಾಮಾಯ ನಮಃ
೩೯೭ - ವಿರಜಾಯ ನಮಃ
೩೯೮ - ಮಾರ್ಗಾಯ ನಮಃ
೩೯೯ - ನೇಯಾಯ ನಮಃ
೪೦೦ - ನಯಾಯ ನಮಃ
೪೦೧ - ಅನಯಾಯ ನಮಃ
೪೦೨ - ವೀರಾಯ ನಮಃ
೪೦೩ - ಶಕ್ತಿಮತಾಂ ಶ್ರೇಷ್ಠಾಯ ನಮಃ
೪೦೪ - ಧರ್ಮಾಯ ನಮಃ
೪೦೫ - ಧರ್ಮವಿದುತ್ತಮಾಯ ನಮಃ
೪೦೬ - ವೈಕುಂಠಾಯ ನಮಃ
೪೦೭ - ಪುರುಷಾಯ ನಮಃ
೪೦೮ - ಪ್ರಾಣಾಯ ನಮಃ
೪೦೯ - ಪ್ರಾಣದಾಯ ನಮಃ
೪೧೦ - ಪ್ರಣವಾಯ ನಮಃ
೪೧೧ - ಪೃಥವೇ ನಮಃ
೪೧೨ - ಹಿರಣ್ಯಗರ್ಭಾಯ ನಮಃ
೪೧೩ - ಶತ್ರುಘ್ನಾಯ ನಮಃ
೪೧೪ - ವ್ಯಾಪ್ತಾಯ ನಮಃ
೪೧೫ - ವಾಯವೇ ನಮಃ
೪೧೬ - ಅಧೋಕ್ಷಜಾಯ ನಮಃ
೪೧೭ - ಋತವೇ ನಮಃ
೪೧೮ - ಸುದರ್ಶನಾಯ ನಮಃ
೪೧೯ - ಕಾಲಾಯ ನಮಃ
೪೨೦ - ಪರಮೇಷ್ಠಿನೇ ನಮಃ
೪೨೧ - ಪರಿಗ್ರಹಾಯ ನಮಃ
೪೨೨ - ಉಗ್ರಾಯ ನಮಃ
೪೨೩ - ಸಂವತ್ಸರಾಯ ನಮಃ
೪೨೪ - ದಕ್ಷಾಯ ನಮಃ
೪೨೫ - ವಿಶ್ರಾಮಾಯ ನಮಃ
೪೨೬ - ವಿಶ್ವದಕ್ಷಿಣಾಯ ನಮಃ
೪೨೭ - ವಿಸ್ತಾರಾಯ ನಮಃ
೪೨೮ - ಸ್ಥಾವರಸ್ಥಾಣವೇ ನಮಃ
೪೨೯ - ಪ್ರಮಾಣಾಯ ನಮಃ
೪೩೦ - ಬೀಜಾಯ ನಮಃ
೪೩೧ - ಅವ್ಯಯಾಯ ನಮಃ
೪೩೨ - ಅರ್ಥಾಯ ನಮಃ
೪೩೩ - ಅನರ್ಥಾಯ ನಮಃ
೪೩೪ - ಮಹಾಕೋಶಾಯ ನಮಃ
೪೩೫ - ಮಹಾಭೋಗಾಯ ನಮಃ
೪೩೬ - ಮಹಾಧನಾಯ ನಮಃ
೪೩೭ - ಅನಿರ್ವಿಣ್ಣಾಯ ನಮಃ
೪೩೮ - ಸ್ಥವಿಷ್ಠಾಯ ನಮಃ
೪೩೯ - (ಅ)ಭುವೇ ನಮಃ
೪೪೦ - ಧರ್ಮಯೂಪಾಯ ನಮಃ
೪೪೧ - ಮಹಾಮಖಾಯ ನಮಃ
೪೪೨ - ನಕ್ಷತ್ರನೇಮಯೇ ನಮಃ

೪೪೩ - ನಕ್ಷತ್ರಿಣೇ ನಮಃ
೪೪೪ - ಕ್ಷಮಾಯ ನಮಃ
೪೪೫ - ಕ್ಷಾಮಾಯ ನಮಃ
೪೪೬ - ಸಮೀಹನಾಯ ನಮಃ
೪೪೭ - ಯಜ್ಞಾಯ ನಮಃ
೪೪೮ - ಇಜ್ಯಾಯ ನಮಃ
೪೪೯ - ಮಹೇಜ್ಯಾಯ ನಮಃ
೪೫೦ - ಕ್ರತವೇ ನಮಃ
೪೫೧ - ಸತ್ರಾಯ ನಮಃ
೪೫೨ - ಸತಾಂಗತಯೇ ನಮಃ
೪೫೩ - ಸರ್ವದರ್ಶಿನೇ ನಮಃ
೪೫೪ - ವಿಮುಕ್ತಾತ್ಮನೇ ನಮಃ
೪೫೫ - ಸರ್ವಜ್ಞಾಯ ನಮಃ
೪೫೬ - ಜ್ಞಾನಮುತ್ತಮಾಯ ನಮಃ
೪೫೭ - ಸುವ್ರತಾಯ ನಮಃ
೪೫೮ - ಸುಮುಖಾಯ ನಮಃ
೪೫೯ - ಸೂಕ್ಷ್ಮಾಯ ನಮಃ
೪೬೦ - ಸುಘೋಷಾಯ ನಮಃ
೪೬೧ - ಸುಖದಾಯ ನಮಃ
೪೬೨ - ಸುಹೃದೇ ನಮಃ
೪೬೩ - ಮನೋಹರಾಯ ನಮಃ
೪೬೪ - ಜಿತಕ್ರೋಧಾಯ ನಮಃ
೪೬೫ - ವೀರಬಾಹವೇ ನಮಃ
೪೬೬ - ವಿದಾರಣಾಯ ನಮಃ
೪೬೭ - ಸ್ವಾಪನಾಯ ನಮಃ
೪೬೮ - ಸ್ವವಶಾಯ ನಮಃ
೪೬೯ - ವ್ಯಾಪಿನೇ ನಮಃ
೪೭೦ - ನೈಕಾತ್ಮಾನ ನಮಃ
೪೭೧ - ನೈಕಕರ್ಮಕೃತೇ ನಮಃ
೪೭೨ - ವತ್ಸರಾಯ ನಮಃ
೪೭೩ - ವತ್ಸಲಾಯ ನಮಃ
೪೭೪ - ವತ್ಸಿನೇ ನಮಃ
೪೭೫ - ರತ್ನಗರ್ಭಾಯ ನಮಃ
೪೭೬ - ಧನೇಶ್ವರಾಯ ನಮಃ
೪೭೭ - ಧರ್ಮಗುಪೇ ನಮಃ
೪೭೮ - ಧರ್ಮಕೃತೇ ನಮಃ
೪೭೯ - ಧರ್ಮಿಣೇ ನಮಃ
೪೮೦ - ಸತೇ ನಮಃ
೪೮೧ - ಅಸತೇ ನಮಃ
೪೮೨ - ಕ್ಷರಾಯ ನಮಃ
೪೮೩ - ಅಕ್ಷರಾಯ ನಮಃ
೪೮೪ - ಅವಿಜ್ಞಾತ್ರೇ ನಮಃ
೪೮೫ - ಸಹಸ್ರಾಂಶವೇ ನಮಃ
೪೮೬ - ವಿಧಾತ್ರೇ ನಮಃ
೪೮೭ - ಕೃತಲಕ್ಷಣಾಯ ನಮಃ
೪೮೮ - ಗಭಸ್ತಿನೇಮಯೇ ನಮಃ
೪೮೯ - ಸತ್ತ್ವ ಸ್ಥಾಯ ನಮಃ
೪೯೦ - ಸಿಂಹಾಯ ನಮಃ
೪೯೧ - ಭೂತಮಹೇಶ್ವರಾಯ ನಮಃ
೪೯೨ - ಆದಿದೇವಾಯ ನಮಃ
೪೯೩ - ಮಹಾದೇವಾಯ ನಮಃ
೪೯೪ - ದೇವೇಶಾಯ ನಮಃ
೪೯೫ - ದೇವಭೃದ್ಗುರವೇ ನಮಃ
೪೯೬ - ಉತ್ತರಾಯ ನಮಃ
೪೯೭ - ಗೋಪತಯೇ ನಮಃ
೪೯೮ - ಗೋಪ್ತ್ರೇ ನಮಃ
೪೯೯ - ಜ್ಞಾನಗಮ್ಯಾಯ ನಮಃ
೫೦೦ - ಪುರಾತನಾಯ ನಮಃ
೫೦೧ - ಶರೀರಭೂಭೃತೇ ನಮಃ
೫೦೨ - ಭೋಕ್ತ್ರೇ ನಮಃ
೫೦೩ - ಕಪೀಂದ್ರಾಯ ನಮಃ
೫೦೪ - ಭೂರಿದಕ್ಷಿಣಾಯ ನಮಃ
೫೦೫ - ಸೋಮಪಾಯ ನಮಃ
೫೦೬ - ಅಮೃತಪಾಯ ನಮಃ

೫೦೭ - ಸೋಮಾಯ ನಮಃ
೫೦೮ - ಪುರುಜಿತೇ ನಮಃ
೫೦೯ - ಪುರುಸತ್ತಮಾಯ ನಮಃ
೫೧೦ - ವಿನಯಾಯ ನಮಃ
೫೧೧ - ಜಯಾಯ ನಮಃ
೫೧೨ - ಸತ್ಯಸಂಧಾಯ ನಮಃ
೫೧೩ - ದಾಶಾರ್ಹಾಯ ನಮಃ
೫೧೪ - ಸಾತ್ವತಾಂಪತಯೇ ನಮಃ
೫೧೫ - ಜೀವಾಯ ನಮಃ
೫೧೬ - ವಿನಯಿತಾಸಾಕ್ಷಿಣೇ ನಮಃ
೫೧೭ - ಮುಕುಂದಾಯ ನಮಃ
೫೧೮ - ಅಮಿತವಿಕ್ರಮಾಯ ನಮಃ
೫೧೯ - ಅಂಭೋನಿಧಯೇ ನಮಃ
೫೨೦ - ಅನಂತಾತ್ಮನೇ ನಮಃ
೫೨೧ - ಮಹೋದಧಿಶಯಾಯ ನಮಃ
೫೨೨ - ಅನಂತಕಾಯ ನಮಃ
೫೨೩ - ಅಜಾಯ ನಮಃ ( ೯೫, ೨೦೪)
೫೨೪ - ಮಹಾರ್ಹಾಯ ನಮಃ
೫೨೫ - ಸ್ವಾಭಾವ್ಯಾಯ ನಮಃ
೫೨೬ - ಜಿತಾಮಿತ್ರಾಯ ನಮಃ
೫೨೭ - ಪ್ರಮೋದನಾಯ ನಮಃ
೫೨೮ - ಆನಂದಾಯ ನಮಃ
೫೨೯ - ನಂದನಾಯ ನಮಃ
೫೩೦ - ನಂದಾಯ ನಮಃ
೫೩೧ - ಸತ್ಯಧರ್ಮಣೇ ನಮಃ
೫೩೨ - ತ್ರಿವಿಕ್ರಮಾಯ ನಮಃ
೫೩೩ - ಮಹರ್ಷಯೇ
೫೩೪ -ಕಪಿಲಾಚಾರ್ಯಾಯ ನಮಃ
೫೩೫ - ಕೃತಜ್ಞಾಯ ನಮಃ (೮೨)
೫೩೬ - ಮೇದಿನೀಪತಯೇ ನಮಃ
೫೩೭ - ತ್ರಿಪದಾಯ ನಮಃ
೫೩೮ - ತ್ರಿದಶಾಧ್ಯಕ್ಷಾಯ ನಮಃ

೫೩೯ - ಮಹಾಶೃಂಗಾಯ ನಮಃ
೫೪೦ - ಕೃತಾಂತಕೃತೇ ನಮಃ
೫೪೧ - ಮಹಾವರಾಹಾಯ ನಮಃ
೫೪೨ - ಗೋವಿಂದಾಯ ನಮಃ
೫೪೩ - ಸುಷೇಣಾಯ ನಮಃ
೫೪೪ - ಕನಕಾಂಗದಿನೇ ನಮಃ
೫೪೫ - ಗುಹ್ಯಾಯ ನಮಃ
೫೪೬ - ಗಭೀರಾಯ ನಮಃ
೫೪೭ - ಗಹನಾಯ ನಮಃ
೫೪೮ - ಗುಪ್ತಾಯ ನಮಃ
೫೪೯ - ಚಕ್ರಗದಾಧರಾಯ ನಮಃ
೫೫೦ - ವೇಧಸೇ ನಮಃ
೫೫೧ - ಸ್ವಾಂಗಾಯ ನಮಃ
೫೫೨ - ಅಜಿತಾಯ ನಮಃ
೫೫೩ - ಕೃಷ್ಣಾಯ ನಮಃ
೫೫೪ - ದೃಢಾಯ ನಮಃ
೫೫೫ - ಸಂಕರ್ಷಣಾಯ ನಮಃ
೫೫೬ - ಅಚ್ಯುತಾಯ ನಮಃ
೫೫೭ - ವರುಣಾಯ ನಮಃ
೫೫೮ - ವಾರುಣಾಯ ನಮಃ
೫೫೯ - ವೃಕ್ಷಾಯ ನಮಃ
೫೬೦ - ಪುಷ್ಕರಾಕ್ಷಾಯ ನಮಃ
೫೬೧ - ಮಹಾಮನಸೇ ನಮಃ
೫೬೨ - ಭಗವತೇ ನಮಃ
೫೬೩ - ಭಗಘ್ನೇ ನಮಃ
೫೬೪ - ಆನಂದಿನೇ ನಮಃ
೫೬೫ - ವನಮಾಲಿನೇ ನಮಃ
೫೬೬ - ಹಲಾಯುಧಾಯ ನಮಃ
೫೬೭ - ಆದಿತ್ಯಾಯ ನಮಃ
೫೬೮ - ಜ್ಯೋತಿರಾದಿತ್ಯಾಯ ನಮಃ
೫೬೯ - ಸಹಿಷ್ಣುವೇ ನಮಃ
೫೭೦ - ಗತಿಸತ್ತಮಾಯ ನಮಃ

೫೭೧ - ಸುಧನ್ವನೇ ನಮಃ
೫೭೨ - ಖಂಡಪರಾಶವೇ ನಮಃ
೫೭೩ - ದಾರುಣಾಯ ನಮಃ
೫೭೪ - ದ್ರವಿಣಪ್ರದಾಯ ನಮಃ
೫೭೫ - ದಿವಸ್ಪೃಶೇ ನಮಃ
೫೭೬ - ಸರ್ವದೃಗ್ವ್ಯಾಸಾಯ ನಮಃ
೫೭೭ - ವಾಚಸ್ಪತಯೇ ನಮಃ
೫೭೮ - ಅಯೋನಿಜಾಯ ನಮಃ
೫೭೯ - ತ್ರಿಸಾಮ್ನೇ ನಮಃ
೫೮೦ - ಸಾಮಗಾಯ ನಮಃ
೫೮೧ - ಸಾಮ್ನೇ ನಮಃ
೫೮೨ - ನಿರ್ಬಾಣಾಯ ನಮಃ
೫೮೩ - ಭೇಷಜಾಯ ನಮಃ
೫೮೪ - ಭಿಷಜೇ ನಮಃ
೫೮೫ - ಸಂನ್ಯಾಸಕೃತೇ ನಮಃ
೫೮೬ - ಶಮಾಯ ನಮಃ
೫೮೭ - ಶಾಂತಾಯ ನಮಃ
೫೮೮ - ನಿಷ್ಠಾಯೈ ನಮಃ
೫೮೯ - ಶಾಂತಯೇ ನಮಃ
೫೯೦ - ಪರಾಯಣಾಯ ನಮಃ
೫೯೧ - ಶುಭಾಂಗಾಯ ನಮಃ
೫೯೨ - ಶಾಂತಿದಾಯ ನಮಃ
೫೯೩ - ಸ್ರಷ್ಟ್ರೇ ನಮಃ
೫೯೪ - ಕುಮುದಾಯ ನಮಃ
೫೯೫ - ಕುವಲೇಶಾಯ ನಮಃ
೫೯೬ - ಗೋಹಿತಾಯ ನಮಃ
೫೯೭ - ಗೋಪತಯೇ ನಮಃ
೫೯೮ - ಗೋಪ್ತ್ರೇ ನಮಃ
೫೯೯ - ವೃಷಭಾಕ್ಷಾಯ ನಮಃ
೬೦೦ - ವೃಷಪ್ರಿಯಾಯ ನಮಃ
೬೦೧ - ಅನಿವರ್ತಿನೇ ನಮಃ
೬೦೨ - ನಿವೃತ್ತಾತ್ಮನೇ ನಮಃ
೬೦೩ - ಸಂಕ್ಷೇಪ್ತ್ರೇ ನಮಃ
೬೦೪ - ಕ್ಷೇಮಕೃಚ್ಛಿವಾಯ ನಮಃ
೬೦೫ - ಶ್ರೀವತ್ಸವಕ್ಷಸೇ ನಮಃ
೬೦೬ - ಶ್ರೀವಾಸಾಯ ನಮಃ
೬೦೭ - ಶ್ರೀಪತಯೇ ನಮಃ
೬೦೮ - ಶ್ರೀಮತಾಂವರಾಯ ನಮಃ
೬೦೯ - ಶ್ರೀದಾಯ ನಮಃ
೬೧೦ - ಶ್ರೀಶಾಯ ನಮಃ
೬೧೧ - ಶ್ರೀನಿವಾಸಾಯ ನಮಃ
೬೧೨ - ಶ್ರೀನಿಧಯೇ ನಮಃ
೬೧೩ - ಶ್ರೀವಿಭಾವನಾಯ ನಮಃ
೬೧೪ - ಶ್ರೀಧರಾಯ ನಮಃ
೬೧೫ - ಶ್ರೀಕರಾಯ ನಮಃ
೬೧೬ - ಶ್ರೇಯಾಯ ನಮಃ
೬೧೭ - ಶ್ರೀಮತೇ ನಮಃ
೬೧೮ - ಲೋಕತ್ರಯಾಶ್ರಾಯ ನಮಃ
೬೧೯ - ಸ್ವಕ್ಷಾಯ ನಮಃ
೬೨೦ - ಸ್ವಾಂಗಾಯ ನಮಃ
೬೨೧ - ಶತಾನಂದಾಯ ನಮಃ
೬೨೨ - ನಂದಿನೇ ನಮಃ
೬೨೩ - ಜ್ಯೋತಿರ್ಗಣೇಶ್ವರಾಯ ನಮಃ
೬೨೪ - ವಿಜಿತಾತ್ಮನೇ ನಮಃ
೬೨೫ (ಅ)ವಿಧೇಯಾತ್ಮನೇ ನಮಃ
೬೨೬ - ಸತ್ಕೀರ್ತಯೇ ನಮಃ
೬೨೭ - ಛಿನ್ನಸಂಶಯಾಯ ನಮಃ
೬೨೮ - ಉದೀರ್ಣಾಯ ನಮಃ
೬೨೯ - ಸರ್ವತಚಕ್ಷುಸೇ ನಮಃ
೬೩೦ - ಅನೀಶಾಯ ನಮಃ
೬೩೧ - ಶಾಶ್ವತಸ್ಥಿರಾಯ ನಮಃ
೬೩೨ - ಭೂಶಯಾಯ ನಮಃ
೬೩೩ - ಭೂಷಣಾಯ ನಮಃ
೬೩೪ - ಭೂತಯೇ ನಮಃ

೬೩೫ ವಿಶೋಕಾಯ ನಮಃ
೬೩೬ - ಶೋಕನಾಶನಾಯ ನಮಃ
೬೩೭ - ಅರ್ಚಿಷ್ಮತೇ ನಮಃ
೬೩೮ - ಅರ್ಚಿತಾಯ ನಮಃ
೬೩೯ - ಕುಂಭಾಯ ನಮಃ
೬೪೦ - ವಿಶುದ್ಧಾತ್ಮನೇ ನಮಃ
೬೪೧ - ವಿಶೋಧನಾಯ ನಮಃ
೬೪೨ - ಅನಿರುದ್ಧಾಯ ನಮಃ
೬೪೩ - ಅಪ್ರತಿರಥಾಯ ನಮಃ
೬೪೪ - ಪ್ರದ್ಯುಮ್ನಾಯ ನಮಃ
೬೪೫ - ಅಮಿತವಿಕ್ರಮಾಯ ನಮಃ
೬೪೬ - ಕಾಲನೇಮಿನಿಘ್ನೇ ನಮಃ
೬೪೭ - ವೀರಾಯ ನಮಃ
೬೪೮ - ಶೌರಯೇ ನಮಃ
೬೪೯ - ಶೂರಜನೇಶ್ವರಾಯ ನಮಃ
೬೫೦ - ತ್ರಿಲೋಕಾತ್ಮನೇ ನಮಃ
೬೫೧ - ತ್ರಿಲೋಕೇಶಾಯ ನಮಃ
೬೫೨ - ಕೇಶವಾಯ ನಮಃ
೬೫೩ - ಕೇಶಿಘ್ನೇ ನಮಃ
೬೫೪ - ಹರಯೇ ನಮಃ
೬೫೫ - ಕಾಮದೇವಾಯ ನಮಃ
೬೫೬ - ಕಾಮಪಾಲಾಯ ನಮಃ
೬೫೭ - ಕಾಮಿನೇ ನಮಃ
೬೫೮ - ಕಾಂತಾಯ ನಮಃ
೬೫೯ - ಕೃತಾಗಮಾಯ ನಮಃ
೬೬೦ - ಅನಿರ್ದೇಶ್ಯವಪುಷೇ ನಮಃ
೬೬೧ - ವಿಷ್ಣವೇ ನಮಃ
೬೬೨ - ವೀರಾಯ ನಮಃ
೬೬೩ - ಅನಂತಾಯ ನಮಃ
೬೬೪ - ಧನಂಜಯಾಯ ನಮಃ
೬೬೫ - ಬ್ರಹ್ಮಣ್ಯಾಯ ನಮಃ
೬೬೬ - ಬ್ರಹ್ಮಕೃತೇ ನಮಃ
೬೬೭ - ಬ್ರಹ್ಮಣೇ ನಮಃ
೬೬೮ - ಬ್ರಹ್ಮಣೇ ನಮಃ
೬೬೯ - ಬ್ರಹ್ಮವಿವರ್ಧನಾಯ ನಮಃ
೬೭೦ - ಬ್ರಹ್ಮವಿದೇ ನಮಃ
೬೭೧ - ಬ್ರಾಹ್ಮಣಾಯ ನಮಃ
೬೭೨ - ಬ್ರಹ್ಮಿಣೇ ನಮಃ
೬೭೩ - ಬ್ರಹ್ಮಜ್ಞಾಯ ನಮಃ
೬೭೪ - ಬ್ರಾಹ್ಮಣಪ್ರಿಯಾಯ ನಮಃ
೬೭೫ - ಮಹಾಕ್ರಮಾಯ ನಮಃ
೬೭೬ - ಮಹಾಕರ್ಮಣೇ ನಮಃ
೬೭೭ - ಮಹಾತೇಜಸೇ ನಮಃ
೬೭೮ - ಮಹೋರಗಾಯ ನಮಃ
೬೭೯ - ಮಹಾಕ್ರತವೇ ನಮಃ
೬೮೦ - ಮಹಾಯಜ್ವನೇ ನಮಃ
೬೮೧ - ಮಹಾಯಜ್ಞಾಯ ನಮಃ
೬೮೨ - ಮಹಾಹವಿಷೇ ನಮಃ
೬೮೩ - ಸ್ತವ್ಯಾಯ ನಮಃ
೬೮೪ - ಸ್ತವಪ್ರಿಯಾಯ ನಮಃ
೬೮೫ - ಸ್ತೋತ್ರಾಯ ನಮಃ
೬೮೬ - ಸ್ತುತಯೇ ನಮಃ
೬೮೭ - ಸ್ತೋತ್ರೇ ನಮಃ
೬೮೮ - ರಣಪ್ರಿಯಾಯ ನಮಃ
೬೮೯ - ಪೂರ್ಣಾಯ ನಮಃ
೬೯೦ - ಪೂರಯಿತ್ರೇ ನಮಃ
೬೯೧ - ಪುಣ್ಯಾಯ ನಮಃ
೬೯೨ - ಪುಣ್ಯಕೀರ್ತಯೇ ನಮಃ
೬೯೩ - ಅನಾಮಯಾಯ ನಮಃ
೬೯೪ - ಮನೋಜವಾಯ ನಮಃ
೬೯೫ - ತೀರ್ಥಕರಾಯ ನಮಃ
೬೯೬ - ವಸುರೇತಸೇ ನಮಃ
೬೯೭ - ವಸುಪ್ರದಾಯ ನಮಃ
೬೯೮ - ವಸುಪ್ರದಾಯ ನಮಃ

೧೯೯ - ವಾಸುದೇವಾಯ ನಮಃ
೨೦೦ - ವಸವೇ ನಮಃ
೨೦೧ - ವಸುಮನಸೇ ನಮಃ
೨೦೨ - ಹವಿಷೇ ನಮಃ
೨೦೩ - ಸದ್ಗತಯೇ ನಮಃ
೨೦೪ - ಸತ್ಕೃತಯೇ ನಮಃ
೨೦೫ - ಸತ್ತಾಯೈ ನಮಃ
೨೦೬ - ಸದ್ಭೂತಯೇ ನಮಃ
೨೦೭ - ಸತ್ಪರಾಯಣಾಯ ನಮಃ
೨೦೮ - ಶೂರಸೇನಾಯ ನಮಃ
೨೦೯ - ಯದುಶ್ರೇಷ್ಠಾಯ ನಮಃ
೨೧೦ - ಸನ್ನಿವಾಸಾಯ ನಮಃ
೨೧೧ - ಸುಯಾಮುನಾಯ ನಮಃ
೨೧೨ - ಭೂತಾವಾಸಾಯ ನಮಃ
೨೧೩ - ವಾಸುದೇವಾಯ ನಮಃ
೨೧೪ - ಸರ್ವಾಸುನಿಲಯಾಯ ನಮಃ
೨೧೫ - ಅನಲಾಯ ನಮಃ
೨೧೬ - ದರ್ಪಘ್ನೇ ನಮಃ
೨೧೭ - ದರ್ಪದಾಯ ನಮಃ
೨೧೮ - ದೃಪ್ತಾಯ ನಮಃ
೨೧೯ - ದುರ್ಧರಾಯ ನಮಃ
೨೨೦ - ಅಪರಾಜಿತಾಯ ನಮಃ
೨೨೧ - ವಿಶ್ವಮೂರ್ತಯೇ ನಮಃ
೨೨೨ - ಮಹಾಮೂರ್ತಯೇ ನಮಃ
೨೨೩ - ದೀಪ್ತಮೂರ್ತಯೇ ನಮಃ
೨೨೪ - ಅಮೂರ್ತಿಮತೇ ನಮಃ
೨೨೫ - ಅನೇಕಮೂರ್ತಯೇ ನಮಃ
೨೨೬ - ಅವ್ಯಕ್ತಾಯ ನಮಃ
೨೨೭ - ಶತಮೂರ್ತಯೇ ನಮಃ
೨೨೮ - ಶತಾನನಾಯ ನಮಃ
೨೨೯ - ಏಕಾಯ ನಮಃ
೨೩೦ - ನೈಕಾಯ ನಮಃ
೨೩೧ - ಸವಾಯ ನಮಃ
೨೩೨ - ಕಸ್ಮೈ(ಕಾಯ) ನಮಃ
೨೩೩ - ಕಸ್ಮೈ(ಕಿಮೇ) ನಮಃ
೨೩೪ - ಯಸ್ಮೈ(ಯದೇ) ನಮಃ
೨೩೫ ತಸ್ಮೈ(ತದೇ) ನಮಃ
೨೩೬ - ಪದಯಾನುತ್ತಮಾಯ ನಮಃ
೨೩೭ - ಲೋಕಬಂಧವೇ ನಮಃ
೨೩೮ - ಲೋಕನಾಥಾಯ ನಮಃ
೨೩೯ - ಮಾಧವಾಯ ನಮಃ
೨೪೦ - ಭಕ್ತವತ್ಸಲಾಯ ನಮಃ
೨೪೧ - ಸುವರ್ಣವರ್ಣಾಯ ನಮಃ
೨೪೨ - ಹೇಮಾಂಗಾಯ ನಮಃ
೨೪೩ - ವರಾಂಗಾಯ ನಮಃ
೨೪೪ - ಚಂದನಾಂಗದಿನೇ ನಮಃ
೨೪೫ - ವೀರಘ್ನೇ ನಮಃ
೨೪೬ - ವಿಷಮಾಯ ನಮಃ
೨೪೭ - ಶೂನ್ಯಾಯ ನಮಃ
೨೪೮ - ಘೃತಾಶಿಷೇ  ನಮಃ
೨೪೯ - ಅಚಲಾಯ ನಮಃ
೨೫೦ - ಚಲಾಯ ನಮಃ
೨೫೧ - ಅಮಾನಿನೇ ನಮಃ
೨೫೨ - ಮಾನದಾಯ ನಮಃ
೨೫೩ - ಮಾನ್ಯಾಯ ನಮಃ
೨೫೪ - ಲೋಕಸ್ವಾಮಿನೇ ನಮಃ
೨೫೫ - ತ್ರಿಲೋಕಧೃಷೇ ನಮಃ
೨೫೬ - ಸುಮೇಧಸೇ ನಮಃ
೨೫೭ - ಮೇಧಜಾಯ ನಮಃ
೨೫೮ - ಧನ್ಯಾಯ ನಮಃ
೨೫೯ - ಸತ್ಯಮೇಧಸೇ ನಮಃ
೨೬೦ - ಧರಾಧರಾಯ ನಮಃ
೨೬೧ - ತೇಜೋವೃಷಾಯ ನಮಃ
೨೬೨ - ದ್ಯುತಿಧರಾಯ ನಮಃ

೭೬೩ - ಸರ್ವಶಸ್ತ್ರಭೃತಾಂವರಾಯ ನಮಃ
೭೬೪ - ಪ್ರಗ್ರಹಾಯ ನಮಃ
೭೬೫ - ನಿಗ್ರಹಾಯ ನಮಃ
೭೬೬ - ವ್ಯಗ್ರಾಯ ನಮಃ
೭೬೭ - ನೈಕಶೃಂಗಾಯ ನಮಃ
೭೬೮ - ಗದಾಗ್ರಜಾಯ ನಮಃ
೭೬೯ - ಚತುರ್ಮೂರ್ತಯೇ ನಮಃ
೭೭೦ - ಚತುರ್ಬಾಹವೇ ನಮಃ
೭೭೧ - ಚತುರ್ವ್ಯೂಹಾಯ ನಮಃ
೭೭೨ - ಚತುರ್ಗತಯೇ ನಮಃ
೭೭೩ - ಚತುರಾತ್ಮನೇ ನಮಃ
೭೭೪ - ಚತುರ್ಭಾವಾಯ ನಮಃ
೭೭೫ - ಚತುರ್ವೇದವಿದೇ ನಮಃ
೭೭೬ - ಏಕಪದೇ ನಮಃ
೭೭೭ - ಸಮಾವರ್ತಾಯ ನಮಃ
೭೭೮ - (ಅ)ನಿವೃತಾತ್ಮನೇ ನಮಃ
೭೭೯ - ದುರ್ಜಯಾಯ ನಮಃ
೭೮೦ - ದುರತಿಕ್ರಮಾಯ ನಮಃ
೭೮೧ - ದುರ್ಲಭಾಯ ನಮಃ
೭೮೨ - ದುರ್ಗಮಾಯ ನಮಃ
೭೮೩ - ದುರ್ಗಾಯ ನಮಃ
೭೮೪ - ದುರಾವಾಸಾಯ ನಮಃ
೭೮೫ - ದುರಾರಿಘ್ನೇ ನಮಃ
೭೮೬ - ಶುಭಾಂಗಾಯ ನಮಃ
೭೮೭ - ಲೋಕಸಾರಂಗಾಯ ನಮಃ
೭೮೮ - ಸುತಂತವೇ ನಮಃ
೭೮೯ - ತಂತುವರ್ಧನಾಯ ನಮಃ
೭೯೦ - ಇಂದ್ರಕರ್ಮಣೇ ನಮಃ
೭೯೧ - ಮಹಾಕರ್ಮಣೇ ನಮಃ
೭೯೨ - ಕೃತಕರ್ಮಣೇ ನಮಃ
೭೯೩ - ಕೃತಾಗಮಾಯ ನಮಃ
೭೯೪ - ಉದ್ಭವಾಯ ನಮಃ
೭೯೫ - ಸುಂದರಾಯ ನಮಃ
೭೯೬ - ಸುಂದಾಯ ನಮಃ
೭೯೭ - ರತ್ನನಾಭಾಯ ನಮಃ
೭೯೮ - ಸುಲೋಚನಾಯ ನಮಃ
೭೯೯ - ಅರ್ಕಾಯ ನಮಃ
೮೦೦ - ವಾಜಸನಾಯ ನಮಃ
೮೦೧ - ಶೃಂಗಿಣೇ ನಮಃ
೮೦೨ - ಜಯಂತಾಯ ನಮಃ
೮೦೩ - ಸರ್ವವಿಜ್ಜಯಿನೇ ನಮಃ
೮೦೪- ಸುವರ್ಣ ಬಿಂದವೇ ನಮಃ
೮೦೫ - ಅಕ್ಷೋಭ್ಯಾಯ ನಮಃ
೮೦೬ - ಸರ್ವವಾಗೀಶ್ವರಾಯ ನಮಃ
೮೦೭ - ಮಹಾಹ್ರದಾಯ ನಮಃ
೮೦೮ - ಮಹಾಗರ್ತಾಯ ನಮಃ
೮೦೯ - ಮಹಾಭೂತಾಯ ನಮಃ
೮೧೦ - ಮಹಾನಿಧಯೇ ನಮಃ
೮೧೧ - ಕುಮುದಾಯ ನಮಃ
೮೧೨ - ಕುಂದರಾಯ ನಮಃ
೮೧೩ - ಕುಂದಾಯ ನಮಃ
೮೧೪ - ಪರ್ಜನ್ಯಾಯ ನಮಃ
೮೧೫ - ಪಾವನಾಯ ನಮಃ
೮೧೬ - ಅನಿಲಾಯ ನಮಃ
೮೧೭ - ಅಮೃತಾಶಾಯ ನಮಃ
೮೧೮ - ಅಮೃತವಪುಷೇ ನಮಃ
೮೧೯ - ಸರ್ವಜ್ಞಾಯ ನಮಃ
೮೨೦ - ಸರ್ವತೋಮುಖಾಯ ನಮಃ
೮೨೧ - ಸುಲಭಾಯ ನಮಃ
೮೨೨ - ಸುವ್ರತಾಯ ನಮಃ
೮೨೩ - ಸಿದ್ಧಾಯ ನಮಃ
೮೨೪ - ಶತ್ರುಜಿತೇ ನಮಃ
೮೨೫ - ಶತ್ರುತಾಪನಾಯ ನಮಃ
೮೨೬ - ನ್ಯಗ್ರೋಧಾಯ ನಮಃ

೮೨೭ - ಉದುಂಬರಾಯ ನಮಃ
೮೨೮ - ಅಶ್ವತ್ಥಾಯ ನಮಃ
೮೨೯ - ಚಾಣೂರಾಂಧ್ರನಿಸೂದನಾಯ ನಮಃ
೮೩೦ - ಸಹಸ್ರಾರ್ಚಿಷೇ ನಮಃ
೮೩೧ - ಸಪ್ತಜಿಹ್ವಾಯ ನಮಃ
೮೩೨ - ಸಪ್ತೈಧಸೇ ನಮಃ
೮೩೩ - ಸಪ್ತವಾಹನಾಯ ನಮಃ
೮೩೪ - ಅಮೂರ್ತಯೇ ನಮಃ
೮೩೫ - ಅನಘಾಯ ನಮಃ
೮೩೬ - ಅಚಿಂತ್ಯಾಯ ನಮಃ
೮೩೭ - ಭಯಕೃತೇ ನಮಃ
೮೩೮ - ಭಯನಾಶನಾಯ ನಮಃ
೮೩೯ - ಅಣವೇ ನಮಃ
೮೪೦ - ಬೃಹತೇ ನಮಃ
೮೪೧ - ಕೃಶಾಯ ನಮಃ
೮೪೨ - ಸ್ಥೂಲಾಯ ನಮಃ
೮೪೩ - ಗುಣಭೃತೇ ನಮಃ
೮೪೪ - ನಿರ್ಗುಣಾಯ ನಮಃ
೮೪೫ - ಮಹತೇ ನಮಃ
೮೪೬ - ಅಧೃತಾಯ ನಮಃ
೮೪೭ - ಸ್ವಧೃತಾಯ ನಮಃ
೮೪೮ - ಸ್ವಾಸ್ಯಾಯ ನಮಃ
೮೪೯ - ಪ್ರಾಗ್ವಂಶಾಯ ನಮಃ
೮೫೦ - ವಂಶವರ್ಧನಾಯ ನಮಃ
೮೫೧ - ಭಾರಭೃತೇ ನಮಃ
೮೫೨ - ಕಥಿತಾಯ ನಮಃ
೮೫೩ - ಯೋಗಿನೇ ನಮಃ
೮೫೪ - ಯೋಗೀಶಾಯ ನಮಃ
೮೫೫ - ಸರ್ವಕಾಮದಾಯ ನಮಃ
೮೫೬ - ಆಶ್ರಮಾಯ ನಮಃ
೮೫೭ - ಶ್ರಮಣಾಯ ನಮಃ
೮೫೮ - ಕ್ಷಾಮಾಯ ನಮಃ
೮೫೯ - ಸುಪರ್ಣಾಯ ನಮಃ
೮೬೦ - ವಾಯುವಾಹನಾಯ ನಮಃ
೮೬೧ - ಧನುರ್ಧರಾಯ ನಮಃ
೮೬೨ - ಧನುರ್ವೇದಾಯ ನಮಃ
೮೬೩ - ದಂಡಾಯ ನಮಃ
೮೬೪ - ದಮಯಿತೇ ನಮಃ
೮೬೫ - ದಮಾಯ ನಮಃ
೮೬೬ - ಅಪರಾಜಿತಾಯ ನಮಃ
೮೬೭ - ಸರ್ವಸಹಾಯ ನಮಃ
೮೬೮ - ನಿಯಂತ್ರೇ ನಮಃ
೮೬೯ - (ಅ)ನಿಯಮಾಯ ನಮಃ
೮೭೦ - (ಅ)ಯಮಾಯ ನಮಃ
೮೭೧ - ಸತ್ತ್ವವತೇ ನಮಃ
೮೭೨ - ಸಾತ್ತ್ವಿಕಾಯ ನಮಃ
೮೭೩ - ಸತ್ಯಾಯ ನಮಃ
೮೭೪ - ಸತ್ಯಧರ್ಮಪರಾಯಣಾಯ ನಮಃ
೮೭೫ - ಅಭಿಪ್ರಾಯಾಯ ನಮಃ
೮೭೬ - ಪ್ರಿಯಾರ್ಹಾಯ ನಮಃ
೮೭೭ - ಅರ್ಹಪ್ರಿಯಕೃತೇ ನಮಃ
೮೭೮ - ಪ್ರೀತಿವರ್ಧನಾಯ ನಮಃ
೮೭೯ - ವಿಹಾಯಸಗತಯೇ ನಮಃ
೮೮೦ - ಜ್ಯೋತಿಷೇ ನಮಃ
೮೮೧ - ಸುರುಚಯೇ ನಮಃ
೮೮೨ - ಹುತಭುಗ್ವಿಭವೇ ನಮಃ
೮೮೩ ರವಯೇ ನಮಃ
೮೮೪ - ವಿರೋಚನಾಯ ನಮಃ
೮೮೫ - ಸೂರ್ಯಾಯ ನಮಃ
೮೮೬ - ಸವಿತ್ರೇ ನಮಃ
೮೮೭ - ರವಿಲೋಚನಾಯ ನಮಃ
೮೮೮ - ಅನಂತಾಯ ನಮಃ
೮೮೯ - ಹುತಭುಗ್ಭೋಕ್ತ್ರೇ ನಮಃ
೮೯೦ - ಸುಖದಾಯ ನಮಃ

೮೯೧ - ನೈಕಜಾಯ ನಮಃ
೮೯೨ - ಅಗ್ರಜಾಯ ನಮಃ
೮೯೩ - ಅನಿರ್ವಿಣ್ಣಾಯ ನಮಃ
೮೯೪ - ಸದಾಮರ್ಷಿಣೇ ನಮಃ
೮೯೫ - ಲೋಕಾಧಿಷ್ಠಾನಾಯ ನಮಃ
೮೯೬ - ಅದ್ಭುತಾಯ ನಮಃ
೮೯೭ - ಸನಾತ್ (ಸನಾದೇ) ನಮಃ
೮೯೮ - ಸನಾತನತಮಾಯ ನಮಃ
೮೯೯ - ಕಪಿಲಾಯ ನಮಃ
೯೦೦ - ಕಪಯೇ ನಮಃ
೯೦೧ - ಅಪ್ಯಯಾಯ ನಮಃ
೯೦೨ - ಸ್ವಸ್ತಿದಾಯ ನಮಃ
೯೦೩ - ಸ್ವಸ್ತಿಕೃತೇ ನಮಃ
೯೦೪ - ಸ್ವಸ್ತ(ಸ್ವಸ್ತಿನೇ) ನಮಃ
೯೦೫ - ಸ್ವಸ್ತಿಭುಜೇ ನಮಃ
೯೦೬ - ಸ್ವಸ್ತಿದಕ್ಷಿಣಾಯ ನಮಃ
೯೦೭ - ಅರೌದ್ರಾಯ ನಮಃ
೯೦೮ - ಕುಂಡಲಿನೇ ನಮಃ
೯೦೯ - ಚಕ್ರಿಣೇ ನಮಃ
೯೧೦ - ವಿಕ್ರಮಿಣೇ ನಮಃ
೯೧೧ - ಊರ್ಜಿತಶಾಸನಾಯ ನಮಃ
೯೧೨ - ಶಬ್ದಾತಿಗಾಯ ನಮಃ
೯೧೩ - ಶಬ್ದಸಹಾಯ ನಮಃ
೯೧೪ - ಶಿಶಿರಾಯ ನಮಃ
೯೧೫ - ಶರ್ವರೀಕರಾಯ ನಮಃ
೯೧೬ - ಅಕ್ರೂರಾಯ ನಮಃ
೯೧೭ - ಪೇಶಲಾಯ ನಮಃ
೯೧೮ - ದಕ್ಷಾಯ ನಮಃ
೯೧೯ - ದಕ್ಷಿಣಾಯ ನಮಃ
೯೨೦ - ಕ್ಷಮಿಣಾಂವರಾಯ ನಮಃ
೯೨೧ - ವಿದ್ವತ್ತಮಾಯ ನಮಃ
೯೨೨ ವೀತಭಯಾಯ ನಮಃ
೯೨೩ - ಪುಣ್ಯಶ್ರವಣಕೀರ್ತನಾಯ ನಮಃ
೯೨೪ - ಉತ್ತಾರಣಾಯ ನಮಃ
೯೨೫ - ದುಷ್ಕೃತಿಘ್ನೇ ನಮಃ
೯೨೬ - ಪುಣ್ಯಾಯ ನಮಃ
೯೨೭ - ದುಸ್ವಪ್ನನಾಶಾಯ ನಮಃ
೯೨೮ - ವೀರಘ್ನೇ ನಮಃ
೯೨೯ - ರಕ್ಷಣಾಯ ನಮಃ
೯೩೦ - ಸಂತಾಯ ನಮಃ
೯೩೧ - ಜೀವನಾಯ ನಮಃ
೯೩೨ ಪರ್ಯವಸ್ಥಿತಾಯ ನಮಃ
೯೩೩ - ಅನಂತರೂಪಾಯ ನಮಃ
೯೩೪ - ಅನಂತಶ್ರಿಯೇ ನಮಃ
೯೩೫ - ಜಿತಮನ್ಯವೇ ನಮಃ
೯೩೬ - ಭಯಾಪಹಾಯ ನಮಃ
೯೩೭ - ಚತುರಸ್ರಾಯ ನಮಃ
೯೩೮ - ಗಭೀರಾತ್ಮನೇ ನಮಃ
೯೩೯ - ವಿದಿಶಾಯ ನಮಃ
೯೪೦ - ವ್ಯಾದಿಶಾಯ ನಮಃ
೯೪೧ - ದಿಶಾಯ ನಮಃ
೯೪೨ ಅನಾದಯೇ ನಮಃ
೯೪೩ - ಭೂರ್ಭುವೋಲಕ್ಷ್ಮೈ ನಮಃ
೯೪೪ - ಸುವೀರಾಯ ನಮಃ
೯೪೫ - ರುಚಿರಾಂಗದಾಯ ನಮಃ
೯೪೬ - ಜನನಾಯ ನಮಃ
೯೪೭ - ಜನಜನ್ಮಾದಯೇ ನಮಃ
೯೪೮ - ಭೀಮಾಯ ನಮಃ
೯೪೯ - ಭೀಮಪರಾಕ್ರಮಾಯ ನಮಃ
೯೫೦ - ಆಧಾರನಿಲಯಾಯ ನಮಃ
೯೫೧ (ಅ)ಧಾತ್ರೇ ನಮಃ
೯೫೨ - ಪುಷ್ಪಹಾಸಾಯ ನಮಃ
೯೫೩ - ಪ್ರಜಾಗರಾಯ ನಮಃ
೯೫೪ - ಉರ್ಧ್ವಗಾಯ ನಮಃ

೯೫೫ - ಸತ್ವಥಾಚಾರಾಯ ನಮಃ
೯೫೬ - ಪ್ರಾಣದಾಯ ನಮಃ
೯೫೭ - ಪ್ರಣವಾಯ ನಮಃ
೯೫೮ - ಪಣಾಯ ನಮಃ
೯೫೯ - ಪ್ರಮಾಣಾಯ ನಮಃ
೯೬೦ - ಪ್ರಾಣನಿಲಯಾಯ ನಮಃ
೯೬೧ ಪ್ರಾಣಭೃತೇ ನಮಃ
೯೬೨ - ಪ್ರಾಣಜೀವನಾಯ ನಮಃ
೯೬೩ - ತತ್ತ್ವಾಯ ನಮಃ
೯೬೪ - ತತ್ತ್ವವಿದೇ ನಮಃ
೯೬೫ - ಏಕಾತ್ಮನೇ ನಮಃ
೯೬೬ - ಜನ್ಮಮೃತ್ಯುಜರಾತಿಗಾಯ ನಮಃ
೯೬೭ - ಭುರ್ಭುವಸ್ಸ್ವಸ್ತರವೇ ನಮಃ
೯೬೮ - ತಾರಾಯ ನಮಃ
೯೬೯ - ಸವಿತ್ರೇ ನಮಃ
೯೭೦ - ಪ್ರಪಿತಾಮಹಾಯ ನಮಃ
೯೭೧ ಯಜ್ಞಾಯ ನಮಃ
೯೭೨ - ಯಜ್ಞಪತಯೇ ನಮಃ
೯೭೩ - ಯಜ್ವನೇ ನಮಃ
೯೭೪ - ಯಜ್ಞಾಂಗಾಯ ನಮಃ
೯೭೫ - ಯಜ್ಞವಾಹನಾಯ ನಮಃ
೯೭೬ - ಯಜ್ಞಭೃತೇ ನಮಃ
೯೭೭ - ಯಜ್ಞಕೃತೇ ನಮಃ
೯೭೮ - ಯಜ್ಞಿನೇ ನಮಃ
೯೭೯ - ಯಜ್ಞಭುಜೇ ನಮಃ
೯೮೦ - ಯಜ್ಞಸಾಧನಾಯ ನಮಃ
೯೮೧ - ಯಜ್ಞಾಂತಕೃತೇ ನಮಃ
೯೮೨ - ಯಜ್ಞಗುಹ್ಯಾಯ ನಮಃ
೯೮೩ - ಅನ್ನಾಯ ನಮಃ
೯೮೪ - ಅನ್ನಾದಾಯ ನಮಃ
೯೮೫ - ಆತ್ಮಯೋನಯೇ ನಮಃ
೯೮೬ - ಸ್ವಯಂಜಾತಾಯ ನಮಃ
೯೮೭ - ವೈಖಾನಾಯ ನಮಃ
೯೮೮ - ಸಾಮಗಾಯನಾಯ ನಮಃ
೯೮೯ - ದೇವಕೀನಂದನಾಯ ನಮಃ
೯೯೦ - ಸ್ರಷ್ಟ್ರೇ ನಮಃ
೯೯೧ - ಕ್ಷಿತೀಶಾಯ ನಮಃ
೯೯೨ - ಪಾಪನಾಶನಾಯ ನಮಃ
೯೯೩ - ಶಂಖಭೃತೇ ನಮಃ
೯೯೪ - ನಂದಕಿನೇ ನಮಃ
೯೯೫ - ಚಕ್ರಿಣೇ ನಮಃ
೯೯೬ - ಶಾರ್ಙ್ಗಧನ್ವನೇ ನಮಃ
೯೯೭ - ಗದಾಧರಾಯ ನಮಃ
೯೯೮ - ರಥಾಂಗಪಾಣಯೇ ನಮಃ
೯೯೯ - ಅಕ್ಷೋಭ್ಯಾಯ ನಮಃ
೧೦೦೦ - ಸರ್ವಪ್ರಹರಣಾಯುಧಾಯ ನಮಃ

